# ಅರ್ಪಣೆ

---

ಶ್ರೀ ಮಂಗಳಾಂಬಿಕೆಯು ನೆಲೆಗೊಂಡ ಬೋಳಾರ ।
ಗ್ರಾಮಸ್ಥ ಕವಿರಾಜಧರಣಿ ಸುರಕುಲಶ್ರೇಷ್ಠ ।
ರಾಮಕೃಷ್ಣಾಖ್ಯ ಗುರುವರ್ಯ ಪದಕರ್ಪಿಸುವೆ ಸಾದರದೊಳೀ
ಕೃತಿಯನೂ ॥

# Preface

The Kanarese language has a very valuable and readable literature of its own second in importance to none of the ruling vernaculars of India, though limited almost wholly to poetical works which are of the highest order. The Ancient Kanarese Authors do not seem to have looked upon prose as worthy of encouragement for no other reason than perhaps that it presents none of those difficulties of elaboration as beset the path of the poet; or because the sing-song character of versified matter presented unique attractions hard to resit and, consequently all the more conducive to study inasmuch as poetical works are as a rule got off by heart, and therefore remembered for a much longer period than prose so as to constitute the bulwark as it were of the literati.

Light reading may well be said to have found no favour with writers of olden times as works of the kind have not come to light as they would have if at all existent In modern times as Western education advances, novels in the vernacular languages are springing up, and a few works on fiction in Kanarese as well have adorned the literature of the day in the Karnataka country.

The present Volume is the outcome of my maiden attempt to contribute my humble mite to the stock of Light Literature in that language with which I am somewhat familiar, and I hope to secure for myself appreciative encouragement at the hands of the critic.

Mangalore, B. B. R.
30th June, 1905.

# ಪೀಠಿಕೆ

ಕನ್ನಡ ಭಾಷೆಯಲ್ಲಿ ಅಮೂಲ್ಯವಾಗಿಯೂ ಓದುವದಕ್ಕೆ ಸುರಸವಾಗಿಯೂ ಇರುವ ಗ್ರಂಥಸಂಗ್ರಹವು ಹಿಂದುಸ್ಥಾನದಲ್ಲಿ ಮೆರೆಯುವ ಪ್ರಧಾನ ದೇಶಭಾಷೆಗಳಲ್ಲಿ ಯಾವದೊಂದಕ್ಕೂ ದ್ವಿತೀಯಸ್ಥಾನ ಹೊಂದತಕ್ಕ ಹಾಗಿನ ನಿರಸಸ್ಥಿತಿಯದಾಗಿರುವದಿಲ್ಲ. ಪರಂತು ಅಂಥಾ ಗ್ರಂಥಗಳು ಹೆಚ್ಚುಕಡಿಮೆ ಎಲ್ಲವೂ ವಿಶೇಷ ಜಿಲಿಯುಳ್ಳ ಪದ್ಯರಚನೆಯೇ. ಗದ್ಯರೂಪದ ಲೇಖನಗಳು ಉತ್ತೇಜನ ಪಡೆಯಲಿಕ್ಕೆ ಯೋಗ್ಯವೆಂದು ಪ್ರಾಚೀನ ಗ್ರಂಥಕರ್ತರು ಅಭಿಪ್ರಾಯಪಟ್ಟ ಹಾಗೆ ತೋರುವದಿಲ್ಲ. ಯಾತಕ್ಕಂದರೆ ಅಂಥಾ ಬರವಣಿಗೆಗೆ ಕವಿಯು ತನ್ನ ಕೃತಿಗಳ ನಿರ್ಮಾಣಕ್ಕೆ ಪಡುವಷ್ಟು ಪ್ರಯಾಸ ತಗಲುವದಿಲ್ಲವೆಂದು ಅವರು ಗ್ರಹಿಸಿರಬೇಕು. ಅಥವಾ ಪದ್ಯರೂಪದ ರಚನೆಯು ಹಾಡಲಿಕ್ಕೆ ಸಮುಚಿತವಾದ ಪ್ರಯುಕ್ತ ತಿರಸ್ಕರಿಸಲಿಕ್ಕೆ ಮನ ಒಡಂಬಡದ ಶೋಭೆಯಿಂದ ಸಂಯುಕ್ತವಾಗಿದ್ದು ವಾಡಿಕೆಯಾಗಿ ಬಾಯಿಪಾಠ ಮಾಡಿಕೊಳ್ಳಲಿಕ್ಕೆ ಸಾನುಕೂಲವಾಗಿರುವದಲ್ಲದೆ ಹಾಗೆ ಮುಖೋದ್ಗತವಿರುವ ಪ್ರಬಂಧಗಳು ಗದ್ಯರಚನೆಗಳಿಗಿಂತ ಹೆಚ್ಚುಕಾಲ ನೆನಪಿನಲ್ಲಿ ಉಳಿಯಲಿಕ್ಕೆ ಆಸ್ಪದವಿರುವದೆಸೆಯಿಂದ ವಿದ್ಯಾರ್ಥಿಗಳಿಗೆ ಅದೊಂದು ಭಾರೀ ವಜ್ರಾಯುಧವಾಗಿರುವದಾಗಿ ಅವರು ತಿಳುಕೊಂಡಿರಬಹುದು.

ಪುರಾತನ ಗ್ರಂಥಕರ್ತರು ಲಘು ಗ್ರಂಥರಚನೆಯ ಮೇಲೆ ಪ್ರೀತಿ ಇಡಲಿಲ್ಲವೆಂದೇ ಹೇಳಬೇಕು. ಹಾಗಲ್ಲದೆ ಅಂಥಾ ಪ್ರಬಂಧಗಳು ಸ್ವಲ್ಪಮಟ್ಟಿಗಾದರೂ ಇರುತ್ತಿದ್ದರೆ ಅವುಗಳು ಪ್ರಕಾಶಕ್ಕೆ ಬೀಳದಿರುತ್ತಿದ್ದಿಲ್ಲ. ಆದರೆ ನಿಜವಾಗಿ ಅವುಗಳು ಎದುರಿಗೆ ಬಂದಿಲ್ಲ. ಈಗಿನ ಕಾಲದಲ್ಲಿ ಪಶ್ಚಿಮರಾಜ್ಯದ ವಿದ್ಯಾ ಪ್ರಚುರತೆ ಹ್ಯಾಗೆ ಹ್ಯಾಗೆ ಮುಂದಡಿ ಇಡುವದೋ ಹಾಗೆ ಹಾಗೆ

ದೇಶಭಾಷೆಗಳಲ್ಲಿ ಕಾದಂಬರಿಗಳು ತಲೆದೋರುತ್ತಿವೆ. ಕನ್ನಡ ಭಾಷೆಯಲ್ಲಿಯೂ ಕೆಲವು ಕಾದಂಬರಿಗಳಿಂದ ಪ್ರಕೃತಕಾಲದ ಗ್ರಂಥಸಮುಚ್ಚಯವು ಅಲಂಕೃತವಾಗಿ ಇದೆ. ನನಗೆ ತಕ್ಕಮಟ್ಟಿಗೆ ಪರಿಚಿತಿಯುಳ್ಳ ಈ ಭಾಷೆಯಲ್ಲಿ ಕಾದಂಬರಿ ಸಮುದಾಯವೇರುವದಕ್ಕೆ ವಿನಯಪೂರ್ವಕವಾಗಿ ನಾನು ಮಾಡುವ ಪ್ರಥಮ ಪ್ರಯತ್ನದ ಫಲವು ಈ ಪುಸ್ತಕವಾಗಿರುವದರಿಂದ ಗ್ರಂಥ ಪರೀಕ್ಷಕರು ಗುಣಗ್ರಾಹ್ಯಕವಾದ ಪ್ರೋತ್ಸಾಹವನ್ನು ನನಗೆ ಅನುಗ್ರಹಿಸುವರೆಂದು ಕೋರುತ್ತೇನೆ.

ಮಂಗಳೂರು,<br>
೩೦—೬—೧೯೦೫

ಬೋ. ಬಾ. ರಾ.

# ಪ್ರಕಾಶಕರ ಮಾತು

ಕನ್ನಡದ ಮೊದಲ ಸ್ವತಂತ್ರ ಸಾಮಾಜಿಕ ಕಾದಂಬರಿಗಳಲ್ಲೊಂದಾದ 'ವಾಗ್ದೇವಿ'ಯ ಎರಡನೆಯ ಮುದ್ರಣವನ್ನು ಕನ್ನಡಿಗರ ಮುಂದಿಡಲು ನಮಗೆ ಸಂತೋಷವೆನಿಸುತ್ತದೆ. ಇದನ್ನು ಎರಡನೆಯ ಬಾರಿ ಮುದ್ರಿಸಿ ಪ್ರಕಟಿಸಲು ಅನುಮತಿಯಿತ್ತ, ಲೇಖಕರ ಚಿರಂಜೀವರಾದ ಶ್ರೀ ಬೋಳಾರ ವಿಟ್ಠಲರಾಯರಿಗೆ ನಾವು ಋಣಿಗಳಾಗಿರುವೆವು.

ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸಿದ್ಧಾರ್ಥ ಮುದ್ರಣಾಲಯದ ಮಾಲಕ ಮಜೂರ ಬಂಧುಗಳಿಗೆ ನಮ್ಮ ಕೃತಜ್ಞತೆಗಳು. ಅಂತೆಯೇ, ರಕ್ಷಾಕವಚಕ್ಕೆ ಸುಂದರವಾದ ಚಿತ್ರವನ್ನು ಬರೆದುಕೊಟ್ಟ ಮಿತ್ರರಾದ ಶ್ರೀ. ಕೆ. ಮುರಲೀಧರ ಅವರಿಗೂ ನಾವು ಆಭಾರಿಗಳಾಗಿರುವೆವು.

ಮಂಗಳೂರು.
ಸಪ್ಟಂಬರ, ೧೯೬೩

ಪ್ರಕಾಶಕರು.

# ದಿ| ಬಾಬುರಾಯರು

## ( ಪರಿಚಯ )

ಶ್ರೀ ಬಾಬುರಾಯರು ಹುಟ್ಟಿದ್ದು ೧೮೪೮ರಲ್ಲಿ ಮಂಗಳೂರಿನ ಬೋಳಾರದಲ್ಲಿ. ಇವರ ತಂದೆ ನರ್ಸಪ್ಪಯ್ಯ. ಶ್ರೀ ರಾಯರ ಶಿಕ್ಷಣ ಮೊದಲು ಮಂಗಳೂರಿನ ಬಾಸೆಲ್ ಮಿಶನ್ ಸ್ಕೂಲಿನಲ್ಲಿ; ಅನಂತರ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಓದಿ ಎಫ್. ಎ. ಪರೀಕ್ಷೆಯಲ್ಲಿ ತೇರ್ಗಡೆಯಾದರು.

ವಿದ್ಯಾಭ್ಯಾಸವನ್ನು ಮುಗಿಸಿದ ರಾಯರು ಆರಂಭದಲ್ಲಿ ದ. ಕ. ಜಿಲ್ಲಾ ಕಲೆಕ್ಟರರ ಕಚೇರಿಯಲ್ಲಿ ಗುಮಾಸ್ತರ ಕೆಲಸಕ್ಕೆ ಸೇರಿದರು. ಅನಂತರ ಇಂಗ್ಲಿಷ್ ಹೆಡ್‌ಕ್ಲಾರ್ಕರಾಗಿ, ಕಾರ್ಕಳ ಹೊಸದುರ್ಗಗಳಲ್ಲಿ ಡೆ| ತಹಶಿಲ್ದಾರರಾಗಿ, ಬಳಿಕ ಕುಂದಾಪುರ ಉಡುಪಿ ಪುತ್ತೂರು ಕಾಸರಗೋಡುಗಳಲ್ಲಿ ತಹಶಿಲ್ದಾರರಾಗಿಯೂ ಮಂಗಳೂರು ಟೌನ್ ಮೆಜಿಸ್ಟ್ರೇಟರಾಗಿಯೂ ಕೆಲಸ ನೋಡಿ, ಕೊನೆಗೆ ಮಂಗಳೂರು ತಹಶಿಲ್ದಾರರ ಸ್ಥಾನದಿಂದ ನಿವೃತ್ತರಾದರು.

ಶ್ರೀಯುತರು ನಿವೃತ್ತರಾದ ಬಳಿಕವೂ ಯುವಕರ ಉತ್ಸಾಹದಿಂದ ನಾನಾ ಸಾರ್ವಜನಿಕ ಕಾರ್ಯಗಳಲ್ಲಿ ತತ್ಪರರಾಗುತ್ತಿದ್ದರು. ಮಂಗಳೂರಿನ ಎರಡನೇ ವರ್ಗದ ಬೆಂಚ್ ಮೆಜಿಸ್ಟ್ರೇಟ್ ಕೋರ್ಟಿನ ಅಧ್ಯಕ್ಷರಾಗಿಯೂ ೧೯೧೪ರಲ್ಲಿ ಹೊಸದಾಗಿ ಸ್ಥಾಪಿತವಾದ "ಕೆನರಾ ಪಬ್ಲಿಕ್ ಕನ್ವೆಯನ್ಸ್ ಕಂಪೆನಿ, ಲಿಮಿಟೆಡ್"ನ ಒಬ್ಬ ಆಧಾರಭೂತ ಮುಖ್ಯ ಆಶ್ರಯದಾತರಾಗಿಯೂ ಇವರು ಸೇವೆಸಲಿಸಿದರು.

ಶ್ರೀ ಬಾಬುರಾಯರು 'ವಾಗ್ದೇವಿ'ಯಲ್ಲದೆ "ಶಿವಲೀಲಾಮೃತ" ಮತ್ತು "ಭಕ್ತಿ ಮಹಿಮೆ" ಎಂಬ ಇನ್ನೆರಡು ಗ್ರಂಥಗಳನ್ನೂ ಬರೆದಿರುವರು. ಅಲ್ಲದೆ ನಾಡಿನ ಹಲವಾರು ಪ್ರಮುಖ ವೃತ್ತ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದ್ದರು. ಇವರಿಗೆ ಕನ್ನಡದಲ್ಲಿಯೂ ಇಂಗ್ಲಿಷಿನಲ್ಲಿಯೂ ಏಕರೀತಿಯಾದ ಪ್ರಭುತ್ವವಿತ್ತು. ಈ ಮಹನೀಯರು ೧೯೧೯ನೇ ಜೂನ್ ತಾ ೨೫ರಂದು ಬೋಳಾರದ ಸ್ವಗೃಹದಲ್ಲಿ ೭೧ನೇ ವರ್ಷ ವಯಸ್ಸಿನಲ್ಲಿ ಸ್ವರ್ಗಸ್ಥರಾದರು.

ಶ್ರೀ ಬಾಬುರಾಯರು ತಮ್ಮ ಹಿಂದೆ ತಮ್ಮ ಜೀವಿತದ ಗುರುತಾಗಿ ತಮ್ಮ ಗ್ರಂಥಗಳನ್ನು ಮಾತ್ರವೇ ಬಿಟ್ಟು ಹೋದುದಲ್ಲ. ತಮ್ಮ ಹೆಸರನ್ನು ಬೆಳಗಿಸುವ ಒಬ್ಬ ಸುಪುತ್ರನನ್ನೂ ಜಿಲ್ಲೆಗೆ ದಾನಮಾಡಿ ಹೋಗಿದ್ದಾರೆ. ಜಿಲ್ಲೆಯಲ್ಲಿ ಹಲವಾರು ಸುಪ್ರಸಿದ್ಧ ಸಾರ್ವಜನಿಕ ಸಂಸ್ಥೆಗಳನ್ನು ಸ್ಥಾಪಿಸಿದ, ನಾಡನುಡಿಯ ಮೇಲ್ಮೆಯನ್ನು ಸಾಹಸಪೂರ್ವಕವಾಗಿ ತ್ಯಾಗಬುದ್ಧಿಯಿಂದ ಸಾಧಿಸಿ ಆದರ್ಶಪ್ರಾಯರಾಗಿರುವ, ಪೊಪ್ಯುಲರ್ ಇನ್ಶೂರೆನ್ಸ್ ಕಂಪೆನಿ ಲಿಮಿಟೆಡ್‌ನ ಮೆನೆಜಿಂಗ್ ಡೈರೆಕ್ಟರ್ ಶ್ರೀ ಬೋಳಾರ ವಿಟ್ಠಲರಾಯರು ಬಾಬುರಾಯರ ಏಕಮಾತ್ರ ಪುತ್ರರು. ಅರ್ಧಶತಮಾನದ ಹಿಂದೆ ಕನ್ನಡ ನಾಡಿನ ಸರ್ವಾಂಗ ಸುಂದರ ಮಾಸಪತ್ರಿಕೆಯಾದ "ಸುವಾಸಿನಿ"ಯ ಸ್ಥಾಪಕ ಮಾಲಕರಾಗಿ, ಕಂಠೀರವ ವಾರಪತ್ರಿಕೆಯ ಸ್ಥಾಪಕರೂ ಇತ್ತೀಚೆಗಿನ ವರೆಗೆ ಅದರ ಸಂಪಾದಕರೂ ಆಗಿ ಅವರು ತಮ್ಮ ಹಿರಿಯರಂತೆ ಕನ್ನಡ ನುಡಿಗೊಪ್ಪಿಸಿದ ಕಾಣಿಕೆ ಅಮೂಲ್ಯವಾದುದು.



ಬೋಳಾರ ಬಾಬುರಾಯರು

# ಪ್ರಾರಂಭದ ಸ್ವತಂತ್ರ ಕನ್ನಡ ಕಾದಂಬರಿಗಳು.



ಕನ್ನಡ ಸಾಹಿತ್ಯದಲ್ಲಿ ಈಗ ನಡೆಯುತ್ತಿರುವ ಕಾಲವನ್ನು ಕಾದಂಬರಿಯ ಯುಗ ಎಂದು ಕರೆಯಬಹುದು. ಕಳೆದೆರಡು ದಶಕಗಳಲ್ಲಿ ಕನ್ನಡ ಕಾದಂಬರೀ ಸಾಹಿತ್ಯವು ವಿಶಾಲವೃಕ್ಷವಾಗಿ ಬೆಳೆದು ಸಾಹಿತ್ಯದ ಇತರ ಪ್ರಕಾರಗಳಿಗೆ ಗ್ರಹಣ ಹಿಡಿಸಿದೆ.

ಕನ್ನಡದಲ್ಲಿ ಕಾದಂಬರಿಗಳ ಕಾಲ ತೊಡಗಿದುದು ಕಳೆದ ಶತಮಾನದ ಕೊನೆಯ ದಶಕದಲ್ಲಿ. ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಕಾದಂಬರಿಗಳ ಪರಿಚಯ ಮಾಡಿಸಿಕೊಟ್ಟವರು ದಿ| ಬಿ. ವೆಂಕಟಾಚಾರ್ಯರು. ಆದರೆ ಅವರ ಕಾದಂಬರಿಗಳು ಸ್ವತಂತ್ರವಾಗಿ ರಚಿತವಾದವುಗಳಾಗಿರದೆ ಬಂಗಾಳಿ ಭಾಷೆಯಿಂದ ಅನುವಾದಿಸಿದವುಗಳಾಗಿವೆ. ವೆಂಕಟಾಚಾರ್ಯರ ಅನಂತರ ಹೆಸರಾದ ಗಳಗನಾಥರಾದರೂ ಅನುವಾದಗಳನ್ನೇ ಕೊಟ್ಟರು. ವೆಂಕಟಾಚಾರ್ಯರು ಬಂಗಾಳಿಯಿಂದ ಅನುವಾದಿಸಿದರೆ ಗಳಗನಾಥರು ಮರಾಠಿಯಿಂದ ಕನ್ನಡಕ್ಕೆ ತಂದರು. ಈ ಕಾದಂಬರಿಗಳ ವಸ್ತು ಸನ್ನಿವೇಶಗಳಲ್ಲ ಕನ್ನಡ ನೆಲಕ್ಕೆ ಸಂಬಂಧಿಸಿದವುಗಳಾಗಿರದೆ ಹೊರಗಿನಿಂದ ಎರವು ತಂದವುಗಳಾಗಿವೆ. ಅದೇನೇ ಇದ್ದರೂ ವೆಂಕಟಾಚಾರ್ಯರ ಮತ್ತು ಗಳಗನಾಥರ ಕಾದಂಬರಿಗಳನ್ನು ಇಂದಿಗೂ ಜನರು ಓದುತ್ತಾರೆ ಎಂಬುದನ್ನು ಮರೆಯಬಾರದು.

ಕನ್ನಡದಲ್ಲಿ ಸ್ವತಂತ್ರ ಕಾದಂಬರಿಗಳ ರಚನೆಗೆ ಪ್ರಾರಂಭವಾದುದು ಈ ಶತಮಾನದ ಮೂರನೆಯ ದಶಕದಲ್ಲಿ. ಆದರೆ ಇದಕ್ಕೆ ಮೊದಲು ಸ್ವತಂತ್ರ ಕಾದಂಬರಿಗಳ ರಚನೆಯೇ ಆಗಿಲ್ಲ ಎನ್ನುವುದು ಸರಿಯಲ್ಲ. ದಕ್ಷಿಣ ಕನ್ನಡ ಜಿಲ್ಲೆಯವರಾದ ಗುಲವಾಡಿ ವೆಂಕಟರಾಯರೆಂಬವರು "ಇಂದಿರಾಬಾಯಿ ಅಥವಾ ಸದ್ಧರ್ಮ ವಿಜಯವು" ಎಂಬ ೩೫೦ ಪುಟಗಳ ಸ್ವತಂತ್ರ ಸಾಮಾಜಿಕ ಕಾದಂಬರಿಯನ್ನು ಬರೆದು ೧೮೯೯ರಲ್ಲೇ ಪ್ರಕಟಿಸಿದರು. ಸಾರಸ್ವತ ಸಮಾಜದ ಆಗಿನ ಕಾಲದ ವಾಸ್ತವಿಕ ಚಿತ್ರ ಈ ಕಾದಂಬರಿ. ತಮ್ಮ ಕಾಲದಲ್ಲಿ ನಡೆದ ಘಟನೆಗಳನ್ನೇ ಗುಲವಾಡಿಯವರು ಕಾದಂಬರಿಯಾಗಿ ಹೆಣೆದಿದ್ದಾರೆ. ಶೈಲಿ

ಯಲ್ಲಾಗಲಿ, ಕಥಾನಿರೂಪಣೆಯಲ್ಲಾಗಲಿ 'ಇಂದಿರಾಬಾಯಿ' ಇಂದಿನ ಕಾದಂಬರಿಗಳನ್ನು ಹೆಚ್ಚು ಬಿಟ್ಟು ಇಲ್ಲ. ಕನ್ನಡದಲ್ಲಿ ಇದುವೇ ಪ್ರಥಮ ಸ್ವತಂತ್ರ ಕಾದಂಬರಿ.

ಗುಲವಾಡಿ ಅಣ್ಣಾಜಿರಾಯರ ರೋಹಿಣಿ ಎಂಬ ಕಾದಂಬರಿ ೧೯೦೭ ರಲ್ಲಿ ಪ್ರಕಟವಾಯಿತು. "ರೋಹಿಣಿ"ಯ ಲೇಖಕರೂ ಕನ್ನಡ ಜಿಲ್ಲೆಯವರೆ. ಇದು ಪ್ರಕಟವಾದುದು ೧೯೦೭ರಲ್ಲಿಯಾದರೂ ಲೇಖಕರು ಅದನ್ನು ಕಳೆದ ಶತಮಾನದ ಕೊನೆಯ ದಶಕದಲ್ಲಿಯೇ ಬರೆಯಲು ಪ್ರಾರಂಭಿಸಿದ್ದರೆಂದು ತಿಳಿಯುತ್ತದೆ.

ಪ್ರಾರಂಭದ ಸ್ವತಂತ್ರ ಕನ್ನಡ ಕಾದಂಬರಿಗಳ ಬಗ್ಗೆ ಬರೆಯುವಾಗ ಮೈಸೂರಿನ ದಿವಂಗತ ಎಂ. ಎಸ್. ಪುಟ್ಟಣ್ಣನವರ ಹೆಸರನ್ನು ಮರೆಯುವುದು ಸಾಧ್ಯವಿಲ್ಲ. ಅವರ "ಮಾಡಿದ್ದುಣ್ಣೋ ಮಹಾರಾಯ" ೧೯೧೫ರಲ್ಲಿ ಪ್ರಕಟವಾದಂತೆ ತಿಳಿಯುತ್ತದೆ.

"ವಾಗ್ದೇವಿ" ಪ್ರಥಮವಾಗಿ ಪ್ರಕಟವಾದುದು ೧೯೦೫ರಲ್ಲಿ. ವೆಂಕಟರಾಯರ "ಇಂದಿರಾಬಾಯಿ"ಯಂತೆ ಇದೂ ಆಗಿನ ಕಾಲದಲ್ಲಿ ನಡೆದ ಕೆಲವೊಂದು ಘಟನೆಗಳನ್ನು ಹೆಣೆದು ಕಟ್ಟಿದ ಕಥೆ. ಈ ಕಾದಂಬರಿಯ ಕಥೆಗೆ ಸಂಬಂಧಿಸಿದ ಘಟನೆಗಳು ಜಿಲ್ಲೆಯ ಹಿರಿಯರ ನೆನಪಿನಲ್ಲಿ ಇನ್ನೂ ಇವೆ.

"ಇಂದಿರಾಬಾಯಿ"ಯ ರಚನೆಯಂತೆಯೇ ವಾಗ್ದೇವಿಯ ರಚನೆಯೂ ಒಂದು ದಿಟ್ಟತನದ ಹಜ್ಜೆಯೆನ್ನಬಹುದು· ಆ ಕಾಲದಲ್ಲಿ ಈ ರೀತಿಯ ತೀಕ್ಷ್ಣವಾದ ಕೃತಿಯನ್ನು ರಚಿಸುವುವೆಂದರೆ ಅದಕ್ಕೂ ಎದೆಗಾರಿಕೆ ಬೇಕು.

"ವಾಗ್ದೇವಿ"ಯ ಭಾಷೆಯ ಕುರಿತು ಒಂದು ಮಾತು ಅವಶ್ಯ. ವೈಯಾಕರಣಿಗಳಿಗೆ ಬಹುಶ: ಇದರಲ್ಲಿ ಒಂದು ವಾಕ್ಯವೂ ಸರಿಯೆಂದು ಕಾಣದು. ಲೇಖಕರು ಹೆಚ್ಚಾಗಿ ಜನರು ಆಡುತ್ತಿದ್ದ ಭಾಷೆಯಲ್ಲೇ ಬರೆದಿದ್ದಾರೆ. ಕೆಲವು ಪದಗಳಂತೂ ಇಂದು ಬಳಕೆಯಲ್ಲೇ ಇಲ್ಲ. ಆದರೂ ಭಾಷೆಯನ್ನು ಸರಿಪಡಿಸುವ ಗೋಜಿಗೆ ಹೋಗದೆ ಇದ್ದಂತೆಯೇ ಇರಿಸಲಾಗಿದೆ.

—ಸಂಪಾದಕ.

# ವಾಗ್ದೇವಿ



## ಒಂದು

"ಅವಳ್ಯಾರು ವಾಗ್ದೇವಿಯೇ? ಆಹಾ! ಸಾಕ್ಷಾತ್ ಅಜನರಾಣಿಯೇ ಸರಿ."

"ಪರಾಕೆ! ಅಜನರಾಣಿಗಾದರೂ ನಾಸಿಕನಾಸ್ತಿ. ವಾಗ್ದೇವಿಗೆ ಆ ಅಂಗವು ಸಂಪೂರ್ಣತೆಯುಳ್ಳದ್ದಾಗಿದೆ ಆದಕಾರಣ ಬೊಮ್ಮನ ಪತ್ನಿಗಿಂತ ವಾಗ್ದೇವಿಯೇ ಹೆಚ್ಚು ರೂಪವತಿಯೆಂದು ನನ್ನ ಅಭಿಪ್ರಾಯ."

"ಪೂರ್ವಾಶ್ರಮದಲ್ಲಿ ನಮ್ಮ ಅಣ್ಣಗೆ ಇವಳು ಸಾದಿಸಿ. ನಾವು ಸನ್ಯಾಸ ಪಡಕೊಂಡ ತರುವಾಯ ಅವಳನ್ನು ಇದು ಮೊದಲು ನೋಡಲಿಲ್ಲವು. ಇವಳ ರೂಪಲಾವಣ್ಯವನ್ನು ಈಗ ನೋಡಿದರೆ, ಷಡ್ವೈರಿಗಳನ್ನು ನಿಗ್ರಹಮಾಡಿದ ಯತಿಯಾದರೂ ಸೋಥೋಗನೇ?"

"ಪರಾಕೆ! ಸೃಷ್ಟಿಸ್ಥಿತಿಲಯಕ್ಕೆ ಕಾರಣಭೂತರಾದ ಅಜ ಹರಿ ರುದ್ರ-- ಇವರೇ ಒಬ್ಬೊಬ್ಬರನ್ನು ಕಟ್ಟಿಕೊಂಡ ಮೇಲೆ, ಮಾನವ ಜನ್ಮದಲ್ಲಿ ಹುಟ್ಟಿದವನ ಪಾಡೇನು?"

ಈ ಸಂಭಾಷಣೆಯು ಕುಮುದಪುರದಲ್ಲಿ ಕಾಳಿಕಾ ನದಿಯ ತೀರದಲ್ಲಿ ಸ್ನಾನವನ್ನು ಗೈದು, ಶುಚಿರ್ಭೂತರಾಗಿರುತ್ತಿದ್ದ ಚಂಚಲನೇತ್ರ ಶ್ರೀಪಾದಂಗಳಿಗೂ ಅವರ ಅಚ್ಚುಮೆಚ್ಚಿನ ಪಾರುಪತ್ಯಗಾರ ವೆಂಕಟಪತಿಯಾಚಾರ್ಯಗೂ ನಡೆಯುತ್ತಲಿತ್ತು. ಪರಿಚಾರಕನಾದ ಹಯಗ್ರೀವಮಾಣಿಯು ಒಂದು ಶಬ್ದವಾದರೂ ಕಿವಿಗೆ ಕೇಳದವನಂತೆ ಅತ್ತಿತ್ತ ನೋಡುತ್ತಾ ನಿಂತುಕೊಂಡಿದ್ದನು. ಅವನನ್ನು ನೋಡಿ ವೆಂಕಟಪತಿಯು ಶ್ರೀಪಾದಂಗಳೊಡನೆ, "ಪರಾಕೆ! ಹುಟ್ಟು ಕಿವುಡನಾದ ಈ ಮಾಣಿಯ ಅವಸ್ಥೆಯು ನಿಜವಾಗಿ ಕನಿಕರಪಡಲಿಕ್ಕೆ ಯೋಗ್ಯವಾದ್ದೇ. ನಾವು ಏನೇನು ಮಾತಾಡಿದೆವೆಂದು ಅವನಿಗೆ ಸ್ವಲ್ಪ

ವಾದರೂ ಗೊತ್ತಾಯಿತೇ? ಶ್ರೀಹರಿ! ನಿನ್ನ ಮಹಿಮೆಯು ಅಪಾರವಾದದ್ದು. ಇಷ್ಟು ಒಳ್ಳೇ ಹುಡುಗನಿಗೆ ಕರ್ಣದೋಷವನ್ನು ನೀನು ಕೊಟ್ಟ ದೆಸೆಯಿಂದ ಅವನ ಜನ್ಮವೇ ವ್ಯರ್ಥವಾಯಿತು" ಎಂದನು. "ಇಂಥಾ ಕುಂದು ಈ ಯೌವನನಿಗೆ ಇದ್ದಿಲ್ಲವಾದರೆ ಈಗ ನಮ್ಮಿಬ್ಬರಿಗಾದ ಸಂಭಾಷಣೆಯನ್ನು ಅವನು ಊರಲ್ಲೆಲ್ಲಾ ಲವಮಾತ್ರವಲ್ಲಿ ಪ್ರಕಟಪಡಿಸಿ ನಾಚಿಗೆಗೇಡು ಮಾಡಿಬಿಡುತ್ತಿದ್ದನಲ್ಲವೇ? ಇವನಂತಿರುವ ಚಾಕರನು ದೇವರ ದಯದಿಂದಲೇ ನಮಗೆ ದೊರಕಿದನು" ಎಂದು ಚಂಚಲನೇತ್ರರು ಹೇಳಿದರು. ಆಗ ವೆಂಕಟಪತಿಯು "ಸತ್ಯ ಸತ್ಯ ಶ್ರೀಸ್ವಾಮಿ" ಎಂದು ಉದ್ದಂಡ ನಮಸ್ಕಾರ ಮಾಡಿದನು.

## ಎರಡು

"ಓಹೋ! ಇಂದು ಆಷಾಢ ಏಕಾದಶಿ, ತಪ್ತಮುದ್ರಾಧಾರಣೆಯಾಗಬೇಕು. ಇದಕ್ಕಾಗಿಯೇ ವಾಗ್ದೇವಿಯು ನದೀ ತೀರದಲ್ಲಿ ಸ್ನಾನ ಮಾಡುತ್ತಿರುವಳು. ಬಹು ಜನರು ಆ ನದೀ ತೀರದಲ್ಲಿ ಕೂಡಿರುವದು ಇದೇ ಉದ್ದಿಶ್ಯವಾಗಿರಬೇಕು" ಎಂದು ಚಂಚಲನೇತ್ರರು ಹೇಳಿದರು. ಈ ಮಾತನ್ನು ಕೇಳಿ ತನ್ನ ಮಠದಲ್ಲಿ ನಡಿಯಬೇಕಾಗಿರುವ ಮುದ್ರಾಧಾರಣೆಯ ಗೋಷ್ಠಿಯೇ ಇವರಿಗೆ ಫಕ್ಕನೆ ಮರೆತು ಹೋಗುವದು ಸ್ವಲ್ಪ ಆಶ್ಚರ್ಯವಾಗಿ ವೆಂಕಟಪತಿಗೆ ತೋರಿತು. ಚಂಚಲನೇತ್ರರ ಮನಸ್ಸನ್ನು ಪೂರ್ಣವಾಗಿ ವಾಗ್ದೇವಿಯು ಆಕರ್ಷಣೆ ಮಾಡಿಕೊಂಡಿರುವ ದೆಸೆಯಿಂದ ತಾನು ಯಾವ ಠಾವಿಗೆ ಹೋಗಬೇಕು, ಏನು ಮಾಡಬೇಕು ಎಂಬ ಗೊಡವೆಯೇ ಇಲ್ಲದೆ ಅವರು ಒಂದು ಗೊಂಬೆಯಂತೆ, ಹಿಂದಿನಿಂದ ಆಚಾರ್ಯ ಮುಂದಿನಿಂದ ಮಾಣಿ ಇವರೊಡನೆ ಮೆಲ್ಲಮೆಲ್ಲನೆ ಅಡಿಯಿಡುತ್ತಾ ತಮ್ಮ ಮಠವನ್ನು ಹೇಗಾದರೂ ಪ್ರವೇಶ ಮಾಡಿದರು. ಅಲ್ಲಿ ಆಗಬೇಕಾದ ನಿತ್ಯಕರ್ಮಾನುಷ್ಠಾನಗಳನ್ನು ನಡಿಸುವಾಗ ಈ ಯತಿಗಳು ಎಂದಿನಂತೆ ಜಾಗರೂಕತೆಯುಳ್ಳವರಂತೆ ಕಾಣಲಿಲ್ಲ. ಅವರ ಅವಸ್ಥೆಯು ಭೂತಸಂಚಾರವಾದವರಂತೆ ಹಲವರಿಗೆ ತೋರಿತು. ಅದರ ಮರ್ಮವೇನೆಂದು ವೆಂಕಟಪತಿಗಲ್ಲದೆ ಇನ್ನೊಬ್ಬಗೆ ಅರಿಯದೆ, ಅವರು ಒಬ್ಬನ ಕೂಡೆ ಇನ್ನೊಬ್ಬನು ಕುಸುಗುಟ್ಟಲಿಕ್ಕೆ ತೊಡಗಿದರು.

ವಾಗ್ದೇವಿಯು ಜರೀ ಅಂಚಿನ ಹೊಂಬಣ್ಣದ ಶಾಲಿಯನ್ನುಟ್ಟು, ಜರತಾರಿ ಕುಪ್ಪಸವನ್ನು ತೊಟ್ಟುಕೊಂಡು, ಉಂಗುರ ಕೂದಲು ಎಳೆದು,

ದುಂಡಗಾದ ತುರುಬು ಕಟ್ಟಿಕೊಂಡಿದ್ದಳು. ಅದರಲ್ಲಿ ಒಂದು ಗುಲಾಬಿ ಹೂವು ಮುಡಿಸಿತ್ತು. ಹಣೆಯಲ್ಲಿ ದಿವ್ಯವಾಗಿ ಕುಂಕುಮದಬೊಟ್ಟು ಅತೀ ಸಪೂರವಾಗಿ ಹಚ್ಚಿಕೊಂಡು, ಮಂದಸ್ಮಿತವದನವುಳ್ಳವಳಾಗಿ ಸೆರಗನ್ನು ಎಳಕೊಳ್ಳುತ್ತಾ, ಒಂದು ಕಣ್ಣಿನದೃಷ್ಟಿಯು ಸ್ವಲ್ಪ ಓರೆಯಾಗಿರುವದರಿಂದ ಮುಖದ ಕಾಂತಿಯು ಮತ್ತಷ್ಟು ವೃದ್ಧಿಯಾಗಿ ಅಪೂರ್ವವಾದ ಸ್ತ್ರೀರತ್ನವೆಂದು ಎಲ್ಲರು ಸಮ್ಮತ ಪಡುವ ಹಾಗೆ ಕಾಲಿನ ಉಂಗುರಗಳ ಝಣತ್ಕಾರದಿಂದಲೇ ಗುಂಪಿನ ಮಧ್ಯದಿಂದ ಕ್ಷಣಮಾತ್ರದಲ್ಲಿ ದಾರಿಯನ್ನು ಬಿಡಿಸಿಕೊಂಡು, ಮುದ್ರಾಧಾರಣೆಯಾಗತಕ್ಕ ಸ್ಥಲಕ್ಕೆ ಮದದಾನೆಯೋಪಾದಿ ನಡೆದಳು. ಚಂಚಲನೇತ್ರರಿಗೂ ಒಂದು ಓರೆಕಣ್ಣಿರುವದು. ಗುಂಪಿನ ಮಧ್ಯದಿಂದ ಯಾರೋ ಒಬ್ಬನು—

"ಕ್ವಚಿತ್ ಕಾಣಾ ಭವೇತ್ ಸಾಧು ಕ್ವಚಿತ್ ಕಾಣಿ ಪತಿವ್ರತಾ"

ಎಂದು ದೊಡ್ಡ ಸ್ವರದಿಂದ ಒದರಿದನು.

ಆಗ ಚಂಚಲನೇತ್ರರು ಮುದ್ರಾಧಾರಣೆಯ ಸ್ಥಾನಕ್ಕೆ ಬಂದು, ಆಸನಾರೂಢರಾಗಿದ್ದರಷ್ಟೆ. ಪ್ರಥಮದಲ್ಲಿಯೇ ಅವಳ ದೃಷ್ಟಿಯು ಅವರ ದೃಷ್ಟಿಗೆ ಸಮ್ಮಿಳಿತವಾಯಿತು. ತಮ್ಮಿಬ್ಬರಿಗೂ ತುಸು ಓರೆದೃಷ್ಟಿಯಿರುವ ಕಾರಣ ಈ ಹಾಸ್ಯರೂಪದ ಶ್ಲೋಕವು ಯಾರ ಬಾಯಿಯಿಂದ ಬಂದುದೆಂದು ಅವರು ಮನಸ್ಸಿನಲ್ಲಿಯೇ ಕೊಂಚ ಖಿನ್ನರಾದರು. ಆದರೂ ಯತಿಶ್ರೇಷ್ಠರು ಇನ್ನೊಮ್ಮೆ ವಾಗ್ದೇವಿಯ ಮುಖಾವಲೋಕನಮಾಡುತ್ತಲೇ ಹಿಂದೆ ನಡ ದದ್ದೆಲ್ಲ ಮರವೆಗೆ ಬಂದು ಆನಂದಾಬ್ಧಿಯಲ್ಲಿ ಮನಸ್ಸನ್ನು ಓಲಾಡಿಸಿಬಿಟ್ಟರು.

ಮುದ್ರಾಧಾರಣೆಯನ್ನು ಮಾಡಿಸಿಕೊಳ್ಳುವದಕ್ಕಾಗಿ ಮಠದ ಶಿಷ್ಯರ ದೊಡ್ಡ ಸಮೂಹವು ನೆರೆದಿತ್ತು. ಒಂದೊಂದು ಸಾರಿ ಮೂವರನ್ನು ಸಾಲಾಗಿ ನಿಲ್ಲಿಸಿ, ಮುದ್ರಾಂಕಿತವು ಎಡೆಬಿಡದೆ ನಡೆಯುತ್ತಿತ್ತು. ಶ್ರೀಪಾದಂಗಳ ಸಮೀಪವಿದ್ದ ವೈದಿಕರು

ಸುದರ್ಶನಮಹಾಜ್ವಾಲಾ ಕೋಟಿಸೂರ್ಯಸಮಪ್ರಭಾ ||
ಅಜ್ಞಾನಾಂಧಶಮೇಸ್ನಿತ್ಯಂ ವಿಷ್ಣುಮಾರ್ಗಂಪ್ರದರ್ಶಯ ||

ಎಂದು ಗಂಭೀರಸ್ವರದಿಂದ ಘೋಷಿಸುತ್ತಲಿದ್ದರು. ಅವರ ಎದುರಿಗೆ ಒಂದು ಹರಿವಾಣವಿತ್ತು. ಆಗಾಗ ಪಾರುಪತ್ಯಗಾರನು ಹರಿವಾಣದಿಂದ ಕಾಣಿಕೆಯ ಹಣವನ್ನು ರಿಕ್ತಮಾಡಿ, ಪುನಃ ಅದನ್ನೇ ಇಡುತ್ತಿದ್ದನು. ಬೆಳ್ಳಿಯ ಮತ್ತು ಭಂಗಾರದ ಉದ್ದವಾದ ಹಿಡಿಗಳುಳ್ಳ ಶಂಖಚಕ್ರ ಮುದ್ರೆಗಳನ್ನು ಮುದ್ರಾ

ಧಾರಣೆಯು ಹೋಮಾಗ್ನಿಯಲ್ಲಿ ಚೆನ್ನಾಗಿ ಕಾಯಿಸಿ, ಶ್ರೀಪಾದಂಗಳ ಕೈಯಲ್ಲಿ ವೈದಿಕರು ಕೊಡುತ್ತಲೇ, ಅವರು ಸಮ್ಮುಖದಲ್ಲಿ ನಿಂತಿರುವ ಶಿಷ್ಯರಿಗೆ ಜಾಗ್ರತೆ ಯಾಗಿ ಮುದ್ರೆಯೊತ್ತಿಬಿಡುವರು. ಧೈರ್ಯಸ್ಥರು ಮೈಯನ್ನು ರವೆಯಷ್ಟಾದ ರೂ ಅಲುಗಿಸದೆ ಸ್ತಬ್ಧರಾಗಿ ನಿಂತುಕೊಂಡು, ನೋಡುವವರ ಶ್ಲಾಘನೆಗೆ ಪಾತ್ರ ರಾಗುವರು ಪುಕ್ಕರು ಹೆದರಿ ತಮ್ಮನ್ನು ಸುಟ್ಟುತೆಗೆಯುವರೆಂಬ ಭ್ರಮೆಯಿಂದ ಹಿಂದೆಸರಿಯುವರು. ಆಗ ಬಲಿಷ್ಠರು ಅವರ ತೋಳುಗಳನ್ನು ಹಿಡಿದು ಸರಿ ಯಾಗಿ ನಿಲ್ಲಿಸಿ, ಹಾಸ್ಯವದನರಾಗಿ ವಿನೋದವನ್ನುಂಟು ಮಾಡುವರು. ಗಂಡಸರೇ ಹೀಗೆ ಹೆದರಿ ಬಿಟ್ಟರೆ ತಮ್ಮ ಅವಸ್ಥೆ ಇನ್ನು ಹೇಗಾಗುವದೋ ಎಂಬ ಅನುಮಾನದಿಂದ ಅಬಲೆಯರನೇಕರು ಹಿಂದೆ ಹಿಂದೆ ಸರಿಯ ತೊಡಗಿದರು. ವಾಗ್ದೇವಿಗೆ ಅಂಥಾ ಭಯ ಲೇಶವಾದರೂ ಇರಲಿಲ್ಲ. ಆದರೂ ತಾನೊಬ್ಬಳೇ ಮುಂದೆ ಬಿದ್ದರೆ, ಬೇರೆ ಹೆಂಗಸರೂ ಗಂಡಸರೂ ತನ್ನ ಧೈರ್ಯ ವನ್ನು ಕುರಿತು ಯದ್ವಾ ತದ್ವಾ ಆಡಿಬಿಡುವರೆಂಬ ಅಂಜಿಕೆಯಿಂದಲೋ ಇನ್ನಾವ ಕಾರಣದಿಂದಲೋ ಎಲ್ಲರಿಗಿಂತಲೂ ಹಿಂದೆ ನಿಂತುಕೊಂಡಿದ್ದಳು. ಆಕಾಶದಲ್ಲ ಅಸಂಖ್ಯಾತ ನಕ್ಷತ್ರಗಳ ಪ್ರಭೆಯಿಂದ ಚಂದ್ರನ ಕಾಂತಿಯಾಗಲೀ ಬಿಂಬವಾಗಲೀ ಕುಂದುವ ಹಾಗಿಲ್ಲವಷ್ಟೆ. ಹಾಗೆಯೇ ವಾಗ್ದೇವಿಯು ಎಲ್ಲರ ಹಿಂದೆ ಅವಿತುಕೊಂಡವಳಂತೆ ನಿಂತುಕೊಂಡಿದ್ದರೂ ಅವಳ ಪ್ರಸನ್ನತೆಯು ಯಾರಿಗೂ ಮರೆಯಾಗಿರಲಿಲ್ಲ. ಅವಳ ಕಟಾಕ್ಷವನ್ನೇ ಈಕ್ಷಿಸಿಕೊಂಡಿರುವ ಚಂಚಲನೇತ್ರರಿಗನಕ ಸಂಪೂರ್ಣವಾಗಿ ಗೋಚರವಾಗುತ್ತಿತ್ತು. ಅಲ್ಲಿ ನೆರೆದ ಅಬಲಾವೃಂದದಲ್ಲಿ ಈ ಯುವತಿಯ ಮೋಹನಶಕ್ತಿಯೂ ಲಾವಣ್ಯವೂ ಇನ್ನೊಬ್ಬ ಸ್ತ್ರೀಯಲ್ಲಿ ಇರುತ್ತಿದ್ದರೆ ಚಂಚಲನೇತ್ರಯತಿಗಳ ಹೃದಯದಲ್ಲಿ ಅವಳ ಅನುಬಿಂಬವು ಸರ್ವಥಾ ನೆಲೆಯಾಗದೆ ಲೋಕದಲ್ಲಿ ಸೌಂದರ್ಯದಲ್ಲಿ ಒಬ್ಬಳಿಗಿಂತ ಮತ್ತೊಬ್ಬಳು ಉತ್ಕೃಷ್ಟವಾಗಿರುವಳೆಂಬ ಪರಿಜ್ಞಾನವು ಉತ್ಪತ್ತಿ ಯಾಗಿ, ಅವರ ಮನಸ್ಸು ಸುಸ್ಥಿರವಾಗುತ್ತಿತ್ತು.

ಗಂಡಸರೆಲ್ಲರೂ ಮುದ್ರಾಧಾರಣೆ ಮಾಡಿಸಿಕೊಂಡರು. ಹೆಂಗಸ ರಲ್ಲಿಯೂ ಅನೇಕರು ಮುದ್ರಾಂಕಿತ ಹೊಂದಿ ಕೆಲಸಾರಿದರು. ಬಹು ಮಂದಿ ಸ್ತ್ರೀಯರು ಉಳಿದರು. ಅವರೆಲ್ಲರಿಗೂ ಬೇಗ ಬೇಗ ಸುಧಾರಿಸೋಣಾಯಿತು. ಕಟ್ಟಕಡೆಯಲ್ಲಿ ವಾಗ್ದೇವಿಯು ಮಾಯಾಜಾಲವನ್ನು ಬೀಸುತ್ತಾ ಎದುರಿಗೆ ಬಂದು ತಲೆಬಾಗಿಸಿ ನಿಂತುಕೊಂಡಳು. ಚಂಚಲನೇತ್ರರು ತಪ್ತಮುದ್ರೆಯನ್ನು

ಒದ್ದೆ ಅಂಗವಸ್ತ್ರದ ಗಳಿಗೆ ಮೇಲೆ ಚೆನ್ನಾಗಿ ಒತ್ತುವದರಿಂದ ಅದರ ಉಷ್ಣತೆಯನ್ನು ಆದಷ್ಟು ತಣಿಸಿ, ಒಂದೊಂದು ಕೈಮೇಲೆ ಒಂದೊಂದು ಮುದ್ರೆಯನ್ನು ಬಹುಸೂಕ್ಷ್ಮವಾಗಿ ಒತ್ತಿಬಿಟ್ಟು, ತೀರ್ಥಪ್ರಸಾದವನ್ನು ಪ್ರೀತಿಪೂರ್ವಕವಾಗಿ ಅನುಗ್ರಹಿಸಿ, ಅವಳ ಕೃತಜ್ಞತೆಗೆ ಪಾತ್ರರಾದರು ಮುದ್ರಾಧಾರಣೆಯ ಕೆಲಸವು ತೀರಿದ ತರುವಾಯ ಶ್ರೀಪಾದಂಗಳ ಫಲಹಾರವು ಮುಗಿಯಿತು. ಸಾಯಂಕಾಲ ವೆಂಕಟಪತಿ ಆಚಾರ್ಯನು ಪ್ರಣಾಮಮಾಡಿ ನಿಂತುಕೊಂಡಾಗ ತನ್ನ ಸಮೀಪದಲ್ಲಿ ಕೂತು ಕೊಳ್ಳುವದಕ್ಕೆ ಶ್ರೀ ಪಾದಂಗಳ ಆಜ್ಞೆಯಾಯಿತು. ಹಾಗೆಯೇ ಅವರಲ್ಲಿ ಗುಪ್ತ ಸಂಭಾಷಣೆಗೆ ಪ್ರಾರಂಭವಾಯಿತು.

## ಮೂರು

ಶ್ರೀಪಾದ—"ವೆಂಕಟಪತಿ! ನಮಗೆ ಸನ್ಯಾಸವಾಗಿ ಹದಿನೈದು ಸಂವತ್ಸರಗಳಾದವು. ಈಗ ನಮ್ಮ ವಯಸ್ಸು ಮೂವತ್ತು ವರುಷ. ಇದು ವರಿವಿಗೂ ನಾವು ಷಡ್ವೈರಿಗಳನ್ನು ಜಯಿಸಿ ಕೀರ್ತಿಯನ್ನು ಹೊಂದಿದೆವು."

ವೆಂಕಟಪತಿ—"ಪರಾಕೆ! ಶ್ರೀಪಾದಂಗಳವರು ಅತಿ ಪರಿಶುದ್ಧರೆಂದು ಇಡೀ ಲೋಕವೇ ಕೊಂಡಾಡುವಾಗ ಬಣಗು ಮನುಷ್ಯನಾದ ನಾನು ಹೆಚ್ಚಿಗೆ ಏನು ಹೇಳಲಿ?"

ಶ್ರೀಪಾದ—"ಅದಂತಿರಲಿ. ನಮಗೆ ಈಗ ಪ್ರಾಪ್ತವಾದ ಸಂಕಟವನ್ನು ಕುರಿತು ಕೊಂಚ ಪ್ರಸ್ತಾಪ ಮಾಡಿಬಿಡುತ್ತೇವೆ; ಇನ್ನೊಬ್ಬರ ಕಿವಿಗೆ ಅದು ಬೀಳಬಾರದು."

ವೆಂಕಟಪತಿ—"ಅಪ್ಪಣೆಯಾಗುವದು ಬರಾಬರಿ. ಇಲ್ಲಿ ಈಗ ಬೇರೆ ಯಾರೂ ಇಲ್ಲ. ಕೆಪ್ಪಮಾಣಿ ಒಬ್ಬ ಇದ್ದಾನೆ."

ಶ್ರೀಪಾದ—"ಕೆಪ್ಪನಿರಲಿ, ಪರ್ವಾ ಇಲ್ಲ. ಹಾಗಾದರೆ ಹೇಳುತ್ತೇವೆ ಕೇಳು. ನಮಗೆ ಏನೋ ಕೆಟ್ಟ ಗ್ರಹಗತಿ ಹಿಡಿಯುವ ಹಾಗಿದೆ. ಇಲ್ಲವಾದರೆ ಇದುವರೆಗೆ ಪ್ರಪಂಚವಿಚಾರ ಸೋಕದೆ ಇರುವ ನಮಗೆ ತತ್ಕಾಲದಲ್ಲಿ ವಿಷಯಾತುರತೆ ಕಾಡುವದ್ಯಾಕೆ?"

ವೆಂಕಟಪತಿ—"ಪರಾಕೆ! ವಿಧಿ ಬರೆದ ಬರಹ ಬೆನ್ನಬಿಡದೆಂಬ ನುಡಿಯು ಸರ್ವಥಾ ಸಟೆಯಲ್ಲ. ಮಾನುಷಿಕ ವಿಚಾರವು ಏಕರೀತಿಯಲ್ಲಿ

ನಡೆಯುವದುಂಟೇ? ಸರ್ವಕಾರ್ಯಗಳಿಗೆ ಕಾರಣಭೂತವಾದ ಬುದ್ಧಿಯು ದೈವಪ್ರೇರಿತವಾದದ್ದೆಂದು ನನ್ನ ಮತ. ಸರ್ವಜ್ಞರಾದ ಶ್ರೀಪಾದಂಗಳ ಸನ್ನಿಧಿಯಲ್ಲಿ ಹೆಚ್ಚಿಗೆ ಅರಿಕೆಮಾಡಲೇ?"

ಶ್ರೀಪಾದ—"ಇಂದಿನ ವಿಚಾರಕ್ಕೆ ನಿನ್ನ ಮತವೇ ಉಪಯುಕ್ತವಾಗಿದೆ. ಸತ್ಕೀರ್ತಿಯನ್ನು ಹೋಗಲಾಡಿಸಿಕೊಳ್ಳುವ ಕಾಲವು ಬಂದೊದಗಿತಲ್ಲಾ! ಏನು ಮಾಡಬಹುದು?"

ವೆಂಕಟಪತಿ—"ಅಪ್ಪಣೆಯಾದರೆ ಸಣ್ಣದೊಂದು ಮಾತು ಹೇಳಿಬಿಡುತ್ತೇನೆ."

ಶ್ರೀಪಾದ—"ಓಹೋ! ಅಗತ್ಯವಾಗಿ ಹೇಳಪ್ಪಾ."

ವೆಂಕಟಪತಿ—"ಮನಸ್ಸು ಎಂದೆಂದೂ ಚಂಚಲವೆ. ಅದರ ಚಾಂಚಲ್ಯವನ್ನು ತಗದು ಅದನ್ನು ಸ್ಥಿರಪಡಿಸಲಿಕ್ಕೆ ವಿವೇಕಶಕ್ತಿಯೊಂದೇ ಉಪಾಯ. ಆದಕಾರಣ ಶ್ರೀಪಾದಂಗಳವರು ವಿವೇಕದಿಂದ ವಿಚಾರಮಾಡಿ ನೋಡಿದರೆ, ಪಸ್ತುಗಾತುರತೆಯನ್ನು ಪ್ರಯಾಸವಿಲ್ಲದೆ ದೂರಪಡಿಸಿ, ಸತ್ಕೀರ್ತಿಯನ್ನು ಪಡೆಯಬಹುದು. ಹೆಚ್ಚಿನ ಹೇಳಲಿಕ್ಕೆ ಬಡ ಕಿಂಕರನು ಶಕ್ತನಲ್ಲ."

ಶ್ರೀಪಾದ—"ಜ್ಞಾನೋಪದೇಶ ಮಾಡುವುದು ಕಷ್ಟದ ಕೆಲಸವಲ್ಲ. ಅದರಂತೆ ನಡೆಯುವದೇ ಪ್ರಧಾನ. ವಿವೇಕವನ್ನು ಹೊಡೆದೋಡಿಸುವ ದುರ್ವ್ಯಸನವು ಮನಸ್ಸಿಗೆ ತಗಲಿಬಿಟ್ಟರೆ ಮಾಡತಕ್ಕದ್ದೇನು? ಯಾವ ಯತ್ನವೂ ನಡೆಯುವಹಾಗಿಲ್ಲ. ವಾಗ್ದೇವಿಯ ಸುಪ್ರಸನ್ನತೆಯನ್ನು ದೊರಕಿಸಿಕೊಳ್ಳುವುದು ಹೇಗೆ? ಎಂಬ ಯೋಚನೆಯಲ್ಲದೆ ಮತ್ತೊಂದು ಮಗದೊಂದು ಯಾವುದೂ ಈಗ ನಮ್ಮ ಮನಸ್ಸಿಗೆ ಹೋಗುವಹಾಗಿಲ್ಲ. ಬಹು ಭಾಷಣದಿಂದ ಸಮಯ ವ್ಯರ್ಥವಾಗಿ ಕಳೆಯಬೇಕೇಕೆ? ನಮ್ಮ ಪ್ರಾಣವೇ ನಮಗೆ ಭಾರವಾಗಿ ತೋರುತ್ತದೆ. ಅದು ಒಡಲು ಬಿಟ್ಟುಹೋದದಾದರೂ ಆಗುತಿತ್ತು. ಶ್ರೀಹರಿ! ಏನು ಮಾಡಬಹುದು?"

ವೆಂಕಟಪತಿ—"ಸ್ವಾಮಿ! ಶ್ರೀಹರಿಯನ್ನು ಭಕ್ತಿಪೂರ್ವಕವಾಗಿ ಮನಸ್ಸಿನಲ್ಲಿ ಧ್ಯಾನಿಸಿದರೆ, ಎಂಥಾ ಸಂಕಷ್ಟವೂ ಪರಿಹಾರವಾಗುವುದು. ಪ್ರಕೃತದ ದುರ್ವ್ಯಸನ ದೂರವಾಗುವುದು ಏನು ಆಶ್ಚರ್ಯ? ಆದಪ್ರಯುಕ್ತ ವಾಗ್ದೇವಿಯ ಪ್ರಸ್ತಾಪವು ಈಗಲೇ ಅಂತ್ಯವಾಗಲೆಂದು ನನ್ನ ವಿಜ್ಞಾಪನೆ."

ಶ್ರೀಪಾದ—"ನಿನ್ನ ಜ್ಞಾನ ಸುಡು. ನಮ್ಮ ಸೇವೆಯಲ್ಲಿ ಇದ್ದೇ ಈ

ಜ್ಞಾನವನ್ನು ನೀನು ಪಡೆದಿಯಲ್ಲವೆ?'

ವೆಂಕಟಪತಿ—"ಹೌದು. ಆದಕಾರಣವೇ ಆದೇ ಜ್ಞಾನವನ್ನು ತಮ್ಮ ಪಾದಕ್ಕೆ ಅರ್ಪಿಸಿದೆ. ಇದೊಂದು ಅನ್ಯಾಯವೇ ಸ್ವಾಮಿ?"

ಶ್ರೀಪಾದ—"ನಮ್ಮ ಉದ್ದೇಶವು ನಿಮ್ಮ ಜ್ಞಾನೋಪದೇಶ ಪಡೆಯುವುದಲ್ಲ. ವಾಗ್ದೇವಿಯು ಕ್ಷಿಪ್ರದಲ್ಲಿ ನಮ್ಮ ಕೈವಶವಾಗುವ ಪ್ರಯತ್ನ ನಿನ್ನಿಂದ ನಡೆಯುವುದಾದರೆ ಹೇಳು. ಇಲ್ಲವಾದರೆ ನಡೆ, ಬೇರೆಯವರ ಪರಿಮುಖವಾದರೂ ನಮ್ಮ ಸಂಕಲ್ಪಸಿದ್ಧಿಯಾಗುವ ಹಾಗೆ ನೋಡಿಕೊಳ್ಳುವೆವು."

ವೆಂಕಟಪತಿ—"ಬುದ್ಧಿ! ಚರಣಕಮಲಗಳನ್ನು ನಿರಂತರ ಧ್ಯಾನಿಸುವ ತಮ್ಮ ಆಜ್ಞಾಧಾರಕನ ಮೇಲೆ ಇಷ್ಟು ಬೇಸರವಾಗುವಹಾಗಿನ ಅನ್ಯಾಯ ಯಾವದೂ ನನ್ನಿಂದ ನಡೆಯಲಿಲ್ಲ. ನನ್ನ ಸಣ್ಣ ಬುದ್ಧಿಗೆ ಕಂಡ ಅಭಿಪ್ರಾಯವನ್ನು ನಿಮ್ಮಸನ್ನಿಧಿಯಲ್ಲಿ ಅರಿಕೆ ಮಾಡಿದ ನನ್ನ ಅಪರಾಧವನ್ನು ವಾತ್ಸಲ್ಯವಿಟ್ಟು ಕ್ಷಮಿಸಬೇಕಾಗಿ ಬೇಡಿಕೊಳ್ಳುತ್ತೇನೆ. ಅಪ್ಪಣೆಯಾಗಲಿ. ಈಗಲೇ ವಾಗ್ದೇವಿಯನ್ನು ಕಂಡು, ನಿಮ್ಮ ಆಜ್ಞೆಯನ್ನು ಅವಳಿಗೂ ಅವಳ ತಂದೆ ತಾಯಿಗಳಿಗೂ ತಿಳಿಸಿ, ಪ್ರತ್ಯುತ್ತರವನ್ನು ಪಡೆದು ಬರುವೆನು.

ಶ್ರೀಪಾದ—"ವೆಂಕಟಪತಿ! ಸ್ವಲ್ಪ ಕಠಿನಮಾತು ಆಡಿಬಿಟ್ಟೆವೆಂದು ಸಿಟ್ಟುತಾಳಿಕೋಬೇಡಾ. ನಿನ್ನಂಥಾ ಆಪ್ತನು ಇನ್ನೊಬ್ಬ ನಮಗಿರುವನೇ? ವಾಗ್ದೇವಿಯನ್ನು ಮಾತನಾಡಿಸಿ ಪ್ರತ್ಯುತ್ತರವನ್ನು ತಿಳಿಸುವೆನೆಂದು ಹೇಳಿದೆ. ಅಷ್ಟುಮಾತ್ರದಿಂದ ನಮ್ಮ ಮನಸ್ಸು ತೃಪ್ತಿಯಾಗಿ ನಿನ್ನ ಮೇಲೆ ನಮ್ಮ ದಯವು ಉಂಟಾಗದು. ನೀನು ಮನಃಪೂರ್ತಿಯಾಗಿ ಭಗೀರಥಪ್ರಯತ್ನದಿಂದಲಾದರೂ ನಮ್ಮ ವಾಂಛೆಯನ್ನು ಪೂರೈಸದಿದ್ದರೆ, ನಮ್ಮ ಪ್ರಾಣದಾಶೆ ನೀನು ಸರ್ವಥಾ ಮಾಡಬೇಡ. ಸಾವಿರ ಮಾತಾಡಿ ಏನು ಪುರುಷಾರ್ಥವಿದೆ?"

ವೆಂಕಟಪತಿ—"ಪರಾಕೆ! ನಾನು ನಡಿಸುವ ಪ್ರಯತ್ನವು ಎಂದಾದರೂ ಸಾಧ್ಯವಾಗದೆ ಹೋದೀತೇ? ಹೋದ ಕೆಲಸ ನೆರವೇರಿಸದೆ ವೆಂಕಟಪತಿಯು ಹಿಂದೆ ಬರುವನೇನು?"

ಶ್ರೀಪಾದ—"ಶಹಬಾಸ್! ತಾಮಸಮಾಡಬೇಡ, ನಡೆ! ನಿನಗೇನು ಬೇಕು? ಹೇಳಿಬಿಡು. ಈಗಲೇ ತಕ್ಕೋ."

ವೆಂಕಟಪತಿ—"ನನಗೇನೂ ಬೇಡ. 'ಅಟ್ಟಮೇಲೆ ಒಲೆ ಉರಿಯುವುದು, ಕೆಟ್ಟಮೇಲೆ ಬುದ್ಧಿಬರುವುದು' ಎಂಬುದೊಂದು ಗಾದೆ ಇದೆ.

ಶ್ರೀಪಾದಂಗಳವರು ಇನ್ನೊಮ್ಮೆ ದೇವರ ಮುಂದೆ ಕುಳಿತು ಸ್ಥಿರಬುದ್ಧಿಯಿಂದ ಪುನರಾಲೋಚನೆ ಮಾಡುವುದು ಉತ್ತಮವೆಂದು ಹೇಳಿಬಿಡುತ್ತೇನೆ. ಕಿಂಕರನ ಮೇಲೆ ಸಿಟ್ಟಾಗಬಾರದು. ಸಂಸ್ಥಾನದ ಕೀರ್ತಿಯ ಮೇಲೆ ದೃಷ್ಟಿಯಿರಲಿ."

ಶ್ರೀಪಾದ—"ತನ್ನ ವಿನಾ ನಮ್ಮ ಸಂಕಲ್ಪವು ಸಿದ್ಧಿಯಾಗದೆಂದು ನಿನಗೆ ಗರ್ವಹತ್ತಿ ಹೋಯಿತಲ್ಲವೇ? ಚಿಂತೆಯಿಲ್ಲ. ಕೆಪ್ಪಮಾಣಿಯಿಂದ ಈ ಕೆಲಸವನ್ನು ಜಯಪ್ರದಮಾಡಿಸುವುದು ನೋಡುತ್ತೀಯಾ? ನಮ್ಮ ಸಾಮರ್ಥ್ಯವನ್ನು ನಿನಗೆ ತೋರಿಸುವೆವು. ನೀನೀಗ ಮನೆಗೆ ಹೋಗು ವ್ಯರ್ಥವಾಗಿ ನಮ್ಮ ಸಮಯವನ್ನು ಹಾಳುಮಾಡಬೇಡ!"

ವೆಂಕಟಪತಿ ಆಚಾರ್ಯನು ಶ್ರೀಪಾದಂಗಳ ಮಾನವನ್ನು ಉಳಿಸುವುದು ತೀರಾ ಅಸಾಧ್ಯವಾದುದರಿಂದ, ತನ್ನ ತಪ್ಪನ್ನು ಕ್ಷಮಿಸಬೇಕಾಗಿ ಕಣ್ಣೀರಿಟ್ಟು, ಯತಿಗಳ ಮುಂದೆ ಅಡ್ಡಬಿದ್ದು, ಅಪ್ಪಣೆಯಾದ ಕೆಲಸವನ್ನು ತಾಮಸವಿಲ್ಲದೆ ನೆರವೇರಿಸುವೆನೆಂದು ವಾಗ್ದತ್ತಮಾಡಿದನು. ಚಂಚಲ ನೇತ್ರರು ಅತಿ ಸಂತೋಷದಿಂದ ವೆಂಕಟಪತಿಯನ್ನು ಕೂಡಲೇ ವಾಗ್ದೇವಿಯ ಮನೆಯ ಕಡೆಗೆ ಕಳುಹಿಸಿ,–ಇವನು ಇನ್ನೇನೆಲ್ಲಾ ಪೀಕಲಾಟ ಮಾಡಿಬಿಡುವನೋ ಎಂಬ ಅನುಮಾನದಿಂದ, ಬಂಗಿ ತಿಂದವನ ಅವಸ್ಥೆಯನ್ನು ತಾಳಿಕೊಂಡರು. ವೆಂಕಟಪತಿಯು ತನಗೆ ಉಪ್ಪನ್ನು ಕೊಟ್ಟು ಸಾಕಿದ ಗುರುವಿನ ಆಜ್ಞೆಯನ್ನು ಮೀರುವುದು ಪಾಪಕೃತ್ಯವೆಂದು ಹೆದರಿದರೂ, ಆಶ್ರಮ ಪಡಕೊಂಡಂದಿನಿಂದ ಯಾವುದೊಂದೂ ಅಪವಾದಕ್ಕೆ ಒಳಪಡದೆ, ಸನ್ಮಾರ್ಗದಲ್ಲಿ ನಡೆದು ಖ್ಯಾತಿಗೊಂಡಿರುವ ಮಠಾಧಿಪತಿಯ ಪಾತಿತ್ಯಕ್ಕೆ ತಾನೂ ಹೊಣೆಯಾಗುವುದಾಯಿತೆಂಬ ವ್ಯಸನದಿಂದ ಬೆಂಡಾದನು. ಪರಂತು ತನ್ನಿಂದಾಗುವಷ್ಟರಮಟ್ಟಿಗೆ ಜ್ಞಾನಮಾರ್ಗವನ್ನು ಸೂಚಿಸಿದರೂ, 'ಮೂರ್ಖಗೆ ಹೇಳಿದ ಬುದ್ಧಿ, ಘೋರ್ಕಲ್ಲ ಮೇಲೆ ಹೊಯಿದ ಮಳೆ' ಎಂಬಂತಾದ ಮೇಲೆ ತಾನಿನ್ನೇನು ಮಾಡಲಿ! ಸನ್ಯಾಸಿಗೆ ಕೆಡುವ ಕಾಲ ಬಂದಿರುವುದೇ ನಿಶ್ಚಯ; ದೇವರು ಇಟ್ಟಹಾಗೆ ಆಗುವುದು; ತಾನು ಆಜ್ಞೆ ಮೀರುವವನಲ್ಲವೆಂದು ವಾಗ್ದೇವಿಯ ಮನೆ ಕಡೆಗೆ ತೆರಳಿದನು.

ಆವಳ ಮನೆಯಿಂದ ಸ್ವಲ್ಪದೂರದಲ್ಲಿ ಜೋಯಿಸರಲ್ಲಿ ಹೆಸರುಗೊಂಡ ಬಣಗೂರ ತಿಪ್ಪಾಶಾಸ್ತ್ರಿಯು ಕವಡಿಚೀಲವನ್ನು ಕಂಕುಳಲ್ಲಿ ಹೆಟ್ಟಿಕೊಂಡು,

ಏಕಾದಶಿಯೊಂದರೂ ತಾಂಬೂಲವನ್ನು ಜಗಿಯುತ್ತಾ, ಸಟಸಟನೆ ನಡೆಯು ತ್ತಿದ್ದನು. ಅವನು ವೆಂಕಟಪತಿ ಆಚಾರ್ಯನನ್ನು ಥಕ್ಕನೆ ನೋಡಿ—"ಆಚಾರ್ಯರೇ! ಯಾವಲ್ಲಿಗೆ, ಸವಾರಿ" ಎಂದು ಕೇಳಿದನು. ವಾಗ್ದೇವಿಯ ಮನೆಗೆ ಹೋಗುವುದಾಗಿ ಪ್ರತ್ಯುತ್ತರ ಕೊಡಲಿಕ್ಕೆ ವೆಂಕಟಪತಿಯು ನಾಚಿಕೊಂಡು— "ಎಲ್ಲಿಗೂ ಇಲ್ಲ. ಹೀಗೆಯೇ ತಿರುಗಾಡುತ್ತೇನೆ; ತಾವು ಹೊರಟದ್ದೆಲ್ಲಿಗೆ?" ಎಂದು ಪುನಃ ಪ್ರಶ್ನೆಮಾಡಿದನು. "ತಮ್ಮಣ್ಣಭಟ್ಟನಲ್ಲಿಂದ ಕರೆ ಬಂದಿತ್ತು, ಅಲ್ಲಿಗೆ ಹೊರಟೆ" ಎಂದು ಜೋಯಿಸನು ಹೇಳಿದನು. "ದಯಮಾಡೋಣಾಗಲಿ, ನನಗೆ ಬೇರೆ ಕಡೆಯಲ್ಲಿ ಕೆಲಸವಿದೆ" ಎಂದು ವೆಂಕಟಪತಿಯು ಅಲ್ಲಿಯೇ ಇರುವ ಕುರುಮಾರ್ಗಕ್ಕೆ ತಿರುಗಿದನು. ತಮ್ಮಣ್ಣಭಟ್ಟನು ವಾಗ್ದೇವಿಯ ತಂದೆ. ಜೋಯಿಸಗೆ ಅವನು ಬರಮಾಡುವ ಕೆಲಸವೇನೋ ತಿಳಿಯಬೇಕೆಂಬ ಆತುರದಿಂದ, ವೆಂಕಟಪತಿಯು ಕುರುಮಾರ್ಗದಿಂದ ಮೆಲ್ಲಗೆ ಅದೇ ಮನೆಯ ಬಳಿಗೆ ಹೋಗಿ, ತನ್ನನ್ನು ಯಾರೂ ನೋಡದಂತೆ ಆ ಮನೆಯ ಹೊರ ಜಗಲಿಯಲ್ಲಿ ಸುಮ್ಮನೆ ಕುಳಿತುಕೊಂಡನು. ಮನೆಯ ಬಾಗಿಲು ಮುಚ್ಚಿತ್ತು. ತಿಪ್ಪಾಶಾಸ್ತ್ರಿಯು ಹೊರಗಿನಿಂದ "ಭಾಗೀರಥಿ ಅಮ್ಮ! ಭಾಗೀರಥಿ ಅಮ್ಮ!" ಎಂದುಕರೆದನು. ವಾಗ್ದೇವಿಯು—"ಅಮ್ಮಾ! ಅಮ್ಮಾ! ತಿಪ್ಪಾಶಾಸ್ತ್ರಿಗಳು ಬಾಗಲಲ್ಲಿ ಕರೆಯುತ್ತಾರೆ" ಎಂದು ತಾಯಿಗೆ ಕರೆದು ಹೇಳಿದಳು.

"ಮಗಳೇ! ಕಾಲುಮುಟ್ಟಿ ನಮಸ್ಕಾರಮಾಡು" ಎಂದು ಭಾಗೀರಥಿಯು ಕದವನ್ನು ತೆರೆದಳು.

ಜೋಯಿಸನು ಒಳಕ್ಕೆ ಪ್ರವೇಶಿದ ಕೂಡಲೇ ವಾಗ್ದೇವಿಯು ಅವನಿಗೆ ಒಂದು ಮಣೆಯನ್ನು ಕೊಟ್ಟು ಕೂರಿಸಿ, ಕಾಲುಮುಟ್ಟಿ ನಮಸ್ಕಾರಮಾಡಿ, ನಿಂತುಕೊಂಡಳು. "ಸೌಭಾಗ್ಯವತೀ ಭವ" ಎಂದು ಆಶೀರ್ವಾದಮಾಡಿ ಜೋಯಿಸನು "ತಮ್ಮಣ್ಣಭಟ್ಟರು ಎಲ್ಲಿ?" ಎಂದು ಕೇಳಿದನು.

"ಅಂಗಡಿ ಬೀದಿಗೆ ಹೋಗಿರುವರು. ಈಗತಾನೇ ಮರಳಿ ಬರುವರು" ಎಂದು ವಾಗ್ದೇವಿಯ ತಾಯಿಯು ಪ್ರತ್ಯುತ್ತರಕೊಟ್ಟಳು.

"ಜೋಯಿಸರೇ! ನಮ್ಮ ಮೇಲೆ ಇಷ್ಟು ಬೇಸರವ್ಯಾಕೆ? ತಮ್ಮ ದರುಶನವಿಲ್ಲದೆ ಬಹು ದಿವಸಗಳಾದವು. ವಾಗ್ದೇವಿಯುನಕ ತಮ್ಮ ಧ್ಯಾನದಲ್ಲಿಯೇ ಇದ್ದಾಳೆ. ನಮ್ಮವರಂತೂ ತಮ್ಮನ್ನ ಸ್ವಪ್ನದಲ್ಲಿಯೂ ಕಾಣುತ್ತಲಿದ್ದಾರೆ. ನಾನು ಅವರಿವರ ಹತ್ತಿರ ತಮ್ಮ ವಿಷಯದಲ್ಲಿ ವಿಚಾರಿ

ಸುತ್ತಾ ಇದ್ದೇನೆ. ನೋಡಿರಿ! ಬಡವರ ನೆನಪು ಯಾರೂ ಇಡರು. ಅದೊಂದು ಆಶ್ಚರ್ಯವಲ್ಲ; ಆದರೂ ನೋಡಿಬಿಡುವಾ ಎಂದು ನಮ್ಮವರ ಹತ್ತಿರ ಪ್ರಸ್ತಾಪಮಾಡಿದಾಗ, ಅವರು ತಮಗೆ ಜನ ಕಳುಹಿಸಿದರು. ಈ ಸಂಬಂಧ ಕೋಪಮಾಡಬೇಡಿ. ನಾವು ಕೇವಲ ಬಡವರು. ತಮ್ಮ ಆಶ್ರಿತರು; ಎಂದೆಂದೂ ತಮ್ಮ ಉಪಕಾರ ಮರೆಯುವವರಲ್ಲ" ಎಂದು ಭಾಗೀರಥಿಯು ಸವಿಯಾದ ಮಾತುಗಳಿಂದ ಜೋಯಿಸನನ್ನು ಉಪಚರಿಸಿದಳು. ಅವನು ಉಬ್ಬೇರಿ—"ಏನಮ್ಮಾ! ನಿಮ್ಮನ್ನು ನಾನು ಮರೆತು ಬಿಡುವದುಂಟೇ? ಬಡವರಾದರೇನಾಯಿತು? ನನಗೆ ಅಂಥವರ ಮೇಲೆಯೇ ಹೆಚ್ಚು ಅಂತಃ ಕರಣ. ಶ್ರೀಕೃಷ್ಣನು ವಿದುರನನ್ನು ಪ್ರೀತಿಸಲಿಲ್ಲವೇ? ಒಂದು ಜಾತಕ ಸಂದರ್ಭ ನೋಡಲಿಕ್ಕೆ ಕರೆ ಬಂದುದರಿಂದ ರಂಗೂರಿಗೆ ಒಬ್ಬ ಶೆಟ್ಟಿಯ ಮನೆಗೆ ಹೋಗಿದ್ದೆ. ಅಲ್ಲಿ ಕೊಂಚ ತಾಮಸವಾಯಿತು. ಇಲ್ಲವಾದರೆ ನಿಮ್ಮಲ್ಲಿಗೆ ಮೊದಲೇ ಬರುವವನಾಗಿದ್ದೆ. ಹಲವು ಮಾತುಗಳಿಂದೇನು? ನಿಮ್ಮ ಮಗಳ ಜಾತಕವನ್ನು ಸೂಕ್ಷ್ಮರೀತಿಯಲ್ಲಿ ಪರಿಶೋಧಿಸಿ, ಸ್ಫುಟಮಾಡಿ ತಂದಿರುವೆ. ಇನ್ನಾದರೂ ನನ್ನನ್ನು ದೂರುವದು ಬಿಡುವಿರಾ" ಎಂದು ಪ್ರತ್ಯುಪಚಾರದ ಮಾತುಗಳಿಂದ ಭಾಗೀರಥಿಯನ್ನು ಜೋಯಿಸನು ಸಮಾಧಾನಮಾಡಿದನು.

"ಹಾಗಾದರೆ ನಮ್ಮ ಮೇಲೆ ತಮ್ಮ ದಯ ಪೂರ್ಣ ಉಂಟಾಯಿತು; ಇನ್ನು ನಮಗೇನು ಕಡಿಮೆ?" ಎಂದು ಕಡೆಗಣ್ಣು ನೋಟದಿಂದ ವಾಗ್ದೇವಿಯು ಜೋಯಿಸನಿಗೆ ತಡೆಗಟ್ಟಿಬಿಟ್ಟಳು.

ಅಷ್ಟರಲ್ಲಿ ತಮ್ಮಣ್ಣಭಟ್ಟನು ಬಂದು—"ಸ್ವಾಮಿಾ! ಸ್ವಾಮಿಾ! ಜೋಯಿಸರಿಗೆ ನಮೋನಮಃ! ನಮ್ಮ ಮೇಲೆ ಇಷ್ಟು ಉದಾಸೀನವ್ಯಾಕೆ? ತಮ್ಮ ಭೇಟಿಯಿಲ್ಲದೆ ಬಹು ದಿವಸಗಳು ಕಳೆದವು. ನಮ್ಮಿಂದೇನು ಅಪರಾಧ ನಡೆಯಿತೋ ತಿಳಿಯದು" ಎಂದು ತಮ್ಮಣ್ಣಭಟ್ಟನು ಹಲ್ಲುಕಿರಿದನು.

ಭಾಗೀರಥಿಯು ಗಂಡನನ್ನು ಕುರಿತು—"ನಿಮ್ಮ ರಗಳೆ ಯಾವಾಗಲೂ ಮುಗಿಯುವದೇ ಇಲ್ಲ. ಜೋಯಿಸರಿಗೆ ನಮ್ಮ ಮೇಲೆ ಉದಾಸೀನವಾದರೆ, ನಿಮ್ಮ ಮಗಳ ಜಾತಕವನ್ನು ಸೂಕ್ಷ್ಮರೀತಿಯಿಂದ ಸ್ಫುಟಮಾಡಿ ಇಷ್ಟು ಪ್ರೀತಿಯಿಂದ ನಮ್ಮ ಮನೆಬಾಗಿಲಿಗೆ ಹೊತ್ತುಕೊಂಡು ಬರುವರೇನು? ಅವರಿಗೆ ನಾವು ಗಂಟು ಕೊಟ್ಟಿರುವೆವೇ?" ಎಂದು ಗದರಿಸಿ ಬಿಟ್ಟಳು.

ಅಷ್ಟರಲ್ಲಿ ವಾಗ್ದೇವಿಯು "ಅಪ್ಪಯ್ಯಾ! ಕಾಳೀ ದನ ಹಟ್ಟಿಗೆ ಇನ್ನೂ ಕೂಡಲಿಲ್ಲ. ಎಲ್ಲಿಗೆ ಹೋಯಿತೋ, ಯಾರು ಕಟ್ಟಿ ಹಾಕಿ ಬಿಟ್ಟರೋ ತಿಳಿಯದು" ಎಂದು ತಂದೆಗೆ ದೂರುಕೊಟ್ಟಳು.

ಮುದುಕಗೆ ಸ್ವಲ್ಪ ಸಿಟ್ಟುಬಂತು. "ಯಾರು ಕಟ್ಟಿ ಹಾಕಿದರೋ ಏನಾಯಿತೋ, ಅದಕ್ಕೆ ಹುಲಿ ಹಿಡಿಯಲಿ! ಈ ದುಃಖ ಯಾವಾಗಲೂ ತಪ್ಪುವುದೇ ಇಲ್ಲ" ಎಂದನು.

"ಮೊಟ್ಟಮೊದಲು ನಿಮ್ಮ ಬಾಯಿಯಿಂದ ಹೊರಡುವದೇ ಅವಾಚ್ಯ ವಷ್ಟೆ! ದನವನ್ನು ಹುಲಿ ಹಿಡಿದರೆ ಹಾಲೆಂದು ಗಲಗಚ್ಚಿ ಕುಡಿಯುವಿರೇನು? ಪಶುಗಳಿಗೆ ಬುದ್ಧಿಯುಂಟೇ? ನೀವು ಇಷ್ಟು ವಿವೇಕಶೂನ್ಯರಾದರೆ ಸಂಸಾರ ನಡೆಯುವದು ಹ್ಯಾಗೆ?" ಎಂದು ಭಾಗೀರಥಿಯು ಪತಿಯ ಮೇಲೆ ಜರಿದುಬಿದ್ದಳು.

"ಅವ್ವಾ! ವೃದ್ಧರಲ್ಲವೇ? ಅವರಿಗೆ ಅಷ್ಟು ನಿಷ್ಠೂರವಾಡಬೇಡಿ. ದಣಿದು ಬಂದವರು ಏನೋ ಆಡಿಬಿಟ್ಟರು; ಚಿಂತೆ ಇಲ್ಲ" ಎಂದು ತಿಪ್ಪಾ ಶಾಸ್ತ್ರಿಯು ಭಾಗೀರಥಿಗೆ ಬುದ್ಧಿ ಹೇಳಿ, ಗಂಡಹೆಂಡಿರಲ್ಲಿ ಜಗಳ ಬೆಳೆಯ ದಂತೆ ಮಾಡಿದನು.

ಹಾಗೆಯೇ ತಮ್ಮಣ್ಣಭಟ್ಟನು ಸೂಟಿಯನ್ನು ಬೀಸಿಕೊಂಡು ದನವನ್ನು ಹುಡುಕಿ ತರುವದಕ್ಕೆ ಬೇಗನೆ ಹೊರಹೊರಟನು. ಅಷ್ಟರಲ್ಲಿ ಭಾಗೀರಥಿಯು ಬೆಕ್ಕು ಏನೋ ಗಡಿಬಿಡಿ ಮಾಡುತ್ತದೆ, ನೋಡಿ ಬರುವೆನೆಂದು ಮನೆಯೊಳಕ್ಕೆ ಹೋಗಿ ಬಿಟ್ಟಳು. ವಾಗ್ದೇವಿಯೂ ತಿಪ್ಪಾಶಾಸ್ತ್ರಿಯೂ ಇಬ್ಬರೇ ಸಂಭಾಷಣೆಗೆ ಉಪಕ್ರಮಿಸಿದರು.

ವಾಗ್ದೇವಿ– "ಜೋಯಿಸರೇ, ನನ್ನ ಜಾತಕ ಸ್ಫುಟ ಮಾಡಿದ್ದು ನಿಜವೇನು?"

ತಿಪ್ಪಾಶಾಸ್ತ್ರಿ- "ನನ್ನ ಮಾತಿನ ಮೇಲೆ ಭರವಸೆ ಇಲ್ಲವೇ?"

ವಾಗ್ದೇವಿ– "ಹಾಗೇನು ನಾನು ಹುಚ್ಚಳೇ? ತಮ್ಮ ಮಾತು ನಂಬ ದಿರಲಾರೆ. ಮುಖ್ಯವಾಗಿ ನೋಡಿರಿ; ತಂದೆತಾಯಿಗಳು ನನಗೆ ಒಬ್ಬ ಮೊದ್ದು ಜಂತುವನ್ನು ಗಂಡನನ್ನಾಗಿ ಜೋಡಿಸಿದರಲ್ಲ. ಊಟವೊಂದು ಪರಿಷ್ಕಾರ ವಾದರೆ ಅವರಿಗೆ ಮತ್ತೊಂದು ಬೇಡ. ಸ್ವಸ್ಥವಾಗಿ ಶಯನ ಮಾಡುವರು. ಯಾರು ದುಡಿಯುತ್ತಾರೆ, ಏನು ತಾನು ಎಂಬ ಗೊಡವೆಯು ಅವರಿಗಿಲ್ಲ.

ಅವರ ಕೈ ಹಿಡಿದು ಈಗ ಎಂಟು ವರ್ಷವಾಯಿತು. ಉಡಲಿಕ್ಕೆ ಒಂದು ಶಾಲೆ ಯಾಗಲೀ ತೊಡಲಿಕ್ಕೆ ಒಂದು ಕುಪ್ಪಸವಾಗಲೀ, ಒಂದೇ ಒಂದುಕಾಸಿನ ಚಿನ್ನವಾಗಲೀ ಅವರಿಂದ ನನಗೆ ದೊರಕಿದ್ದಿಲ್ಲ. ನನ್ನ ಬುದ್ಧಿಯಿಂದಲೇ ಅಲ್ಪ ಸ್ವಲ್ಪ ಉಡಿಗೆ ತೊಡಿಗೆ ಚಿನ್ನಚಿಗುರು ಮಾಡಿಕೊಂಡಿರುವೆ. ಅದಾದರೂ ಹ್ಯಾಗೆ ದೊರಕಿಸಿಕೊಂಡೆನೆಂಬ ಜ್ಞಾನವು ಆ ಪ್ರಾಣಿಗೆ ಉಂಟೇ? ಶ್ರೀಹರಿಯು ಲೋಕವಲ್ಲಿ ಇನ್ನೆಂಥೆಂಥಾ ಪ್ರಾಣಿಗಳನ್ನು ಸೃಷ್ಟಿಮಾಡಿರುವನೋ ಕಾಣೆ!"

ತಿಪ್ಪಾಶಾಸ್ತ್ರಿ—"ಅಷ್ಟು ಒಳ್ಳೇ ಗಂಡನು ದೊರಕಬೇಕಾದರೆ ಹೆಂಡತಿಯು ಏಳೇಳು ಜನ್ಮದಲ್ಲಿಯೂ ಎಷ್ಟೋ ಸುಕೃತ ಮಾಡಿರಬೇಕು. ಇನ್ನೊಬ್ಬ ಗಂಡ ನಾದರೆ ಹೊಡೆದು ನಿನ್ನ ಹಲ್ಲು ಮುರಿಯುತ್ತಿದ್ದಿಲ್ಲವೇ? ಇವನು ಕೈಬೆರಳು ಎತ್ತಬಲ್ಲನೇ?

ವಾಗ್ದೇವಿ—"ಕೈ ಬೆರಳು ಎತ್ತುವದು ಬಿಟ್ಟುಸಿಟ್ಟನಿಂದ ನಾನೇ ಕೈ ಬೇರಿದರೂ ಸುಮ್ಮನಿರುವರು ಪಾಪ!"

ತಿಪ್ಪಾಶಾಸ್ತ್ರಿ—"ನಿನಗೆ ರಾಕ್ಷಸಗಣ, ಅವನಿಗೆ ಮಾನುಷಗಣವಾದು ದರಿಂದ ಹಾಗೆಯಾಗಲಿಕ್ಕೆ ಕಾರಣ, ಮತ್ತೇನೂ ಅಲ್ಲ."

ವಾಗ್ದೇವಿ—"ಅವರ ಜಾತಕ ತಾವು ನೋಡಿರುವಿರಷ್ಟೇ. ಅದರಲ್ಲಿ ಏನೂ ಬಲವಿಲ್ಲವೇ?"

ತಿಪ್ಪಾಶಾಸ್ತ್ರಿ—"ಆಯುಷ್ಯ ಗಟ್ಟಿಯದೆ. ಮತ್ತೆಲ್ಲ ಸೊನ್ನೆ. ಕೇವಲ ಕೇಮುದ್ರುಮ ಯೋಗವೆನ್ನಬೇಕು."

ವಾಗ್ದೇವಿ—"ಈ ಯೋಗದ ಫಲವೇನೋ?"

ತಿಪ್ಪಾಶಾಸ್ತ್ರಿ—"ಭಿಕ್ಷೆಬೇಡಿಕೊಂಡಿರೋಣ ಎಂಬರ್ಥ— ಕಾಸೊಂದೂ ದುಡಿಯಲಾರನು"

ವಾಗ್ದೇವಿ—"ನನ್ನ ಜಾತಕ ಹ್ಯಾಗೆ? ಅದಾದರೂ ಕೇಳುವ"

ತಿಪ್ಪಾಶಾಸ್ತ್ರಿ—"ತಬ್ಲಿ ಅಲ್ಲ. ಈಗ ನಡಿಯುವ ದಶಾಂತರ್ದಶೆಯೂ ಗೋಚರದಲ್ಲಿ ಗ್ರಹಗಳು ನಿಂತ ಭಾವವೂ ಅತಿ ಶುಭಕರ. ಇನ್ನೂ ಎಂಟೇ ದಿವಸಗಳೊಳಗೆ ನಿನ್ನ ದರ್ಬಾರಿಗೆ ಎಣೆ ಇರದು. ಆಗ ತಿಪ್ಪನನ್ನ ಮರೆಯದೆ ಕರೆಕಳುಹಿಸಿದರೆ ಮುಂದಿನ ವೃದ್ಧಿಯ ಉಪಾಯವೆಲ್ಲ ಹೇಳಿಕೊಡುವೆನು. ರಾತ್ರೆಯಾಯಿತು, ಮನೆಯಲ್ಲಿ ನೆಂಟರು ಬಂದಿರುವರು. ಇನ್ನೊಮ್ಮೆ ಮಾತ

ನಾಡಬಹುದು." ಎಂದು ತಿಪ್ಪಾಶಾಸ್ತ್ರಿಯು ಅವಸರದಿಂದೆದ್ದು ತನ್ನ ಮನೆಗೆ ಬಂದನು.

## ನಾಲ್ಕು

ವಾಗ್ದೇವಿಯು ಬಾಗಿಲು ಹಾಕಿ ತಿಪ್ಪಾಶಾಸ್ತ್ರಿಯು ಹೇಳಿದ ಜಾತಕ ಭಾವವನ್ನು ಕುರಿತು ತಾಯಿಯ ಕೂಡೆ ಪ್ರಸ್ತಾಪಿಸುತ್ತಿರುವಾಗ ವೆಂಕಟಪತಿ ಆಚಾರ್ಯನು ಮೆಲ್ಲನೆ ಜಗಲಿಯಿಂದ ಕೆಳಗಿಳಿದು ಬಾಗಲಿಗೆ ಕೈತಟ್ಟಿ "ಭಾಗೀರಥಿ! ಭಾಗೀರಥಿ" ಎಂದು ಕರೆದನು.

"ಯಾರದು" ಎಂದು ವಾಗ್ದೇವಿಯು ಒಳಗಿನಿಂದ ಕೇಳಿದಳು.

"ನಾನು ವೆಂಕಟಪತಿ" ಎಂಬ ಉತ್ತರ ಸಿಕ್ಕಿತು.

"ಆಚಾರ್ಯರ ಸ್ವರದಂತೆ ನನ್ನ ಕಿವಿಗೆ ಕೇಳಿಸಿತು, ಮಗಳೇ! ಬೇಗ ಬಾಗಿಲು ತೆರೆ" ಎಂದು ಭಾಗೀರಥಿಯು ಕೊಟ್ಟ ಅನುಜ್ಞೆಗನುಸಾರವಾಗಿ ಸಾವಕಾಶ ಮಾಡದೆ ಅವಳು ಕದ ತೆರೆದಳು. ಆಚಾರ್ಯನ ಸವಾರಿಯು ಒಳಗೆ ಬಂದ ಹಾಗಾಯಿತು.

"ಇದೇನು, ಆಚಾರ್ಯರೇ! ಬಡವರಮನೆಗೆ ಭಾಗೀರಥಿ ಬಂದಂತಾಯಿತು. ಕೂರಿ" ಎಂದು ಮಣೆಯನ್ನು ಕೊಟ್ಟು, ವಾಗ್ದೇವಿಯು ಆಚಾರ್ಯರ ಕಾಲುಮುಟ್ಟಿ ನಮಸ್ಕಾರ ಮಾಡಿ, ಭಯಭಕ್ತಿಯಿಂದ ನಿಂತುಕೊಂಡಳು.

"ಕೂರವ್ವಾ, ಕೂರು" ಎಂದು ಆಚಾರ್ಯನು ಅವಳನ್ನು ತನ್ನ ಸಮೀಪ ಕುಳ್ಳಿರಿಸಿಕೊಂಡು "ಸಣ್ಣದೊಂದು ಪ್ರಸ್ತಾಪ ಮಾಡುವದಕ್ಕಾಗಿ ಬಂದಿರುವೆನು, ಮನಸ್ಸಿದ್ದರೆ ಕೇಳಿಬಿಡು" ಎಂದು ಹೇಳಲು, ಅಪ್ಪಣೆಯಾಗಲೆಂದು ತಾಯಿಯೂ ಮಗಳೂ ಏಕರೀತಿಯಾಗಿ ಹೇಳಿಕೊಂಡರು.

ವೆಂಕಟಪತಿ– "ಹಾಂಗಾದರೆ ಸಂಕ್ಷೇಪವಾಗಿ ಹೇಳಿಬಿಡುತ್ತೇನೆ. ವಾಗ್ದೇವಿಯ ಮೇಲೆ ಶ್ರೀಪಾದಂಗಳವರು ಪೂರ್ಣ ಅನುಗ್ರಹವನ್ನಿಟ್ಟಿರುವರು. ಅದಕ್ಕೆ ಪ್ರತಿಯಾಗಿ ಅವಳ ಅಂತಃಕರಣವನ್ನು ಅವರು ಬಯಸುವರು."

ವಾಗ್ದೇವಿ– "ಪೂರ್ವಾಶ್ರಮದಲ್ಲಿ ಅವರಿಗೆ ನಾನು ನಾದಿನಿ. ಈಗ ಅನಕಾ ಅವರ ಮಠದ ಶಿಷ್ಯಮಂಡಳಿಗೆ ಸೇರಿರುವವಳು. ಹೀಗಾಗಿ ಗುರುಗಳ ಪ್ರೀತಿಯು ನನ್ನ ಮೇಲೆ ಇರುವದು ಆಶ್ಚರ್ಯವೆಂದು ನಾನು ತಿಳುಕೊಳ್ಳ

ವದಿಲ್ಲ. ಬಡವಳಾದ ನನ್ನ ಮೇಲೆ ಗುರುಗಳ ಅನುಗ್ರಹವಾವದ್ದಕ್ಕಾಗಿ ಬಹಳ ಕೃತಜ್ಞತೆಯುಳ್ಳವಳಾಗಿರುತ್ತೇನೆ."

ವೆಂಕಟಪತಿ– "ನನ್ನ ಮಾತಿನ ಅನ್ವಯ ತಿಳಿದವಳಂತೆ ನೀನು ಕೊಟ್ಟ ಪ್ರತ್ಯುತ್ತರಕ್ಕೆ ಮೆಚ್ಚಿದೆ. ಮಾತಿನ ಚಮತ್ಕಾರ ಹೀಗಿರಬೇಕು."

ವಾಗ್ದೇವಿ– "ಆಚಾರ್ಯರೇ, ತಾವು ಅನ್ನ ತಿಂದಷ್ಟು ನಾನು ಉಪ್ಪು ತಿಂದವಳಲ್ಲ. ತಮ್ಮ ಮಾತಿನ ಅನ್ವಯ ನಿಜವಾಗಿ ಹ್ಯಾಂಗಿರೋದೋ ನಾನು ತಿಳಿದವಳಲ್ಲ. ತಿಳಿದಿದ್ದರೆ ತಮ್ಮ ಮಾತಿಗೆ ಸರಿಯಾದ ಪ್ರತ್ಯುತ್ತರ ಕೊಡುತ್ತಿದ್ದೆ."

ವೆಂಕಟಪತಿ– "ಶ್ರೀಪಾದಂಗಳವರು ನಿನ್ನ ಮೇಲೆ ಮೋಹಪಟ್ಟಿರುವ ರೆಂಬ ತಾತ್ಪರ್ಯ ನಿನಗೆ ಸೂಚಿಸಿದೆ, ಮತ್ತೇನೂ ಅಲ್ಲ."

ವಾಗ್ದೇವಿ– "ಧನ್ಯಳಾದೆನೆಂದು ನಾನು ಹೇಳಬೇಕೇ? ಆದರೆ ಯತಿಗಳ ಮೋಹ ಒಂದೇ ವಸ್ತುವಿನ ಮೇಲೆ ನೆಲೆಗೊಂಡಿರುವದೆಂಬ ಭರವಸೆ ಮಾಡ ಕೂಡದು. ಅದಲ್ಲದೆ ನಮ್ಮ ಶ್ರೀಪಾದಂಗಳವರು ಅತಿ ಪರಿಶುದ್ಧರೆಂಬ ಖ್ಯಾತಿಯು ಊರಲ್ಲೆಲ್ಲಾ ಹಬ್ಬಿಕೊಂಡಿದೆ. ಈಗ ಮಾತ್ರ ಅವರು ವಿಷಯಾ ತುರವುಳ್ಳವರೆಂಬ ಮಾತು ಪ್ರಚುರವಾದರೆ, ಬೆಡಗಿನಲ್ಲಿ ನನಗಿಂತಲೂ ಮಿಗಿಲೆನಿಸಿಕೊಳ್ಳುವ ಅನೇಕ ಸ್ತ್ರೀಗಳಿರುವಾಗ, ನನ್ನ ಮೇಲೆಯೇ ಅವರ ದೃಷ್ಟಿ ಬಿದ್ದ ಕಾರಣವೇನೋ ತಿಳಿಯದು."

ವೆಂಕಟಪತಿ—"ಆ ಕಾರಣವನ್ನು ಕಾಲಾನುಭಾಗದಲ್ಲಿ ನೀನೇ ಅವ ರಿಂದ ತಿಳಿಯುವದು ನ್ಯಾಯವಾದ ಮಾರ್ಗವೆಂದು ನನಗೆ ತೋರುತ್ತದೆ. ಶ್ರೀಪಾಂಗಳವರ ಕಡೆಯಿಂದ ನಾನು ಈಗ ಬಂದಿರುವ ಉದ್ದೇಶವೇನೆಂಬುದು ನಿನಗೆ ಚನ್ನಾಗಿ ತಿಳಿಯಬಂತಲ್ಲ. ಇನ್ನು ತಡಮಾಡದೆ ಒಂದು ಖಂಡಿತವಾದ ಉತ್ತರವನ್ನು ಕೊಟ್ಟುಬಿಟ್ಟರೆ, ಅವರಿಗೆ ಅದನ್ನು ಅರಿಕೆ ಮಾಡಿ ಬಿಡುವೆನು."

ವಾಗ್ದೇವಿ—"ನಾನೇನು ಉತ್ತರಕೊಡಲಿ!"

ವೆಂಕಟಪತಿ—"ಹಾಗಾದರೆ ನಿನ್ನ ಪ್ರೀತಿಗೆ ಅವರು ಪಾತ್ರರಾಗುವ ನಿರೀಕ್ಷೆಯು ವ್ಯರ್ಥವೆಂದು ತಿಳಿಸಿಬಿಡುತ್ತೇನೆ — ರಾತ್ರಿಯಾಯಿತು; ಹೋಗಲೇ?"

ಭಾಗೀರಥಿ—"ಆಚಾರ್ಯರೇ! ಅವಸರ ಮಾಡಲಾಗದು. ಅವಳು ಕೈಕಾಲ[illegible]ವಾದರೇನಾಯಿತು? ಅವಳು ಮಗುವಲ್ಲವೆ? ಇನ್ನೂ ಬುದ್ಧಿ

ತಿಳಿದವಳಲ್ಲ. ಯಾವ ಮಾತಿಗೆ ಯಾವ ಉತ್ತರ ಕೊಡಬೇಕೆಂಬ ಜ್ಞಾನ ಅವಳಿಗದೆ ಏನು? ತಾವು ಸಿಟ್ಟು ಮಾಡಿ ಹೊರಟುಬಿಟ್ಟರೆ ಶ್ರೀಪಾದಂಗಳ ಸಂಕಲ್ಪಕ್ಕೆ ಹಾನಿಬಾರದೇ?"

ವೆಂಕಟಪತಿ—"ನಾನು ಸಿಟ್ಟು ತಾಳಲಿಲ್ಲ. ವಾಗ್ದೇವಿಯ ಉತ್ತರವು ಗುರುಗಳ ಕಾರ್ಯಕ್ಕೆ ಹಿತವಾದ್ದಲ್ಲವೆಂದು ಮುಂದಟ್ಟಾದ ಕಾರಣ ಹೋಗಲಿಕ್ಕೆ ಹೊರಟೆ; ಮತ್ತೇನಲ್ಲ"

ಭಾಗೀರಥಿ—"ಆಚಾರ್ಯರೇ! ನಿಧಾನವಾಗಿ ಕೇಳಬೇಕು. ನಾವು ಕೇವಲ ಬಡವರು. ಉಳುಕೊಳ್ಳಲಿಕ್ಕೆ ಸ್ವಂತ ಮನೆಯಾಗಲೀ ಉಣ್ಣು ತಿನ್ನಲಿಕ್ಕೆ ಕಟ್ಟಿಟ್ಟ ಬದುಕಾಗಲೀ ಉಳ್ಳವರಲ್ಲ. ವಾಗ್ದೇವಿಯ ಗಂಡನು ಅವಳ ಪೂರ್ವಾರ್ಜಿತ ಕರ್ಮದಿಂದ ಪಶುವಿನಂತೆ ಹೆಡ್ಡ. ಅದರೂ ಅವಳು ಪತಿ ಭಕ್ತಿಬಿಟ್ಟು ಪರಪುರುಷನ ಮೋರೆಯನ್ನು ಈ ವರೆಗೆ ನೋಡಿದವಳಲ್ಲ. ಶ್ರೀಪಾದಂಗಳವರ ಅನುಗ್ರಹ ಅವಳಮೇಲೆ ಆದ್ದು ನಮ್ಮ ಪೂರ್ವಪುಣ್ಯವೇ ಸರಿ. ಪರಂತು ಲೋಕಾಪವಾದಕ್ಕೆ ಯಾರೂ ಬೀಳಬಾರದು. ಎಷ್ಟು ಸಣ್ಣ ಕಾರ್ಯವಾದರೂ, ಅದರ ಪೂರ್ವಾಪರವನ್ನು ಸರಿಯಾಗಿ ಗ್ರಹಿಸದೆ, ಪತಂಗವು ಬೆಂಕಿಯಲ್ಲಿ ಬೀಳುವಂತೆ ಅಡ್ಡಾದಿಡ್ಡಿಯಾಗಿ ನಡೆದರೆ ಇತ್ತಟ್ಟಿಗೂ ನಾಳೆ ಬಾಧಕ ಬಾರದೇ? ಗುರುಗಳಿಗೆ ವಾಗ್ದೇವಿಯ ಮೇಲೆ ಮನಸ್ಸಾಯಿತೆಂದು ತಮ್ಮ ಅಪ್ಪಣೆಯಾಯಿತು. ಮುಂದಿನ ಕೆಲಸ ಹ್ಯಾಗೆ ನಡಿಯಬೇಕು, ಏನೆಂಬ ವಿವರವೆಲ್ಲಾ ತಮ್ಮಿಂದ ತಿಳಿಯುವದರ ಮೊದಲು ತಮಗೆ ನಾವು ಹ್ಯಾಗೆ ಖಂಡಿತ ಉತ್ತರ ಕೊಡೋಣ? ಒಬ್ಬ ವೇಶ್ಯಾ ಸ್ತ್ರೀಯ ಕೂಡೆ ತಾವು ಇಂಥಾ ಪ್ರಶ್ನೆ ಕೇಳಿದರೆ ಅವಳು ಏನೂ ಅಂಜಿಕೆ ಇಲ್ಲದೆ ತತ್‌ಕ್ಷಣ ತನ್ನ ಮನಸ್ಸಿನ ಭಾವವನ್ನು ಅರಿಕೆಮಾಡಿ ಬಿಡುವಳು. ಯಾಕೆಂದರೆ ಅದು ಅವಳ ವೃತ್ತಿಗೆ ಒಪ್ಪಿದ ಕೆಲಸ. ನಮ್ಮ ಸಂಗತಿಯು ಹಾಗಲ್ಲವಷ್ಟೆ? ಉಭಯ ಕಡೆಯಲ್ಲಿಯೂ ಮರ್ಯಾದೆಗೆ ಹಾನಿ ಬರಬಾರದಲ್ಲಾ. ನಾವು ತಮ್ಮ ಮಠದ ಶಿಷ್ಯರು, ಸ್ವಜಾತಿಯವರು. ಹೀಗಿರುವಾಗ ತಮ್ಮ ಯಜಮಾನರ ಗೌರವವೂ ಕೀರ್ತಿಯೂ ಎಷ್ಟರ ಮಟ್ಟಿಗೆ ತಮ್ಮ ಕಾಪಾಡುವಿಕೆಯಲ್ಲಿ ಇರಬೇಕಾದ್ದೆಂದು ನಾನು ಹೇಳಬೇಕೇ? ಹಾಗೆಯೇ ತಮ್ಮ ಬಡ ಆಶ್ರಿತರಾದ ನಮ್ಮ ಮರ್ಯಾದೆಯು ಹಾಳಾಗದಂತೆ ನೋಡಿಕೊಳ್ಳುವ ಜಾಗ್ರತೆ ಯಾರು ತಕ್ಕೊಳ್ಳಬೇಕಾದ್ದೆಂದು ತಾವು

ತಿಳಕೊಂಡ್ಡಿರೋ ಕಾಣೆ!"

ವೆಂಕಟಪತಿ—"ಸರಿ! ಸರಿ! ನೀನು ಹೇಳಿದ ಮಾತು ಅಲ್ಲವೆನ್ನು ವರ್‍ಯಾರು? ಇತ್ತಟ್ಟಿಗೂ ಮಾತಿನವಾಸಿ ಬಾರದಂತೆಯೂ, ಊರಲ್ಲಿ ಜನರು ಬಿಟ್ಟು ಆಡದಂತೆಯೂ ಎತ್ತುಗಡೆ ಮಾಡುವದು ನನ್ನ ಕೆಲಸವೇ. ಅದನ್ನು ಎಂದಾದರೂ ಮರೆಯಲಾರೆ."

ಭಾಗೀರಥಿ—"ನಾವು ನಡಿಯಬೇಕಾದ ಕ್ರಮ ಅಪ್ಪಣೆಯಾಗಲಿ"

ವೆಂಕಟಪತಿ— "ತಾಯಿ ಮಗಳಾದ ನಿಮ್ಮಿಬ್ಬರ ಮನೋಗತ ಮುಂದಾಗಿ ನಾನು ತಿಳಿಯದೆ ಮುಂದಿನ ಪ್ರಸ್ತಾಪವೊಂದೂ ಮಾಡವಲ್ಲೆ."

ಭಾಗೀರಥಿ—"ವಾಗ್ದೇವಿ! ನಿನ್ನ ಮನಸ್ಸಿನ ತಾತ್ಪರ್ಯ ಈಗಲೇ ಹೇಳಿಬಿಡು. ನಾಳೆ 'ಅಮ್ಮಾ ನೀನು ಮಾಡಿ ಹಾಕಿದ ವ್ಯಾಪಾರವಿದು' ಎಂದು ನನ್ನನ್ನು ದೂರಲಾಗದು."

ವಾಗ್ದೇವಿ—"ನಾನು ಏನೂ ಅರಿತವಳಲ್ಲ. ನಿನ್ನ ಅಪ್ಪಣೆಯಂತೆ ನಡೆಯುವದೇ ನನ್ನ ಮತ. ಅದರೂ ಅಪ್ಪಯ್ಯನ ಕೂಡೆ ಮುಂದಾಗಿ ಮಾತನಾಡದೆ, ನಮ್ಮ ಮನಸ್ಸಿಗೆ ಬಂದಂತೆ ಆಚಾರ್ಯರಿಗೆ ಉತ್ತರ ಕೊಟ್ಟುಬಿಡುವದು ನ್ಯಾಯವೇನು'?

ಭಾಗೀರಥಿ—"ಆ ಯೋಚನೆ ನಿನಗೆ ಬೇಡ. ಅದೆಲ್ಲಾ ನಾನು ಸುದಾರಿಸಿಬಿಡುವೆನು. ನಾವು ಹೇಳುವ ಮಾತು ಯಾವದಾದರೂ ಅವರು ಈ ವರೆಗೆ ಒಪ್ಪದ್ದುಂಟೇನು?"

ವಾಗ್ದೇವಿ—"ಹಾಗಾದರೆ ಆಚಾರ್ಯರ ಕೂಡೆ ಸಕಲ ವಿಷಯ ಗಳಲ್ಲಿಯೂ ನೀನೇ ಮಧ್ಯಸ್ಥಿಕೆ ಮಾಡಿದರೆ ಸಾಕೆಂದು ನನ್ನ ಮನಸ್ಸಿಗೆ ತೋರುತ್ತದೆ. ಸುಮ್ಮಗೆ ಅವರ ಸಮಯವನ್ನು ಹಾಳು ಮಾಡಬಾರದು."

ಭಾಗೀರಥಿ—"ವಾಗ್ದೇವಿಗನಕಾ ಶ್ರೀಪಾದಂಗಳವರ ಪಾದಾರವಿಂದ ಸೇವೆಯನ್ನು ಮಾಡಿಕೊಂಡಿರಲಿಕ್ಕೆ ತುಂಬಾ ಮನಸ್ಸಿದೆ. ನನ್ನ ಮನಸ್ಸಿನ ಭಾವ ಪ್ರತ್ಯೇಕವಾಗಿ ಹೇಳಬೇಕೆಂದಿಲ್ಲ. ನಮ್ಮ ಯಜಮಾನರ ಆಕ್ಷೇಪ ನಿವಾರಣೆಮಾಡುವದು ಪ್ರಯಾಸವಲ್ಲ. ಅದೆಲ್ಲಾ ನಾನು ನೋಡಿಕೋಥೇನೆ. ವಾಗ್ದೇವಿಯ ಪತಿಯು ಈ ವಿಚಾರದಲ್ಲಿ ವಿಘ್ನಕಾರಕನಾಗಲಾರನು. ಈ ವರೆಗೆ ನಡೆದಂತೆಯೇ ಏಕ ಗೃಹಕೃತ್ಯದಲ್ಲಿಯೇ ಇರಬೇಕಲ್ಲದೆ ಒಬ್ಬರು ಇನ್ನೊಬ್ಬರನ್ನಗಲಿ ಇರಲಿಕ್ಕಾಗುವುದಿಲ್ಲ. ಇದು ವರೆಗೆ ನಾವು ದರಿದ್ರಾವಸ್ಥೆ

ಯೆನ್ನನುಭವಿಸಿ ಸಾಕಾಯಿತು. ದೊಡ್ಡವರನ್ನು ಆಶ್ರಯಿಸಿದ ಮೇಲೆ ದಾರಿದ್ರ್ಯವು ಪುನರಪಿ ನಮ್ಮನ್ನು ಸೋಕಬಾರದು. ಎಷ್ಟು ಹೀನವೃತ್ತಿ ಮಾಡುವದಾದರೂ ಸುಖದೊರಕಬೇಕು. ವಿಷಯಾಭಿಲಾಷೆ ಮಾಡುವ ಗಂಡಸರ ಮನಸ್ಸು ಕೆಸುವಿನ ಎಲೆಯ ಮೇಲೆ ನಿಂತ ನೀರಿನಂತಿರುವುದು. ಶ್ರೀಪಾದಂಗಳವರ ಮಮತೆಯು ಪ್ರಕೃತ ವಾಗ್ದೇವಿಯ ಮೇಲೆ ಎಷ್ಟು ಸಂಪೂರ್ಣತೆಯುಳ್ಳದ್ದಾಗಿದ್ದರೂ ಮನಸ್ಸಿನ ಬಯಕೆಯು ತೀರಿದ ಮೇಲೆ ಅನ್ಯಸ್ತ್ರೀಯರ ಮಾಯಾಜಾಲದಲ್ಲಿ ಅವರು ಸಿಲುಕಲಾರರೆಂಬ ನಂಬಿಕೆ ಇಡಕೂಡದು. ಒಮ್ಮೆ ಹಾಗಾದರೆ ಯತಿಗಳಿಗೆ ವಾಗ್ದೇವಿಯ ಹಂಬಲೇ ಇರಲಾರದು. ಆಗ ನಾವೆಲ್ಲರೂ ದಾರಿಯಲ್ಲಿ ಬೀಳಬೇಕಾಗುವುದು. ಆದಕಾರಣ ತಮ್ಮ ಅನುಜ್ಞೆ ಹ್ಯಾಗಾಗುತ್ತದೆಂದು ನೋಡುತ್ತೇನೆ."

ವೆಂಕಟಪತಿ– "ಅಮ್ಮಾ, ನಿನ್ನ ಅಭಿಪ್ರಾಯ ಒಂದಿಷ್ಟಾದರೂ ಲೋಪವಿಲ್ಲದೆ ಹೇಳಿಬಿಡು. ನಾನು ನನ್ನ ಯಜಮಾನರ ಕಾರ್ಯಸಾಧನೆಗೋಸ್ಕರ ನಿಮ್ಮ ಬಳಿಗೆ ಬಂದಿರುವೆನು. ನಿಮ್ಮ ಒಳ್ಳಿತನ್ನು ಗಳಿಸಿಕೊಳ್ಳಲಿಕ್ಕೆ ಮುಂಜಾಗ್ರತೆ ತಕ್ಕೊಳ್ಳಬೇಕಾದ್ದು ನೀಸೇಸರಿ. ನಿಮ್ಮ ಅಪೇಕ್ಷೆಯನ್ನು ಬಾಯಿಯಿಂದಲೇ ತಿಳಿಯುವದಕ್ಕೆ ನಾನು ಆಶೆಪಡುತ್ತೇನೆ. ವಿಹಿತಮಾರ್ಗವು ಅದೇಸರಿ."

ಭಾಗೀರಥಿ– "ನಾನಿನ್ನೇನು ಹೇಳಲಿ, ಸರ್ವವನ್ನು ಬಲ್ಲವರಾದ ತಮಗೆ ನಾನು ಹೆಚ್ಚಿಗೆ ಅರಿಕೆ ಮಾಡಲಿಕ್ಕೆ ಶಕ್ತಳಲ್ಲ."

ವೆಂಕಟಪತಿ– "ಪರಶು ಕಬ್ಬಿಣಕ್ಕೆ ಸ್ಪರ್ಶವಾದ ಮೇಲೆ ಅದು ಚಿನ್ನವಾಗುವದಲ್ಲದೆ ಪೂರ್ವವತ್ ಕಬ್ಬಿಣ ಎಂದಾದರೂ ಆಗುವದೇ. ಶ್ರೀಪಾದಂಗಳವರ ಸೇವೆಯಲ್ಲಿ ಅಮರಿದ ಮೇಲೆ ನಿಮಗೆ ದಾರಿದ್ರ್ಯವೆಲ್ಲಿಂದ ಕಾಡುವದು? ನಿಮಗೆ ವಾಸ್ತವ್ಯಕ್ಕೆ ಯೋಗ್ಯವಾದ ಒಂದು ದೊಡ್ಡಮನೆಯನ್ನು ಸೋಪಸ್ಕರಗಳ ಸಮೇತ ಲವಕಾಲದಲ್ಲಿ ಸಿದ್ಧಪಡಿಸುವೆನು. ಊಟಕ್ಕೆ ಬೇಕಾಗುವ ಅಕ್ಕಿ ಮೊದಲಾದ ವಿಶಿಷ್ಟ ಪದಾರ್ಥಗಳು ಅನುದಿನ ನಿಮ್ಮ ಮನೆಬಾಗಲಿಗೆ ಬಂದು ಬೀಳುವಂತೆ ಆವಾವ ಭೂಮಿ ವಕ್ಕಲುಗಳಿಗೆ ನೇಮಿಸಿಡುತ್ತೇವೆ. ಇನ್ನೇನು ಅಪೇಕ್ಷೆಯದೆ?"

ಭಾಗೀರಥಿ– "ಶ್ರೀಪಾದಂಗಳವರಿಗೆ ದೊಡ್ಡ ಕೋಟೆಯಂತಿರುವ ಮಠವಿದೆ. ಅದರಲ್ಲಿ ನಮ್ಮಂಥಾ ಸಾವಿರ ಕುಟುಂಬಗಳು ಅವರಿಗೇನೊಂದು

ಅನಾನುಕೂಲತೆಯಾಗದಂತೆ ವಾಸ್ತವಿಸಿಕೊಂಡಿರಲಿಕ್ಕೆ ಸಂದರ್ಭವಿದೆ. ನಿತ್ಯವು ವಾಗ್ದೇವಿಯು ಶ್ರೀಪಾದಂಗಳವರನ್ನು ಅಗಲದೆ ಅವರ ದೃಷ್ಟಿಯು ಅವರ ಹೆಸರಿನಂತೆ ಅನ್ಯ ಸ್ತ್ರೀಯರ ಮೇಲೆ ಬಿದ್ದರೂ ಅವರ ಮನಸ್ಸನ್ನು ತನ್ನ ಕಡೆಗೇನೇ ಎಳಕೊಳ್ಳಲಿಕ್ಕೆ ಸುಲಭವಾಗುವ ಹಾಗೆ ಅವರ ಸಮೀಪ ದಲ್ಲಿಯೇ ಇರಬೇಕು. ಆದ ಪ್ರಯುಕ್ತ ನಮಗೆಲ್ಲರಿಗೂ ಮಠದಲ್ಲಿಯೇ ಆಶ್ರಯ ಸಿಗಬೇಕು. ನಮ್ಮವರಿಗೂ ವಾಗ್ದೇವಿಯ ಗಂಡಗೂ ಮಠದಲ್ಲಿ ಅವರ ಯೋಗ್ಯತೆಗೆ ತಕ್ಕವಾದ ಉದ್ಯೋಗಗಳನ್ನು ಕೊಡಬೇಕು. ಆವಾಗ ನೋಡುವ ಜನರಿಗೆ ಅಡ್ಡಾದಿಡ್ಡಿಯಾಗಿ ಆಡಲಿಕ್ಕೆ ಆಸ್ಪದವಾಗಲಾರದು. ಇವಕ್ಕೂ ಮಿಕ್ಕಿ ವಾಗ್ದೇವಿಯ ಅಪೇಕ್ಷೆ ಯಾವದಾದರೂ ಇರುವದಾದರೆ ಅವಳನ್ನೇ ವಿಚಾರಿಸಿಕೊಳ್ಳಿ."

ವೆಂಕಟಪತಿ—"ನಿಮ್ಮ ಅಪೇಕ್ಷೆ ಯಾವದೂ ಅಸಾಧಾರಣವೆಂದು ಹೇಳಲಾರೆ. ವಾಗ್ದೇವಿ! ನೀನು ಪ್ರತ್ಯೇಕವಾಗಿ ಬಯಸುವದೇನಾದರೂ ಇದೆಯೇ?"

ವಾಗ್ದೇವಿ—"ನನ್ನಲ್ಲಿ ಗಂಡು ಸಂತತಿ ದೇವರು ಅನುಗ್ರಹಿಸಿದರೆ ಚೊಚ್ಚಲು ಮಗನು ಮುಂದಿನ ಯತಿಪಟ್ಟಕ್ಕೆ ಬರುವಂತೆ ಅವನಿಗೆ ಶ್ರೀಪಾದಂಗಳವರು ಆಶ್ರಮಕೊಟ್ಟು ಶಿಷ್ಯನಾಗಿಮಾಡಬೇಕು. ಈ ವಾಗ್ದಾನವನ್ನು ಪಟ್ಟದ ದೇವರ ಮುಂದೆ ಮಾಡಿದನಕ ನಾನು ಮುಂದಿನ ಪ್ರಸಂಗಕ್ಕೆ ಒಡಂಬಡುವವಳಲ್ಲ. ಬೇರೆ ಪ್ರಸ್ತಾಪವೆಲ್ಲಾ ಅಮ್ಮ ಹೇಳಿದಂತೆಯೇ ಸರಿ. ಅವಳ ಮಾತಿಗೆ ಅಡ್ಡಬರಲಾರೆ."

ವೆಂಕಟಪತಿ—"ವಾಗ್ದೇವಿ ಹೇಳಿದ ಮಾತು ಈಗಲೇ ಶ್ರೀಪಾದಂಗಳವರ ಕಿವಿಗೆ ಬಿದ್ದರೆ ಅವರು ಏನು ಹೇಳುವರೋ! ಕ್ರಮೇಣ ಅದರ ನಿಷ್ಕರ್ಷೆ ಮಾಡಬಹುದೆಂದು ನನ್ನ ಅಭಿಪ್ರಾಯ. ಈಗ ಅವಸರವೇನು?"

ಭಾಗೀರಥಿ:—"ಮಗಳೇ, ಆಚಾರ್ಯರ ಮಾತಿಗೆ ಮರ್ಯಾದೆ ಕೊಡು; ಅವರು ನಮ್ಮ ಶುಭವನ್ನೇ ಚಿಂತಿಸುವವರಲ್ಲವೇ?"

ವಾಗ್ದೇವಿ—"ಒಲ್ಲೆ, ನಾನು ಕೇಳುವ ವರವು ಮುಂದಾಗಿಯೇ ಅನುಗ್ರಹಿಸೋಣಾಗಲಿ."

ವೆಂಕಟಪತಿ—"ಹೆಚ್ಚು ಎಳದರೆ ತುಂಡು ಆಗಲಿಕ್ಕಿಲ್ಲವೇ?"

ವಾಗ್ದೇವಿ—"ಆಗಲಿ. ನನ್ನ ಪತಿ ಸೇವೆಯಲ್ಲಿಯೇ ನಾನು ಇದ್ದು

ಕೊಳ್ಳುವೆನು. ಯತಿಯ ಆಶ್ರಯವೇ ಬೇಡ”

**ವೆಂಕಟಪತಿ**—“ಭಾಗೀರಥಿ ಅಮ್ಮಾ, ನೀವು ಇನ್ನೊಮ್ಮೆ ನಿಮ್ಮ ಮಗಳಿಗೆ ಬುದ್ಧಿ ಹೇಳಿಬಿಡಿ. ದೇವರ ಮುಂದೆ ಯತಿಗಳು ವಾಗ್ದಾನ ಕೊಡ ಬೇಕಾಗಿ ವಾಗ್ದೇವಿ ಮಾಡುವ ಹಟ ಹೆಚ್ಚಿನದೆಂದು ನಿಮ್ಮ ಮನಸ್ಸಿಗೆ ತೋರದೆ ಹೋಗದು. ಕಾಲಾನುಭಾಗದಲ್ಲಿ ಅವಳ ಮನೋರಥವು ಪೂರ್ಣ ವಾಗದೆ ಉಳಿಯದು. ಈಗಲೇ ಆ ಪ್ರಸ್ತಾಪ ಮಾಡುವದು ಪರಿಷ್ಕಾರವಲ್ಲ. ಅವಳನ್ನು ನೀವು ಒಳಗೆ ಕರಕೊಂಡು ಹೋಗಿ ಅವಳ ಬುದ್ಧಿಯನ್ನು ತುಸು ತಿದ್ದಿಬಿಟ್ಟರೆ ಆಗುತ್ತಿತ್ತು.”

## ಐದು

ಭಾಗೀರಥಿಯು ಮಗಳ ಮೇಲೆ ಸಿಟ್ಟು ತಾಳಿದವಳಂತೆ ತೋರಿಸಿ ಕೊಂಡು, ಮಗಳನ್ನು ಚಿಕ್ಕ ಮನೆಯ ಒಳಗೆ ಕರಕೊಂಡು, ಅಲ್ಲಿ ಶಾನೆ ಹೊತ್ತು ವಾಗ್ದೇವಿಯ ಕೂಡೆ ಸಣ್ಣ ಸ್ವರದಿಂದ ಜಿಜ್ಞಾಸ ಮಾಡುವದರಲ್ಲಿ ಬಿದ್ದಳು. ಅವಳು ಠಕ್ಕು ಮಾಡುತ್ತಾಳೆಂಬ ಗುಟ್ಟು ವೆಂಕಟಪತಿ ಆಚಾರ್ಯಗೆ ತಿಳಿಯದೆ ತನ್ನ ಬುದ್ಧಿವಂತಿಕೆಗೆ ಯತಿಗಳು ಮೆಚ್ಚದಿರರೆಂದು ಅರ್ಧತಾಸಿನ ವರೆಗೂ ಹೊರಗೆ ಕೂತುಕೊಂಡನು. ಕೊನೆಗೆ ಪರ್ವತವು ಗರ್ಭತಾಳಿ ದಂತಾಯಿತು. “ನೀನು ಎಷ್ಟು ಬಡಕೊಂಡರೂ ಇದೊಂದು ವಿಷಯದಲ್ಲಿ ನನ್ನ ಛಲ ಸರ್ವಥಾ ಬಿಡಲಾರೆ” ಎಂದು ಗಟ್ಟಿಯಾಗಿ ವಾಗ್ದೇವಿಯು ಹೇಳು ವುದು ಆಚಾರ್ಯನ ಕಿವಿಗೆ ಬಿತ್ತು. “ಹಾಗೆಯೇ? ಇನ್ನು ನೀನು ನನ್ನ ಮಗಳೆಂದು ಸರ್ವಥಾ ಭಾವಿಸಲಾರೆ. ನೀನೂ ನಿನ್ನ ಗಂಡನೂ ಕ್ಷಣ ತಾಮಸ ಮಾಡದೆ ಬೇರೆ ಹೋಗಬೇಕು. ನಿನಗೆ ನಾನು ಅನ್ನ ಹಾಕಲಾರೆ! ದಿಂಡೆ! ನಡಿ!” ಎಂದು ದೀರ್ಘಸ್ವರದಿಂದ ಗದರಿಸುವುದೂ ಕೇಳಿಸಿತು.

ಆಚಾರ್ಯನು ಕಣ್ಣೆತ್ತಿ ನೋಡುವಾಗ ಭಾಗೀರಥಿಯು ಮಗಳನ್ನು ದೂಡಿ ಕೊಂಡು ಕರಾಳವದನಳಾಗಿ ಹೊಡೆಯುವದಕ್ಕೆ ಚೀರಿಕೊಂಡು ಮಗಳ ಸಹಿತ ಕೋಣೆಯಿಂದ ಹೊರಗೆ ಬರುವುದೂ ಕಣ್ಣಿಗೆ ಬಿತ್ತು. ಆಹಾ! ಇನ್ನೆಂಥಾ ನಿಷ್ಕಲಂಕ ಮನಸು ಭಾಗೀರಥಿಗದೆ: ಮಗಳೆಂಬ ವಾತ್ಸಲ್ಯವಿಡದೆ ಸಿಟ್ಟಿನ ವಶವಾಗಿ ಹಟಮಾಡುವ ಮಗಳನ್ನು ತತ್ಕಾಲ ಶಿಕ್ಷಿಸುವ ಈ ಪುಣ್ಯ ತಾಯಿಯನ್ನು ಎಷ್ಟು ಹೊಗಳಬಹುದು. ಈಗ ತಾನು ಸುಮ್ಮಗಿದ್ದು ತಾಯಿ

ಮಗಳಿಗೆ ವಿವೇಕ ಮಾತದೆ ಇದ್ದರೆ ಶ್ರೀಪಾದಂಗಳವರ ಸಂಕಲ್ಪಸಿದ್ಧಿಗೆ ವಿಘ್ನ ಬರುವುದೆಂಬ ಭಯದಿಂದ ವೆಂಕಟಪತಿ ಆಚಾರ್ಯನು ಮಗಳಿಗೆ ಹೊಡೆಯುವ ದಕ್ಕೆ ಸಿದ್ಧಳಾಗಿರುವ ಭಾಗೀರಥಿಯನ್ನು ಕರೆದು "ನಾಕುಮಾತು, ಕ್ಷೈ ಮುಂದರಿಸಬೇಡ; ವಾಗ್ದೇವಿಯ ಹಟವನ್ನು ಪೂರೈಸಲಿಕ್ಕೆ ಅನುಕೂಲ ವಾಗುವ ಹಾಗೆ ಪ್ರಯತ್ನಮಾಡಲೇ ಬೇಕು. ಅವಳ ಮನಸ್ಸಿನಲ್ಲಿ ಅಹಿತ ಹುಟ್ಟುವಹಾಗಿನ ಕರ್ತವ್ಯವನ್ನು ಮಾಡುವದಕ್ಕೆ ಅವಳನ್ನು ಬಲಾತ್ಕರಿಸು ವದು ನ್ಯಾಯವಲ್ಲ. ಬೇರೆ ಯಾವದೊಂದು ತರ್ಕವಿಲ್ಲವಷ್ಟೆ. ಇಲ್ಲಿ ನಡೆದ ಪ್ರಸ್ತಾಪವನ್ನು ವಿಸ್ತಾರವಾಗಿ ಶ್ರೀಪಾದಂಗಳವರಿಗೆ ವಿಜ್ಞಾಪಿಸಿ ಅವರ ಆಜ್ಞೆಯನ್ನು ಕ್ಷಿಪ್ರ ತಿಳಿಸುವೆ" ಎಂದು ಭಾಗೀರಥಿಗೆ ಹೇಳಿ ಮಠಕ್ಕೆ ಮರಳಿದನು.

ದನವನ್ನು ಹುಡುಕಿ ತರುವುದಕ್ಕೆ ಹೋದ ತಮ್ಮಣ್ಣ ಭಟ್ಟನು ದನ ವನ್ನು ಅಟ್ಟಿಕೊಂಡು ಬಂದು, ಹಟ್ಟಿಯಲ್ಲಿ ಕೂಡಿಸುವಾಗ ಮನೆಯೊಳಗೆ ತನ್ನ ಪತ್ನಿಗೂ ವೆಂಕಟಪತಿ ಆಚಾರ್ಯಗೂ ನಡೆಯುತ್ತಿರುವ ಸಂಭಾಷಣೆ ಯನ್ನು ಕೇಳುತ್ತ, ಹೊರಗೆಯೇ ನಿಂತುಕೊಂಡನು. ವೆಂಕಟಪತಿ ಆಚಾ ರ್ಯನು ಹೊರಟು ಹೋದಾಕ್ಷಣ ತಮ್ಮಣ್ಣ ಭಟ್ಟನು ಬಾಗಿಲು ದೂಡಿ ಒಳಗೆ ಬಂದು, "ಇಷ್ಟು ಹೊತ್ತಾಯಿತು. ದನ ಹ್ಯಾಗಾದರೂ ಸಿಕ್ಕಿದಂತಾಯಿತು" ಎಂದು ದಣು ಆರಿಸುವುದಕ್ಕೆ ಗೋಡೆಗೆ ಎರಗಿ ಕೂತುಕೊಂಡನು. ವಾಗ್ದೇವಿಯ ಗಂಡ ಅಬಾಚಾರ್ಯನು ಮನೆಯ ಹಿಂಬದಿ ಜಗಲಿಯಲ್ಲಿ ಬಿದ್ದು ಕೊಂಡು ನಿದ್ರೆಗೈಯುತ್ತಿರುವಾಗ ಭಾಗೀರಥಿಯೂ ವೆಂಕಟಪತಿ ಆಚಾರ್ಯರೂ ಮಾಡುವ ಸಂವಾದವನ್ನು ಕೊಂಚ ಕೊಂಚ ಕೇಳಿ ಇನ್ನು ಮುಂದೆ ಮಠದಲ್ಲಿ ನಮಗೆ ಭೋಜನವಾದರೂ ಪರಿಷ್ಕಾರವಾದೀತಷ್ಟೇ. ವಾಗ್ದೇವಿಯು ಯಾವಲ್ಲಿದ್ದರೂ ತನಗೇನೆಂದು ಸಂತೋಷಚಿತ್ತನಾಗಿ ಸುಮ್ಮಗಿದ್ದನು.

ರಾತ್ರಿ ಫಲಾಹಾರಕ್ಕೆ ಕಡಬು ಕಾಯಿಹಾಲು ಮಾಡಿತ್ತು. ಅದನ್ನು ಮನೆಯವರೆಲ್ಲರೂ ಬೇಕಾದಷ್ಟು ತಕ್ಕೊಂಡು ನಿದ್ರೆಗೈಯುವುದಕ್ಕೆ ಹೋದಾಗ ಭಾಗೀರಥಿಯು ತನ್ನ ಪತಿಯ ಕೂಡೆ ವೆಂಕಟಪತಿ ಆಚಾರ್ಯನು ಬಂದ ಉದ್ದೇಶವನ್ನೂ ತನಗೂ ಆತಗೂ ನಡೆದ ಮಾತುಗಳನ್ನೂ ವಾಗ್ದೇವಿಯೂ ತಾನೂ ಮಾಡಿದ ಯುಕ್ತಿಯ ಅಂದವನ್ನೂ ತಿಳಿಸಿ ನೆಗಾಡಿದಳು. ನಡೆದ ಪ್ರಸ್ತಾಪವು ತನಗೆ ಸ್ವಲ್ಪವಾದರೂ ಅಹಿತವಲ್ಲವೆಂದು ಗಂಡನು ಪ್ರತ್ಯುತ್ತರ

ಕೊಟ್ಟನು. ಆದರೆ ಮಠದಲ್ಲಿ ತನಗೆ ಸಣ್ಣ ಕೆಲಸ ಯಾವದಾದರೂ ಕೊಟ್ಟರೆ ಒಡಂಬಡುವವನಲ್ಲ. ತನ್ನ ಗೌರವಕ್ಕೆ ಯೋಗ್ಯವಾದ ಅಧಿಕಾರವಿರುವ ಉದ್ಯೋಗ ಸಿಕ್ಕುವ ಹಾಗೆ ವೆಂಕಟಪತಿ ಆಚಾರ್ಯಗೆ ತಿಳಿಸಬೇಕಾಗಿ ಪತ್ನಿಯನ್ನು ಅಪೇಕ್ಷಿಸಿದನು. "ಅದರ ಬಿಸಾತೇನು? ಇನ್ನು ಮಠವೇ ನಮ್ಮದಾಗುವದಾಯಿತಲ್ಲ. ವೆಂಕಟಪತಿಯು ಹೆಸರಿಗೆ ಮಾತ್ರ ಪಾರುಪತ್ಯಗಾರನಾಗಿರಬೇಕಲ್ಲದೆ ಯಾವದೊಂದು ಆದಾಯ ವೆಚ್ಚವಾದರೂ ತಮ್ಮ ಕೈ ಮಿಕ್ಕಿ ಹೋಗುವದುಂಟೇ?" ಎಂದು ಭಾಗೀರಥಿಯು ಹೇಳಿದೊಡನೆ, ತಮ್ಮಣ್ಣ ಭಟ್ಟನು ಹೆಂಡತಿಯ ಚಾತುರ್ಯಕ್ಕೆ ಮೆಚ್ಚಿ ಶಹಬಾಸ್ ಎಂದನು.

ಇನ್ನು ಮುಂದೆ ಊಟಕ್ಕನಕ ಏನೂ ತತ್ವಾರವಿರದು. ಮಠದಲ್ಲಿ ಒಂದು ಉದ್ಯೋಗವು ಪ್ರಾಪ್ತವಾಗುವುದು. ತನ್ನಷ್ಟಕ್ಕೆ ತಾನು ಇದ್ದರೆ ನಾಲ್ಕು ಕಾಸು ಗಂಟಿಗೆ ಬಿದ್ದೀತು. ಮರ್ಯಾದೆಯಿಂದ ಕಾಲಕ್ಷೇಪಕ್ಕೆ ಒಂದು ಮಾರ್ಗವನ್ನು ದೇವರು ತೋರಿಸಿ ಕೊಟ್ಟಂತಾಯಿತು ಎಂಬ ಹರುಷದಿಂದ ಆಚಾರ್ಯನು ಅರ್ಧರಾತ್ರಿ ಪರಿಯಂತರ ನಿದ್ರೆ ಬಾರದೆ ಭವಿಷ್ಯತ್ ಕಾಲದಲ್ಲಿ ತನ್ನ ಪತ್ನಿಯು ಯತಿಗಳ ಪ್ರಸಾದದಿಂದ ಏನೇನು ಮಹತ್ಕಾರ್ಯಗಳನ್ನು ಮಾಡುವಳೋ ನೋಡಲಿಕ್ಕಿದ್ದೀತೆಂದು ಹಿಗ್ಗಿದನು. ವಾಗ್ದೇವಿಯು ತಿಪ್ಪಾಶಾಸ್ತ್ರಿಯ ಪ್ರವಾದನೆಯು ಈಡೇರುವ ಸಮಯವು ಒದಗಿತೆಂಬ ಉಲ್ಲಾಸದಿಂದ ಇಡೀರಾತ್ರೆ ಮನೋಹರವಾದ ಕನಸುಗಳನ್ನು ಕಂಡಳು. ಐಶ್ವರ್ಯದ ರಾಶಿಯೇ ತಮ್ಮ ಕೈವಶವಾಗುವದೆಂಬ ಕೋರಿಕೆಯಿಂದ ಭಾಗೀರಥಿಯೂ ತಮ್ಮಣ್ಣಭಟ್ಟನೂ ಇಡೀರಾತ್ರೆ ಅನೇಕ ವಿಷಯಗಳಲ್ಲಿ ಶುಷ್ಕವಾದ ಮಾಡುತ್ತಾ ನಿದ್ರೆಯ ಗೊಡವೆಯಿಲ್ಲದೆ ಸಮಯ ಕಳೆದರು.

ಮರುದಿವಸ ದ್ವಾದಶಿಯಷ್ಟೆ. ಸಕಾಲದಲ್ಲಿ ಪಾರಣೆಯಾಗುವುದಕ್ಕೆ ಭಾಗೀರಥಿಯು ಬಹುಬೇಗ ಎದ್ದು ವಾಗ್ದೇವಿಯನ್ನು ಎಬ್ಬಿಸಿ ಚಲೋದಾದ ಭೋಜನವಾಗುವಂತೆ ಶೀಘ್ರ ಅಡಿಗೆ ಮಾಡಿ ಬಿಟ್ಟು, ಗಂಡಸರನ್ನು ಅವಸರದಿಂದೆಚ್ಚರಿಸಿ ಸ್ನಾನಕ್ಕೆ ಹೋಗಹೇಳಿದಳು. ಆದರೆ ಆಬಾಚಾರ್ಯನು ನಿದ್ರಾಲಸ್ಯದಲ್ಲಿಯೇ ಇರುವದನ್ನು ನೋಡಿ ವಾಗ್ದೇವಿಯು ಪತಿಯನ್ನು ಅನುಪಮಪ್ರೇಮದಿಂದ ಮೈತಟ್ಟಿ ಎಬ್ಬಿಸಿ ಕುಂಡ್ರಿಸಿ ತರುವಾಯ ಸರಸೋಕ್ತಿಗಳಿಂದ ಅವನ ಆಲಸ್ಯವನ್ನು ಪರಿಹರಿಸಿ ಬೇಗ ಮುಖಪ್ರಕ್ಷಾಳನ ಸ್ನಾನಾದಿಗಳನ್ನು ತೀರಿಸಿ ಭೋಜನಕ್ಕೆ ಸಿದ್ಧವಾಗಿರಬೇಕೆಂದು ಹೇಳಿದಳು.

ಸಣ್ಣಕರುವು ಕಿವಿಗೆ ಗಾಳಿ ಹೊಗುತ್ತಲೇ ಕುಣಿದಾಡುವಂತೆ ಆಚಾಚಾರ್ಯನು ಆನಂದಮಯನಾಗಿ ಇದೇ ಸುದಿನ ಇನ್ನು ಉದಾಸೀನ ಮಾಡಲಾಗದೆಂದು ಪತ್ನಿಯ ಅನುಜ್ಞೆಯಂತೆ ನಡಕೊಂಡು ಭೋಜನಕ್ಕೆ ಅನುವಾದನು. ಸೂರ್ಯೋದಯವಾಗಬೇಕಾದರೆ ದ್ವಾದಶಿ ವ್ರತವೂ ಸಂಪೂರ್ಣವಾಯಿತು.

ವೆಂಕಟಪತಿ ಆಚಾರ್ಯನು ಮುಂಚಿನ ರಾತ್ರೆ ಮಾಡಿದ ಪ್ರಸ್ತಾಪವೆಲ್ಲ ಸ್ವಪ್ನದಲ್ಲಿ ಪಲ್ಲಕ್ಕಿ ಏರಿದಂತಾಗುವದೋ ಎಂಬ ಅನುಮಾನದಿಂದ ವಾಗ್ದೇವಿಯು ಆಗಾಗ್ಗೆ ಬಾಗಿಲ ಕಡೆಗೆ ದೃಷ್ಟಿಹಾಕುತ್ತಾ ಇನ್ನೂ ವೆಂಕಟಪತಿ ಆಚಾರ್ಯ ಕಣ್ಣಿಗೆ ಬೀಳುವದಿಲ್ಲವಲ್ಲಾ, ಅವನು ಯತಿಗಳ ಮನಸ್ಸನ್ನು ತಿರುಗಿಸಿ ಮೋಸ ಕೊಟ್ಟು ಬಿಟ್ಟರೆ ಮಾಡೋದೇನೆಂಬ ಯೋಚನೆಯಲ್ಲಿ ಬಿದ್ದಳು.

## ಆರು

"ವೆಂಕಟಪತಿಯು ಮನೆಯಲ್ಲಿ ಕುಂಭಕರ್ಣವ್ರತಾಚರಣೆಯಲ್ಲಿ ಅಮರಿಕೊಂಡಿರುವುದಿಲ್ಲವಷ್ಟೆ. ಇಲ್ಲವಾದರೆ ಇಷ್ಟು ಸಣ್ಣ ಕೆಲಸಮಾಡಿಕೊಂಡು ಬರುವುದಕ್ಕೆ ಎಷ್ಟು ಸಾವಕಾಶವಪ್ಪ! ತಾನುಮಾಡಿದ್ದು ಉತ್ತಮ, ಮಗ ಮಾಡಿದ್ದು ಮಧ್ಯಮ, ಆಳುಮಾಡಿದ್ದು ಹಾಳೆಂಬ ಗಾದೆಯು ನಿಜವಾದದ್ದು. ನಾವು ಸ್ವತಃ ಈ ಕಾರ್ಯವನ್ನು ನೆರವೇರಿಸುವುದಕ್ಕೆ ಹೊರಟರೆ ಇಷ್ಟು ಸಮಯ ಬೇಕಾಗುವುದೇ? ನಮ್ಮ ಪದವಿಯು ಸೆರೆಮನೆಯಲ್ಲಿ ವಾಸಮಾಡಿಕೊಂಡಿರುವವರ ಹಾಗಿದೆ. ಸರ್ವಕೆಲಸಗಳೂ ಇನ್ನೊಬ್ಬನಿಂದಾಗಬೇಕು; ನಮ್ಮ ಶತ್ರುಗಳಿಗೂ ಸನ್ಯಾಸಬೇಡ; ನಾವು ಜ್ಞಾನಶೂನ್ಯರೆಂಬಂತೆ ವೆಂಕಟಪತಿಯು ಮೊದಲೇ ನಮಗೆ ತತ್ವಜ್ಞಾನ ಹೇಳಲೆಸಗಿದನು; ನಾವು ಅವನನ್ನು ಗದರಿಸಿಬಿಟ್ಟಮೇಲೆ, ಪೌರುಷವನ್ನಾಡಿ ಅರೆಮನಸ್ಸಿನಿಂದ ಹೊರಟು ಹೋದನು. ಯಾವ ಠಾವಿಗೆ ಹೋದನೋ, ಏನೆಲ್ಲ ಮಾಡಿರುವನೋ ಶ್ರೀಹರಿಗೇ ಗೋಚರ"ವೆಂದು ಚಂಚಲನೇತ್ರರು ಬಹು ಅವಸರದಿಂದ ಆಗಾಗ್ಗೆ ಬಾಗಲ ಕಡೆಗೆ ನೋಡುತ್ತಾ ವೆಂಕಟಪತಿಯ ಪುನರಾಗಮನ ನಿರೀಕ್ಷಣೆಯಲ್ಲಿಯೇ ಇದ್ದುಕೊಂಡರು.

ವೇದವ್ಯಾಸ ಉಪಾಧ್ಯನು ತನ್ನ ಪಾಂಡಿತ್ಯಕ್ಕೆ ಶ್ರೀಪಾದಂಗಳವರು ಮೆಚ್ಚದಿರಲಾರರೆಂಬ ಭರವಸೆಯಿಂದ ಸುಸ್ವರದಿಂದ ಪುರಾಣವನ್ನು ಓದಿ

ಅದರ ಅರ್ಥವನ್ನು ವಿವರಿಸಿ ಕ್ಷಣೇ ಕ್ಷಣೇ ಕಣ್ಣೆತ್ತಿನೋಡುತ್ತಾ, ಗವಾಕ್ಷದ ಎದುರು ಕುಂತಿರುವನು. ಕೇಳಲಿಕ್ಕೆ ಬಂದವರನೇಕರು ಹೊರಪಾರ್ಶ್ವದಲ್ಲಿ ನಿಂತುಕೊಂಡಿರುವರು. ಚಂಚಲನೇತ್ರರ ಮನಸ್ಸು ಸಂಪೂರ್ಣವಾಗಿ ವಾಗ್ದೇವಿಯ ಮೇಲೆಯೇ ಸ್ಥಿರಗೊಂಡು ಅನ್ಯ ಪ್ರಸಕ್ತಿಗೆ ವ್ಯಾಪಿಸಲಾರದೆ, ಇರುವ ದೆಶೆಯಿಂದ ಪೂರ್ಣ್ಕಮರವೆಯಲ್ಲಿರುತ್ತಿರುವ ಆ ಯತಿಗಳು "ವೇದವ್ಯಾಸ ಉಪಾಧ್ಯನು ಇನ್ನೂ ಕಾಣುವುದಿಲ್ಲ. ಎಲ್ಲಿಗೆ ಹೋಗಿಬಿಟ್ಟನೋ" ಎಂದು ನುಡಿದರು. ಸಮ್ಮುಖದಲ್ಲಿ ಪುರಾಣಹೇಳುವ ಆ ಉಪಾಧ್ಯನು ಬೆರಗಾಗಿ ಈ ಯತಿಗೆ ಹುಚ್ಚು ಹಿಡಿಯಿತೋ ಎಂಬ ಅನುಮಾನದಿಂದ ಗೋಣು ಎತ್ತಿ ನೋಡಲು, ತನ್ನ ಹುಚ್ಚುತನವನ್ನು ತಾನೇ ಅರಿತು, ಚಂಚಲನೇತ್ರರು ವೆಂಕಟಪತಿ ಆಚಾರ್ಯನೆನ್ನುವದರ ಬದಲಾಗಿ ಉಪಾಧ್ಯನ ಹೆಸರು ಹೇಳಿಬಿಟ್ಟೆವೆಂದು ಹಾಸ್ಯಮುಖವನ್ನು ತಾಳಿ ತಕ್ಕಮಟ್ಟಿಗೆ ಸುಧಾರಿಸಿಕೊಂಡರು. ಪರಂತು ಈ ದೆಸೆಯಿಂದ ವೇದವ್ಯಾಸ ಉಪಾಧ್ಯಗೂ ಅವನಂತೆ ಬೇರೆ ಕೆಲವರಿಗೂ ಸಂಶಯ ನಿವಾರಣೆಯಾಗಲಿಲ್ಲ.

ಹಾಗೆಯೇ ಶಂಭೂರ ತಿಮ್ಮಣ್ಣಾಚಾರ್ಯನೆಂಬ ಪ್ರಮುಖ ಗ್ರಹಸ್ಥನು ಪ್ರಣಾಮಮಾಡಿ ತೀರ್ಥ ಪ್ರಸಾದಕ್ಕೆಂದು ಅಪ್ಪಣೆಯಾಗಲೆಂದು ಭಯ ಭಕ್ತಿಯಿಂದ ನಿಂತುಕೊಂಡಿರುವಾಗ "ಏನು ತಿಮ್ಮಣ್ಣಾಚಾರ್ಯರೇ, ನಿಮ್ಮ ಮಗನ ಉಪನಯನ ಯಾವಾಗ" ಎಂದು ಯತಿಗಳು ಪ್ರಶ್ನೆಮಾಡಿದರು. "ಪರಾಕೆ, ನನ್ನ ಮಗನ ಉಪನಯನವಾಗಿ ಈಗ ಒಂದು ತಿಂಗಳಾಯಿತು; ಉಪನಯನಕಾಲದಲ್ಲಿ ಸನ್ನಿಧಿಯ ಸವಾರಿಯು ಚಿತ್ತೈಸೋಣಾಗಿ ಸೇವಕನ ಕೃತಾರ್ಥತೆಯನ್ನು ಪಡಕೊಂಡ ವಿಷಯವು ಬೇಗನೇ ಮರವೆಗೆ ಬಂದು ಹೋಯಿತೇ? ಇನ್ನು ನನಗೆ ಇರುವದು ಹೆಣ್ಣು ಮಕ್ಕಳೇ ಸರಿ" ಎಂದು ತಿಮ್ಮಣ್ಣಾಚಾರ್ಯನು ಕೊಟ್ಟ ಪ್ರತ್ಯುತ್ತರವು ಚಂಚಲನೇತ್ರರನ್ನು ನಾಚಿಕೆಯಲ್ಲಿ ಮುಳುಗಿಸಿ ಬಿಟ್ಟಿತು.

ಶ್ರೀಪಾದಂಗಳವರ ಮನಸ್ಸಿಗೆ ಏನೋ ಭ್ರಮೆ ತಗಲಿಕೊಂಡಿರುವುದೆಂಬ ಅನುಮಾನಕ್ಕೆ ಆಸ್ಪದವಾಗುವಂತೆ ಅವರು ಆ ರಾತ್ರೆ ವೆಂಕಟಪತಿ ಆಚಾರ್ಯನು ಮರಳಿ ಬರುವ ಪರಿಯಂತರ, ಅದೇ ರೀತಿಯಲ್ಲಿ ಅಪಹಾಸ್ಯಕರವಾದ ಹಲವು ಚೇಷ್ಟೆಗಳನ್ನು ತೋರಿಸಿಕೊಂಡರು.

ವೇದವ್ಯಾಸ ಉಪಾಧ್ಯನು ಹೇಳುವ ಪುರಾಣವು ಚಂಚಲನೇತ್ರರ

ಕಿವಿಗೆ ಸಾವಿನ ಮನೆಯಲ್ಲಿ ಆಗುವ ರೋದನದಂತೆ ಕೇಳಿಸುತಿತ್ತು. ಇವನು ಬೇಗ ಪುಸ್ತಕವನ್ನು ಕಟ್ಟಿ ಮನೆಗೆಹೋಗದೆ ವೃಥಾ ಕಂಠಶೋಷಣೆ ಮಾಡು ತ್ತಾನೆಂಬ ಸಿಟ್ಟಿನಿಂದ ಸನ್ಯಾಸಿಯು ಥಕ್ಕನೆ ಎದ್ದು ನಿಂತುಕೊಂಡು, "ಇವನ ಸುಟ್ಟ ಪುರಾಣವಿನ್ನೂ ಮುಗಿಯುವದಿಲ್ಲ. ವೆಂಕಟಪತಿಯು ಯಾವ ಸುಡು ಗಾಡಿಗೆ ಹೋಗಿಬಿಟ್ಟನೋ ತಿಳಿಯದು" ಎಂದು ಸಿಂಹಾಸನವಿರುವ ಕೋಣೆ ಯಿಂದ ಮತ್ತೊಂದು ಕೋಣೆಗೆ ಹೋಗಿ ಮಂಚದಮೇಲೆ ಬಿದ್ದುಕೊಂಡರು.

ವೇದವ್ಯಾಸ ಉಪಾಧ್ಯನು ಪುರಾಣ ಪುಸ್ತಕವನ್ನು ಕಟ್ಟಿಬಿಟ್ಟು ಸನ್ಯಾಸಿಯ ಹಿಂದೆಯೇ ಬೇರೆ ಕೋಣೆಗೆ ಪ್ರವೇಶಿಸಿ "ನನ್ನ ಪುರಾಣ ಇಂದಿಗೆ ಮುಗಿಯಿತು. ಇನ್ನು ಮುಂದೆ ಪುರಾಣ ಹೇಳಲಿಕ್ಕೆ ಚಿತ್ತಕ್ಕೆ ಯುಕ್ತತೋರು ವವರಿಗೆ ನೇಮಕವಾಗಬಹುದು" ಎಂದು ನಮಸ್ಕಾರಮಾಡಿ ಪ್ರತ್ಯುತ್ತರ ವನ್ನು ಕಾಯದೆ ಮಠವನ್ನು ಬಿಟ್ಟು ವಾಯುವೇಗದಿಂದೆಂಬಂತೆ ಹೊರ ಬೀದಿಯನ್ನು ಸೇರಿ ಹಿಂದೆ ಮುಂದೆ ನೋಡದೆ ನಡೆಯುತ್ತಿರುವಾಗ ಎದುರಿ ನಿಂದ ಬರುತ್ತಿರುವ ವೆಂಕಟಪತಿ ಆಚಾರ್ಯನು ಅವನನ್ನು ನೋಡಿ ಏನೋ ವೈಷಮ್ಯ ನಡೆದಿರಬೇಕೆಂಬ ಸಂಶಯದಿಂದ,–"ಉಪಾಧ್ಯರೇ! ಎಲ್ಲಿಗೆ ಅವಸರ ದಿಂದ ಹೋಗುತ್ತೀರಿ?" ಎಂದು ವಿಚಾರಿಸಿದನು.

ತನಗೂ ಚಂಚಲನೇತ್ರರಿಗೂ ಹುಟ್ಟಿದ ಚಿಕ್ಕ ಕಲಹದ ವೃತ್ತಾಂತ ವನ್ನು ಉಪಾಧ್ಯನು ವಿವರಿಸಿದನು. ವೆಂಕಟಪತಿಯು ಆಶ್ಚರ್ಯಪಟ್ಟು ಸದ್ಗುಣಭರಿತನೆಂದು ಲೋಕದಲ್ಲೆಲ್ಲಾ ಖ್ಯಾತಿಗೊಂಡ ತನ್ನ ಧಣಿಯು ಕಡು ಮೂರ್ಖನಾಗಿ ಹೋದನೆಂಬ ವ್ಯಸನದಿಂದ ತಲೆತಗ್ಗಿಸಿಕೊಂಡು ವೇದವ್ಯಾಸ ಉಪಾಧ್ಯಗೆ ಪ್ರತ್ಯುತ್ತರ ಕೊಡದೆ ಮಠದ ಕಡೆಗೆ ಬಂದನು.

ಸನ್ಯಾಸಿಯು ಮರುಳು ಹಿಡಿದವನಂತೆ ಮಂಚದ ಮೇಲೆ ಬಿದ್ದು ಕೊಂಡಿರುವ ವದಂತಿಯು ಮಠದ ಚಾಕರರಿಂದ ವೆಂಕಟಪತಿಯು ಅರಿತು ಅವರ ಕೂಡೆ ಏನೊಂದೂ ಚರ್ಚೆಮಾಡದೆ ಮಂಚದ ಕೋಣೆಯ ಒಳಗೆ ಬಂದು ಸಮ್ಮುಖದಲ್ಲಿ ನಿಂತು ಪ್ರಣಾಮಮಾಡಿದ ವೇಳೆಯಲ್ಲಿ ಚಂಚಲ ನೇತ್ರರು ನಗುತ್ತಾ ಎದ್ದು ಕೂತುಕೊಂಡು– "ವೆಂಕಟಪತಿಯೇ! ನೀನು ಹೋದ ಕೆಲಸ ಮಾಡಿಕೊಂಡು ಬಂದಿಯಾ? ಬೇಗನೇ ಹೇಳಿ ಬಿಡು. ಉದ್ದ ಉದ್ದ ಮಾತುಗಳಿಂದ ನಮ್ಮ ಪ್ರಾಣವನ್ನು ತೆಗಿಯಬೇಡ ಮಹಾಯಾ ಧಣಿಯಕಾಂಕ್ಷೆಯನ್ನು ವೃದ್ಧಿಪಡಿಸಬೇಡ" ಎಂದು ಬೇಡಿಕೊಳ್ಳುವ ಯಜ

ಮಾನಸನನ್ನು ಕುರಿತು ವೆಂಕಟಪತಿಯು— "ಬುದ್ಧೀ! ತಮ್ಮ ಕೆಲಸವನ್ನು ಜಯಪ್ರದ ಮಾಡಿಕೊಂಡೇ ಬಂದಿರುವೆನು; ಇಷ್ಟು ಸಂಕ್ಷೇಪದಲ್ಲಿಯೇ ಈ ಪ್ರಸ್ತಾಪವನ್ನು ತೀರಿಸಿಬಿಡಲೋ, ವಿವರಗಳನ್ನು ಆದ್ಯಂತವಾಗಿ ಅರಿಕೆ ಮಾಡಲೋ, ಅಪ್ಪಣೆಯಾಗಲಿ" ಎಂದನು.

ತನ್ನ ಅವಸರವು ವೆಂಕಟಪತಿಯನ್ನು ಸಿಟ್ಟಿಗೆಬ್ಬಿಸಿತೆಂಬ ಹೆದರಿಕೆಯಿಂದ ಚಂಚಲನೇತ್ರರು— "ನಿನ್ನಷ್ಟು ಸ್ವಾಮಿಭಕ್ತಿಯುಳ್ಳವನಿನ್ನೊಬ್ಬನನ್ನು ಇದುವರೆಗೂ ನಾವು ಕಾಣಲಿಲ್ಲ. ಕೆಲಸವನ್ನು ಜಯಿಸಿಕೊಂಡು ಬಂದ ನಿನ್ನ ಸಾಹಸವು ನಮ್ಮ ಪ್ರಾಣವಾಯುವನ್ನು ಒಡಲು ಬಿಟ್ಟು ಅತ್ತಿತ್ತ ಚಲಿಸದಂತೆ ಕಟ್ಟಿಹಾಕಿಬಿಟ್ಟಿತು ಇನ್ನೂ ವಿವರಗಳನ್ನೆಲ್ಲಾ ಒಂದೂ ಬಿಡದೆ ಹೇಳಿ ನಮ್ಮ ಕೃತಜ್ಞತೆಗೆ ಪಾತ್ರನಾಗು" ಎಂದು ಪ್ರೇಮಯುಕ್ತವಾಗಿ ಪಾರುಪತ್ಯಗಾರಗೆ ಯತಿಗಳಪ್ಪಣೆಯಾಯಿತು. ವೆಂಕಟಪತಿಯು ತನಗೂ ವಾಗ್ದೇವಿಗೂ ಅವಳ ತಾಯಿ ಭಾಗೀರಥಿಗೂ ನಡೆದ ಸಂಭಾಷಣೆಯನ್ನು ಒಂದು ಅಕ್ಷರವಾದರೂ ಬಿಡದೆ ನಿವೇದಿಸಿದನು. ಚಂಚಲನೇತ್ರರು ಅಡಿಗಡಿಗೆ ಹರುಷವನ್ನು ತಾಳಿದರು. ಪರಂತು ವಾಗ್ದೇವಿಯು ತಾಯಿಯ ಮಾತನ್ನು ಉಲ್ಲಂಘಿಸಿ, ದೇವರ ಸನ್ಮುಖದಲ್ಲಿ ಪ್ರಮಾಣಪೂರ್ವಕ ವಾಗ್ದತ್ತವನ್ನೀಯಲು ಅಪೇಕ್ಷಿಸಿದ ವಿಷಯವು ಅವರ ಮನಸ್ಸಿಗೆ ಅತಿವಿಪರೀತವಾಗಿ ತೋರಿ. ರವಷ್ಟು ಕೋಪವನ್ನುಂಟುಮಾಡಿತೆಂಬ ಹಾಗೆ ಅವರ ಮುಖದ ವರ್ಣಭೇದದಿಂದ ಅರಿತ ವೆಂಕಟಪತಿಯು ಇದೇ ತನ್ನ ಸಾಧನೆಗೆ ಸುಸಮಯವೆಂಬ ಕೋರಿಕೆಯಿಂದ ತನ್ನ ಅಭಿಪ್ರಾಯವನ್ನು ತಿಳಿಸಲಿಕ್ಕೆ ಆಜ್ಞೆಯನ್ನು ಬೇಡಿದಾಗ-ಹೇಳಪ್ಪಾ ಹೇಳೆಂದು ಸ್ವಾಮಿಗಳ ಅನುಜ್ಞೆಯಾಯಿತು.

## ಏಳು

ವೆಂಕಟಪತಿ— "ತಾನು ಇಚ್ಛಿಸುವ ವಾಗ್ದಾನವನ್ನು ಪಟ್ಟದ ದೇವರ ಮುಂದೆ ಕೊಡೋಣಾಗಬೇಕಾಗಿ ವಾಗ್ದೇವಿಯು ಅಪೇಕ್ಷಿಸುವದ್ಯಾಕೆ? ದೇವರ ಮೇಲೆ ಶ್ರೀಪಾದಂಗಳವರಿಗೆ ಪೂರ್ಣಭಯಭಕ್ತಿ ಇರುವದರಿಂದ ತಾನು ಅಪೇಕ್ಷಿಸುವ ರೀತಿಯಲ್ಲಿ ಕೊಡೋಣಾಗುವ ಭಾಷೆಗೆ ಮುಂದೆ ಭಂಗ ಬಾರದೆಂಬ ವಿಶ್ವಾಸದಿಂದ ಎಂಬಂತೆ ನನ್ನ ಭಾವನೆ ಚಿತ್ತಕ್ಕೆ ಯಾವ ರೀತಿಯಲ್ಲಿ ಅನ್ವಯವಾಗಿಯದೋ ಅರಿಯದು."

ಚಂಚಲನೇ— "ನನಗೂ ಹಾಗೆಯೇ ಕಾಣುತ್ತದೆ."

ವೆಂಕಟಪತಿ— "ಹಾಗಾದರ ಶ್ರೀಪಾದಂಗಳವರು ಪೂಜಿಸಿಕೊಂಡು ಬರುವ ದೇವರ ಮೇಲೆ ಕೇವಲ ವೇಶ್ಯಾಸ್ತ್ರೀಯಿಂದಲೂ ನಿಕೃಷ್ಟಳಾದ ವಾಗ್ದೇವಿಗಿರುವಷ್ಟು ನಂಬಿಕೆಯು ಶ್ರೀಪಾದಂಗಳವರಿಗೆ ಇಲ್ಲವೆಂಬ ಹಾಗಾಯಿತು. ಇನ್ನೇನು ಅಂಕೆ ಮಾಡಲಿ."

ಚಂಚಲನೇ— "ವೆಂಕಟಪತಿ, ನಿನ್ನ ಮಾತಿಗೆ ಅರ್ಥವಾಗುವುದಿಲ್ಲ. ಭಯಭಕ್ತಿಪೂರ್ಣರಾಗಿ ನಾವು ಪಟ್ಟದ ದೇವರ ಪೂಜೆ ನಡೆಸಿಕೊಂಡು ಬರುತ್ತೇವೆಂಬ ಅನುಮಾನ ನಿನಗೆ ಹುಟ್ಟಿದ್ದು ಬಹುಚೋದ್ಯವೇಸರಿ."

ವೆಂಕಟಪತಿ— "ಚೋದ್ಯವೇ, ಶ್ರೀಪಾದಂಗಳವರಿಗೆ ತನ್ನ ದೇವರ ಮೇಲೆ ನಿಜವಾದ ಭಯಭಕ್ತಿಯಿರುವದಾದರೆ ವಾಗ್ದೇವಿಯ ಮಾಯಾಜಾಲವನ್ನು ಕತ್ತರಿಸಲಿಕ್ಕೆ ಅನ್ಯಸಾಧನ ಬೇಕಾಗದು. ತನಗೆ ತಗಲಿಕೊಂಡಿರುವ ಮೋಹವನ್ನು ಜಯಿಸಿಲಿಕ್ಕೆ ಸಾಮರ್ಥ್ಯಕೊಡೆಂದು ನಿಷ್ಕಳಂಕ ಮನಸ್ಸಿನಿಂದ ದೇವರನ್ನು ಬೇಡಿಕೊಂಡರೆ ದುರ್ವ್ಯಸನವಾವುದೂ ಸನ್ನಿಧಿಗೆ ಸೋಕೀತೇ ಸ್ವಾಮಿ. ಬಡವನ ಅರಿಕೆಯು ನಿಸ್ಸಾರವೆನ್ನಬಾರದು."

ಚಂಚಲನೇ— "ಸರಿ, ಸರಿ, ನಿನ್ನ ಜ್ಞಾನೋಪದೇಶವು ಪುನಃ ತಲೆದೋರಿತೇನು?"

ವೆಂಕಟಪತಿ— "ಪರಾಕೆ, ದೊಡ್ಡ ದೊಡ್ಡ ರಾಜ್ಯಗಳನ್ನಾಳುವ ಪ್ರಭುಗಳು ಮಂತ್ರಿಗಳ ಆಲೋಚನೆಯನ್ನು ಯಾವ ಕಾರ್ಯಕ್ಕಾದರೂ ಮುಂದಾಗಿ ತಿಳುಕೊಳ್ಳುವುದೂ ತಾವಾಗಿ ಯಾರನ್ನೂ ಕೇಳದೆ ಮಾಡದೆ ಒಂದುಕಾರ್ಯವನ್ನು ತೊಡಗಿಬಿಟ್ಟ ವೇಳೆಯಲ್ಲಾದರೂ ಮಂತ್ರಿಗಳು ಆಕ್ಷೇಪಿಸಿ ತಮ್ಮ ನ್ಯಾಯವಾದ ಅಭಿಪ್ರಾಯವನ್ನು ತಿಳಿಸಿದರೆ ಅದನ್ನು ಒಪ್ಪಿಕೊಂಡು ನಡಿಯುವದೂ ಲೋಕರೂಢಿಯಷ್ಟೆ. ಪ್ರಧಾನಿಯು ತನ್ನ ಚಾಕರನೆಂಬ ಒಂದೇ ಕಾರಣದಿಂದ ಅವನು ತನಗೆ ಬುದ್ಧಿ ಹೇಳತೊಡಗಿದನೇ ಎಂದು ಅರಸು ಕನಲಿದರೆ ರಾಜ್ಯಭಾರ ಸರಿಯಾಗಿ ನಡೆಯುವದೇ ಸ್ವಾಮೀ? ಚರಣ ಕಿಂಕರನಾದ ನನ್ನ ಮನಸ್ಸಿಗೆ ಕಂಡ ಅಭಿಪ್ರಾಯವನ್ನು ಸನ್ನಿಧಿಗೆ ಸೂಚಿಸಿದ ದೆಶೆಯಿಂದ ನಾನು ಜ್ಞಾನೋಪದೇಶ ಮಾಡನೋಡುತ್ತೇನೆಂದು ನೆನಸಿ ಧಿಕ್ಕರಿಸುವದು ನ್ಯಾಯವೋ? ಈ ವಿಚಾರವನ್ನು ಮುಂದಾಗಿ ಮಾಡಬೇಕೆಂಬ ನನ್ನ ವಿನಂತಿಯನ್ನು ತಿರಸ್ಕರಿಸಬಾರದು."

ಚಂಚಲನೇ—"ಅರಸೂ ಪ್ರಧಾನಿಯೂ ಇವರಿಬ್ಬರಿಂದಲೇ ರಾಜ್ಯಭಾರ ನಡೆಯುವದೇನು ಹುಚ್ಚಪ್ಪಾ! ಅರಸಿಗೆ ಯೋಗ್ಯವಾದ ಪಟ್ಟದರಾಣಿ ಇಲ್ಲದೆ ರಾಜ್ಯ ನಡೆದೀತೇ? ಅಷ್ಟು ಸಾರಶೂನ್ಯವಾದ ನಿನ್ನ ಒಣ ಹರಟೆಯನ್ನು ಕೇಳುತ್ತಾ ನಾವು ಸಮಯ ಕಳೆಯಬೇಕೆನ್ನುತ್ತೀಯಾ?"

ವೆಂಕಟಪತಿ—"ಸನ್ನಿಧಿಯ ಈ ಕಕ್ಷಿಯ ತಾತ್ಪರ್ಯ ನನ್ನ ಮನಸ್ಸಿಗೆ ಹೊಗಲಿಲ್ಲ. ಅರಸನಿಗೆ ರಾಣಿಯು ಇರುವುದು ಸಹಜವೇ?"

ಚಂಚಲನೇ—"ನಾವು ಅರಸು ಪ್ರಧಾನಿ ಎಂಬಂತೆ ಭಾವಿಸುವದಾದರೆ ನಮಗೆ ಆದಿಯಲ್ಲಿ ಒಂದು ರಾಣಿಯನ್ನು ಮಾಡಿಕೊಡು ಆ ಮೇಲೆ ನೀನು ಪ್ರಧಾನಿ ಖರೆ. ನಿನ್ನ ಆಲೋಚನೆಯನ್ನು ನಾವು ತೆಗೆದುಹಾಕಲಾರೆವು."

ವೆಂಕಟಪತಿ—"ಪರಾಕೆ! ಘನವಿಚಾರದಲ್ಲಿ ಕುಚೋದ್ಯರೂಪವಾದ ಆಕ್ಷೇಪವು ತರ್ಕಮೋವಾದಿಯಲ್ಲಿ ತೋರುವುದಲ್ಲದೆ ಪ್ರಯೋಜನಕ್ಕೆ ಬೀಳುವುದೇ? ಹೆಚ್ಚಿಗೆ ಭಿನ್ನವಿಸಿಕೊಳ್ಳಲಿಕ್ಕೆ ನನ್ನಲ್ಲಿ ಶಕ್ತಿಯಿಲ್ಲ. ನನ್ನ ಸರ್ವಾಪರಾಧಗಳನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ; ಸನ್ನಿಧಿಯ ಆಜ್ಞೆ ಮೀರುವವನಲ್ಲ."

ಚಂಚಲನೇ—"ಕ್ಷಿತೀಶನು ಸಚಿವನ ಆಲೋಚನೆಯನ್ನನುಸರಿಸಿ ನಡೆಯುತ್ತಾನೆ. ನಾವು ಈಗ ಮಾಡಿಕೊಂಡಿರುವ ಸಂಕಲ್ಪವು ರಾಜಕಾರ್ಯದಂತಿರುವುದಿಲ್ಲ ತೀರಾ ದೇಹಸಬಂಧವಾಗಿ ನಾವು ಹುಡುಕುವ ಸುಖದಾಯಕ ಉಪಾಯ. ಇದಕ್ಕೆ ಮಂತ್ರಾಲೋಚನೆ ಬೇಕೇನಯ್ಯಾ? ಹಿಂದೆ ರಾವಣಾಸುರನು ಮಂತ್ರಿಗಳೂ ಮಿತ್ರರೂ ಬಂಧುಬಾಂಧವರೂ ಹಲವು ಪರಿಯಲ್ಲಿ ಹೇಳಿದಬುದ್ಧಿಯನ್ನು ಧಿಕ್ಕರಿಸಿ ತನ್ನ ಛಲವನ್ನೇ ಸಾಧಿಸಿದದೆಸೆಯಿಂದ ಅವನಿಗೆ ಸಾಯುಜ್ಯ ದೊರೆಯಲಿಲ್ಲವೇ? ನವವ್ಯಾಕರಣಿಯಾದ ಆ ಖಳನು ಕಡುಮೂರ್ಖನೇನು?"

ವೆಂಕಟಪತಿ—"ಸನ್ನಿಧಿಯಿಂದ ಆರಿಸಲ್ಪಟ್ಟ ಉಪಮೆಯು ಈಗಿನ ಪ್ರಸ್ತಾಪಕ್ಕೆ ಪ್ರಾಸಂಗಿಕವಾದದ್ದೇ? ವ್ಯಾಕರಣಿಯು ಇನ್ನೊಬ್ಬನ ಹೆಂಡತಿಯನ್ನು ಎತ್ತಿಹಾಕುವುದಕ್ಕೋಸ್ಕರ ಕಪಟಸನ್ಯಾಸವೇಷವನ್ನು ಹಾಕಿಕೊಂಡು ಸೀತಾಹರಣವನ್ನು ಮಾಡಿದಪ್ರಯುಕ್ತ, ರಾವಣಸನ್ಯಾಸಿ ಎಂಬ ಗುಣನಾಮವನ್ನು ಧರಿಸಿದನು. ಅಂಥಾ ಸ್ವಭಾವದ ಮಹಾನುಭಾವರನ್ನು ರಾವಣಸನ್ಯಾಸಿ ಎಂದು ಕರೆಯುವ ರೂಢಿಬಿದ್ದದೆ. ಸನ್ನಿಧಿಯ ಸತ್ಕೀರ್ತಿಗೆ ಪ್ರಕ

ತದ ಚಿಂತನೆಯು ಉಪಯುಕ್ತವೆಂದು ತಿಳಿದುಕೊಳ್ಳೋಣಾಗುವುದಾದರೆ ಕೇವಲ ಮೂಢಮತಿಯಾದ ನಾನು ಹೇಳತಕ್ಕದ್ದೇನಿದೆ?"

ಚಂಚಲನೇ—"ಪ್ರಾಪಂಚಿಕ ವ್ಯವಹಾರಗಳಲ್ಲಿ ದೇವರನ್ನು ಕಟ್ಟಿಕೊಳ್ಳಬಾರದು ವೆಂಕಟಪತಿ! ದೇವರೇ ಗತಿಯೆಂದು ಅಡಿಗೆಮಾಡದೆ ಕೂತವರಿಗೆ ಅನ್ನ ದೊರೆಯುವುದೇ? ಪುರುಷ ಪ್ರಯತ್ನಗಳಿಂದ ನೆರವೇರುವ ಕೆಲಸಗಳಲ್ಲಿಯೂ ಮಾನುಷಿಕ ಇಚ್ಛೆಗಳನ್ನು ಪೂರೈಸುವ ವಿಷಯದಲ್ಲಿಯೂ ದೇವರನ್ನು ಕರೆಯುವುದರಿಂದ ಪ್ರಯೋಜನವಿದೆಯೇ? ನೀನು ಇಷ್ಟು ಬುದ್ಧಿಶೂನ್ಯನೇ?"

ವೆಂಕಟಪತಿ— "ಪರಾಕ! ಲೌಕಿಕ ವಿಷಯಗಳಲ್ಲಿ ಒಂದಾದರೂ ದೈವಾಧೀನಕ್ಕೆ ಹೊರಪಟ್ಟಿರುವುದಿಲ್ಲವೆಂದು ನನ್ನ ಮತ. ನಾಸ್ತಿಕರು ಏನೂ ಅಂದುಕೊಳ್ಳಲಿ."

ಚಂಚಲನೇ— "ನಿನ್ನ ಮತವನ್ನೇ ಅನುಸರಿಸೋಣ. ದೈವಾಧೀನಕ್ಕೆ ಯಾವದೊಂದು ವಿಷಯವೂ ಬಾಹಿರವಲ್ಲವಷ್ಟೆ! ಹಾಗಾದ ಮೇಲೆ ನಮ್ಮ ಮನಸ್ಸಿನಲ್ಲಿ ಬೇರೂರಿಹೋದ ವಾಗ್ದೇವೀ ಚಿಂತನೆಯು ದೈವ ಪ್ರೇರಿತವಲ್ಲವೆಂದು ನೀನು ಹೇಳುವಿಯಾ?"

ವೆಂಕಟಪತಿ— "ಬೆಂಕಿಯಲ್ಲಿ ಕೈ ಹಾಕಿದರೆ ಕೈ ಸುಡುವದೆಂದು ಎಲ್ಲರಿಗೂ ಗೊತ್ತಿರುವದು. ಒಬ್ಬನು ಮೂಢತನದಿಂದ ಕೈ ಸುಟ್ಟುಕೊಂಡರೆ ಅದು ದೈವಪ್ರೇರಿತ ಕೃತ್ಯವೆನ್ನಬಹುದೇ? ಒಳ್ಳೆದು ಕೆಟ್ಟದು ಯಾವದೆಂದು ತಿಳಿಯುವ ಬುದ್ಧಿಯನ್ನು ದೇವರು ಪ್ರಾಣಿಗಳಿಗೆಲ್ಲಾ ಸಾಮಾನ್ಯವಾಗಿ ಕೊಟ್ಟಿರುವನು. ಅಂಥಾ ಬುದ್ಧಿಗನುಸಾರವಾಗಿ ನಡೆಯದೆ, ತಪ್ಪಿ ಬೀಳುವ ಮನುಷ್ಯನು ದೇವರನ್ನು ಸರ್ವಥಾ ದೂರ ಕೂಡದು ಯತಿಯು ತಾನು ಆಚರಿಸಬೇಕಾದ ವ್ರತವನ್ನು ಪೂರ್ಣವಾಗಿ ತಿಳಿದು ಗೃಹಸ್ಥಾಶ್ರಮದ ಸುಖವನ್ನು ತ್ಯಜಿಸಿ, ಸನ್ಯಾಸಕ್ಕೆ ನಿರ್ದೇಶಿಸಲ್ಪಟ್ಟ ಕರ್ಮವನ್ನು ಕೈಕೊಂಡು ಬಳಿಕ ಯಮಶಿಕ್ಷೆಗೆ ಗುರಿಯಾಗುವ ಹಾಗಿನ ವಿಷಯಲಂಪಟತ್ವ ಮುಂತಾದ ದುಷ್ಕರ್ಮಗಳಲ್ಲಿ ಮನಸಿಟ್ಟು, ಅದೆಲ್ಲಾ ದೈವಪ್ರೇರಿತ ಬುದ್ಧಿ ಎಂದು ಹೇಳುವದಕ್ಕೆ ಶಾಸ್ತ್ರಸಮ್ಮತವಾದ ಆಧಾರವಿಲ್ಲ. ಆದ ಪ್ರಯುಕ್ತ ಇಂಥಾ ಸನ್ಯಾಸಿಗಳು ತಮ್ಮ ಧರ್ಮವನ್ನುಲ್ಲಂಘಿಸಿ ಪಾಪಕೃತ್ಯಗಳಲ್ಲಿ ಆಸಕ್ತರಾಗುವದು ಯಮ ಯಾತನೆಗೆ ಗುರಿಯಾಗುವದಕ್ಕೆಂದು ನನ್ನ ಮನಸ್ಸಿಗೆ ತೋರುವ ನ್ಯಾಯ ಸನ್ನಿಧಿಗೆ ಅರಿಕೆ ಮಾಡಿದೆ. ಸೇವಕನ ಮೇಲಿ

ಕೃಪೆ ಇರಲಿ."

ಚಂಚಲನೇ— "ವೆಂಕಟಪತಿ, ನೀನು ಬರೇ ಹೆಡ್ಡ. ಶಿಖಾ ಯಜ್ಞೋಪವೀತವನ್ನು ತ್ಯಜಿಸಿದ ಸನ್ಯಾಸಿಗೆ ಯಮಬಾಧೆ ಸರ್ವಥಾ ತಟ್ಟದೆಂಬ ಗುಟ್ಟು ನೀನು ಇದುವರೆಗೂ ತಿಳಿಯಲೇ ಇಲ್ಲ."

ವೆಂಕಟಪತಿ— "ಈಗ ಅಪ್ಪಣೆಯಾದ ಗುಟ್ಟಿನ ಒಳಗೆ ಇನ್ನೊಂದು ಗುಟ್ಟು ಅದೆ."

ಚಂಚಲನೇ— "ಅದ್ಯಾವದು?"

ವೆಂಕಟಪತಿ— "ತಲೆಯನ್ನು ಬೋಳಿಸಿಕೊಂಡು ಯಜ್ಞೋಪವೀತವನ್ನು ಹರಿದು ಬಿಟ್ಟಾಕ್ಷಣ ಯಮಬಾಧೆಯು ತಟ್ಟದಿರುವದು ನಿಜವಾದರೆ, ಯಮನು ಶ್ರಮುನಿಪಟ್ಟಣವನ್ನು ಬೇಗನೇ ಬಿಟ್ಟು ಘಟ್ಟಹತ್ತಬೇಕಾಗುವುದು. ಪಾಪಿಷ್ಠರೆಲ್ಲರೂ ಯಮನ ಹೆದರಿಕೆಯುಳ್ಳವರೆಂದು ಲೋಕವೇ ಬಲ್ಲದು. ಎಂಥಾ ಪಾಪಿಯಾದರೂ ತನಗಿಷ್ಟವಿರುವ ಸಕಲ ದುರಾಚಾರವನ್ನು ನಡೆಸಿ, ಅಂತ್ಯಕಾಲದಲ್ಲಿ ಸನ್ಯಾಸವನ್ನು ತಕ್ಕೊಂಡುಬಿಟ್ಟರೆ ಯಮಸದನಕ್ಕೆ ಯಾರೊಬ್ಬನೂ ಹೋಗಲಾರನು. ಹಾಗಾದರೆ ಯಮನ ಉದ್ಯೋಗ ಮಿನಾಹಿಯಲ್ಲಿ ಬರುವದಲ್ಲದೆ ಲೋಕದಲ್ಲಿ ಪಾಪಿಗೊಬ್ಬಗಾದರೂ ಪಾಪ ಭಯ ಲೇಶವಾದರೂ ಇರದು. ಸನ್ಯಾಸವು ಸ್ವರ್ಗಕ್ಕೆ ಹೋಗುವದಕ್ಕೆ ಸುಂಕಪಾವತಿ ಚೀಟೆಂದು ಎಣಿಸುವದು ಬರೇ ಹುಚ್ಚುತನವೇ ಸರಿ. ಧರ್ಮವನ್ನು ಬಿಟ್ಟು ದುರಾಚಾರದಲ್ಲಿ ಮಗ್ನನಾದ ಸನ್ಯಾಸಿಗೆ ಯಮಬಾಧೆ ಸರ್ವಥಾ ತಪ್ಪದು."

ಚಂಚಲನೇ— "ಹಾಗಾದರೆ ಸನ್ಯಾಸಿಗೂ ಇತರ ಮಾನವರಿಗೂ ಏನೂ ಬೇಧವಿಲ್ಲವೆನ್ನುತ್ತಿಯೋ?"

ವೆಂಕಟಪತಿ— "ಅಲ್ಲ, ಸನ್ಯಾಸವು ದೊಡ್ಡ ಪದವಿಯೇ. ಪರಂತು ಕರ್ಮಭ್ರಷ್ಟನಾದ ಸನ್ಯಾಸಿಯು ಇತರ ಪಾಪಿಗಳಿಗಿಂತಲೂ ಕಡೆ. ಅಂಥವನು ಪತಿತನಾಗುವದರಿಂದ ಯಮಯಾತನೆಯು ಅವನಿಗೆ ಒಂದು ದಿವಸಕ್ಕಾದರೂ ಬಿಟ್ಟು ಹೋಗದು."

ಚಂಚಲನೇ— "ಎಂಥಾ ಪಾಪಕ್ಕೂ ಪ್ರಾಯಶ್ಚಿತ್ತ ಉಂಟಷ್ಟೇ. ದುಷ್ಕರ್ಮಿಯಾದ ಸನ್ಯಾಸಿಯು ಸಕಾಲದಲ್ಲಿ ಪ್ರಾಯಶ್ಚಿತ್ತ ಮಾಡಿಕೊಂಡರೆ ಅವನಿಗೆ ಯಮನ ಶಿಕ್ಷೆಯ ಭಯವೆಲ್ಲಿಯದು?"

ವೆಂಕಟಪತಿ— "ಸಕಾಲ ಯಾವದೆಂದು ಅಪ್ಪಣೆಯಾಗಲಿ, ಪರಾಕೆ."

ಚಂಚಲನೇ— "ಪಾಪಭಯ ಯಾವ ಸಮಯದಲ್ಲಿ ಹುಟ್ಟಿತೋ ಅದೇ ತಕ್ಕ ಕಾಲವೆಂದು ತಿಳುಕೋ."

ವೆಂಕಟಪತಿ— "ವಾಗ್ದೇವಿಯನ್ನು ವರಿಸಿಕೊಳ್ಳುವದೂ ಅವಳ ಬಯಕೆಯನ್ನು ಈಡೇರಿಸುವೆನೆಂದು ಪಟ್ಟದ ದೇವರ ಮುಂದೆ ಪ್ರಮಾಣ ಪೂರ್ವಕವಾಗಿ ವಾಗ್ದಾನ ಕೊಡುವದೂ ಪಾಪಕೃತ್ಯವಲ್ಲವೆಂಬಂತೆ ಸನ್ನಿಧಿ ಯಿಂದ ಈಗ ತಿಳುಕೊಳ್ಳೋಣಾಗಿಯದೋ ಅಥವಾ ಇಂಥಾ ದುಷ್ಕರ್ಮವು ಪುಣ್ಯಕೆಲಸವೆಂದು ಎಣಿಸೋಣಾಗಿಯದೋ ತಿಳಿಯದು."

ಚಂಚಲನೇ— "ನಿನ್ನ ಕುತರ್ಕಕ್ಕೆ ನಾವು ಪ್ರತ್ಯುತ್ತರ ಕೊಡಲಾರೆವು ಪಾಪ ಭಯ ಹುಟ್ಟುವ ಪರಿಯಂತರ ಪಾಶ್ಚಾತಾಪಕ್ಕೆ ಅವಕಾಶ ಉಂಟೆಂದು ನಾವು ಮೊದಲೇ ನಿನಗೆ ಅಪ್ಪಣೆಕೊಡಲಿಲ್ಲವೇ"

ವೆಂಕಟಪತಿ— "ಪ್ರಕೃತ ಸನ್ನಿಧಿಯ ಮನಸ್ಸು ಸೂರೆಗೊಂಡಿರುವ ವಾಗ್ದೇವಿಯ ಚಿಂತನೆಯು ಪಾಪಕೃತ್ಯವೋ ಎಂಬ ಪ್ರಶ್ನೆಗೆ ಸನ್ನಿಧಿಯ ಉತ್ತರ ದೊರಕುವ ತನಕ ನಾನು ಜಿಜ್ಞಾಸವನ್ನು ಕಡೆಹೊಂದಿಸಲಾರೆ.

ಚಂಚಲನೇ— "ಅದು ಪುಣ್ಯಕೃತ್ಯವೆಂದು ಹೇಳಲಾಗದು."

ವೆಂಕಟಪತಿ— "ಹಾಗಾದರೆ ಪಾಪಭಯ ಈಗಲೇ ಹುಟ್ಟಿತು ಪ್ರಾಯ ಶ್ಚಿತ ಮಾಡಿಕೊಳ್ಳುವ ಸಮಯ ಮುಂದಿಲ್ಲ, ಸ್ವಾಮಿ."

ಚಂಚಲನೇ— "ಪಾಪಕೃತ್ಯವನ್ನು ಇನ್ನೂ ಮಾಡಲೇ ಇಲ್ಲ. ವಾಗ್ದೇ ವಿಯು ನಮ್ಮ ಕೈಗೆ ಇನ್ನೂ ಸಿಕ್ಕಲೇ ಇಲ್ಲ. ಪ್ರಾಯಶ್ಚಿತ್ತ ಈಗಲೇ ಮಾಡಿಕೊಳ್ಳಬೇಕಾಗಿ ನೀನೆನ್ನುವ ಮಾತಿಗೆ ಅರ್ಥವದೇಯೋ?"

ವೆಂಕಟಪತಿ— "ಒಂದು ಕೃತ್ಯವು ಪಾಪವೆಂದರಿಯದೆ ಅದನ್ನು ಮಾಡಿ ಬಿಟ್ಟು, ಅದು ಪಾಪವೆಂದು ತಿಳಿದ ಮೇಲೆ ಪಶ್ಚಾತ್ತಾಪ ಸಹಜವಾಗಿ ಉಂಟಾಗುವದು. ಪ್ರಕೃತದ ಪ್ರಸ್ತಾಪದಲ್ಲಿ ಸನ್ನಿಧಿಯಿಂದ ಸಂಕಲ್ಪಿಸಲ್ಪಟ್ಟ ಕಾರ್ಯವು ಪಾಪ ಕೃತ್ಯವೆಂದು ಆದಿಯಲ್ಲಿಯೇ ಸಮಾಧಾನವಾಗಿರುವ ಕಾರಣ ಪ್ರಾಯಶ್ಚಿತ್ತ ಮಾಡತಕ್ಕ ಕಾಲವು ಇದೇ ಸರಿ."

ಚಂಚಲನೇ— "ಈಗ ನಾವು ಮಾಡತಕ್ಕ ಕೆಲಸವೇನೆಂದು ನಿನ್ನ ತಾತ್ಪರ್ಯ?"

ವೆಂಕಟಪತಿ— "ವಾಗ್ದೇವಿಯ ಪ್ರಸ್ತಾಪವನ್ನು ನಿಶೇಧವಾಗಿ ಬಿಟ್ಟು ಅವಳ ಕುರಿತು ಇಷ್ಟು ಪರಿಯಂತ ಮನಸ್ಸಿನಲ್ಲಿ ಮಾಡಿಕೊಂಡ ದುಃಸಂಕಲ್ಪ

ವೆಂಬ ಪಾಪವನ್ನು ಮಾನಸಾಂತರಪಡುವದರ ಮೂಲಕ ಪರಿಹರಿಸಿಕೊಳ್ಳ ಬೇಕೆಂಬ ನನ್ನ ಮತ"

ಚಂಚಲನೇ— "ವೆಂಕಟಪತಿ! ನಾವು ಪ್ರತಿನಿತ್ಯ ಮಾಡುವ ನಾರಾಯಣ ಸ್ಮರಣೆಗಿಂತ ದೊಡ್ಡಪ್ರಾಯಶ್ಚಿತ್ತ ಉಂಟೇನಪ್ಪಾ? ಆಯಾಯ ದಿನ ಮಾಡಲ್ಪಟ್ಟ ಪಾಪವೆಲ್ಲವೂ ಸದಾಕಾಲ ನಡೆಯುವ ಹರಿನಾಮಸ್ಮರಣೆಯಿಂದ ಭಸ್ಮವಾಗಿ ಹೋಗುತ್ತದೆ. ವಾಗ್ದೇವಿಯ ಚಿಂತನೆಯು ಅಂಥಾ ಪ್ರಾಯಶ್ಚಿತ್ತಕ್ಕೆ ಮೀರಿ ಹೋಗುವ ಪಾಪವಲ್ಲವೆಂದು ಚೆನ್ನಾಗಿ ತಿಳುಕೋ. ದೊಡ್ಡಬುದ್ಧಿವಂತನೆಂಬಂತೆ ಹೆಚ್ಚು ಗಳಹುವದರಿಂದ ನಿನ್ನ ಹುಚ್ಚುತನವೇನಾದರೂ ಮರೆಯಾಗದು. ಇನ್ನೂ ನೀನು ಹೀಗಿಯೇ ಅಧಿಕಪ್ರಸಂಗಮಾಡಿ ಕಾಲ ಹರಣಮಾಡುವದಕ್ಕೆ ನೋಡುತ್ತೀಯಾದರೆ ಬೇಗನೇ ನಮ್ಮ ಎದುರಿನಿಂದ ನಡೆದುಬಿಡು. ವಾಗ್ದೇವಿಯನ್ನು ನಿನ್ನ ಪರಿಮುಖವಲ್ಲದೆ, ಅನ್ಯಥಾ ಕರಿಸಿಕೊಳ್ಳುವದಕ್ಕೆ ಆಗುವುದಿಲ್ಲವಾದರೆ ನಿನ್ನನ್ನು ವಾದ್ಯದಿಂದ ತರಿಸಿ ಕೊಳ್ಳುವೆವು. ಇನ್ನು ನಿನ್ನ ಮುಖಾವಲೋಕನ ನಮಗಾಗಬಾರದು."

ವೆಂಕಟಪತಿಯು ತರ್ಕದಿಂದ ಚಂಚಲನೇತ್ರರಿಗೆ ಉಂಟಾದ ದೊಡ್ಡ ಸಿಟ್ಟನ್ನು ಸೈರಿಸಲಾರದೆ ಅವರು ಒಡನೆ ಮಂಚದಿಂದೆದ್ದು ಮತ್ತೊಂದು ಕೋಣೆಯ ಒಳಗೆ ಹೋಗಿ ಬಾಗಿಲುಗಳನ್ನು ಮುಚ್ಚಲಿಕ್ಕೆ ತಿರುಗಿ ನಿಂತ ಸಮಯವನ್ನು ನೋಡಿ ವೆಂಕಟಪತಿಆಚಾರ್ಯನು ತನ್ನ ಧಣಿಯ ಪಾದಕ್ಕೆ ಅಡ್ಡಬಿದ್ದು, ತಿಳಿಯದೆ ಬಂದ ಅಪರಾಧ ವಿಶಿಷ್ಟವನ್ನು ಒಮ್ಮೆ ಕ್ಷಮಿಸಬೇಕಾಗಿ ಉಭಯ ಹಸ್ತಗಳನ್ನು ಜೋಡಿಸಿ ಬೇಡಿಕೊಂಡಾಗ; ಹೆಚ್ಚು ಎಳೆದರೆ ಹರಿದುಹೋದೀತೆಂಬ ಗಾದೆಯನ್ನು ನೆನಪಿಗೆ ತಂದು, ಚಂಚಲ ನೇತ್ರರು ಅರ್ಧ ಸಿಟ್ಟು ಅರ್ಧ ಸಂತೋಷಚಿತ್ತದಲ್ಲಿದ್ದಂತೆ ತೋರಿಸಿಕೊಂಡು, "ಒಳ್ಳೇದು, ನಮ್ಮ ಆಜ್ಞೆಯನ್ನು ಸಾವಕಾಶವಿಲ್ಲದೆ ಅನುಸರಿಸಿದರೆ ನಿನಗೆ ನಾವು ಪೂರ್ವವತ್ ನಡಿಸಿಕೊಂಡು ಹೋಗಲಿಕ್ಕೆ ಅಭ್ಯಂತರವಾಗದು; ಇನ್ನು ಮುಂದೆಯೂ ನಮಗೇನೇ ಬುದ್ಧಿ ಹೇಳತೊಡಗಿದರೆ ಪ್ರಯಾಸಪಡ ಬೇಕಾಗುವದು, ನೋಡಿಕೋ" ಎಂದು ಗದರಿಸಿಬಿಟ್ಟರು. ಹುಚ್ಚನಂತೆ ಕೋಪ ಮಾಡಿ ಪಾರುಪತ್ಯ ಬಿಟ್ಟುಹೋದರೆ ತನಗಿಂತಲೂ ಅಧಿಕ ಬುದ್ಧಿಯವನು ಇನ್ನೊಬ್ಬನು ಕ್ಷಣಾರ್ಧದಲ್ಲಿ ಸನ್ಯಾಸಿಗೆ ಸಿಕ್ಕುವನು, ಮತ್ತು ಹೆಚ್ಚು ಚಾತುರ್ಯದಿಂದ ವಾಗ್ದೇವಿಯನ್ನು ಮಠಕ್ಕೆ ತರಲಿಕ್ಕೆ ಮಾಡಿದ

ವೈಸವ ಪ್ರಯೋಜನವು ತನಗೆ ಒಂದಿಷ್ಟಾದರೂ ಸಿಕ್ಕದೆ ಹೋಗುವದೆಂಬ ಭಯದಿಂದ ವೆಂಕಟಪತಿಯು ಕೈಮುಗಿದು ನಿಂತುಕೊಂಡು, ವಾಗ್ದೇವಿಯನ್ನು ಅವಳ ಬಳಗದ ಸಮೇತ ಯಾವ ದಿವಸ ಮಠಪ್ರವೇಶಮಾಡಿಸಬೇಕೆಂದು ತಿಳಿಯಲಪೇಕ್ಷಿಸಿದನು. ನಾಳೆ ದಿವಸವೇ ಪ್ರಶಸ್ತವೆಂದು ಚಂಚಲನೇತ್ರರೆಂದರು.

ಅನ್ನ ಉಳಿಯಬೇಕಾದರೆ ಇಂಥಾ ಮೂಢ ಸನ್ಯಾಸಿಗೆ ಜ್ಞಾನವನ್ನು ಹೇಳಬಾರದು ಬೇವಿನ ಎಲೆಯನ್ನು ತಿನ್ನುವವನು ಕಹಿಯಾದ ಕೂಡಲೇ ತಾನೇ ಬಿಡುವನು. ಮುಂದೆ ಬರಬಹುದಾದ ಕೇಡು ನಿವಾರಣೆಗೆ ಮಠದಲ್ಲಿ ಯಥೇಷ್ಟ ದುಡ್ಡಿದೆ. ಸನ್ಯಾಸಿಯ ಉಪ್ಪನ್ನ ಇಷ್ಟು ದಿನ ತಿಂದುಕೊಂಡಿದ್ದ ನೆನಪಿನೀದ ಅವನು ವ್ಯರ್ಥವಾಗಿ ಕೆಟ್ಟುಹೋಗದಂತೆ ನ್ಯಾಯವಾದ ಮಾತು ಹೇಳಿದರೆ ಅವನು ಸಿಟ್ಟು ತಾಳಿ ವಿವೇಕಶೂನ್ಯನಾದ ಬಳಿಕ ತನಗೆ ಬಂದ ಆಪತ್ತೇನು? ವಾಗ್ದೇವಿಯು ಮಠಪ್ರವೇಶವಾದ ಮೇಲೆ ಅವಳ ತಂದೆಯು ಆವಳ ಬಲದಿಂದ ಮಠದಲ್ಲಿ ಸರ್ವಾಧಿಕಾರವನ್ನು ನೋಡಲಿಕ್ಕೆ ಪ್ರಯತ್ನಿಸಿ ತನ್ನ ಬಾಯಿಗೆ ಅಡ್ಡಬರುವನೋ ಎಂಬದೊಂದು ಹೆದರಿಕೆಯಿದೆ. ಪರಂತು ಅವನು ಅಷ್ಟು ಪ್ರತಾಪ ನಡಿಸುವ ಸಾಮರ್ಥ್ಯವುಳ್ಳವನಲ್ಲ. ತನ್ನ ಸ್ವಾತಂತ್ರ್ಯಕ್ಕೆ ಮೋಡಮುಸುಕದೆಂದು ವೆಂಕಟಪತಿ ಆಚಾರ್ಯನು ಧೈರ್ಯಗುಂದದೆ ಮರುದಿವಸವಾಗಬೇಕಾದ ವಧೂಪ್ರವೇಶಕ್ಕೆ ಅವಶ್ಯ ಬೀಳುವ ಸಕಲ ಸಾಹಿತ್ಯಗಳನ್ನು ಒದಗಿಸಿ, ಮರುದಿನ ಪ್ರಾತಃಕಾಲ ವಾಗ್ದೇವಿಯ ಮನೆ ಕಡೆಗೆ ತೆರಳಿದನು.

## ಎಂಟು

ಪುರಾಣ ಪುಸ್ತಕವನ್ನು ಕಟ್ಟಿ ರೋಷದಿಂದ ಹೊರಟುಹೋದ ವೇದವ್ಯಾಸ ಉಪಾಧ್ಯನು ಮನೆಗೆ ತಲ್ಪಿದಾಗ ಗಂಡನ ಮುಖದ ಸ್ಥಿತಿಯಿಂದ ಏನೋ ವೈಷಮ್ಯ ನಡೆದಿರಬೇಕೆಂಬ ಅನುಮಾನದಿಂದ ಅವನ ಪತ್ನಿ ಸುಶೀಲಾಬಾಯಿಯು ಸಮಯವರಿತು ಖಿನ್ನತೆಯ ಕಾರಣವನ್ನು ತಿಳಿದಳು. ಆಹಾ! ಗ್ರಹಗತಿಯ ದೋಷವೇ! ಹಿಂದೆ ಎಷ್ಟೋ ಕಾಲದಿಂದ ನಡೆದು ಬಂದು, ಮುಂದೆ ಕೈಕಾಲು ಬೀಳುವವರೆಗೂ ನಡಕೊಂಡು ಬರಲಿಕ್ಕಿದ್ದ ಉಪಜೀವನಕ್ಕೆ ಒಮ್ಮೆಗೆ ಹಾನಿ ಬಂದುಹೋಯಿತಲ್ಲಾ! ಬಡವನ ಸಿಟ್ಟು

ದವಡೆಗೆ ಕೇಡು ಎಂಬ ಗಾಬರಿಯಾಯಿತು. ಶ್ರೀಪಾದಂಗಳವರಿಗೆ ಈಗ ಕರುಣ ಹುಟ್ಟುವಂತೆ ಹೇಳಿಕೊಳ್ಳಬಹುದೆಂದರೆ ವಲ್ಲಭನು ಸ್ವೇಚ್ಛೆಯಿಂದ ಉದ್ಯೋಗವನ್ನು ಬಿಟ್ಟುಬಂದಿರುವನಷ್ಟೆ? ನೀನಾಗಿ ಬಿಟ್ಟುಹೋದ ಉದ್ಯೋಗ ನೀನೇ ಅಪೇಕ್ಷಿಸುವದಕ್ಕೆ ನಾಚುವದಿಲ್ಲವೇ? ಎಂಬ ಪ್ರತ್ಯುತ್ತರ ಶ್ರೀಪಾದಂಗಳವರ ಬಾಯಿಯಿಂದ ಹೊರಟರೆ ಕೃಷ್ಣವದನ ಮಾಡಿಕೊಂಡು ಮರಳಬೇಕಾಗುವದು. ಸುಮ್ಮನಿದ್ದರೆ ಅನ್ನದ ಮಡಕೆಯು ಅಟ್ಟಕ್ಕೇರು ವದು ಪುಶ್ಯಾತ್ಮಸಿನ್ನೊಬ್ಬನಿಗೆ ಪುರಾಣ ಹೇಳುವ ಕೆಲಸ ನೇಮಕವಾಗು ವದು. ಇಂಥಾ ಉಭಯ ಸಂಕಟದಲ್ಲಿ ಬೀಳುವದಾಯಿತಲ್ಲಾ! ಎಂಬ ವ್ಯಸನ ಆ ಪತಿವ್ರತೆಗೆ ತಾಗಿತು.

ಸಿಟ್ಟು ತಣಿದ ಮೇಲೆ ವೇದವ್ಯಾಸ ಉಪಾಧ್ಯನು ಹುಚ್ಚುತನದಿಂದ ಅನ್ನವನ್ನು ಕಳಕೊಂಡು ನಾಚಿಕೆಗೆ ಗುರಿಯಾದೆನೆಂಬ ಅನುತಾಪದಲ್ಲಿ ಬಿದ್ದನು. ಶತಪ್ರಯತ್ನ ಮಾಡಿ ಆ ಉದ್ಯೋಗವನ್ನು ಪುನಃ ಪಡೆಯಬೇಕೆಂಬ ಹಟವು ವೇದವ್ಯಾಸ ಉಪಾಧ್ಯಗೆ ಅಂಟಿಕೊಂಡಿತು. ಆದರೆ ಮುಂದಿನ ಸಾಧನೆಯನ್ನು ನಡೆಸುವ ಅಂದವನ್ನು ತಿಳಿಯದೆ, ತನ್ನಂತೆ ಚಿಂತೆಯಲ್ಲಿರುವ ಪ್ರೀತಿಯ ವಲ್ಲಭೆಯನ್ನು ಕೇಳಿದನು. ಅವಳು ಸ್ವಲ್ಪ ಹೊತ್ತು ಆಲೋಚಿಸಿ, ವೆಂಕಟಪತಿ ಆಚಾರ್ಯರನ್ನು ಹಿಡಿದರೆ ಕೆಲಸ ಕೈಗೂಡವದೆಂದು ಸೂಚಿಸಿ ದಳು. ಕಾಂತೆಯು ಸೂಚನೆಯನ್ನನುಸರಿಸಿ, ಆ ಬಡ ಬ್ರಾಹ್ಮಣನು ವೆಂಕಟ ಪತಿ ಆಚಾರ್ಯನ ಮನೆಯ ಕಡೆಗೆ ಹೋದನು. ಆದರೆ ಅವನು ಎಲ್ಲಿಗೋ ಹೊರಟು ಹೋಗಿರುವನೆಂದು ತಿಳಿದು ಅಲ್ಲಿಂದ ಹೊರಬಿದ್ದನು.

ಚಿಂತೆಯೂ ಅವಸರವೂ ನಾಚಿಕೆಯೂ ಅತ್ಯಧಿಕವಾದರೆ ಬುದ್ಧಿಯ ಬಲವೇ ಕುಂದಿಹೋಗಿ ಯಾವ ಸಮಯದಲ್ಲಿ ಯಾವ ಕೃತ್ಯವನ್ನು ಮಾಡ ಬೇಕೆಂಬ ಜ್ಞಾನಶೂನ್ಯವಾಗಿ ಮನಸ್ಸಿನಲ್ಲಿ ವಿಕಲ್ಪವೂ ಚಂಚಲವೂ ಭಯವೂ ನೆಲೆಗೊಂಡು, ಕಾರ್ಯಸಾಧನೆಗೆ ವಿಘ್ನವುಂಟಾಗುವ ಅವಸ್ಥೆಯು ವೇದ ವ್ಯಾಸ ಉಪಾಧ್ಯನಂತೆ ಕಂಗೆಟ್ಟ ಜನರಿಗೆ ಬರುವದುಂಟು. ಈ ದೆಸೆಯಿಂದ ವಿವೇಕವೈಕಲ್ಯ ಹೊಂದಿದ ಆ ಬಡವನು ಸಮಯ ಕಳೆದರೆ ತನ್ನ ಉದ್ಯೋ ಗಕ್ಕೆ ಇನ್ನೊಬ್ಬನು ನೇಮಕವಾಗಿ ತನ್ನ ಪ್ರಯತ್ನ ವ್ಯರ್ಥವಾಗುವದೆಂಬ ಹೆದರಿಕೆಯಿಂದ ನೆಟ್ಟಗೆ ಮಠಕ್ಕೆ ಹೋಗಿ ಚಂಚಲನೇತ್ರರಿಗೆ ವಂದಿಸಿ ನಿಂತು ಕೊಂಡನು. ಮತ್ತು ಸರ್ವ ಅಪರಾಧಗಳನ್ನು ಕ್ಷಮಿಸಿ, ತನ್ನ ಬಡತನದ

ಕಡೆಗೆ ಲಕ್ಷ್ಯವಿಟ್ಟು ಜೀವನೋಪಾಯವನ್ನು ಪುನಃ ಅನುಗ್ರಹಿಸಬೇಕೆಂದು ವಿನಯದಿಂದ ಬೇಡಿಕೊಂಡನು.

"ನಿನ್ನ ಬಡತನದ ಪರಿಮಾಣಕ್ಕೆ ಮೀರುವ ಅಹಂಕಾರವೂ ಸಿಟ್ಟೂ ನಿನ್ನ ವೃದ್ಧಿಯ ಶತ್ರುಗಳು. ಈ ಶತ್ರುಗಳನ್ನು ಜಯಿಸಲಿಕ್ಕೆ ನಿರುದ್ಯೋಗ ಮತ್ತು ಅನ್ನ ಪ್ರಮುಷ್ಟತೆಯೇ ಮುಖ್ಯವಾದ ಆಯುಧಗಳು. ನಮ್ಮ ವಚನವು ಸತ್ಯವೋ ಹ್ಯಾಗೆಂದು ನೀನು ಕೆಲವು ದಿವಸ ಪರೀಕ್ಷೆಮಾಡಿ ನೋಡಿದರೆ ಗೊತ್ತಾಗುವುದು. ನಮ್ಮ ಮಠದಲ್ಲಿ ನಿನಗೆ ಇರುತ್ತಿದ್ದ ಸಣ್ಣ ಉದ್ಯೋಗವನ್ನು ನೀನಾಗಿಯೇ ಬಿಟ್ಟು ಹೋದಿಯಲ್ಲ. ಬಾಯಿಯಿಂದ ಬಿಸಾಡಿದ ಎಂಜಲನ್ನವನ್ನು ಪುನಃ ಬಯಸುವಿಯಾ? ನೀನು ಕಡು ಮೂರ್ಖನೇ ಸರಿ. ನಮ್ಮ ಮಠದಲ್ಲಿ ಇರಲಿಕ್ಕೆ ಯೋಗ್ಯನಲ್ಲ. ನಮ್ಮ ಕಣ್ಣ ಮುಂದೆ ನಿಲ್ಲದೆ ಬೇಗನೇ ತೊಲಗು" ಎಂದು ಶ್ರೀಪಾದಂಗಳವರು ಕಟ್ಟಾಜ್ಞೆ ಮಾಡಿದರು.

ವೇದವ್ಯಾಸ ಉಪಾಧ್ಯನ ಮುಖ ಕಪ್ಪಾಯಿತು, ಕಣ್ಣಲ್ಲಿ ನೀರು ಬಂತು. ಅವಸರದಿಂದ ಅಪಜಯವಾಯಿತೆಂಬ ತಿಳುವಳಿಕೆಯು ಹುಟ್ಟಿತು. ಹಾಗೆಯೇ ಅವನು ಮಠದಿಂದ ಹೊರಟು, ಪುನಃ ವೆಂಕಟಪತಿ ಆಚಾರ್ಯನನ್ನು ಹುಡುಕಾಡುತ್ತಾ ಹೋದಾಗಲೂ ಆಚಾರ್ಯನು ಮನೆಯಲ್ಲಿ ಸಿಕ್ಕಲಿಲ್ಲ. ಯಾವಲ್ಲಿ ಹೋದನೆಂಬ ನಿರೀಕ್ಷೆಯಿಂದ ಕಾದು ಕೂತು ಸಾಕಾಯಿತು. ಮನೆಯಿಂದ ಹೊರಟ ಮುಹೂರ್ತವೇ ಒಳ್ಳೆದಲ್ಲವಾದ ಕಾರಣ ಅಪಜಯ ವಾಯಿತು. ಇನ್ನೊಮ್ಮೆ ನೋಡೋಣ, ಈಗ ಮನೆಗೆ ಹೋಗುವದೇ ಒಳ್ಳಿ ತೆಂದು ಬಂದುಬಿಟ್ಟನು.

ಹೆಂಡತಿಯು ಗಂಡನ ಮುಖದ ಮೇಲೆ ವ್ಯಾಪಿಸಿದ ಅಪಜಯ ಪ್ರದರ್ಶಕವರ್ಣವನ್ನು ನೋಡಿ, ಸ್ವಲ್ಪಹೊತ್ತು ಮಾತಾಡದೆ ಸುಮ್ಮನಾದಳು. ವೇದವ್ಯಾಸ ಉಪಾಧ್ಯನು ನಿಟ್ಟುಸಿರುಬಿಡುತ್ತಾ, ಜಗಲಿಯ ಮೇಲೆ ಕೂತು, ಚಿಂತಾಕ್ರಾಂತನಾಗಿರುವುದನ್ನು ಈಕ್ಷಿಸುವ ಅವನ ವಲ್ಲಭೆಯು ಮೃದುಸ್ವರ ದಿಂದ ಗಂಡನನ್ನು ಮಾತನಾಡಿಸಿ, ನಡೆದ ವೃತ್ತಾಂತವನ್ನು ಕೇಳಿದ ಬಳಿಕ ತಾವಿಬ್ಬರೂ ಅದೃಷ್ಟಹೀನರಾದ ದೆಸೆಯಿಂದ ಪ್ರಾಪ್ತವಾದ ದುರವಸ್ಥೆಯ ಕುರಿತು ದುಃಖಪಟ್ಟು ಪ್ರಯೋಜನವಿಲ್ಲ. ಸೃಷ್ಟಿಯಲ್ಲಿ ಸರ್ವಜೀವಿಗಳನ್ನು ಆಹಾರಪಾನಾದಿಗಳಿಂದ ಪಾಲಿಸುವ ಪರಮಾತ್ಮನು ಅವನನ್ನು ನಿರಂತರ

ಭಕ್ತಿಯಿಂದ ಧ್ಯಾನಿಸುವವರ್ಯಾರನ್ನೂ ಮರೆಯುವದಿಲ್ಲ. ಅವನನ್ನೇ ಎಡೆಬಿಡದೆ ಪೂಜನಾದಿ ಉಪಚಾರಗಳಿಂದ ಸಂತೋಷಪಡಿಸಿ, ಅವನ ದಯವನ್ನು ಗಳಿಸುವ ಸುಮಾರ್ಗವನ್ನು ಸೂಚಿಸಿದಾಗ ತನ್ನ ಅರ್ಧಾಂಗಿಯ ಸೂಚನೆಯನ್ನು ಅನುವರ್ತಿಸಿ, ವೇದವ್ಯಾಸ ಉಪಾಧ್ಯನು ಅಂದಿನಿಂದ ನಿತ್ಯವೂ ದೇವರ ಧ್ಯಾನವನ್ನು ಮಾಡುವುದರಲ್ಲಿ ನಿರತನಾದನು.

ವೇದವ್ಯಾಸ ಉಪಾಧ್ಯನು ಪುರಾಣಹೇಳುವ ವೃತ್ತಿಯನ್ನು ಬಿಟ್ಟು ಹೋದನೆಂಬ ವಾರ್ತೆಯು ಊರಲ್ಲೆಲ್ಲ ಹಬ್ಬಿ, ಅವನ ಉದ್ಯೋಗ ತನಗಾಗ ಬೇಕು, ತನಗಾಗಬೇಕೆಂದು ಹಲವು ಯೋಗ್ಯ ಉಮೇದ್ವಾರರು ಶ್ರೀಪಾದಂಗಳವರ ಆಪ್ತರನ್ನು ಆಶ್ರಯಿಸಲಿಕ್ಕೆ ಪ್ರಾರಂಭಿಸಿದರು. ಕೆಲವರು ಮಧ್ಯಸ್ಥರನ್ನು ಅರಿಸದೆ ತಾವಾಗಿಯೇ ಶ್ರೀಪಾದಂಗಳ ಭೇಟಿಯನ್ನು ಮಾಡಿ, ತಮ್ಮ ಆಶೆಯನ್ನು ತಿಳಿಸಿದಾಗ, ಈಗ ಅವಸರಮಾಡಬೇಡಿ; ಚನ್ನಾಗಿ ಆಲೋಚನೆ ಮಾಡಿ ತಕ್ಕ ಪುರಾಣಿಕನನ್ನು ಆರಿಸಲಿಕ್ಕೆ ಸಮಯ ಬೇಕಾಗಿದೆ. ಆ ಉದ್ಯೋಗದಮೇಲೆ ಅಪೇಕ್ಷೆಯಿರುವವರ ಮನವಿಗಳನ್ನೆಲ್ಲಾ ನಿಧಾನವಾಗಿ ಮನಸ್ಸಿಗೆ ತಕ್ಕೊಂಡು ಉತ್ತರ ಕೊಡುವದಾಗಿಯೂ ನಿಷ್ಕರ್ಷೆಯಾಯಿತು. ತನ್ಮಧ್ಯ ಪುರಾಣಪಠಣವು ಲೋಪವಾಗದ ಹಾಗೆ ಮಠದಲ್ಲಿ ಇರುವ ಪ್ರಾಜ್ಞರೊಳಗೆ ಮುದ್ದಣ್ಣಾಚಾರ್ಯನನ್ನು ತತ್ಕಾಲಕ್ಕೆ ಮಾತ್ರ ನೇಮಿಸೋಣಾಯಿತು.

ಮುದ್ದಣ್ಣಾಚಾರ್ಯನು ಸಂಸ್ಕೃತದಲ್ಲಿ ಚೆನ್ನಾಗಿ ಪರಿಶ್ರಮ ಉಳ್ಳವನೇ. ತಕ್ಕಮಟ್ಟಿಗೆ ಅಹಂಕಾರದಲ್ಲಿಯೂ ಕಡಿಮೆಯವನಲ್ಲ. ನಡುಪ್ರಾಯದವನಾಗಿ ಒಳ್ಳೇ ರೂಪವಂತನೂ ಹೌದು. ಆದರೆ ಸ್ವಲ್ಪ ಉಗ್ಗುಮಾತಿನವನಾಗಿ ಸರ್ವಜನರ ಹಾಸ್ಯಕ್ಕೆ ಗುರಿಯಾಗುವ ದುರದೃಷ್ಟವಂತನು. ಈ ಅವಗುಣ ಹ್ಯಾಗೂ ಇರಲಿ. ವಾಗ್ದೇವಿಯ ಕುರಿತು ತಾನು ಮನಸ್ಸಿನಲ್ಲಿ ಮಾಡಿರುವ ಸಂಕಲ್ಪವು ಈಡೇರುವ ಪರಿಯಂತರ ಬೇರೆ ಯಾವ ಕಾರ್ಯಕ್ಕೂ ಮನಸ್ಸು ಹತ್ತಲಿಕ್ಕೆ ಸಮ್ಮತಿಸದಿರುವ ಕಾರಣದಿಂದ ಯತಿಗಳು ಬೇರೆ ವಿಷಯಗಳ ತೀರ್ಮಾನವನ್ನು ಮುಂದರಿಸಿಟ್ಟರು. ವೆಂಕಟಪತಿ ಆಚಾರ್ಯನು ವಾಗ್ದೇವಿಯನ್ನು ಮಠಕ್ಕೆ ಕರತರುವ ದೊಡ್ಡ ಕಾರ್ಯದಲ್ಲಿ ಅಮರಿರುವ ಕಾರಣದಿಂದ ಅವನನ್ನು ಕೇಳದೆ ಯಾರೊಬ್ಬನನ್ನು ಪುರಾಣಿಕನಾಗಿ ಸ್ಥಿರವಾಗಿ ನೇಮಿಸಲಿಕ್ಕೆ ಮನ ಒಡಂಬಡದೆ ಶ್ರೀಪಾದಂಗಳವರು ಮಾಡಿದ ನೇಮಕವು ಪುರಾಣ

ಕೇಳಲಿಕ್ಕೆ ಒಟ್ಟು ಕೂಡುವ ಜನಸ್ತೋಮಕ್ಕೆ ವಿನೋದಕಾರಕವಾಯಿತು.

## ಒಂಭತ್ತು

"ಅಮ್ಮಾ! ವೆಂಕಟಪತಿ ಆಚಾರ್ಯರು ದೊಳ್ಳಾಡಿಸಿಕೊಂಡು ಬರುತ್ತಾರೆ; ಏನಲ್ಲ ಚವಡಿಮಾಡಿ ಶ್ರೀಪಾದಂಗಳವರ ಮನಸ್ಸೇ ತಿರುಗಿಸಿಬಿಟ್ಟರೋ ಎಂಬ ಸಂಶಯ ವ್ಯರ್ಥವಾಗಿ ತಾಳಿದೆವಲ್ಲ" ಎಂದು ವಾಗ್ದೇವಿಯು ಹೇಳುವದನ್ನು ಕೇಳಿ ಭಾಗೀರಥಿಯು ಬಾಗಿಲಲ್ಲಿ ನಿಂತು ನೋಡಲು, ವೆಂಕಟಪತಿಯು ಮೆಲ್ಲಮೆಲ್ಲಗೆ ಅಡಿ ಇಡುತ್ತಾ ಬರುವದನ್ನು ಕಂಡು "ಆಚಾರ್ಯರೇ! ದ್ವಾದಶಿ ಜೋರಾಯಿತೇ? ಅತಿ ಮಂದಗಮನಕ್ಕೆ ಕಾರಣವೇನೋ ತಿಳಿಯದು" ಎಂದಳು.

"ಅಮ್ಮಾ! ಮಸ್ಕಿರಿಮಾಡುತ್ತೀರೇನು? ಮೊದಲೇ ದ್ವಾದಶಿ; ಆ ಮೇಲೆ ಸ್ವಲ್ಪವಾದರೂ ವಿಶ್ರಾಂತಿತಕ್ಕೊಳ್ಳದೆ ಉಂಡೊಡನೆ ಎದ್ದು ಬಂದು ಬಿಟ್ಟೆ; ಬಾಲಾರ್ಕನ ಪ್ರಭೆಯು ತಲೆಯ ಮೇಲೆ ಬೀಳುವದು. ಎಂಥಾ ಯವ್ವನಸ್ಥನಾದರೂ ಸೋಥೋಗನೇ! ನನ್ನ ಬಿಸಾತೇನದೆ?" ಎನ್ನುತ್ತಾ ಆಚಾರ್ಯನು ಒಳಗೆ ಬಂದನು.

ಆಗಲೇ ವಾಗ್ದೇವಿಯು ಆಚಾರ್ಯನ ಕಾಲುಮುಟ್ಟಿ ನಮಸ್ಕಾರ ಮಾಡಿ ಕೈಕಾಲು ತೊಳಿಯಲಿಕ್ಕೆ ನೀರು ಕೊಟ್ಟಬಳಿಕ ಅವನನ್ನು ಒಂದು ಚೌಕದ ದೊಡ್ಡಮಣೆಯ ಮೇಲೆ ಕುಳ್ಳಿರಿಸಿಕೊಂಡು, ಅತೀ ಸಮೀಪದಲ್ಲಿ ತಾನೂ ಕೂತುಕೊಂಡು, ಏಲಕ್ಕಿ, ಪಚ್ಚೆಕರ್ಪೂರ, ಕುಂಕುಮಕೇಸರಿ ಮಿಶ್ರ ಮಾಡಿದ ತಿಳೀ ಸಕ್ರೆ ಪಾನಕವನ್ನು ಆಚಾರ್ಯಗೆ ಹೊಟ್ಟೆತುಂಬಾ ಕುಡಿಸಿದಳು. ಎಳೆಬಿಸಿಲಿಗೆ ನಡಕೊಂಡು ಬಂದ ವೆಂಕಟಪತಿಗೆ ವಾಗ್ದೇವಿಯು ಕೊಟ್ಟ ಪಾನಕವು ಅತಿಹಿತವಾಯಿತು. ತದುಪರಿ ಚಿಗುರು ವೀಳ್ಯದೆಲೆಗಳನ್ನು ನಾರು ತೆಗೆದು ಕರ್ಪೂರ ಚೂರ್ಣಯುಕ್ತವಾದ ಸುಣ್ಣವನ್ನು ಹಚ್ಚಿ ವಾಗ್ದೇವಿಯು ಆಚಾರ್ಯನಿಗೆ ಒಂದು ತಾಂಬೂಲ ಚರ್ವಣವನ್ನು ಕೋಮಲವಾದ ತನ್ನ ಕೈಯಿಂದ ಮಾಡಿಸಲು ಸ್ವರ್ಗ ಮರ್ತ್ಯ ಪಾತಾಳವೆಂಬ ಈ ಮೂರು ಲೋಕಗಳೊಳಗೆ ಯಾವದರಲ್ಲಿ ತಾನು ವಾಸಿಸಿಕೊಂಡಿರುತ್ತೇನೆಂಬುದು ಆತನಿಗೆ ತಿಳಿಯದೆ ಹೋಯಿತು.

ರವಷ್ಟುಸಮಯ ವಿಶ್ರಮಿಸಿಕೊಂಡು ವೆಂಕಟಪತಿಯು ತಾನು ಬಂದ

ಮುಖ್ಯ ಉದ್ದೇಶವನ್ನು ಬೇಗನೇ ನೆರವೇರಿಸಬೇಕೆಂಬ ಆತುರವನ್ನು ತೋರಿಸಿಕೊಂಡನು. ವಾಗ್ದೇವಿಯು ಇನ್ನೊಮ್ಮೆ ತಾಂಬೂಲಚರ್ವಣವಾಗ ಬೇಕೆಂದು ಹಟಹಿಡಿದು ಅವನನ್ನು ಸಂತೋಷಪಡಿಸಿದಳು. ಎರಡಾವರ್ತಿ ತಾಂಬೂಲಾದಿಗಳಿಂದ ತೃಪ್ತಿಹೊಂದಿದ ವೆಂಕಟಪತಿ ಆಚಾರ್ಯನು "ಇನ್ನು ಮಠಕ್ಕೆ ಹೋಗುವಾ ನಡಿ" ಎಂದು ಭಾಗೀರಥಿ ಕೂಡೆ ಹೇಳಲಾಗಿ "ಏನೇ ವಾಗ್ದೇವಿ. ಆಚಾರ್ಯರು ಏನು ಹೇಳುತ್ತಾರೆ ಕೇಳು" ಎಂದಳು.

"ಆಚಾರ್ಯರು ಹೇಳಿದ ಹಾಗೆ ಕುಣಿದರೆ ನಾಳೆ ಎರಡು ಕೈಯಿಂದ ಉಣ್ಣಬೇಕಾಗುವುದು; ಆಚಾರ್ಯರಿಗೆ ಸಕ್ಕರೆಪಾನಕದ ತಂಪಿನಿಂದ ಮರವೆ ಹೆಚ್ಚಾಯಿತೆಂದು" ವಾಗ್ದೇವಿಯು ಉತ್ತರಕೊಟ್ಟಳು.

"ನಾನು ಯಾವುದೂ ಮರೆಯಲಿಲ್ಲ, ಬೇಕಾದಷ್ಟು ಭಂಡಿಗಳನ್ನು ಸಿದ್ಧಪಡಿಸಿರುವೆನು" ಎಂದು ಆಚಾರ್ಯನು ಪ್ರತ್ಯುತ್ತರಕೊಟ್ಟನು.

"ಆಚಾರ್ಯರೇ, ನಿಜವಾಗಿ ನಿಮಗೆ ಮರವೆ ಹೆಚ್ಚಾಗಿದೆ. ಇಲ್ಲವೇ ಇನ್ನೂ ರಕ್ಷುವಮಾಡುತ್ತೀರಿ; ನನ್ನ ಮುಖ್ಯವಾದ ಪ್ರಶ್ನೆಯ ಉತ್ತರವು ಮುಂದಾಗಿ ದೊರೆಯದೆ ಮನೆಯಿಂದ ಹೊರಡಲಿಕ್ಕೆ ನಾನು ಹುಚ್ಚಳಲ್ಲ" ಎಂದು ವಾಗ್ದೇವಿಯು ನಗುತ್ತ ಹೇಳಿದಳು.

ಆಚಾರ್ಯನು ಆ ಪ್ರಶ್ನೆ ಯಾವುದೆಂಬದು ತನಗೆ ತಿಳಿಯದೆ ವಿಸ್ಮಯ ಪಡುವವನಂತೆ ಅವಳ ಮುಖವನ್ನೆ ನೋಡಿಕೊಂಡಿರುವಾಗ ವಾಗ್ದೇವಿಯು ಸಿಟ್ಟಿನಿಂದ ಮುಖವನ್ನುಬ್ಬಿಸಿಕೊಂಡು ಥಟ್ಟನೆ ಆಚಾರ್ಯನಿಗೆ ಬೆನ್ನುಹಾಕಿ ಒಳಗೆ ನಡೆದುಬಿಟ್ಟಳು- "ಏನೇ! ಸಿಟ್ಟು ನೀನು ಗುತ್ತಿಗೆ ವಹಿಸಿಕೊಂಡಿದ್ದೀಯಾ? ಮರವೆಗೆ ಬಂದ ಮಾತು ಯಾವುದು? ಏನು ತಾನು ಎಂದು ವಿಚಾರಿಸಿಕೊಳ್ಳುವ ಮೊದಲೇ ನಿನಗೆ ರೇಗಿತೇ? ಈ ನಿನ್ನ ಶುಂಠ ಬುದ್ಧಿಯಿಂದ ಮುಂದೆ ಚೆನ್ನಾಗಿ ಬದುಕಿಕೊಂಡಿರಬಹುದು" ಎಂದು ಭಾಗೀರಥಿಯು ಮಗಳಿಗೆ ಗದರಿಸಿದಂತೆ ಮಾತನಾಡಿದಳು.

ಮರವೆಗೆ ಬಂದ ವಿಷಯ ಯಾವುದೆಂಬುದು ಆಚಾರ್ಯನಿಗೂ ಭಾಗೀರಥಿಗೂ ಜ್ಞಾಪಕವಲ್ಲಿದ್ದರೂ ಅವರಿಬ್ಬರೂ ಏನೂ ಅರಿಯದವರಂತೆ ತೋರಿಸಿಕೊಂಡರು. "ವ್ಯರ್ಥವಾಗಿ ಸಮಯ ಹಾಳಾಗುತ್ತದೆ, ಶ್ರೀಪಾದಂಗಳವರ ಅವಸರಕ್ಕನಕ ಮಿತವೇ ಇಲ್ಲ. ನನ್ನ ಮೇಲೆ ಸಿಟ್ಟುತಾಳುವರೋ ಏನೋ! ಯಾವ ವಿಷಯ ನಿಷ್ಕರ್ಷೆಯಾಗಬೇಕೆಂದು ತಿಳಿಯದೆ ನಾನು ಕಾಡಿನಲ್ಲಿಬಿದ್ದ

ವನಂತಾಗಿದ್ದೇನೆ. ಅಪ್ಪಾ! ನಿಮ್ಮ ಮಗಳಿಗೆ ಕೇಳಿ ನನಗೆ ತಿಳಿಸಿಬಿಟ್ಟರೆ ದೊಡ್ಡ ಉಪಕಾರವಾದೀತು" ಎಂದು ವೆಂಕಟಪತಿ ಆಚಾರ್ಯನು ಹೆಡ್ಡನಂತೆ ನುಡಿಯಲೆಸಗಿದನು.

ಭಾಗೀರಥಿಯು ಸುಮ್ಮಗಾದರೂ ಸಿಡುಮೋರೆಮಾಡಿಕೊಂಡು ಒಳಗೆ ಹೋಗಿ ನಗುತ್ತ ಕುಂತಿರುವ ಮಗಳ ಮುಖವನ್ನು ನೋಡಿ ಗದರಿಸಿದಂತೆ ಯುಕ್ತಿನಡಿಸಿ ಸ್ವಲ್ಪ ಹೊತ್ತಿನಮೇಲೆ ಹೊರಗೆ ಬಂದು, "ಆಚಾರ್ಯರೇ! ತುಟಿಗೆ ಮೀರಿದ ಹಲ್ಲಿಗೆ ಏನುಮಾಡಲಿ" ಎಂದು ಬಿಸುಸುಯ್ಯುವುದನ್ನು ಕಂಡು ವೆಂಕಟಪತಿಯು, "ಅಪ್ಪಾ! ಹಾಗೆಲ್ಲಾ ಹೇಳಲಾಗದು, ಇದು ಕಲಿಯುಗ 'ಅಬ್ ಕಾ ಜಮಾನಾ ಖೋಟಾ, ಬಾಪ ಕುಮಾರ ಬೇಟಾ' ಎಂಬಂತಾಗಿವೆ. ಜಗಳಾಡಲಿಕ್ಕೆ ಮನಸ್ಸು ಕೊಡಬೇಡಿ; ಯಾವ ವಿಷಯದಲ್ಲಿ ಈಗ ಹೆಚ್ಚು ಕಡಮೆಯಾಯಿತೆಂಬ ಸೂಚನೆ ಮಾತ್ರ ಗೊತ್ತಾದರೆ ಚಮತ್ಕಾರದಲ್ಲಿ ಕುಂದೆಲ್ಲಾ ಪರಿಹರಿಸುವೆನು" ಎಂದು ವೆಂಕಟಪತಿಯು ಬಹು ಆತುರದಿಂದ ಕೇಳಿಕೊಂಡಂತೆ ಮಾಡಿದನು. "ಶ್ರೀಪಾದಂಗಳವರು ಪಟ್ಟದ ದೇವರ ಮುಂದೆ ಪ್ರಮಾಣಮಾಡಿ ವಾಗ್ದತ್ತ ಮಾಡಬೇಕೆಂಬ ಹುಚ್ಚು ಅವಳಿಗೆ ಅಂಟಿಕೊಂಡಿದೆ. ಅದು ಸರ್ವಥಾ ಬಿಡಲಿಲ್ಲವಷ್ಟೇ. ಇದಕ್ಕೆ ನಿವೃತ್ತಿ ಹೇಳಿ ನೋಡುವ. ನನ್ನ ಪೂರ್ವಾರ್ಜಿತದಿಂದ ಇಂಥಾ ಮುಗ್ಧೆಯು ನನ್ನ ಬಸುರಲ್ಲಿ ಬಂದಳಲ್ಲಾ" ಎಂದು ಭಾಗೀರಥಿಯು ತನ್ನ ಕಪಾಲವನ್ನು ಕೈಗಳಿಂದ ಬಡ ಕೊಂಡಳು.

"ಅಪ್ಪಾ! ಅಪ್ಪಾ! ಹಾಗೇನೂ ಮಾಡಬೇಡಿ. ಆ ಪ್ರಶ್ನೆಯನ್ನು ಮರಿ ಯಲಿಲ್ಲ; ಅದರ ಪ್ರಸ್ತಾಪವನ್ನು ಶ್ರೀಪಾದಂಗಳವರ ಕೂಡೆ ಮಾಡಿದ್ದೇನೆ. ಹೆಚ್ಚು ಸಮಯ ಚರ್ಚೆಮಾಡಿ ಅವರ ಒಪ್ಪಿಗೆಯನ್ನು ಪಡಕೊಂಡಿರುತ್ತೇನೆ. ಪರಂತು ಅದರ ಪಸ್ತಾಪ ಈ ಹೊತ್ತು ಮಾತ್ರ ಮರೆತು ಹೋಯಿತು. ಇನ್ನಾದರೂ ವಾಗ್ದೇವಿಗೆ ಸಮಾಧಾನಮಾಡಿ ಬೇಗನೆ ಹೊರಡುವಂತೆ ಮಾಡಿ" ಎಂದು ವೆಂಕಟಪತಿಯು ಭಾಗೀರಥಿಯ ಕೂಡೆ ಹೇಳಿದನು.

ಆಗಲೇ ಭಾಗೀರಥಿಯು ಗಾಳಿಯಂತೆ ತವಕದಿಂದ ಒಳಗೆ ಹೋಗಿ "ಜಗಳಗಂಟೀ! ಬೇಗಬಾ. ನಿನ್ನ ಪ್ರಶ್ನೆಯನ್ನು ಆಚಾರ್ಯರು ಮರಿಯಲಿಲ್ಲ" ಎಂಬೋಣ, ವಾಗ್ದೇವಿಯು ನೆಗಾಡುತ್ತಾ ಹೊರಗೆ ಬಂದಳು. ಮತ್ತು ಆಚಾರ್ಯನಮೇಲೆ ಸಿಟ್ಟುತಾಳಿದ್ದಕ್ಕಾಗಿ ಪಶ್ಚಾತ್ತಾಪಪಟ್ಟಿರುವೆನೆಂದು ಕ್ಷಮೆ

ಯನ್ನು ಬೇಡಿಕೊಂಡಳು. "ವಾಗ್ದೇವಿ! ಇನ್ನು ಮುಂದೆ ನೀನೇ ನನ್ನ ಒಡತಿ ಯಲ್ಲವೇ! ನಿನ್ನ ಚಿತ್ತದ ಮೇಲೆ ನನ್ನ ಅನ್ನವೇ ಹೊಂದಿಕೊಂಡಿರುವಕಾರಣ ನೀನು ನನ್ನಲ್ಲಿ ಕ್ಷಮೆ ಕೇಳುವುದಕ್ಕಿಂತಲೂ ನಾನು ನಿನ್ನ ಮುನಿಸಿನಿಂದ ವಿಮುಕ್ತನಾಗುವುದೇ ನನ್ನ ಮುಂಜಾಗ್ರತೆಯಾಗಿರಬೇಕು. ಬಡವರ ಮೇಲೆ ಪರಿಪೂರ್ಣವಾಗಿ ಅನುಗ್ರಹವನ್ನಿಟ್ಟು ಅವರ ಕೃತಜ್ಞತೆಗೆ ಪಾತ್ರಳಾದರೆ ನಿನಗೆ ದೇವರು ನಿರಂತರವಾಗಿ ರಕ್ಷಿಸುವನು. ಇನ್ನು ತಾಮಸಮಾಡುವದು ಯುಕ್ತವಲ್ಲ. ಸರ್ವರೂ ಬಂಡಿಯನ್ನೇರುವುದಕ್ಕೆ ಸಿದ್ಧರಾಗಬೇಕು." ಹೀಗೆಂದು ವೆಂಕಟಪತಿ ಆಚಾರ್ಯನು ಹೇಳಿದೊಡನೆ ಸಣ್ಣ ಬುದ್ಧಿಯಿಂದ ತಾನು ಮಾಡಿದ ಎಷ್ಟು ಅಪರಾಧಗಳಿದ್ದರೂ ಮರೆತು ಬಿಡಬೇಕಾಗಿ ವಾಗ್ದೇವಿಯು ಆಚಾರ್ಯನ ಎರಡುಕಾಲುಗಳನ್ನು ಬಿಗಿದಪ್ಪಿ ತನ್ನ ಕಡೆಗಣ್ಣ ನೋಟದಿಂದ ಅವನ ಹೃದಯವನ್ನು ಮೃದುಮಾಡಿದಳು.

ಮಠಾಭಿಮುಖ ಪ್ರಯಾಣಕ್ಕೆ ಪ್ರಾರಂಭವಾಯಿತು. ಮೊದಲು ಸಾಮಾನೆಲ್ಲಾ ಬಂಡಿಗಳ ಮೇಲೆ ಇಡಲ್ಪಟ್ಟಿತು. ತರುವಾಯ ಒಳ್ಳೇ ಎತ್ತು ಗಳನ್ನು ಜೋಡಿಸಿರುವ ಜಟ್ಕಾಬಂಡಿಯಲ್ಲಿ ಭಾಗೀರಥಿ, ವಾಗ್ದೇವಿ ಗಂಡಸರ ಸಮೇತ ಕೂತುಕೊಂಡರು. ವೆಂಕಟಪತಿ ಆಚಾರ್ಯನು ಅದೇ ಬಂಡಿಯಲ್ಲಿ ಮುಹೂರ್ತವಾಗಬೇಕೆಂದು ಅಪೇಕ್ಷಿಸಿದರೂ ಅವನು ಒಪ್ಪದೆ ಪಾದಚಾರಿ ಯಾಗಿ ಸಾಮಾನು ಬಂಡಿಗಳ ಸಂಗಡ ಮುಂದಿನಿಂದ ಹೋದನು.

## ಹತ್ತು

ವಾಗ್ದೇವಿಯ ಮನೆಯಿಂದ ಚಂಚಲನೇತ್ರರ ಮಠಕ್ಕೆ ಹೆಚ್ಚು ದೂರ ವಿರಲಿಲ್ಲ. ಹೆಚ್ಚು ಕಡಿಮೆ ಒಂದುವರೆ ಹರದಾರಿಯೆನ್ನಬಹುದು. ಚಂಚಲ ನೇತ್ರರು ವಾಗ್ದೇವಿಯ ಬರುವಿಕೆಯನ್ನು ಕಾಯುತ್ತಾ, ಒಮ್ಮೆ ಆ ಗವಾಕ್ಷದಿಂದ ಒಮ್ಮೆ ಈ ಗವಾಕ್ಷದಿಂದ ಬೀದಿಕಡೆಗೆ ನೋಡುತ್ತಾ, ಬೀದಿಯಲ್ಲಿ ಯಾರನ್ನೂ ಕಾಣದೆ ಖಿನ್ನರಾಗಿ ತಮ್ಮ ಕೋಣೆಗೆ ತಿರುಗಿ ಒಂದು ರವಷ್ಟು ತಡೆದು ಪುನಃ ಹಾಗೆಯೇ ಗವಾಕ್ಷಗಳ ಬಳಿಗೆ ಹೋಗಿ ಸಮಯವನ್ನು ಕಳೆದು ಸಿಟ್ಟನಿಂದ. "ವೆಂಕಟಪತಿಗೆ ದಾರಿಯಲ್ಲಿ ಹುಲಿಹಿಡಿಯಲಿಲ್ಲವಷ್ಟೇ" ಎಂಬ ಅನುಮಾನದ ಮಾತನ್ನು ತಮ್ಮಷ್ಟಕ್ಕೆ ಅಂದುಕೊಂಡರು. ಈ ರೀತಿಯಲ್ಲಿ ಚಂಚಲನೇತ್ರರು ಅವಸರಪಟ್ಟು ಸಿಟ್ಟು ತಡೆಯಲಾರದೆ ಎದುರಿಗೆ ಸಿಕ್ಕಿದ ಸೇವಕರಿಗೆಲ್ಲಾ

ಒಂದಲ್ಲ ಒಂದು ನೆವನ ಹುಡುಕಿ ಯದ್ವಾತದ್ವ ಬಯ್ಯುತ್ತಾ ಕೋಲಿನಿಂದಲೂ ಕೈಯಿಂದಲೂ ಹೊಡಿಯುತ್ತಾ ಕಾಲಿನಿಂದ ಒದೆಯುತ್ತ ಪಿತ್ತೋದ್ರೇಕದಿಂದ ಬುದ್ಧಿ ಭ್ರಂಶವಾದವರಂತೆ ಮಾಡುವ ಚರ್ಯೆಗಳು ಕೆಲವರಿಗೆ ವಿನೋದ ಕರವಾದವು ಬೇರೆ ಕೆಲವರಿಗೆ ನೋವು ಉಂಟುಮಾಡಿದುವು; ಒಟ್ಟಿನ ಮೇಲೆ ಈ ಸನ್ಯಾಸಿಗೆ ಒಂದು ಕೆಟ್ಟಕಾಲವು ಸಮೀಪಿಸಿದ ಹಾಗೆ ತೋರುವದಾಗಿ ಕೆಲವು ವೃದ್ಧ ನೌಕರರು ಪ್ರಕಟವಾಗಿ ಹೇಳಲಾರಂಭಿಸಿದರು.

ಕೆಪ್ಪಮಾಣಿಯು ಏನೂ ತಿಳಿಯದವನ ಹಾಗೆ ಅತ್ತಿತ್ತ ನೋಡುತ ಫಕ್ಕನೆ ಒಂದು ಗವಾಕ್ಷದಿಂದ ನೋಡಿ ಬೀದಿಯಲ್ಲಿ ಏನೋ ವಿಶೇಷವಿದೆ ಎಂಬ ತಿಳುವಳಿಕೆ ಹುಟ್ಟುವ ರೀತಿಯಲ್ಲಿ ಹಾಸ್ಯ ವದನವನ್ನು ಮಾಡಿದನು ಚಂಚಲನೇತ್ರರು ಅದೇ ಗವಾಕ್ಷದ ಎಡೆಗಳಿಂದ ಈಕ್ಷಿಸಿದರೂ ಸಾಮಾನು ಗಳು ತುಂಬಿದ ಬಂಡಿಗಳ ಸಂಗಡ ವೆಂಕಟಪತಿ ಆಚಾರ್ಯನು ಬರುವದು ತೋರಿಬಂತು. ಸ್ವಲ್ಪಹಿಂದೆ ನಾರಟುಬಂಡಿಯಲ್ಲಿ ಪೌರ್ಣಿಮಿ ಚಂದ್ರನಂತೆ ಮುಖವುಳ್ಳ ಹಸನ್ಮುಖಿ ವಾಗ್ದೇವಿಯು ತನ್ನ ಹೆತ್ತವರ ಮತ್ತು ಗಂಡನ ಒಟ್ಟಿನಲ್ಲಿ ಕೂತುಕೊಂಡಿರುವುದು ಯತಿಗಳ ಕಣ್ಣಿಗೆ ಬಿತ್ತು. ಆಗಲೆ ಅವರಿಗೆ ಉಂಟಾದ ಹರುಷವು ಇನ್ನೆಷ್ಟೆಂದು ಹೇಳಬಹುದು! "ವಾಗ್ದೇವಿ ಬಂದಳು ದಗಡಿ" ಎಂದು ಘಟ್ಟಿಯಾಗಿ ಉಚ್ಚರಿಸುತ್ತ ಉಕ್ಕಿ ಬರುವ ಸಂತೋಷವನ್ನು ತಡಕೊಳ್ಳಲಾರದೆ ಧೊಪ್ಪನೆ ನೆಲದಮೇಲೆ ಬಿದ್ದು ಹೊರಳಿದರು.

ಕೆಪ್ಪಮಾಣಿಯು ತನ್ನ ಧನಿಗಳ ಹುಚ್ಚುತನವನ್ನು ಕಂಡು ತುಸು ನಕ್ಕನು. ಅದು ಚಂಚಲನೇತ್ರರ ದೃಷ್ಟಿಗೆಬಿತ್ತು. ಅವರು ಈಗಲೇ ಸಿಟ್ಟಿನಿಂದ ಎದ್ದು ಛಡಿಯಿಂದ 'ಛಟಛಟ' ಬೆನ್ನಿನಮೇಲೆ ಅಸಂಖ್ಯಾತ ಏಟುಗಳನ್ನು ಕೊಟ್ಟಭರಕ್ಕೆ ಬಡಹುಡುಗನು ಮೂರ್ಛೆಹೊಂದಿದನು. ಸಮೀಪವಿದ್ದ ಬೇರೆ ಸೇವಕನೊಬ್ಬನು ಬೇಗನೇ ಅವನ ಕಣ್ಣುಗಳಿಗೂ ಮುಖಕ್ಕೂ ನೀರನ್ನು ಚಿಮುಕಿಸಿ, ಅವನನ್ನು ಅಲ್ಲಿಂದ ಎತ್ತಿ ಇನ್ನೊಂದು ಠಾವಿನಲ್ಲಿ ಕುಳ್ಳಿರಿಸಿ ಬಹು ಕನಿಕರದಿಂದ ಅವನ ಜಾಗ್ರತೆ ತೆಕ್ಕೊಳ್ಳಲು ಅವನು ಚೇತರಿಸಿ ತನ ಗಾದಶಿಕ್ಷೆಯ ಜ್ಞಾಪಕದಿಂದ ಕಣ್ಣೀರಿಡುತ್ತ ಒಂದು ಮೂಲೆಯಲ್ಲಿ ಕೂತನು. ಮಠದಲ್ಲಿರುವ ಹಲವರು ಹೆಚ್ಚು ಪಶ್ಚಾತ್ತಾಪಪಟ್ಟು ಯತಿಗಳ ಚಿತ್ತವೇ ಇತ್ತಲಾಗೆ ಭೇದವಾದ ಕಾರಣವೇನೆಂದು ತಿಳಿಯದೆ ಬೆರಗಾಗಿ ಇನ್ನು ಮುಂದೆ ತಮ್ಮ ಸ್ಥಿತಿ ಹ್ಯಾಗೆಲ್ಲಾ ಆಗುವದೋ ಎಂಬ ಅನುಮಾನದಲ್ಲಿ

ಬಿದ್ದರು. ಚಂಚಲನೇತ್ರರ ಮನಸ್ಸಿಗೆ ಅದ್ಯಾವುದೂ ಹೋಗದು. ಅವರ ಚಿತ್ತವು ವೃಥವಾಗಿ ವಾಗ್ದೇವಿಯು ಮೇಲೆ ಬಿದ್ದುಹೋದ ದೆಸೆಯಿಂದ ಅದೊಂದು ವಿಷಯ ತೀರುವ ಮೊದಲು ಇನ್ನೊಂದು ಎಷ್ಟು ದೊಡ್ಡ ಪ್ರಸಕ್ತಿ ಯಾದರೂ ಅವರಿಗೆ ನಾಟದು.

ಸಾಮಾನು ತುಂಬಿದ ಬಂಡಿಗಳ ಎತ್ತುಗಳು ಮೆಲ್ಲಮೆಲ್ಲನೆ ಬರುವುದು ಸಹಜ. ವಾಗ್ದೇವಿಯು ಕೂತುಕೊಂಡಿರುವ ಸಾರಟಿನ ಎತ್ತುಗಳು ಕಾಣ ಲಿಕ್ಕೆ ಪುಷ್ಟಿಯಾಗಿದ್ದರೂ ಸಾರಟು ಮೆಲ್ಲಗೆ ಎಳೆಯುವ ದೆಸೆಯಿಂದ ಚಂಚಲ ನೇತ್ರರ ಅವಸರವು ಹದವಿಗಾರಿತು "ಈ ಕತ್ತೆ ವೆಂಕಟಪತಿಯು ಒಂದೆರಡು ಕಾಸಿನ ಆಸೆಯಿಂದ ಒಂದು ಹಳೇ ಸಾರಟು ಮತ್ತು ಕೆಲಸಕ್ಕೂ ಬೇಡದ ಎತ್ತುಗಳ ಜೋಡಿಯನ್ನು ಎಲ್ಲಿಂದ ದೊರಕಿಸಿಕೊಂಡನೋ ಕಾಣೆ; ತಾನಾ ದರೂ ಒಂದು ಬಂಡಿಯನ್ನೇರಿದನೇ! ದ್ವಾದಶಿಯ ಸವದಿಂದ ಭೀಮನಂತೆ ಅನ್ನದ ಮುಷ್ಟಿಮುದ್ದೆಗಳನ್ನು ನುಂಗಿಬಿಟ್ಟು ಹೊಟ್ಟೆಯನ್ನು ಹರಿವಿಯಂತೆ ಉಬ್ಬಿಸಿಕೊಂಡು ಬಂಗಿ ಮೆದ್ದವನಂತೆ ಬಹುಮೆಲ್ಲಗೆ ನಡಕೊಂಡು ಬರುತ್ತಾ ನಲ್ಲ. ಮುಂದಿನಿಂದ ಬರುವವನ ಚುರುಕುತನವೇ ಹೀಗಾದಮೇಲೆ ಹಿಂದಿನಿಂದ ಬರುವವರ ಸ್ಥಿತಿಯನ್ನು ಕುರಿತು ಮಾತಾಡಿ ಏನುಪ್ರಯೋಜನ? ಇನ್ನೊಂದು ಸಾರಟಾದರೂ ಮಾಡಿ ವಾಗ್ದೇವಿ ಒಬ್ಬಳನ್ನೇ ಕೂರಿಸಿತರಬಹು ದಿತ್ತು. ಹಾಗೂ ಮಾಡದೆ ಅವಳ ಮನೆಯಲ್ಲಿದ್ದ ನಾಯಿ ಬೆಕ್ಕುಗಳನ್ನು ಒಂದೇ ಸಾರಟಿನಲ್ಲಿ ತುರುಬಿಬಿಟ್ಟನೇ ಇಂಥ ಬುದ್ಧಿಹೀನನನ್ನು ಮಠದಲ್ಲಿ ಪಾರುಪತ್ಯಕ್ಕೆ ನೇಮಿಸಿದ ನನ್ನ ಹಲ್ಲುಗಳನ್ನು ಮೊದಲು ಕಳಚಿ ಬಿಡುವವ ರ್‍ಯಾರಿಲ್ಲವಷ್ಟೆ." ಇಂತಹ ನುಡಿಗಳಿಂದ ಹಲವು ಪರಿಯಲ್ಲಿ ಚಂಚಲನೇತ್ರರು ಅವಸರದಿಂದ ಸಿಟ್ಟನ್ನು ಸಹಿಸಕೂಡದೆ ಒಮ್ಮೆ ಒಳಗೆ ಒಮ್ಮೆ ಹೊರಗೆ ಹೋಗುತ್ತ ಬರುತ್ತ ಇರುವುದನ್ನು ಕೆಪ್ಪಮಾಣಿಯು ನೋಡಿ ದಂಡ ಸನ್ಯಾಸಿಯ ಪಕ್ಕೆಯ ಎಲುಬುಗಳನ್ನು ಮುರಿದು ಬಿಡಲೋ ಎಂಬಂತೆ ಕ್ರೋಧವನ್ನು ತಾಳಿಕೊಂಡರೂ ಮುಯ್ಯಿಗೆ ಮುಯ್ಯಿ ತೀರಿಸುವ ಕಾಲವು ಮುಂದೆ ದೊರಕದಿರದೆಂದು ಎಣಿಸಿ ಪೆಟ್ಟಿನ ವೇದನೆಯನ್ನೂ ಆ ಸಂಬಂಧ ಉಂಟಾದ ನಾಚಿಕೆಯನ್ನೂ ಸೈರಿಸಲಾರದೆ ವ್ಯಸನಪಡುತ್ತ ಒಂದು ಮೂಲೆಗೆ ಸೇರಿಕೊಂಡನು.

ಹಾಗೂ ಹೀಗೂ ಸಾಮಾನಿನ ಬಂಡಿಗಳು ಮಠದ ಮುಂಬಾಗಿಲಿನ

ಎಮುರು ನಿಂತವು. ವೆಂಕಟಪತಿ ಆಚಾರ್ಯನು ಅವುಗಳಲ್ಲಿ ಇದ್ದ ಸಾಮಾನು ಗಳನ್ನೆಲ್ಲ ಜೋಕೆಯಿಂದ ಕೆಳಗೆ ಇಳಿಸಿ ನೇಮಿಸಿದ ಕೋಣೆಯಲ್ಲಿ ಇಡುವಂತೆ ಆಯಾ ಸೇವಕರಿಗೆ ಆಜ್ಞಾಪಿಸಿ ನಾರಟುಬಂಡಿಯಲ್ಲಿ ಕುಂತಿರುವ ವಾಗ್ದೇವಿ ಯನ್ನೂ ಅವಳ ಬಳಗವನ್ನೂ ಅವರಿಗೋಸ್ಕರ ಆರಿಸಿರುವ ಕೋಣೆಗಳಲ್ಲಿ ಪ್ರವೇಶ ಮಾಡಿಸಿಬಿಟ್ಟು ಬಿಸಿಲಲ್ಲಿ ಬಳಲಿಬಂದವರಾದ ಕಾರಣ ತೃಷನಿವಾರ ಣಾರ್ಥವಾಗಿ ಉತ್ಕೃಷ್ಟವಾದ ಪಾನಕವನ್ನೂ ಸಕ್ರೆ ಪಂಚಕಜ್ಜಾಯ ಲಾಡು ಚಿರೋಟಿ ಮೊದಲಾದ ತಿಂಡಿಗಳನ್ನೂ ಒದಗಿಸಿಕೊಟ್ಟು ತಾನೂ ಅವರ ಸಂಗ ಡಲೇ ಫಲಾಹಾರಮಾಡಿದ ಬಳಿಕ ಚಲೋ ವೀಳ್ಯದೆಲೆ, ಗೋಟಡಿಕೆ, ಖೊಬರಿ ಚೂರು, ಮುತ್ತಿನಚಿಪ್ಪುಗಳಿಂದ ಮಾಡಿದ ಸುಣ್ಣಸಹಿತ ಸರ್ವೋಪಚಾರ ಗಳಿಂದ ಮುಂದಿನ ಒಡತಿಯನ್ನೂ ಅವಳ ಬಳಗವನ್ನೂ ಸಂತೋಷಪಡಿಸಿ ಈ ಶುಭವಾರ್ತೆಯನ್ನು ಯಜಮಾನರಿಗೆ ತಿಳಿಸುವುದಕ್ಕೋಸ್ಕರ ಚಂಚಲನೇತ್ರರ ಸನ್ನಿಧಿಯಲ್ಲಿ ಪ್ರಣಾಮಮಾಡಿ ಬಾಯಿಗೆ ಕೈಯಿಟ್ಟು ನಿಂತುಕೊಂಡನು.

"ವೆಂಕಟಪತಿ! ನಿನ್ನಷ್ಟು ಆಪ್ತ ನಮಗಿನ್ಯಾರು ದೊರಕುವನು! ನೀನು ಲೇಶವಾದರೂ ಸಾವಕಾಶವಿಲ್ಲದೆ ಮಾಡಿದ ಉಪಕಾರವನ್ನು ನಾವು ಸರ್ವಥಾ ಮರೆಯಲಾರೆವು. ಇನ್ನು ಮುಂದೆ ಸಕಲ ವಿಷಯಗಳಲ್ಲಿಯೂ ನೀನೇ ನಮ್ಮ ಮಠದ ವೃದ್ಧಿಯ ಮೇಲೆ ದೃಷ್ಟಿಇಡಬೇಕಪ್ಪಾ" ಎಂಬ ಉಪಚಾರದ ಮಾತು ಗಳಿಂದ ಚಂಚಲನೇತ್ರರು ಪಾರುಪತ್ಯಗಾರನ ಮನಸ್ಸಿಗೆ ಹರುಷವನ್ನುಂಟು ಮಾಡಿದರು.

ವೆಂಕಟಪತಿ—"ಪರಾಕೆ! ನಾನು ಸರ್ವದಾ ಶ್ರೀಪಾದಂಗಳವರ ಉಪ್ಪ ನ್ನುತಿಂದುಕೊಂಡಿರುವ ಸೇವಾನುಸೇವಕನೇ. ಇಷ್ಟು ದಿವಸಗಳವರಿಗೂ ಶ್ರೀಪಾದಂಗಳವರ ಕೃಪೆಯು ನನ್ನ ಮೇಲೆ ಪೂರ್ಣವಾಗಿ ಇದ್ದುದರಿಂದ ನನಗೆ ಯಾವ ತರದ ಹೆದರಿಕೆಯೂ ಇರಲಿಲ್ಲ. ಮುಂದಿನಗತಿ ಹ್ಯಾಗಾಗುವದೋ ನೋಡಲಿಕ್ಕುಂಟು.

ಚಂಚಲನೇ—"ವೆಂಕಟಪತಿ! ಹಾಗ್ಯಾಕೆ ಹೇಳುತ್ತಿ? ನಿನ್ನ ಮನಸ್ಸಿನಲ್ಲಿ ವಿಕಲ್ಪ ಯಾಕೆ ಹುಟ್ಟಿತು?"

ವೆಂಕಟಪತಿ -"ನನ್ನ ಮನಸ್ಸು ಸ್ವಚ್ಛವಾಗಿಯೇ ಉಂಟು. ಇದುವರೆಗೆ ಶ್ರೀಪಾದಂಗಳವರ ಪಾರುಪತ್ಯಗಾರನಾಗಿ ಸಂಸ್ಥಾನದ ವಿಶಿಷ್ಟ ಕಾರ್ಯಗಳಲ್ಲಿ ಶಕ್ತಿಮಿಾರಿ ಕಷ್ಟಪಟ್ಟು ಸನ್ನಿಧಿಯ ಮಮತೆಯನ್ನು ಪೂರ್ಣವಾಗಿ ಗಳಿಸಿ

ಕೊಂಡೆನು. ಅಂಥ ಮಮತೆಗೆ ಇನ್ನು ಮುಂದೆ ಒಬ್ಬ ಸ್ತ್ರೀಯು ಭಾಗಿಯಾ ಗುವ ಪ್ರಯುಕ್ತ ನಾನು ಒಡೆಯ ಒಡತಿ ಇವರಿಬ್ಬರ ಮನಸ್ಸಿಗನುಸರಿಸಿ ನಡೆಯಬೇಕಾಗುವುದು. ಇಬ್ಬರು ಧನಿಗಳ ಸೇವೆಯು ಕಷ್ಟಕರವು ಮತ್ತು ಗಂಡಾಂತರಕ್ಕೆ ಆಸ್ಪದ ಕೊಡುವ ಹಾಗಿನದು "

ಚಂಚಲನೇ—"ನಿನ್ನ ಮಾತಿನ ತಾತ್ಪರ್ಯ ಈಗ ನಮ್ಮ ಮನಸ್ಸಿಗೆ ಹೊಕ್ಕಿತು. ಇನ್ನು ಮುಂದೆ ನಮ್ಮ ಪ್ರೀತಿಯು ಪೂರ್ಣವಾಗಿ ವಾಗ್ದೇವಿಯ ಮೇಲೆ ಸ್ಥಿರಪಟ್ಟು ಅವಳ ಮನಸ್ಸಿನಂತೆ ನಾವು ನಡಿಯುವ ಸಂಭವವಿರುವದ ರಿಂದ ನಿನ್ನ ಗೊಡವೆ ನಮಗಿರಲಾರದೆಂಬ ಹಾಗೆ ನಿನಗೆ ಸಂಶಯಹುಟ್ಟಿ ತಲ್ಲವೇ? ಆಹಾ ನೀನೆಂಥ ಬುದ್ಧಿಹೀನ! ಕಾಲಿನ ಪಾದರಕ್ಷೆಯನ್ನು ಯಾವ ನೊಬ್ಬನು ತಲೆಯ ಮೇಲೆ ಇಟ್ಟುಕೊಳ್ಳುವನೇ? ಸ್ತ್ರೀಯು ಎಷ್ಟು ಮೋಹಿತ ಳಾದರೂ ಅವಳ ಮೇಲೆ ಒಬ್ಬನಿಗಿರುವ ಪ್ರೀತಿಗೂ ಸಕಲ ಕಾರ್ಯಗಳನ್ನು ವಿಶ್ವಾಸದಿಂದ ನಡಿಸುವ ಕಾರ್ಯಸ್ಥನ ಮೇಲೆ ಇರುವ ನಂಬಿಕೆಗೂ ಏನೂ ಭೇದವಿಲ್ಲವೇ? ಇಷ್ಟು ನೀನು ತಿಳಿಯದೆ ಹೋದೆಯಲ್ಲ!"

ವೆಂಕಟಪತಿ—" ಅಪ್ಪಣೆಯಾಗುವುದು ನ್ಯಾಯವೇ. ಸನ್ನಿಧಿಯ ಪ್ರೀತಿಯು ನನ್ನ ಮೇಲೆ ನಿರಂತರವಾಗಿರುವುದೆಂದು ಕೋರುತ್ತೇನೆ. ಅದು ಹಾಗಿರಲಿ, ಈಗ ಮಠಪ್ರವೇಶವಾದ ವಾಗ್ದೇವಿಗೂ ಅವಳ ಗಂಡಗೂ ತಂದೆ ತಾಯಿಗಳಿಗೂ ಸನ್ನಿಧಿಯ ಬಳಿಗೆ ಕರಿಸಿಕೊಂಡು ಅವರಿಗೆ ಮಠದಲ್ಲಿ ವಾಸ ವಾಗಿರುವದಕ್ಕೆ ಕಂಠೋಕ್ತವಾದ ಒಂದು ಅಪ್ಪಣೆ ಫಲಮಂತ್ರಾಕ್ಷತೆ ಸಮೇತ ವಾಗಲಿ."

ಪಾರುಪತ್ಯಗಾರನ ಈ ಮಾತು ಚಂಚಲನೇತ್ರರಿಗೆ ಸರಿಯಾಗಿ ತೋಚಿತು. ಹಾಗಾಗಲೆಂದು ಅವರ ಆಜ್ಞೆಯಾಗೋಣ, ವೆಂಕಟಪತಿ ಆಚಾರ್ಯನು ತಮ್ಮಣ್ಣಭಟ್ಟಗೂ ಆಬಾಚಾರ್ಯಗೂ ಭಾಗೀರಥಿಗೂ ವಾಗ್ದೇವಿ ಗೂ ಕರಕೊಂಡು ಶ್ರೀಪಾದಂಗಳವರ ಸಿಂಹಾಸನದ ಕೋಣೆಗೆ ಬಂದನು. ಅವರೆಲ್ಲರೂ ಶ್ರೀಪಾದಂಗಳವರಿಗೆ ದಂಡಪ್ರಣಾಮಮಾಡಿ ನಿಂತುಕೊಂಡಾಗ ಕೂರಬೇಕೆಂದಾಜ್ಞೆಯಾಯಿತು.

ಇಷ್ಟುದಿನ ಸರಿಯಾದ ಒಂದು ಮನೆಯಿಲ್ಲದೆ, ಹೆಚ್ಚು ಪ್ರಯಾಸ ಪಟ್ಟೆವು. ಶ್ರೀಪಾದಂಗಳವರ ಕೃಪೆಯಿಂದ ತಮಗೆ ಮಠದಲ್ಲಿ ವಾಸ್ತವ್ಯಕ್ಕೆ ಸ್ಥಳಸಿಕ್ಕಿದ್ದು ತಮ್ಮ ಪೂರ್ವಪುಣ್ಯ; ಸನ್ನಿಧಿಯ ಆಜ್ಞಾಧಾರಕರಾಗಿ ವಾಸ

ಮಾಡಿಕೊಂಡಿರಲಿಕ್ಕೆ ಅಪ್ಪಣೆಯಾಗಲೆಂದು ತಮ್ಮಣ್ಣಭಟ್ಟನು ಕೈಮುಗಿದು ಹೇಳಿಕೊಂಡನು. ತಮ್ಮಣ್ಣಭಟ್ಟನ ಅಪೇಕ್ಷೆಯಂತೆ ಅವನು ಸಕುಟುಂಬನಾಗಿ ಮಠದಲ್ಲಿ ವಾಸ್ತವಿಸಿಕೊಂಡಿರುವುದು ತನ್ನ ಮನಸ್ಸಿಗೆ ಅತಿಹಿತಕರವಾಗಿರುವದೆಂದು ಸನ್ಯಾಸಿಗಳ ಪ್ರತ್ಯುತ್ತರವಾಯಿತು. ತಾನೂ ತನ್ನ ಅಳಿಯ ಅಬಾಚಾರ್ಯನೂ ನಿರುದ್ಯೋಗಿಗಳಾಗಿ ಹೊಟ್ಟೆಹೊರುವುದೇ ಅತಿ ಪ್ರಯಾಸವಾದ ದೆಸೆಯಿಂದ ಸನ್ನಿಧಿಯ ಮರೆಹೊಕ್ಕ ಮಾತ್ರದಿಂದ ದಾರಿದ್ರ್ಯವು ಇನ್ನು ಮುಂದೆ ತಮ್ಮನ್ನಗಲಿತೆಂಬ ಕೋರಿಕೆ ಹುಟ್ಟಿಯದೆ ಎಂದು ತಮ್ಮಣ್ಣಭಟ್ಟನು ಅರಿಕೆ ಮಾಡಿಕೊಂಡನು. ಮುಗುಳುನಗೆಯಿಂದ ಶ್ರೀಪಾದಂಗಳು ತಮ್ಮ ಆಶ್ರಿತರ್‍ಯಾರಿಗೂ ಬಡತನ ಸೋಕದೆಂದರು." ಹಲವು ಮಾತುಗಳಾಡಬೇಕ್ಯಾಕೆ? ಚರಣಕಿಂಕರರಾದ ನಮ್ಮೆಲ್ಲರನ್ನು ಕರುಣದಿಂದ ಪಾಲಿಸಬೇಕು" ಎಂದು ಮಾವ ಅಳಿಯಂದಿರು ತಮ್ಮ ಮಡದಿಯರ ಸಮೇತ ಸಾಷ್ಟಾಂಗವೆರಗಿದರು. ಸಂಸ್ಥಾನದ ಮೇಲೆ ವಿಶ್ವಾಸವಿಟ್ಟು ನಡಕೊಂಡರೆ ದೇವರು ಬಿಟ್ಟುಹಾಕಲಿಕ್ಕಿಲ್ಲವಾಗಿ ಚಂಚಲನೇತ್ರರು ಅಭಯ ವಚನವನ್ನು ದಯಪಾಲಿಸಿ, ಫಲಮಂತ್ರಾಕ್ಷತೆಯನ್ನು ಕೊಡಲಿಕ್ಕೆ ಹವಣಿಸಿದರು. ಮಂತ್ರಾಕ್ಷತೆ ಕೊಡುವ ವೇಳೆಯಲ್ಲಿಯೇ ತಮ್ಮಣ್ಣಭಟ್ಟಗೆ ಜರಿಕಂಬಿಯ ಪಟ್ಟೆಮಡಿ, ಅಬಾಚಾರ್ಯರಿಗೆ ಉತ್ತಮವಾದ ಕಾಶ್ಮೀರ ಶಾಲುಜೋಡಿ, ಭಾಗೀರಥಿಗೆ ಉತ್ಕೃಷ್ಟವಾದ ಕಲಾಬತ್ತಿನ ಶಾಲೆ ಉಡುಗೊರೆ ಆಯಿತು.

ಮದದಾನೆಯಂತೆ ಮೆಲ್ಲಮೆಲ್ಲನೆ ಅಡಿ ಇಡುತ್ತಾ ಮುಂದೆಬಂದು, ಅಧೋಮುಖಿಯಾಗಿ ನಿಂತುಕೊಂಡಿರುವ ವಾಗ್ದೇವಿಯನ್ನು ಚಂಚಲನೇತ್ರರು ಆಪಾದಮಸ್ತಕಪರಿಯಂತ ಸಂಪೂರ್ಣಕಟಾಕ್ಷದಿಂದ ನೋಡಿಬಿಟ್ಟು, ಉಕ್ಕಿಬರುವ ಪ್ರಮಾದದಿಂದ ಫಲಮಂತ್ರಾಕ್ಷತೆಯನ್ನು ಅನುಗ್ರಹಿಸಿ ತಾರಾಮಂಡಲದ ಚಿತ್ರವನ್ನು ಜರಿಯ ನೂಲಿನಿಂದ ಬಹು ಸೂಕ್ಷ್ಮವಾಗಿ ಬಿಡಿಸಿರುವ ಸೆರಗುಳ್ಳ ಆಕಾಶವರ್ಣದ ಬುಗುಡಿ ಅಂಚಿನ ಸೀರೆಯನ್ನು ದಾಳಿಂಬ ಬಣ್ಣದ ಕಂಚುಕಿ ಸಹಿತ ಉಚಿತವಾಗಿ ಕೊಟ್ಟರು. "ರಾತ್ರೆ ಪೂಜೆಯು ಬೇಗವಾಗುವದು; ಎಲ್ಲರೂ ಬಂದು ಪ್ರಸಾದ ಪಡಕೊಂಡು ಹೋಗಬೇಕು" ಎಂದು ಶ್ರೀಪಾದಂಗಳವರ ಅನುಜ್ಞೆಯಾಯಿತು. ಹಾಗೆಯೇ ತಮ್ಮಣ್ಣಭಟ್ಟನು ಆದಿಯಾಗಿ ಎಲ್ಲರೂ ಅವರ ವಾಸಸ್ಥಾನಕ್ಕೋಸ್ಕರ ನೇಮಿಸಲ್ಪಟ್ಟ ಕಟ್ಟೋಣದ ಭಾಗವನ್ನು ಸೇರಿಕೊಂಡರು.

ಚಂಚಲನೇತ್ರರು ವೆಂಕಟಪತಿಯನ್ನು ಸಮೀಪ ಕರೆದು, ಪ್ರಮಾಣ ಪಡಿಸಿ, ವಾಗ್ದಾನ ಕೊಡಬೇಕೆಂಬ ಹಟವನ್ನು ವಾಗ್ದೇವಿಯು ಇನ್ನೂ ಮರಿಯಲಿಲ್ಲವೇ ಎಂದು ವಿಚಾರಿಸಲಾಗಿ ಜೀವ ಹೋದರೂ ಅವಳು ಹಟ ಬಿಡುವವಳಲ್ಲ. ಈ ವಿಷಯದಲ್ಲಿ ತಾನು ಮಾಡಿದ ಪ್ರಯತ್ನವು ನಿಷ್ಫಲ ವಾಯಿತು; ಬೇರೆ ನಿವೃತ್ತಿ ಕಾಣದೆಂದು ವೆಂಕಟಪತಿಯು ಉತ್ತರಕೊಟ್ಟನು. ಇಂಥ ಇಕ್ಕಟ್ಟಿನಲ್ಲಿ ಈಗ ಆಲೋಚನೆ ಮಾಡುವಂಥಾದ್ದೇನೂ ಇಲ್ಲ. ಮೊದಲೇ ನೋಡಬೇಕಿತ್ತು ಎಂಬ ಪಾಶ್ಚಾತ್ತಾಪದ ಮಾತು ನಿಟ್ಟುಸಿರಿ ನೊಡನೆ ಚಂಚಲನೇತ್ರರ ಬಾಯಿಯಿಂದ ಬಂದು ಹೋಯಿತು. ವೆಂಕಟ ಪತಿಯ ಕಣ್ಣಿಗೆ ನೀರು ಬಂತು. "ಪರಾಕೆ! ದೊಡ್ಡ ದೊಡ್ಡ ಆಲೋಚನೆಯು ಮನಸ್ಸಿಗೆ ಹತ್ತುವ ಸಮಯವು ಇದಲ್ಲ. ಉಪಯೋಗಿಸಿಕೊಳ್ಳುವ ಉದ್ದಿಶ್ಯ ಸಾಹಸಪಟ್ಟು ತರಿಸಿಕೊಂಡಿರುವ ವಸ್ತುವನ್ನು ಸಂತೋಷಚಿತ್ತದಿಂದ ಸ್ವೀಕರಿಸುವದೇ ಕರ್ತವ್ಯ; ಅನ್ಯಥಾ ಯೋಚನೆ ಮಾಡುವದು ಯೋಗ್ಯವಲ್ಲ ವೆಂದು ನಾನು ಪ್ರತ್ಯೇಕ ಹೇಳಬೇಕ್ಯಾಕೆ? ಸರ್ವವು ಬಲ್ಲ ಚರಣಾರವಿಂದ ಗಳಿಗೆ ಪೂರ್ಣ ಪರಾಂಬರಿಕೆ ಇದೆಯಷ್ಟೇ" ಎಂದು ಚಾತುರ್ಯದ ಮಾತಿ ನಿಂದ ವೆಂಕಟಪತಿ ಆಚಾರ್ಯನು ತನ್ನ ಧನಿಯ ಮನಸ್ಸಿಗೆ ಹತ್ತಿದ ಅನಿತ್ಯ ವ್ಯಾಕುಲವನ್ನು ಪರಿಹರಿಸಿಬಿಟ್ಟನು.

ಚಂಚಲನೇತ್ರರ ಹೃದಯದಲ್ಲಿ ಕೂಡಲೇ ಆಹ್ಲಾದವು ಪುನಃ ಸ್ಥಾಪನೆಯಾಯಿತು. ರಾತ್ರಿ ಪೂಜೆಯೊಂದು ಶೀಘ್ರಮಾಡಿಬಿಟ್ಟರೆ ತನ್ನ ಮನೋರಥ ಪೂರ್ಣವಾಗಲಿಕ್ಕೆ ಬೇರೊಂದು ಅಭ್ಯಂತರವಿರಲಾರದು; ಭವಿಷ್ಯ ವಿಚಾರ, ಕ್ರಮೇಣ ನೋಡೋಣ; ಆ ಚಿಂತೆ ಈವಾಗ್ಯಾಕೆಂದು ಯತಿಗಳು ದೃಢಚಿತ್ತರಾಗಿ ಸೂರ್ಯಾಸ್ತಮಯದ ನಿರೀಕ್ಷಣೆಯಲ್ಲಿದ್ದುಕೊಂಡರು. ರಾತ್ರಿ ಸಾವಕಾಶವಿಲ್ಲದೆ ಸ್ನಾನತೀರಿಸಿ, ಪೂಜೆಗೆ ಕೂತರು. ಅಂದು ದ್ವಾದಶಿ ಯಾದ ಕಾರಣ ಪುರಾಣವಿರಲಿಲ್ಲ. ಇದು ಬಹು ಅನುಕೂಲವಾಯಿತು. ಇಲ್ಲವೇ ಮುಪ್ಪಣ್ಣಾಚಾರ್ಯನ ಉಗ್ರವಾಚಕಕ್ಕೆ ಸನ್ಯಾಸಿಗೆ ಇಲ್ಲದ ಕೋಪ ಬಂದು ವಿಪರೀತವಾಗುತ್ತಿತು.

## ಹನ್ನೊಂದು

ಹೃದಯದಲ್ಲಿ ವಾಗ್ದೇವಿಯ ಬಿಂಬವನ್ನು ಪ್ರತಿಷ್ಠಿಸಿಕೊಂಡು, ಚಂಚಲ

ನೇತ್ರರು ದೇವರ ಪೂಜೆಯನ್ನು ತೀರಿಸಿದರು. ಆಜ್ಞೆಗನುಗುಣವಾಗಿ ವಾಗ್ದೇವಿಯು ಬಳಗದೊಡನೆ ತೀರ್ಥಪ್ರಸಾದಕ್ಕೆ ಸಕಾಲದಲ್ಲಿ ಬಂದೊದಗಿದಳು. ತೀರ್ಥಪ್ರಸಾದವಾಯಿತು ರಾತ್ರಿಯೂಟದ ಏರ್ಪಾಟುಮಾಡುವ ನೆವನದ ಮೇಲೆ ಭಾಗೀರಥಿಯು ಗಂಡನನ್ನೂ ಅಳಿಯನನ್ನೂ ಕರಕೊಂಡು ಬಿಡಾರಕ್ಕೆ ಹೋದಳು. ವಾಗ್ದೇವಿಯ ಊಟವು ಮೊದಲೇ ಆಗಿತ್ತು. ವೆಂಕಟಪತಿ ಆಚಾರ್ಯನೂ ವಾಗ್ದೇವಿಯೂ ಯತಿಗಳ ಸಮ್ಮುಖದಲ್ಲಿ ನಿಂತುಕೊಂಡಿರುವಾಗ— "ಏನೇ ವಾಗ್ದೇವಿ! ದೇವರ ಮುಂದೆ ಪ್ರಮಾಣಮಾಡದೆ ಮುಂದಿನ ಪ್ರಸಂಗ ನಡಿಯ ಕೂಡದೆಂಬ ಛಲವನ್ನು ಬಿಡವಲ್ಲೆಯಾ" ಎಂದು ಚಂಚಲನೇತ್ರರು ಪ್ರೇಮಪುರಸ್ಸರ ಪ್ರಶ್ನೆಮಾಡಿದರು.

"ಪರಾಕೆ! ಇಷ್ಟು ಸಣ್ಣ ವಾಗ್ದಾನದ ಪ್ರಸಕ್ತಿಯಲ್ಲಿ ಶ್ರೀಪಾದಂಗಳವರು ನನ್ನ ಮನಸ್ಸಿಗೆ ವಿರೋಧವಾಗಿ ನಡಿಯಬೇಕೆಂಬ ಹಟಹಿಡಿಯುವದು ನೋಡುವಾಗ ಅಬಲೆಯಾದ ನನ್ನ ಮನಸ್ಸಿಗೆ ಹೆಚ್ಚು ಸಂಶಯವಾಗುವದು ಆಶ್ಚರ್ಯವೇ! ಹೆಚ್ಚಿಗೆ ಏನು ಅರಿಕೆಮಾಡಲಿ. ಅಪ್ಪಣೆಯಾದರೆ ಊಟಕ್ಕೆ ಹೋಗುತ್ತೇನೆ. ಮತ್ತೆಲ್ಲ ನಾಳೆ ನೋಡಬಹುದಷ್ಟೆ" ಎಂದು ವಾಗ್ದೇವಿಯು ಪೂಜಾಗೃಹದಿಂದ ಹೊರಗೆ ಹೊರಡಲಿಕ್ಕೆ ಸನ್ನದ್ಧಳಾದಳು.

"ಒಂದೇ ಸರ್ತಿ ಸಿಟ್ಟುಮಾಡಬೇಡ; ಸ್ವಲ್ಪ ಕೂರು" ಎಂದು ಅಪ್ಪಣೆಯಾಯಿತು. ಅದಕ್ಕನುಸರಿಸಿ, ವಾಗ್ದೇವಿಯು ಹಾವಾಡಿಗನು ಸರ್ಪಕ್ಕೆ ತಡೆಕಟ್ಟುವ ರೀತಿಯಲ್ಲಿ ತನ್ನ ಮೋಹನ ಶಕ್ತಿಯಿಂದ ಚಂಚಲನೇತ್ರರನ್ನು ಸ್ತಬ್ಧಮಾಡಿಬಿಟ್ಟಳು.

ಮಠದ ಪಾರುಪತ್ಯಗಾರನನ್ನು ಸಾಕ್ಷಿಯಿಟ್ಟು ವಾಗ್ದೇವಿಯ ಅಪೇಕ್ಷೆಯಂತೆ ಪಟ್ಟದ ದೇವರ ಮುಂದೆ ಪ್ರಮಾಣವಾಕ್ಯ ಉಚ್ಚರಿಸಿ, ವಾಗ್ದೇವಿಗೆ ಗಂಡು ಪಿಂಡ ಜನಿಸಿದರೆ ಅವನಿಗೆ ಆಶ್ರಮಕೊಟ್ಟು ತನ್ನ ಉತ್ತರಾಧಿಕಾರಿಯಾಗಿ ನೇಮಿಸುವೆನೆಂದು ವಾಚಾದತ್ತಮಾಡಿ— "ಇನ್ನಾದರೂ ನಿನ್ನ ಮನಸ್ಸಿನ ವಿಕಲ್ಪಹೋಯಿತೇ?" ಎಂದು ಚಂಚಲನೇತ್ರರು ಕೇಳಿದರು.

ವಾಗ್ದೇವಿಯು ಅವರ ಪಾದಗಳಿಗೆ ಅಡ್ಡಬಿದ್ದು— "ಸ್ವಾಮೀ! ಕೇವಲ ಮೂಢಳು; ಮತ್ತು ಕಡುಪಾಪಿಷ್ಠಳಾದ ನನ್ನ ತನುವನ್ನು ಶ್ರೀಪಾದಂಗಳವರ ಸೇವೆಗೆ ಒಪ್ಪಿಸಿಕೊಟ್ಟಿದ್ದೇನೆ. ಅದನ್ನು ಪವಿತ್ರಮಾಡಬೇಕು" ಎಂದು ಬಹುದೀನಭಾವದಿಂದ ಬೇಡಿಕೊಂಡಳು.

ಸರಿ, ಇಲ್ಲಿ ವಾಗ್ದೇವಿಯ ಪರಿಗ್ರಹವು ಪೂರ್ಣವಾಯಿತು. ಚಂಚಲ ನೇತ್ರರ ಅಪೇಕ್ಷೆಯೂ ವಾಗ್ದೇವಿಯ ಹಟವೂ ವೆಂಕಟಪತಿ ಆಚಾರ್ಯನ ಸಾಧನೆಯೂ ಏಕಪ್ರಕಾರ ನೆರವೇರಿದವು.

ಅಂದಿನಿಂದ ಚಂಚಲನೇತ್ರರ ನಡವಳಿಕೆಯ ರೀತಿಯೇ ಮಾರ್ಪಾಟ ವಾಯಿತು. ಅವರು. ಯತಿರೂಪದ ಸಂಸಾರಿಕರಾಗಿ ಕ್ಷಣಮಾತ್ರ ವಾಗ್ದೇವಿ ಯನ್ನು ಅಗಲದೆ, ನಾಚಿಕೆಯನ್ನು ನಿಶ್ಶೇಷವಾಗಿ ತೊರೆದುಬಿಟ್ಟು ಕಪಟ ಸನ್ಯಾಸಿ ಎಂಬ ದುರಭಿಧಾನವನ್ನು ಪಡಕೊಂಡರು. ಊರಲ್ಲಿ ಜನರು ತನ್ನ ಕುರಿತು ಏನೇನಾಡುತ್ತಾರೆ? ತಾನು ವಾಗ್ದೇವಿಯ ಮೋಹಜಾಲದಲ್ಲಿ ಸಿಲುಕುವದರ ಮುಂಚೆ ನಡಕೊಳ್ಳುತ್ತಿದ್ದ ಸನ್ಮಾರ್ಗಕ್ಕೂ ಈಗ ನಡಿಯುವ ರೀತಿಗೂ ಏನು ವ್ಯತ್ಯಾಸವಿದೆ? ತನಗೆ ಈಗ ಸದಾಚಾರಿಯನ್ನಬಹುದೋ? ತಾನು ದುರಾಚಾರದಲ್ಲಿ ಮಗ್ನನಾಗಿರುವದು ನಿಜವೋ ಎಂಬ ವಿಚಾರವೇ ಚಂಚಲನೇತ್ರರ ಮನಸ್ಸಿಗೆ ಹೋಗದೆ ಅವರು ಕೇವಲ ಮೂಢಮತಿಯಾ ದದ್ದು ಅವರ ಪೂರ್ವಕರ್ಮದ ದೋಷವೇ. ಮೊದಲು ವೆಂಕಟಪತಿ ಆಚಾ ರ್ಯನು ಯಾವ ವಿಷಯದಲ್ಲಾದರೂ ಆಲೋಚನೆಯನ್ನು ಹೇಳಿದರೆ ಅವರ ಸಾಧಕ ಬಾಧಕ ಮನಸ್ಸಿನಲ್ಲಿ ಚನ್ನಾಗಿ ಮಥಿಸಿ ನೋಡದನಕ ಒಮ್ಮೆಯೇ ಹಾಗಾಗಲೆಂದು ಹೇಳುವದು ಚಂಚಲನೇತ್ರರ ವಾಡಿಕೆಯಾಗಿರಲಿಲ್ಲ. ಸಕಲ ಆದಾಯ ವೆಚ್ಚದಲ್ಲಿಯೂ ತಾನೆ ಸ್ವತಂತ್ರಿಯಾಗಿ ಒಂದು ಆಜ್ಞೆಯನ್ನು ಕೊಟ್ಟು ಅದಕ್ಕನುಸರಿಸಿ ಸೇವಕರೆಲ್ಲರೂ ನಡಿಯಬೇಕಲ್ಲದೆ; ಹಾಗಲ್ಲ ಸ್ವಾಮಿ, ಹೀಗೆ ಎಂಬ ಬುದ್ಧಿ ಮಾತಾಗಲೀ ವಕ್ರೋಕ್ತಿಯಾಗಲೀ ಹೇಳು ವದು ಯಾವನ ಬುರುಡೆಯಲ್ಲಿಯೂ ಬರೆದಿರಲಿಲ್ಲ.

ಪ್ರಕೃತದ ಪ್ರವರ್ತನೆಯು ಹ್ಯಾಗೆ? ಲೌಕಿಕಕಾರ್ಯಗಳಲ್ಲೆಲ್ಲ ವೆಂಕಟ ಪತಿ ಆಚಾರ್ಯನು ಏನು ಮಾಡಿದರೂ ಯಾರೊಬ್ಬರೂ ಕೇಳುವಹಾಗಿರಲಿಲ್ಲ. ಮಠದ ಪಾರುಪತ್ಯ ಸಮಗ್ರ ಅವನ ಮುಷ್ಟಿಯೊಳಗೆ ಅಡಕವಾಗಿರುವದು. ಪೂಜೆಪುನಸ್ಕಾರವೆಲ್ಲಾ ಯತಿಗಳ ಕೈಯಿಂದಲೇ ನಡಿಯದೆನಿರ್ವಾಹವಿಲ್ಲವಷ್ಟೆ. ಆವಾವ ಕಾಲದಲ್ಲಿ ಆಗಬೇಕಾದ ದೇವತಾ ವಿನಿಯೋಗಗಳು ಸಾಂಗವಾಗಿ ನಡಿಯುವಲ್ಲಿ ಏನೊಂದೂ ಅಡ್ಡಲು ಇದ್ದಹಾಗೆ ಕಾಣುತಿದ್ದಿಲ್ಲ. ಸಣ್ಣ ಹುಡುಗರು ಅರ್ಥ ತಿಳಿಯದೆ ಬಾಯಿಪಾಠ ಹೇಳುವ ರೀತಿಯಲ್ಲಿ ಈ ಯತಿ ಗಳು ಭಕ್ತಿ ವಿರಹಿತವಾದ ಪೂಜೆಯನ್ನು ಆದಷ್ಟು ಬೇಗನೆ ತೀರಿಸಿ, ದೇವರಿಗೆ

ಏರಿಸಿದ ಹೂವನ್ನು ಪ್ರಥಮತಾ ಒದ್ದೆ ಅಂಗವಸ್ತ್ರದಲ್ಲಿ ಮುಚ್ಚಿಟ್ಟು ವಾಗ್ದೇವಿಗೆ ಅರ್ಪಿಸುವ ಮೊದಲು ತೀರ್ಥಪ್ರಸಾದ ಬೇರೆಯವರಿಗೆ ಸಿಕ್ಕುವದು ದುರ್ಲಭವಾಯಿತು. ಬೆಕ್ಕು ಕಣ್ಣುಮುಚ್ಚಿ ಹಾಲು ಕುಡಿಯುವಂತೆ ಚಂಚಲನೇತ್ರರು ತನ್ನ ದುರಾಚಾರದ ಸುದ್ದಿಯು ಯಾರಿಗೂ ಸಿಕ್ಕಲಿಲ್ಲವೆಂಬ ನಂಬಿಕೆಯಿಂದ ದುರಂಹಂಕಾರವನ್ನು ತಾಳಿಕೊಂಡು, ಪೂರ್ವಕ್ಕಿಂತಲೂ ಈಗ ಒಂದು ಬಣ್ಣ ಹೆಚ್ಚಾಗಿ ಸದಾಚಾರದಲ್ಲಿರುವವನಂತೆ ತೋರಿಸಿಕೊಳ್ಳಲಿಕ್ಕೆ ಪ್ರಯತ್ನಪಡುವವರಾದರು. ಮಠದಲ್ಲಿರುವ ಚಾಕರರೆಲ್ಲರೂ ಧಣಿಗಳಿಗೆ ಮುಂಚಿನಂತೆ ಹೆದರಿಕೊಂಡು ನಡಿಯುವದು ಕಡಿಮೆಯಾಯಿತು. ಸಣ್ಣ ಸಣ್ಣ ತಪ್ಪುಗಳನ್ನಾಗಲೀ ತಕ್ಕಮಟ್ಟಿಗೆ ದೊಡ್ಡ ತಪ್ಪುಗಳನ್ನಾಗಲೀ ಮಾಡುವ ಸೇವಕರನ್ನು ಚಂಚಲನೇತ್ರರು ಕೆಲಸದಿಂದ ತೆಗೆದು ಬಿಡಲಿಕ್ಕೆ ಅಂಜಬೇಕಾಯಿತು. ಯಾಕೆಂದರೆ ತಾನು ಮಾಡಿಕೊಂಡ ಗುಪ್ತಸಂಸಾರದ ವರ್ತಮಾನವನ್ನು ಚಾಕರರೇ ಪ್ರಚುರಪಡಿಸಿ, ವಿವಿಧ ಹಾನಿಯನ್ನುಂಟುಮಾಡಿಬಿಟ್ಟರೆ ಕಷ್ಟಪಡುವದಾಗುವದೆಂಬ ಭಯವು ಅವರಲ್ಲಿ ಇಂಬು ಗೊಂಡಿತು.

ಮಠದಲ್ಲಿ ತುಂಬಿಟ್ಟ ದ್ರವ್ಯವು ಯಥೇಷ್ಟವಿತ್ತು. ಚಂಚಲನೇತ್ರರ ಗುರುಗಳ ಮತ್ತು ಪರಮಗುರುಗಳ ಕಾಲದಿಂದ ಒಟ್ಟುಮಾಡಿಡೋಣಾದ ವಿತ್ತಕ್ಕೆ ಇವರು ತಾನೇ ಕೂಡಿಸಿಕೊಂಡು ಬಂದದ್ದಲ್ಲದೆ, ಅನಾವಶ್ಯಕ ವೆಚ್ಚ ಮಾಡಿ, ಖಜಾನೆಯನ್ನು ಟೊಳ್ಳುಮಾಡಿರಲಿಲ್ಲ. ವಾಗ್ದೇವಿಯ ಕಾಲು ಮಠಕ್ಕೆ ತಗಲಿದ ಕೂಡಲೇ ನೀರು ತುಂಬಿಟ್ಟ ಕೊಡವಾನಕ್ಕೆ ತನ್ನಷ್ಟಕ್ಕೆ ರಂಧ್ರವಾಗಿ ನೀರು ಸುರಿದು ಹೋಗುವ ಗತಿಯಾಯಿತು. ಪೇಟೆಯಲ್ಲಿರುವ ಪ್ರಖ್ಯಾತಪಟ್ಟ ಸರಾಫರೆಲ್ಲರೂ ಹಳೇ ನಗಗಳಿಗೆ ಚಂದಾಗಿ ಒಪ್ಪಹಾಕಿಸಿ, ಝಗಮಗವಾಗಿ ಕಣ್ಣಿಗೆ ಶೋಭಿಸುವ ರೀತಿಯಲ್ಲಿ ಒಂದೊಂದನ್ನೇ ತಂದು ಅಂತರಂಗದಲ್ಲಿ ಭಾಗೀರಥಿಗೆ ತೋರಿಸಿದರು. ಅವಳು ಅವುಗಳ ಕ್ರಯ ಮೊದಲಾದ ವಿವರಗಳನ್ನು ತಿಳಿದು, ಮಗಳ ಮುಂದೆ ಇಟ್ಟುಬಿಟ್ಟಾಕ್ಷಣ ತಾಮಸವಿಲ್ಲದೆ ವಾಗ್ದೇವಿಯು ಚಂಚಲನೇತ್ರರಿಂದ ಬೇಕಾದ ಹಣವನ್ನು ಈಸುಕೊಂಡು ಸರಾಫನ ಪೆಟ್ಟಿಗೆಯನ್ನು ತುಂಬಿಸಿಬಿಡುವಳು.

ಎಷ್ಟೋ ವರ್ಷಗಳಿಂದ ಗಿರಾಕಿಗಳಿಲ್ಲದೆ ಮಳಿಗೆಯಲ್ಲಿ ಬಿದ್ದಿರುವ ಊಚು ಸೀರೆಗಳನ್ನು ಬಿಸಿಲಿಗೆ ಹಾಕಿ ಒಣಗಿಸಿ, ರೇಶ್ಮೆ ಚೌಕದಲ್ಲಿ ಕಟ್ಟಿ, ನವಾಯಿತರು ಮಠಕ್ಕೆ ಬರುವವರಾದರು. ಭಾಗೀರಥಿಯ ಕಣ್ಣಿಗೆ ಅಂಥಾ

ಸೀರೆಗಳು ಬೀಳುವದೇ ತಪ, ಸವಾಯಿತರು ಗೆದ್ದರು. ಅವರು ಹೇಳಿದ ಕ್ರಯಕ್ಕೆ ವಾಗ್ದೇವಿಯು ಅವುಗಳನ್ನು ಕೊಂಡುಕೊಂಡು ಚಂಚಲನೇತ್ರರಿಂದ ಕ್ರಯಕೊಡಿಸುವಳು. ಕೇಳಿಕೇಳಿದ ಹಾಗೆ ಹಣಕೊಟ್ಟು ಯತಿಗಳು ಸೊಥೋದರು, ವಾಸ್ತವ್ಯ. ಮೊದಲೇ ಧನಾಭಿಲಾಶೆಯಿಂದ ಊಟಪಾಟದಲ್ಲಿಯೂ ಬಹುಮಿತವಾಗಿ ಖರ್ಚುಮಾಡುವ ಆ ಸನ್ಯಾಸಿಯು ವಾಗ್ದೇವಿಯನ್ನು ಮೆಚ್ಚಿಸಿಕೊಳ್ಳುವ ಆಶೆಯಿಂದ ಹಣದ ಮೇಲೆ ಮೋಹವಿಡಲಿಲ್ಲ. ಪೂರ್ಣಮಿಯ ಚಂದ್ರನಂತಿರುವ ವಾಗ್ದೇವಿಯ ಮುಖದ ಶೀತಳ ಕಿರಣಗಳಿಂದಲೇ ಚಂಚಲನೇತ್ರರ ಚಿತ್ತಾಪಹಾರವಾಗಬೇಕಾದ ಪ್ರಯುಕ್ತ ಅವಳ ಸಿಟ್ಟಿಗೆ ಉತ್ತೇಜನ ಕೊಡಬಹುದಾದ ಯಾವದೊಂದು ಕೃತ್ಯವೂ ಶ್ರೀಪಾದಂಗಳವರ ಮನಸ್ಸಿಗೆ ಒಗ್ಗದು.

ಧನ ಶೋಕವು ಸಣ್ಣದೇ? ಸರ್ವಥಾ ಅಲ್ಲ. ಆದರೂ ಏನು ನಿವೃತ್ತಿಯದೆ! ಯಾವ ಶೋಕವಾದರೂ ದಿನೇದಿನೇ ಏರುತ್ತಾ ಬರುವದಾದರೆ ಅದರ ಗೊಡವೆಯನ್ನು ಬಿಡುವದೇ ಲೇಸು. ಸನ್ಯಾಸಿಗೆ ದ್ರವ್ಯದಾಶೆ ಯಾಕೆ? ನಾರಾಯಣ ಸ್ಮರಣೆಯೇ ನವನಿಧಿಯಲ್ಲವೇ? ಹಾಗಲ್ಲವಾದರೂ ಪರ್ವಾ ಇಲ್ಲ. ಮಠಕ್ಕೆ ಹಲವು ವಿಧದ ಆದಾಯದ ಮೂಲಗಳಿವೆ. ಹಣದ ಪೆಟ್ಟಿಗೆಗಳು ರಿಕ್ತವಾದ ಹಾಗೆ ತುಂಬಲಿಕ್ಕೆ ಅಡ್ಡಿ ಇಲ್ಲದಿರುವಾಗ ವಾಗ್ದೇವಿಯು ಬೇಕಾದಷ್ಟು ದ್ರವ್ಯ ವೆಚ್ಚಮಾಡಿದರೆ ಹೆದರುವವನ್ಯಾರು? ದ್ರವ್ಯದಾಶೆ ಸನ್ಯಾಸಿಗಾಗಲಿ ಗೃಹಸ್ಥನಿಗಾಗಲಿ ಅತಿ ದೊಡ್ಡ ದುರ್ಗುಣವಷ್ಟೇ! ಅಂಥಾ ಅವಗುಣವನ್ನು ಅಂಗೀಕರಿಸಿಕೊಳ್ಳಬಹುದೇ ಎಂಬ ಜ್ಞಾನದಿಂದ ಚಂಚಲನೇತ್ರರು ತನ್ನ ಮನಸ್ಸನ್ನು ಒಡಂಬಡಿಸಿಕೊಂಡರು.

ಇನ್ನೇನು ಮಾಡಬಹುದು? ವಾಗ್ದೇವಿಯು ವಾದ್ಯದಿಂದ ಕರತರಲ್ಪಟ್ಟ ಮಾರಿಯಲ್ಲವೇ? ಅವಳ ಒಡನಾಟದ ಸುಖವನ್ನು ಕುಂದಿಲ್ಲದೆ ಅನುಭವಿಸಬೇಕಾದರೆ ಪ್ರಾಣತ್ಯಾಗ ಒಂದಲ್ಲದೆ ಬೇರೆ ಯಾವ ನಷ್ಟವಾದರೂ ಸಹಿಸಿಕೊಳ್ಳುವುದಕ್ಕೆ ಅಂಜುವ ನರನು ಬರೇ ನಿರ್ಜೀವ ವಸ್ತುವಿಗಿಂತಲೂ ಕಡೆ ಎಂಬ ಹಾಗಿನ ತಾತ್ಪರ್ಯವು ಈ ಸನ್ಯಾಸಿಯ ಮನಸ್ಸಿನಲ್ಲಿ ನೆಲೆಸಿತ್ತು; ಒಂದು ವೇಳೆ ಪೂರ್ವಜನ್ಮದಲ್ಲಿ ಇವಳು ತಾನು ಆರಾಧಿಸಿದ ದೈವತವೋ? ಕೃಪಣತ್ವದಿಂದ ಆರಾಧನೆಯಲ್ಲಿ ನ್ಯೂನಬಂದುಹೋದಕಾರಣ ಆ ಊನ ಪರಿಹರಿಸಿಕೊಂಡು ಸಗುಣರೂಪದಿಂದ ಪ್ರತ್ಯಕ್ಷಳಾದವಳೆಂಬ ಭಾವನೆಯಿಂದ

ವಾಗ್ದೇವಿಯನ್ನು ಸ್ವೀಕರಿಸಿಕೊಂಡಾಯಿತು. ಇದರಲ್ಲಿ ಪಾಪವಿರುವುದು ಹ್ಯಾಗೆ? ಹುಚ್ಚರು ಬೇಕಾದ್ದು ಆಡಿಕೊಳ್ಳಲಿ. "ಅಂತೆ ಬಾಯಿಯಾದರೂ ಕಟ್ಟಬಹುದು, ದೊಂಡೆಬಾಯಿ ಕಟ್ಟಕೂಡದು" ಎಂಬ ಈ ಸಿದ್ಧಾಂತವು ಯತಿಗಳ ಜ್ಞಾನಚಕ್ಷುವನ್ನು ಮೆಲ್ಲಮೆಲ್ಲನೆ ತೆರೆದುಬಿಟ್ಟಿತು. ಏವಂಚ ತಾನು ವಾಗ್ದೇವೀಹರಣದಿಂದ ಲೋಕಾಪವಾದಕ್ಕಾಗಲೀ ಸಹಿಸಕೂಡದಷ್ಟು ನಷ್ಟ ಅಥವಾ ವ್ಯಾಕುಲಕ್ಕಾಗಲೀ ಆಸ್ಪದ ಕೊಡಲಿಲ್ಲವೆಂಬ ನಿರ್ಧಾರವನ್ನು ಮಾಡಿಕೊಂಡು, ದಿನೇದಿನೇ ಅಮಿತಸುಖವನ್ನನುಭವಿಸುತ್ತಾ ದೇವರನ್ನು ಸಂಪೂರ್ಣ ಮರೆತು ಲೋಕೈಕನಾಥನು ಸೃಷ್ಟಿಸಿದ ಪ್ರಾಣಿಗಳಲ್ಲಿ ತನಗೂ ವಾಗ್ದೇವಿಗೂ ಸದೃಶವಾದ ರೂಪವಂತರಾಗಲೀ ಸುಖಿಗಳಾಗಲೀ ಇನ್ನು ಹುಟ್ಟಿಬರಬೇಕಲ್ಲದೆ ಈ ಮೊದಲೇ ಹುಟ್ಟಿದ ಅನ್ಯರಾರಿಲ್ಲವೆಂದು ಚಂಚಲ ನೇತ್ರರು ಬಹಿರಂಗವಾಗಿ ಹೇಳಲಿಕ್ಕೂ ಅಂಜಲಿಲ್ಲ.

## ಹನ್ನೆರಡು

ವಾಗ್ದೇವಿಯ ತಂದೆತಾಯಿಗಳು ಮಗಳ ದೆಸೆಯಿಂದ ಅತ್ಯಾನಂದವನ್ನು ಅನುಭವಿಸುವ ಉತ್ತಮ ಸ್ಥಿತಿಗೆ ಬಂದರು. ಅದೇನು ಆಶ್ಚರ್ಯ? ಉಣ್ಣಲಿಕ್ಕೆ ತಿನ್ನಲಿಕ್ಕೆ ಏನೂ ಕಡಿಮೆಯುಂಟೇ? ಅವರಿಗೆ ಯೋಚನೆ ಯಾವದಾದರೂ ಇರಲಿಕ್ಕೆ ಕಾರಣವೇ ಇಲ್ಲ. ಮೃಷ್ಟಾನ್ನಭೋಜನದಿಂದ ಮೈಬಣ್ಣವು ಪುತ್ಥಳಿ ಚಿನ್ನದ ವರ್ಣಕ್ಕೂ ಮಿಗಿಲಾಯಿತು. ದೇಹದಲ್ಲಿ ಬಲವೂ ಪುಷ್ಟಿಯೂ ವೃದ್ಧಿ ಯಾಗುತ್ತಾ ಬಂದು, ಮೊದಲು ಅವರನ್ನು ನೋಡಿದವರಿಗೆ ಈಗ ಫಕ್ಕನೆ ಗುರ್ತು ಸಿಕ್ಕುವುದು ಪ್ರಯಾಸವಾಯಿತೆನ್ನಬಹುದು. ಶ್ರೀಪಾದಂಗಳವರ ದಯಾಭಿಲಾಷಿಗಳಾಗಿ ಬರುವವರಲ್ಲಿ ಅನೇಕರು ಮೊದಲು ವಾಗ್ದೇವಿಯ ಪಿತನನ್ನು ಕಂಡು, ತನ್ನ ಬರುವಿಕೆಯ ಉದ್ದೇಶವನ್ನು ವಿನಯಪೂರ್ವಕ ವಾಗಿ ತಿಳಿಸಿ, ಅದು ನೆರವೇರಲಿಕ್ಕೆ ಅವಶ್ಯವಿರುವ ಸಹಾಯವನ್ನು ದೊರ ಕಿಸಿಕೊಳ್ಳುವುದಕ್ಕೆ ಅವನಿಂದ ವಾಗ್ದಾನ ಪಡಕೊಳ್ಳುವ ಮುಂಚೆ ಯತಿಗಳ ಮಠದ ಬಾಗಿಲಿಗೆ ಹೋಗಲಿಕ್ಕೆ ಹೆದರುವರು. ಸಣ್ಣಸಣ್ಣ ಸಂಗತಿಗಳಲ್ಲಿ ತಮ್ಮಣ್ಣಭಟ್ಟನು ವೆಂಕಟಪತಿ ಆಚಾರ್ಯನನ್ನು ಕಂಡು, ಇಂಥಿಂಥವಗೆ ಇಂಥಿಂಥಾ ಕೆಲಸವಾಗಬೇಕೆಂದು ತಿಳಿಸಿದರೆ ಸಾಕು. ಅವನು ಕೊಟ್ಟ ವಾಗ್ದಾನಗಳು ನೆರವೇರುತ್ತಿದ್ದುವು. ವಿಶೇಷ ಕಾರ್ಯಗಳಾದರೆ ವಾಗ್ದೇವಿಯ

ಮುಖೇನ ಆಗಬೇಕು. ಅವಳು ತಾನೆ ಶ್ರೀಪಾದಂಗಳವರಿಗೆ ಅರಿಕೆಮಾಡಿ ಅವರು ವಿನೋದರೂಪವಾಗಿ ಒಲ್ಲೆನೆಂದರೆ ಅವರ ಕಿವಿಯನ್ನು ಹಿಂಡಿ—“ಸಾಕು ನೀನು ಹೇಳಿದಂತಾಗಲಿ” ಎಂಬ ನುಡಿಯನ್ನು ಸನ್ಯಾಸಿಯ ಬಾಯಿಯಿಂದ ಹೊರಡಿಸದೆ ಮ್ಲಾನವದನಳಾಗಿ ಹಿಂತಿರಿಗಿ ಬರುವ ಕಾಲ ಉಂಟೇ? ಇಹದಲ್ಲಿ ಸ್ತ್ರೀಮೋಹಕ್ಕೆ ಮರುಳಾದವನು ಚಂದ್ರನಲ್ಲವೇ?

ಆಬಾಚಾರ್ಯನ ಕಾರಭಾರಿನ ವೃತ್ತಾಂತ ಕೇಳಲಿಕ್ಕೆ ವಾಚಕರಿಗೆ ಇಷ್ಟವಿರಬಹುದು. ಅವನು ಮುಂಜಾನೆ ಎದ್ದು ಮುಖಪ್ರಕ್ಷಾಳನ ಮಾಡಿದಾಕ್ಷಣ ದೇವಸ್ಥಾನಕ್ಕೆ ಹೋಗಿ ದೇವರಿಗೆ ಕೈ ಮುಗಿಯುವದು ಬಿಟ್ಟು ಭೋಜನ ಶಾಲೆಗೆ ಬಂದು ಆ ಹೊತ್ತು ಎಷ್ಟು ಬಗೆ ಪಲ್ಯ, ನಿತ್ಯಗಟ್ಲೆಗಿಂತ ಹೆಚ್ಚಿನ ಭಕ್ಷ್ಯಭೋಜ್ಯಾದಿಗಳು ಆಗುವ ಸಂಭವವದೆಯೋ ಎಂಬ ವರ್ತಮಾನವನ್ನು ಜಾಗ್ರತೆಯಿಂದ ಸಂಗ್ರಹಿಸಿದ ಮೇಲೆ ಅತ್ತೆ ಮಾವಂದಿರನ್ನು ಕಂಡು ಅವರಿಗೆ ವಂದಿಸಿ ಪತ್ನಿಯ ಮುಖಾವಲೋಕನದ ಸುಖವನ್ನನುಭವಿಸಿ ಒಂದಾನೊಂದು ವೇಳೆ ಸಿಟ್ಟುತಾಳಿ — “ಏನೇ ವಾಗೀ! ನಿನಗೆ ಯಾರೂ ಕೇಳುವವರಿಲ್ಲವೇ ಒಳ್ಳೇಶಾಲೆ ಉಟ್ಟು ಕುಪ್ಪಸ ತೊಟ್ಟುಕೊಂಡು ತುಳಸಿಕಟ್ಟೆ ಎದುರು ಚಲೋದಾಗಿ ರಂಗೋಲಿ ಬರೆದು, ಹೂವುಗಳಿಂದ ಅಲಂಕರಿಸುವದು ಬಿಟ್ಟು ಇನ್ನೂ ಮುಖಮಜ್ಜನ ಮಾಡದೆ, ಸುಮ್ಮಗೆ ದೈವದಂತೆ ಕೂತುಬಿಟ್ಟಿದ್ದೀಯಲ್ಲ? ದಿನವಹಿ ನಿನಗೆ ಬುದ್ಧಿ ಹೇಳಬೇಕೇ? ‘ಕುದುರೆಗೆ ಹಿಷಾರಿ ಕತ್ತೆಗೆ ಲತ್ತೆ’ ಎಂಬ ಗಾದೆ ಕೇಳಿ ಬಲ್ಲಿಯಾ? ಕತ್ತೆಯಂತೆ ನಿನ್ನ ಅವಸ್ಥೆ ಕಾಣಿಸುತ್ತದೆ. ಈಗ ಒಂದು ಏಟು ಕೊಟ್ಟುಬಿಟ್ಟರೆ ನಾಲ್ಕು ಗಾವುದವರೆಗೂ ಉರುಳಾಡಬೇಕು. ಛೀ ಥೂ, ಎನ್ನಿಸಿಕೊಂಡನಕ ಯಾವ ಕೆಲಸವಾದರೂ ಮಾಡಲಾರೆಯಾ” ಎಂದು ಕೋಪಾಟೋಪದಿಂದ ದವಡೆಗೆ ಹೊಡಿಯಲಿಕ್ಕೆ ಕೈ ಎತ್ತುವ ಕಾಲದಲ್ಲಿ ಭಾಗೀರಥಿಯು ಅಡ್ಡತಡದು ಮಗಳಿಗೆ ಗದರಿಸಿ ಅಳಿಯನ ಸಿಟ್ಟು ತಣಿಸುವಳು.

ವಾಗ್ದೇವಿಯು ಗಂಡಗೆ ಸಿಟ್ಟು ಬಂದಾಗ ಗಡಗಡನೆ ನಡುಗಿ ಈಗ ಹೊಡೆಯುವನೋ ಆಗ ಹೊಡಿಯುವನೋ ಎಂಬ ಹೆದರಿಕೆಯಿಂದಿರುವವಳ ವೇಷವನ್ನು ಧರಿಸಿಕೊಳ್ಳುವಳು. ಅವಳು ಕ್ಷಣಸಾವಕಾಶವಿಲ್ಲದೆ ದಪ್ಪವಾದ ಮೊಸರಿನಲ್ಲಿ ಜೀರಸಾಲೆಬತ್ತದ ಅವಲಕ್ಕಿ ನೆನೆಹಾಕಿ ಎಳೇಮೆಣಸು ಹಸಿ ಶುಂಠಿ ಚೂರು ಬೆರಸಿ —“ಹೌದೇನು! ಮೊಸರು ಅವಲಕ್ಕಿ ಮಡಗಿ ಎಷ್ಟು

ಹೊತ್ತಾಯಿತು? ಒಳಗೆ ಒರಬಾರದೇನು! ದಿನಾಲು ನಮಗೆ ಹೇಳಿಹೇಳಿ ಸಾಯುವವರ್ಯಾರು? ಹೊತ್ತಿಗೆ ಇಷ್ಟು ತಿನ್ನಲಿಕ್ಕೆ ಉದಾಸೀನವಾದರೆ ಮಾಡ ತಕ್ಕದ್ದೇನು" ಎಂದು ಸಮೀಪವಿದ್ದವರಿಗೆ ಮೆಚ್ಚಿಸುವಳು. "ರವಷ್ಟು ತಡಿಯೇ, ನಾನಿನ್ನೂ ಸೂರ್ಯನಮಸ್ಕಾರ ಮಾಡಲಿಲ್ಲ. ನಿನ್ನ ಅವಲಕ್ಕಿ ಯಾರಿಗೆ ಬೇಕು? ದಿಂಡೆ ಹೆಂಗಸು" ಹೀಗೆಂದು ಗದರಿಸಿ ಬಿಟ್ಟು ಗಂಡನು ಮೋರೆ ಗಂಟುಹಾಕಿಕೊಳ್ಳುವದೂ ಇತ್ತು. ಅಂಥಾ ಸಮಯದಲ್ಲಿ ಸುಮ್ಮನೆ ಅವಲಕ್ಕಿ ಹಾಳಾಗ ಬೇಕ್ಯಾಕೆ? ಕೆಪ್ಪಮೂಣಿಯಾದರೂ ತಿನ್ನಲೆಂದು ವಾಗ್ದೇ ವಿಯು ಅವನನ್ನು ಕರಿಯಲಿಕ್ಕ ನೋಡಿ— "ಸೂರ್ಯನಮಸ್ಕಾರ ನಾಳೆ" ಎಂದು ಬೇಗನೆ ಒಳಗೆ ಹೋಗಿ ಅವಲಕ್ಕಿಯನ್ನು ಸಂಪೂರ್ಣವಾಗಿ ಹೊಟ್ಟೆ ಯಲ್ಲಿಳಿಸಿ ಬಿಟ್ಟು ತೇಗುತ್ತಾ ಆ ಹೊಟ್ಟೆಬಾಕನು ಹೊರಗೆ ಬರುವನು.

ಹಗಲು ಸಮಯ ಆಬಾಚಾರ್ಯನು ಆಗಿಂದಾಗ್ಯೆ ಪತ್ನಿಯ ಮೇಲಣ ವಿಚಾರವನ್ನು ಮಾಡಿ ಅವಳ ನ್ಯೂನಾತಿರಿಕ್ತಗಳನ್ನು ಕ್ಷಣಕ್ಷಣ ತಿದ್ದುತ್ತಾ ಈ ದಂಪತಿಗಳ ಮರ್ಮವನ್ನು ತಿಳಿಯದ ಜನರಿಗೆ ಅವನು ಸಾಕ್ಷಾತ್ ಯಮನೆಂಬಂತೆ ಕಾಣಿಸಿಕೊಳ್ಳುವನು. ಪರಂತು ಮಠದಲ್ಲಿರುವ ಸರ್ವ ಜನ ರಿಗೂ ಆಬಾಚಾರ್ಯನ ಕಪದುಗಾರಿಕೆ ಚನ್ನಾಗಿ ಗೊತ್ತಿತ್ತು. ಅವನು ಹೆಂಡ ತಿಯ ಮೇಲೆ ನಡಿಸುವ ಶಿಕ್ಷೆರಕ್ಷೆಯು ಸೂರ್ಯನು ಉದಯಾಚಲಕ್ಕೆ ಬಂದ ತರುವಾಯ ಅಸ್ತಾಚಲಕ್ಕೆ ಹೋಗುವ ಪರಿಯಂತರ ಹನ್ನೆರಡು ತಾಸುಗಳಷ್ಟು ಸಮಯಕ್ಕೆ ಮಾತ್ರ ಮಿತವಾಗಿರುವದಲ್ಲದೆ ದೀಪ ಹಚ್ಚಿದ ಮೇಲೆ ಅವಳ ಮೇಲೆ ಪತಿಯು ಎಳ್ಳಿನಷ್ಟು ಸ್ವತಂತ್ರ ಉಳ್ಳವನಾಗಿರಲಿಲ್ಲ. ಹೀಗಾಗಿ ಅವನು ಪುಣ್ಯವಂತನೆಂದು ಅತ್ತೆ ಮಾವಂದಿರು ಸಹ ಅವನ ಮೇಲೆ ಅಮಿತ ಪ್ರೀತಿಯಿಂದ ಇರುವರು. ವಾಗ್ದೇವಿ ಅನಕಾ ಪತಿಯನ್ನು ನೋಡಿದಾಕ್ಷಣ ಬೆಚ್ಚಿ ಬಿದ್ದು ಸಂದು ಮೂಲೆಯಲ್ಲಿ ಅಡಗಿಕೊಳ್ಳುವಳು. ಎಷ್ಟು ಮುಂಜಾಗ್ರತೆಯಿಂದ ನಡಕೊಂಡರೂ ಇವರು ಮಠದಲ್ಲಿ ಆವಾಸ ಮಾಡಿಕೊಂಡಿರುವ ಉದ್ದೇಶವು ಸಜೀವ ಪ್ರಾಣಿಗಳಿಗೆಲ್ಲ ಚನ್ನಾಗಿ ಗೊತ್ತಿರುವದು.

ಒಂದಾನೊಂದು ದಿನ ಗ್ರಹಣಕಾಲದಲ್ಲಿ ನದೀಸ್ನಾನಕ್ಕೆ ವಾಗ್ದೇವಿಯು ಪತಿ ಮತ್ತು ತಂದೆತಾಯಿಗಳ ಸಮ್ಮೇಳದಲ್ಲಿ ಮುಂದಗಮನೆಯಾಗಿ ಹೋಗು ವಾಗ ಅದೇ ಉದ್ದಿಶ್ಯ ನದಿತೀರಕ್ಕೆ ಬರುವವರಲ್ಲಿ ಕೆಲವು ಕಾಕ ಪೋಕರು

ವಾಗ್ದೇವಿಯನ್ನು ಹಾಸ್ಯವದನಯುಕ್ತರಾಗಿ ನೋಡಿದರು. ಆಬಾಚಾರ್ಯನು ಅವರನ್ನು ಕಂಡಾಬಟ್ಟಿ ಬೈದು ಗದರಿಸಿ ದೂರಮಾಡಿದನು. ಕೂಡಲೇ ಇನ್ನೂ ಕೆಲವರು ಹಾಗೆಯೇ ಮಾಡತೊಡಗಿದರು. ಆಚಾರ್ಯನು ಸುಮ್ಮಗಿರಲಿಲ್ಲ. ದಿಂಡರಾದ ಆ ಯೌವನಸ್ತರಿಗೆ ವಿವಿಧರೀತಿಯಲ್ಲಿ ಹೆವರಿಸಿ ತನ್ನ ಪ್ರತಾಪ ವನ್ನು ಮೆರೆಸಿಬಿಟ್ಟೆನೆಂಬ ಅಹಂಕಾರದಿಂದ ಮುಂದ್ವರಿಯುತ್ತಿರಲು ಕೆಲವು ಯೌವನಸ್ಥರ ಗುಪ್ತಭೋಧನೆಯಿಂದ ಉತ್ತೇಜನ ಹೊಂದಿದ ಶುದ್ಧ ಪಟಿಂಗ ನೊಬ್ಬನು— "ಕ್ವಚಿತ್ ಕಾಣೆ ಭವೇತ್ಸಾಧು ಕ್ವಚಿತ್ ಕಾಣೀ ಪತಿವ್ರತಾ" ಎನ್ನುತ್ತಾ ವಾಗ್ದೇವಿಯ ಮುಖವನ್ನು ಈಕ್ಷಿಸಿ ಗಹಗಹಿಸಿ ನಕ್ಕನು.

ಕವನಕಟ್ಟಿ ನಿಂದೆಯನ್ನು ಇನ್ನೊಬ್ಬನು ಮಾಡಿದನು. ಆಗ ಮತ್ತೊಬ್ಬನು ಅವನಂತೆಯೇ ಇನ್ನೊಂದು ಕುಚೋದ್ಯರೂಪವಾದ ಪದ್ಯ ಮಾಡಿ ರಾಗದಿಂದ ಹಾಡಿ ತನ್ನ ಸಂಗಡಿಗರ ಸಮೇತ ನಕ್ಕನು.

ಕುಹಕಿಗಳಾದ ಬೇರೆ ಕೆಲವರು ನಿರಾತಂಕವಾಗಿ ನಗಲಿಕ್ಕೆ ಪ್ರಾರಂಭಿಸಿದರು. ಆಬಾಚಾರ್ಯನು ಸುಮ್ಮಗಿರದೆ ಹಿಡುಕೊಂಡಿರುವ ಬೆತ್ತವನ್ನು ಬೀರುತ್ತಾ ಆ ದುರ್ಜನರನ್ನು ಓಡಿಸಿಕೊಂಡು ಹೋದನು. ತಕ್ಕಷ್ಟು ದೂರದಲ್ಲಿ ಅವರು ಬೇರೆ ತಂಡಗಳಾಗಿ ನಿಂತುಕೊಂಡು ವಿವಿಧ ಹಾಸ್ಯಕರವಾದ ಪದ್ಯಗಳನ್ನು ರಚಿಸಿ, ಆಚಾರ್ಯರಿಗೆ ನಮಸ್ಕಾರ ಹಾಕಿರೋ ಎಂದರು. ಪ್ರೇಕ್ಷಕರೆಲ್ಲರೂ ಕೈಚಪ್ಪರಿಸಿದರು.

ವಾಗ್ದೇವಿಯ ತಂದೆ ತಾಯಿಗಳು ಹೆಚ್ಚು ವ್ಯಥೆಯನ್ನು ತಾಳಿ ವಾಗ್ದೇವಿಯನ್ನು ಇಂಥ ಸಮೂಹದ ಮಧ್ಯದಿಂದ ತಕ್ಕೊಂಡು ಬಂದದ್ದು ದೊಡ್ಡ ಹೇಸಾಟವಾಯಿತೆಂದರು. ಆಬಾಚಾರ್ಯನು ಶುದ್ಧ ಬುದ್ಧಿಹೀನನಂತೆ ವರ್ತಿಸುತ್ತಾನೆಂಬ ನಾಚಿಕೆಯನ್ನು ಸಹಿಸಲಾರದೆ ವ್ಯಾಕುಲದಿಂದ ಅವರೆಲ್ಲರು ಮಠಕ್ಕೆ ಹಿಂತಿರುಗಿ ಬಂದರು. ಒಡನೆ ವಾಗ್ದೇವಿಯು ಚಂಚಲನೇತ್ರರನ್ನು ಕಂಡು ಮಳೆಯ ನೀರಂತೆ ಕಣ್ಣುಗಳಿಂದ ಜಲಧಾರೆಯನ್ನು ಸುರಿಸಿಕೊಳ್ಳುತ್ತ ತನಗಂದಾದ ಮಾನಭಂಗದ ವೃತ್ತಾಂತವನ್ನು ವಿವರಿಸಿ, ಪ್ರಾಣವು ಈಗಲೇ ಈ ಭ್ರಷ್ಟಶರೀರವನ್ನು ತೊಲಗಿ ಹೋದರೆ ಧನ್ಯಳಾಗುತ್ತಿದ್ದೆನೆಂದು ಬಹು ಪರಿಯಿಂದ ಮರುಗಿದಳು. ಸನ್ಯಾಸಿಯು ಮಿತಿಮೀರಿದ ಕೋಪದಿಂದ ನಡುಗುತ್ತಾ ಔಡುಗಳನ್ನು ಕಚ್ಚಿಕೊಂಡು, ಕಣ್ಣಾಲಿಗಳನ್ನು ಗರಗರನೆ ತಿರುಗಿಸುವ ಬರಕ್ಕೆ ವಾಗ್ದೇವಿಯ ದೂಷಕರನ್ನು ಆವಾಗಲೇ ಸನ್ಯಾಸಿಯು ಕೊಂದು

ಹಾಕಿ ಬಿಡುವ ಯೋಚನೆಯಲ್ಲಿರುವನೋ ಎಂಬ ದೊಡ್ಡ ಭೀತಿಯು ಅವಳ ಮನಸ್ಸಿಗೆ ಹೊಕ್ಕಿತು. ಸೂರ್ಯನು ಪಶ್ಚಿಮಕಡಲಿಗೆ ಬೀಳಬೇಕಾದರೆ ಆ ಕುನ್ನಿಗಳಿಗೆ ಬುದ್ಧಿಕಲಿಸದಿದ್ದರೆ ತನ್ನ ಮುಖಾವಲೋಕನವೇ ಮಾಡ ಬೇಡೆಂದು ಚಂಚಲನೇತ್ರರು ವಾಗ್ದೇವಿಗೆ ಸಮಾಧಾನಗೊಳಿಸಿ ಕಳುಹಿಸಿ ವೆಂಕಟಪತಿ ಆಚಾರ್ಯನನ್ನು ಕೂಡಲೇ ಬರಮಾಡಿಕೊಳ್ಳುವುದಕ್ಕೆ ಜನವ ಮೇಲೆ ಜನವನ್ನು ಕಳುಹಿಸಿಕೊಟ್ಟರು.

ನದೀ ಸ್ನಾನಕ್ಕೆ ಹೋಗಿರುವ ವೆಂಕಟಪತಿಯು ಧಣಿಯ ಆಜ್ಞೆಯಾಯಿ ತೆಂಬ ವಚನ ಕಿವಿಗೆ ಬಿದ್ದ ಕ್ಷಣ ತೀವ್ರವಾಗಿ ಸ್ನಾನವನ್ನು ತೀರಿಸಿಕೊಂಡು ಶ್ರೀಪಾದಂಗಳ ಸಮೀಪಕ್ಕೆ ಬಂದು ಪ್ರಣಾಮಮಾಡಿ ಅವರ ಮುಖವನ್ನು ಈಕ್ಷಿಸುವಾಗ ಯಮನನ್ನಾದರೂ ಕಣ್ಣುಬಿಟ್ಟು ನೋಡಬಹುದು, ಸಿಟ್ಟಿನಿಂದ ಮುಖ ವಿಕಾರವಾದ ಚಂಚಲನೇತ್ರರನ್ನು ನೋಡಲಿಕ್ಕೆ ಭಯವಾಗಿ ತಲೆ ಯನ್ನು ಬಾಗಿಸಿಕೊಂಡು ನಿಂತನು. ಅರೆಘಳಿಗೆ ಪರಿಯಂತರ ಮಾತಾಡದೆ ಸುಮ್ಮನಿದ್ದ ಮೇಲೆ "ನಮ್ಮ ಪ್ರಿಯಳನ್ನು ಹೀನಿಸಿದ ನಾಯಿಗಳ್ಯಾರು ವೆಂಕ ಟಪತೀ! ಗೊತ್ತಿದ್ದರೆ ಹೇಳು; ಇಲ್ಲವಾದರೆ ಬೇಗ ತಿಳುಕೊಂಡು ಅರಿಕೆ ಮಾಡು; ಈ ಸಣ್ಣ ಕೆಲಸ ನಿನ್ನಿಂದಾಗದಿದ್ದರೆ ಮನೆಗೆ ನಡದುಬಿಡು. ನಮ್ಮ ಮುಂದೆ ದಂಡವತ್ ನಿಂತುಕೋಬ್ಯಾಡ" ಎಂದು ಧನಿಗಳ ಅಪ್ಪಣೆ ಯಾಯಿತು. ಕೊಂಚ ಸಮಯ ಕೊಟ್ಟರೆ ವಿಚಾರಿಸಿ ಸಕಲ ವೃತ್ತಾಂತವನ್ನು ಪೂರ್ಣವಾಗಿ ಅರಿಕೆಮಾಡುವದಾಗಿ ವಿಜ್ಞಾಪಿಸಿ ವೆಂಕಟಪತಿ ಆಚಾರ್ಯನು ವಾಗ್ದೇವಿಯನ್ನೂ ಅವಳ ತಂದೆತಾಯಿಗಳನ್ನೂ ಅವಳ ಪತಿಯನ್ನೂ ಕಂಡು ಅವರನ್ನು ಅವಮರ್ಯಾದೆ ಮಾಡಿದ ಪೋಕರಿಗಳ್ಯಾರೆಂಬ ಅನುಭವವನ್ನು ತಕ್ಕಮಟ್ಟಿಗೆ ಸಂಗ್ರಹಿಸಿ ಪುನಃ ನದಿಯ ಬಳಿಗೆ ಹೋಗಿ ಪ್ರಥಮತಃ ತನಗೆ ಮಾತಾಡಲಿಕ್ಕೆ ಸಿಕ್ಕಿದ ತಿಪ್ಪಾಶಾಸ್ತ್ರಿಯ ಸಂಗಡ ಸಂಭಾಷಣೆಯನ್ನು ಮಾಡಿ, ತಿಳಿಯಬೇಕಾಗಿರುವ ಸಮಾಚಾರವನ್ನು ಆದ್ಯಂತ ಅರಿತುಕೊಂಡು, ಮಠಕ್ಕೆ ಮರಳಿ ಚಂಚಲನೇತ್ರರಿಗೆ ತಿಳಿಸಿದನು.

ಬಹಿರಂಗವಾಗಿ ಕೆಣಕುವಷ್ಟು ಧೈರ್ಯಗೊಂಡ ಕಡುಮೂರ್ಖರನ್ನು ತಾಮಸವಿಲ್ಲದೆ ಶಿಕ್ಷಿಸಿದನಕ ಭಿಕ್ಷೆ ತಕ್ಕೊಳ್ಳಲಾರೆನೆಂದು ಚಂಚಲನೇತ್ರರು ಹಟಹಿಡಿದರು.

ವಾಗ್ದೇವಿಯು ನಾಚಿಕೆಯಿಂದ ಮೋರೆಯೆತ್ತಲಾರದೆ ಕತ್ತಲೆಕೋಣೆ

ಯನ್ನು ಪ್ರವೇಶಿಸಿ ಕಣ್ಣೀರು ಸುರಿಸುತ್ತಾ ಕೂತುಕೊಂಡಳು. ಅವಳ ತಂದೆ ತಾಯಿಗಳು ಬಹು ಖಿನ್ನರಾಗಿ ಅಲ್ಲಲ್ಲಿ ಅಡಗಿಕೊಂಡರು. ಆಬಾಚಾರ್ಯನು ಹಂದಿಯಂತೆ ನಾಚಿಕೆಯನ್ನು ತೊರೆದುಬಿಟ್ಟು ಅಂದು ಊಟಕ್ಕೆ ಎಲೆಹಾಕು ವಾಗ ಎಷ್ಟು ಹೊತ್ತಾಗುವುದೋ ಎಂಬ ಯೋಚನೆಯಲ್ಲಿಯೇ ಬಿದ್ದನು. ವಾಗ್ದೇವಿಯ ಚಿಂತೆಗೆ ತುದಿಮೊದಲೇ ಇರಲಿಲ್ಲ. ಭಾಗೀರಥಿಯು ಎಷ್ಟಾವರ್ತಿ ಕರೆದಾಗ್ಯೂ ಅವಳು ಪ್ರತ್ಯುತ್ತರ ಕೊಡದೆ ಇದ್ದುಕೊಂಡಳು.

## ಹದಿಮೂರು

ಅವಮರ್ಯಾದೆಯ ದೆಸೆಯಿಂದ ಸಂತಾಪಗ್ರಸ್ತಳಾಗಿರುವಾಗ ವಾಗ್ದೇವಿಗೆ ತಿಪ್ಪಾಶಾಸ್ತ್ರಿಯ ನೆನಪು ಬಂತು. ಅಹಾ! ಸಂತೋಷಪ್ರಾಪ್ತಿಸಿದಾಗ ಮರೆಯದೆ ಕರೆಸಿಕೊಂಡರೆ ಮುಂದಿನ ವೃದ್ಧಿಯ ಉಪಾಯವನ್ನೆಲ್ಲ ಹೇಳುವೆನೆಂದು ಅನುರಾಗ ಪೂರ್ವಕವಾಗಿ ವಾಗ್ದತ್ತಮಾಡಿದ ಆಪ್ತನನ್ನು ಮರೆತು ಬಿಟ್ಟ ಸಂಬಂಧ ಈ ಅಪಮಾನಕ್ಕೆ ಒಳಗಾದೆನೆಂಬ ಅನುಮಾನವು ವಾಗ್ದೇವಿಯ ಮನಸ್ಸಿಗೆ ಸೇರಿತು. ಆವಾಗಲೇ ಪತಿಯನ್ನು ಕರೆದು, ತಿಪ್ಪಾಶಾಸ್ತ್ರಿಯನ್ನು ಹುಡುಕಿ ತರಬೇಕಾಗಿ ತನಗಿರುವ ಅಪೇಕ್ಷೆಯನ್ನು ಗೃಹಿಣಿಯು ತಿಳಿಸಿದೊಡನೆ ಆಬಾಚಾರ್ಯನು ಊಳಿಗದವನಹಾಗೆ ಹೊರಟು, ತಿಪ್ಪಾಶಾಸ್ತ್ರಿಯನ್ನು ಕಂಡು ವಾಗ್ದೇವಿಯ ಅಪೇಕ್ಷೆಯನ್ನು ತಿಳಿಸಿದನು. ಸಂತೋಷಪಟ್ಟು ಶಾಸ್ತ್ರಿಯು ಆಬಾಚಾರ್ಯನ ಸಂಗಡಲೇ ಹೊರಟುಬಂದು, ವಾಗ್ದೇವಿಯನ್ನು ಕಂಡನು.

ತನಗೆ ಉಂಟಾದ ಮಾನಭಂಗವನ್ನು ಅಶ್ರುಜಲವಿಳಿಸುತ್ತಾ ವಾಗ್ದೇವಿಯು ಮುದ್ದುಗೆಳೆಯ ತಿಪ್ಪಾಶಾಸ್ತ್ರಿಗೆ ತಿಳಿಸಿ, ಅವನ ಕಾಲಿನ ಮೇಲೆ ಬಿದ್ದು ದುಃಖಪಡುತ್ತಾ ಹೊರಳಾಡಿದಳು. ಈ ಪ್ರಲಾಪವನ್ನು ನೋಡಿ ತಿಪ್ಪಾಶಾಸ್ತ್ರಿಯ ಎದೆಯು ಬಿರಿಯಿತು. ಆ ಮೋಹನಾಂಗಿಯನ್ನು ಎಬ್ಬಿಸಿ ಸಮ್ಮುಖದಲ್ಲಿ ಕೂರಿಸಿ—"ವಾಗೀ! ಚಿಂತೆ ಬಿಡು; ಅವಸರ ಮಾಡಬೇಡ. ನಿನ್ನ ಪ್ರೀತಿಯ ಒಡೆಯರು ಮುಯ್ಯಿಗೆಮುಯ್ಯಿ ತೀರಿಸದೆ ಸುಮ್ಮಗಿರುವರೆಂದು ಭಾವಿಸಿದಿಯಾ? ಛೀ. ಹಾಗೆ ನೆನಸ ಬೇಡ. ನಿನ್ನ ಶತ್ರುಗಳಿಗೆ ಬುದ್ಧಿ ಕಲಿಸದೆ, ಇಂದು ಭಿಕ್ಷೆಯನ್ನು ಅವರು ಮುಟ್ಟಲಾರರು. ಈಗ ಅವರು ಪಾರುಪತ್ಯಗಾರನ ಸಂಗಡ ಇದೇ ವಿಷಯದಲ್ಲಿ ಸಂಭಾಷಣೆ ಮಾಡುವ ಗೋಷ್ಯವು

ಪ್ರಶ್ನೆಭಾಗದಿಂದ ತಿಳಿಯುತ್ತದೆ. ಅದು ಹಾಗಿರಲಿ. ನಿನ್ನ ಮಾನಹಾನಿಯ ಮಾತುಗಳನ್ನಾಡಿದ ದುಷ್ಟರ್ಯಾರೆಂಬುದು ಗೊತ್ತಿದೆ. ಅವರಿಗೆ ಈ ದಿನವೇ ಛಿದ್ರಮಾಡಿ ಬಿಡುತ್ತೇನೆ. ಅವರ ಪಾಡು ಏನಾಗುತ್ತದೆಂದು ನೋಡು" ಎಂದು ಅವಳಿಗೆ ಚೆನ್ನಾಗಿ ಧೈರ್ಯ ಹೇಳಿ, ನಾಳೆ ಬರುವೆನೆಂದು ಮರಳಿ ಹೊರಡುವಾಗ ವಾಗ್ದೇವಿಯು ತಿಪ್ಪಾಶಾಸ್ತ್ರಿಯ ಕುತ್ತಿಗೆಯನ್ನು ಮೃದುವಾದ ಉಭಯ ತೋಳುಗಳಿಂದಲೂ ಬಿಗಿದಪ್ಪಿ— "ಏ! ನನ್ನ ಬಾಲ್ಯಾನ್ತದ ಸ್ನೇಹಿ ತನೇ! ರಕ್ಷೆ ಹೇಳಿ, ನಡೆದು ಬಿಡುತ್ತೀಯಾ? ವಾಗ್ದೇವಿಯ ಮೇಲೆ ನಿನಗೆ ಅಷ್ಟು ಉಪೇಕ್ಷೆಯಾಯಿತೇ? ಶ್ರೀಹರೀ! ನನ್ನ ಪ್ರಾಣವು ಈ ನನ್ನ ಕಲ್ಮಷ ದೇಹವನ್ನು ಬಿಟ್ಟುಹೋಗುವುದಿಲ್ಲವಲ್ಲ! ನಾನು ಈ ನರ ಜನ್ಮದಲ್ಲಿ ಯಾಕೆ ಹುಟ್ಟಿದೆ?" ಎಂದು ಹಲುಬಿದಳು. ತಿಪ್ಪಾಶಾಸ್ತ್ರಿಯ ಮನಸ್ಸು ಕರಗಿತು. ಆ ಶೋಕ ನೋಡಿದರೆ ಬಂಡೆ ಕಲ್ಲಾದರೂ ದ್ರವಿಸುವದು. ನರನಾದ ಶಾಸ್ತ್ರಿಯ ಹೃದಯ ದ್ರವಿಸುವುದು ಏನು ಆಶ್ಚರ್ಯ? ತಿಪ್ಪಾಶಾಸ್ತ್ರಿಯು ಕಂಬನಿ ತುಂಬಿದ ಕಣ್ಣುಗಳಿಂದಲೂ ಗದ್ಗದ ಸ್ವರದಿಂದಲೂ ವಾಗ್ದೇವಿಯನ್ನು ತಾನು ಸರ್ವಥಾ ರಕ್ಷೆ ಮಾಡುವವನಲ್ಲವೆಂದು ಹಲವು ದೃಷ್ಟಾಂತಗಳಿಂದ ಸಮಾ ಧಾನಗೊಳಿಸಿ, ಅವಳನ್ನು ನಿಂದಿಸಿದ ದಿಂಡರನ್ನು ನಿಪಾತಮಾಡಿಬಿಡುವೆ ನೆಂದು ಭಾಷೆಯನ್ನು ಕೊಟ್ಟು ಮರುದಿವಸ ಅಗತ್ಯವಾಗಿ ಬಂದು ಮುಂದಿನ ಆಲೋಚನೆ ಹೇಳುವುದಾಗಿ ನಂಬಿಸಿ, ಮನೆಗೆ ಮರಳಿದನು.

ಇತ್ತ ವೆಂಕಟಪತಿ ಆಚಾರ್ಯನು ಶ್ರೀಪಾದಂಗಳ ಸಂಗಡ ಹೆಚ್ಚು ಸಮ ಯದವರೆಗೆ ಅವರ ಅವಕೃಪೆಗೆ ಪಾತ್ರರಾದ ದುರಾತ್ಮರ ಶಿಕ್ಷೆಯ ಕುರಿತು ಚರ್ಚೆಮಾಡಿ, ಅವರನ್ನು ಹೊಡಿಸಿ, ಅಂಗಹೀನಮಾಡುವುದಕ್ಕೆ ಯತಿಗಳು ಮಾಡಿದ ನಿರ್ಣಯವು ಬಲವಾದ ಕಾರಣಗಳಿಂದ ಅನುಚಿತವೆಂದು ಅವರನ್ನು ಒಡಂಬಡಿಸಿದನು. "ಬೇರೆ ಉಪಾಯವೇನದೆ?" ಎಂದು ಚಂಚಲನೇತ್ರರು ಅತ್ಯವಸರದಿಂದ ಕೇಳಲು, ಅವರೆಲ್ಲರೂ ಮಠದ ಶಿಷ್ಯರೇ. ಅವರನ್ನು ಬಹಿ ಷ್ಕಾರದ ಮೂಲವಾಗಿ ದಂಡಿಸುವಷ್ಟು ಪ್ರಶಸ್ತವಾದ ಇನ್ನೊಂದು ವೈನವಿರ ಲಾರದೆಂದು ವೆಂಕಟಪತಿಯು ಅರುಹಿದನು. ಅವನ ಅಭಿಪ್ರಾಯದಲ್ಲಿ ಚಂಚಲನೇತ್ರರು ಏಕೀಭವಿಸಿ, ಈ ಸಂಕಲ್ಪವು ಸಿದ್ಧಿಯಾಗುವ ಉಪಕ್ರಮ ವನ್ನು ಬೇಗನೇ ವರ್ತಿಸೆಂದು ಅಪ್ಪಣೆಕೊಟ್ಟರು. ಇಂದೇ ಅದನ್ನು ಕಡೆಗಾಣಿ ಸುವೆನೆಂದು ಪ್ರಣಾಮಮಾಡಿ, ವೆಂಕಟಪತಿಯು ಹೊರಟನು. ವಾಗ್ದೇವಿ

ಯನ್ನು ನಿಂದಿಸಲಿಕ್ಕೆ ಪವಿತ್ರಕರ್ತರಾದವರು ಐದುಮಂದಿ ಯೌವನಸ್ಥರು ಅವರ್‍ಯಾರೆಂದರೆ —ತಿರಚಲ ಉಪೇಂದ್ರಾಚಾರ್ಯನ ಕುಮಾರ ವಿಶ್ವೇಶ್ವರ, ಚಿಂತೂರು ಕೇಶವಾಚಾರ್ಯನ ಮಗ ಶ್ರೀಧರ, ವರಹಾರ ರಾಮಚಂದ್ರ ಉಪಾಧ್ಯನ ದತ್ತ ಪುತ್ರ ನರಸಿಂಹ, ಕಾಚೂರು ತಿರ್ಮಲರಾಯನ ಪೌತ್ರ ಆದಿನಾರಾಯಣ, ಶ್ರೀಪುರ ಬಾಲಕೃಷ್ಣ ಐತಾಳನ ದೌಹಿತ್ರ ಡೊಣ್ಣ. ಈ ವ್ಯಕ್ತಿಗಳು ಒಬ್ಬರಿಗೊಬ್ಬರು ಮಿಗುವ ದುರಾಚಾರಿಗಳು; ದಿನೇ ದಿನೇ ಸಾಧು ಸಜ್ಜನರಿಗೂ ಅಬಲೆಯರಿಗೂ ನಿರ್ಭೀತಿಯಿಂದ ಉಪದ್ರಕೊಟ್ಟು ಆನಂದ ಪಡುವ ಕುಹಕರು. ಇವರ ಯಜಮಾನರು ಆಢ್ಯರಾಗಿರುವ ದೆಸೆಯಿಂದ ಅವರ ಮೇಲೆ ಬೀಳಲಿಕ್ಕೆ ಪುರವಾಸಿಗಳು ಸೆಚ್ಚು ಅಂಜುವರು. ಕ್ರಮೇಣ ಸಿಕ್ಕಿಬಿದ್ದರೆ ಹಿಂದೆ ಮಾಡಿದ ಉಪಟಳೆಯ ಫಲವನ್ನು ಅನುಭವಿಸುವರೆಂಬ ಕೋರಿಕೆಯಿಂದ ಅನೇಕರು ಕಾದುಕೊಂಡಿರುವರು.

ವೆಂಕಟಪತಿ ಆಚಾರ್ಯನು ಅವರಿಗೆ ಬುದ್ಧಿಕಲಿಸುವುದಕ್ಕೆ ನಡೆಸುವ ಯತ್ನವು ತ್ವರ್ಯವಾಗಿ ಕೈಗೂಡುವುದು ಸುಲಭವಾಗಿ ತೋರಲಿಲ್ಲ. ಆದರೂ ಅನುಭವಸ್ಥ ಮತ್ತು ಚಾತುರ್ಯವಂತನಾದ ಆಚಾರ್ಯನು ಧೈರ್ಯಗುಂದದೆ ಶಿವ್ವಾಶಾಸ್ತ್ರಿಯ ಸಹಾಯವನ್ನು ಪಡಕೊಂಡು, ಕೆಲವು ಪ್ರಮುಖ ಪಟ್ಟಣವಾಸಿಗಳಿಂದ ಶ್ರೀಪಾದಂಗಳವರಿಗೆ ಆ ಪೋಕರಿ ಹುಡುಗರ ಪುಂಡಾಟಿಕೆಯ ಮತ್ತು ಕ್ರಿಯಾಭ್ರಷ್ಟತನದ ಕುರಿತು ದೊಡ್ಡದೊಂದು ಬಿನ್ನವತ್ತಳೆಯನ್ನು ಬರೆಸಿ, ಅದನ್ನು ಚಂಚಲನೇತ್ರರ ಕೈಗೆ ಸಿಕ್ಕುವಹಾಗೆ ಮಾಡಿದನು. ಅವರು ತಮ್ಮ ವೀರನಾದ ಪಾರುಪತ್ಯಗಾರಗೆ ಮೆಚ್ಚಿ ಚಂದಾಗಿ ಶ್ಲಾಘನೆಮಾಡಿದರು. ಆ ಮೇಲೆ ತತ್ಕಾಲ ಹೆಚ್ಚಿಗೆ ಪರ್ಯಾಲೋಚನೆ ನಡೆಸದೆ ಆ ದುರಾತ್ಮರೈವರನ್ನು ಬಹಿಷ್ಕಾರಮಾಡಿ, ರಾಯಸ ಪತ್ರವನ್ನು ಕೊಟ್ಟರು.

ಈ ಸಂಬಂಧ ಆ ಯೌವನಸ್ಥರ ಹಿರಿಯರೂ ಬಂಧು ಬಾಂಧವರೂ ಯತಿಗಳ ಮೇಲೆ ಬಹು ವೈರಭಾವ ತಾಳಿ ಅವರ ಬಹಿಷ್ಕಾರವನ್ನು ಮನ್ನಿಸದೆ, ದುಶ್ಶೀಲರಾದ ತಮ್ಮ ಕುಮಾರರನ್ನು ಕೂಡಿ ನಡೆದರೆ ಈ ಸನ್ಯಾಸಿಯಿಂದ ಆಗೋದೆಲ್ಲಾ ನೋಡಿಬಿಡಬಹುದೆಂದು ಹಟವನ್ನು ಸಾಧಿಸಲೆಸಗಿದರು. ಚಂಚಲನೇತ್ರರು ಅವರ ಪ್ರಾಬಲ್ಯ ಕಿಂಚಿತ್ತಾದರೂ ಗಣ್ಯಮಾಡದೆ, ಬಹಿಷ್ಕಾರ ಪತ್ರವನ್ನು ಅವಜ್ಞೆಮಾಡಿದ ಪ್ರತಿ ಒಬ್ಬಗೂ ಕಟ್ಟುಮಾಡಿ ಇಟ್ಟರು. ಹೀಗಾಗಿ ಮಠಾಧಿಪತಿಗಳಿಗೂ ಅವರ ಶಿಷ್ಯರಲ್ಲಿ ಪ್ರಮುಖರಾದ

ಅನೇಕರಿಗೂ ಮನಃಕ್ಲೇಶ ಉಂಟಾಯಿತು. ನಾನಾ ಅನರ್ಥವಾಗುವ ಸಂಭವವು ಒದಗಿತು ಹಾಗಾದರೂ ಚಂಚಲನೇತ್ರರು ಕುಗ್ಗದೆ, ಪಾರುಪತ್ಯಗಾರನ ಕೂಡೆ ಸಮಯಾನುಸಾರ ಗುಪ್ತಾಲೋಚನೆಮಾಡಿ, ಶತ್ರುಗಳ ಅಸ್ತ್ರಗಳಿಗೆ ಪ್ರತ್ಯಸ್ತ್ರವನ್ನು ಹೂಡುತ್ತಾ, ಫಲವನ್ನು ಸಂಪೂರ್ಣವಾಗಿ ಸಾಧಿಸುವುದಕ್ಕೆ ಪ್ರತಿಜ್ಞೆಮಾಡಿಕೊಂಡರು.

ಈ ಸಾಧನೆಗೆ ವಿಘ್ನಬಾರದಹಾಗೆ ತಿಪ್ಪಾಶಾಸ್ತ್ರಿಯ ಸ್ನೇಹವನ್ನು ಬೆಳೆಸುವುದು ವೆಂಕಟಪತಿಗೆ ಅವಶ್ಯವಾಯಿತು. ವಾಗ್ದೇವಿಯಂತೂ ತಿಪ್ಪಾಶಾಸ್ತ್ರಿಯ ನೆರಳಿಗೂ ಹಂಬಿಸಿ, ಮೋಹಪರವಶಳಾಗಿರುವ ದೆಸೆಯಿಂದ ಅವನ ಅಭೀಪ್ಸಿತ ನಿರಾತಂಕವಾಗಿ ಪೂರ್ಣವಾಗುವ ಸಮಯವು ಬಂತು. ಅವನು ದೊಡ್ಡ ಜೋಯಿಸನಾಗಿ ಬಹುಜನ ಹಂಗಿಕರ ಸಹಾಯ ಲಭ್ಯವಾದುದರಿಂದ ಮಠದ ಶಿಷ್ಯಮಂಡಲಿಯಲ್ಲಿ ಇತ್ತಂಡಗಳಾಗುವ ಗಂಡಾಂತರ ಸಂಭವಿಸಿದ ವೇಳೆಯಲ್ಲಿ ಅವನ ಸ್ನೇಹವು ಮಠಕ್ಕೆ ಪ್ರಯೋಜನಕರವಾಗಿ ತೋರಿತು. ಚಂಚಲನೇತ್ರರಿಗೆ ಅವನ ಮೇಲೆ ಹೆಚ್ಚು ಪ್ರೀತಿ ಉಂಟಾಯಿತು. ಅವನಿಗೆ ಯಾವರೀತಿಯಲ್ಲಿ ಮಠದಲ್ಲಿ ತನ್ನ ಹಂಗಿನಲ್ಲೇ ಇಡಲಿಕ್ಕೆ ಅನುಕೂಲಮಾಡುವುದೆಂಬ ಯೋಚನೆ ಹುಟ್ಟಿತು. ವೇದವ್ಯಾಸ ಉಪಾಧ್ಯನ ಪುರಾಣಿಕೆಯನ್ನು ಅವನಿಗೆ ಕೊಡಿಸಿದರೆ ಅವನು ತನ್ನನಗಲಿರಲಿಕ್ಕಿಲ್ಲವೆಂಬ ನಿರೀಕ್ಷಣೆಯು ವಾಗ್ದೇವಿಯಲ್ಲಿ ಪ್ರರೂಢಯೌವನಸ್ಥನಾದ ಅವನ ವಿಷಯ ಯತಿಯ ಕೂಡೆ ಪ್ರಸ್ತಾಪಿಸಿದರೆ ಯತಿಯ ಮನಸ್ಸಿನಲ್ಲಿ ತನ್ನ ಮೇಲೆ ಸಂಶಯವೂ ಅವನ ಮೇಲೆ ಮತ್ಸರವೂ ಜನಿಸಿ, ಇಬ್ಬರಿಗೂ ಕಾರ್ಯಹಾನಿಯಾಗಿ ನಷ್ಟಕಷ್ಟಭ್ರಷ್ಟವಾಗುವುದು. ತತ್ರಾಪಿ ವೆಂಕಪತಿ ಆಚಾರ್ಯನ ಪರಿಮುಖ ಶ್ರೀಪಾದಂಗಳವರ ಕೂಡೆ ಪ್ರಸ್ತಾಪಿಸುವ ಯತ್ನ ನಡಿಸಿದರೂ ಆಚಾರ್ಯಗೂ ಅಂಥಾ ಅನುಮಾನವೇ ಹುಟ್ಟಿ, ಮುಂದೆ ತಮ್ಮಿಬ್ಬರಿಗೂ ಕಷ್ಟಬರಲಿಕ್ಕೆ ಸಾಕೆಂಬ ಹೆದರಿಕೆಯಿಂದ ವಾಗ್ದೇವಿಯು ಮೌನವಾಗಿರಬೇಕಾಯಿತು.

ಪುರಾಣ ಓದುವ ಉದ್ಯೋಗದ ಆಸೆಯು ತಿಪ್ಪಾಶಾಸ್ತ್ರಿಯಲ್ಲಿ ತುಂಬಾ ಇತ್ತು ಬಾಯಿಬಿಟ್ಟು ಒಮ್ಮೆ ವಾಗ್ದೇವಿಗೆ ಅದನ್ನು ಅಂತರಂಗದಲ್ಲಿ ತಿಳಿಸಿದಾಗ ಅವಳು ತನ್ನ ಮನಸ್ಸಿನ ಗುಟ್ಟು ಅವನಿಗೆ ಕೊಡದೆ, ಸ್ವಾಮಿಗಳ ಕೂಡೆ ಸಮಯ ನೋಡಿ ಅರಿಕೆ ಮಾಡಿಕೊಳ್ಳುವೆನೆಂದು ಸುಳ್ಳು ವಾಗ್ದಾನವನ್ನು ಕೊಟ್ಟು, ಮರ್ಯಾದೆಯನ್ನುಳಿಸಿಕೊಂಡರೂ ಮನಸ್ಸಿನಲ್ಲಿ ಬಹಳ ವ್ಯಸನ

ತಾಳಿಕೊಂಡಿರುವಂತಾಯಿತು ಈ ಮರ್ಮವು ವೆಂಕಟಪತಿ ಆಚಾರ್ಯನಿಗೆ ಕೊಂಚವಾದರೂ ತಿಳಿದಿರಲಿಲ್ಲ. ತಿಪ್ಪಾಶಾಸ್ತ್ರಿಯ ಸ್ನೇಹವು ಮಠದ ಪ್ರಕೃತದ ಇಕ್ಕಟ್ಟು ಪರಿಹರಿಸುವುದಕ್ಕೆ ಉಪಯುಕ್ತವಾದ್ದೆಂಬ ಒಂದೇ ಕಾರಣದಿಂದ ವೆಂಕಟಪತಿ ಆಚಾರ್ಯನು ಧನಿಯ ಹತ್ತಿರ ಕ್ರಮೇಣ ಈ ವಿಷಯದಲ್ಲಿ ಮಾತಾಡಿದಾಗ ತಿಪ್ಪನನ್ನು ಪುರಾಣಿಕನಾಗಿ ನೇಮಿಸಲಿಕ್ಕೆ ಯತಿಗಳು ತುಂಬಾ ಸಂತೋಷಪಟ್ಟರು ಅವನು ಈ ಉದ್ಯೋಗದ ಮೇಲೆ ಮನಸ್ಸಿರುವು ದಾಗಿ ತೋರಿಸಿಕೊಳ್ಳದಿದ್ದರೂ ವೆಂಕಟಪತಿ ಆಚಾರ್ಯನು ತಾನಾಗಿ ಒಂದು ದಿವಸ ಪ್ರಸ್ತಾವತ್ವೇನ ಶ್ರೀಪಾದಂಗಳವರಿಗೆ ಅವನ ಮೇಲಿರುವ ಅನುಗ್ರಹದ ಸಮವಿಶೇಷವನ್ನು ತಿಳಿಸಿದಾಗ ತಿಪ್ಪಾಶಾಸ್ತ್ರಿಗೆ ಅತ್ಯಾನಂದವಾಯಿತು. ಪುರಾಣಿಕನಾಗಿ ಯತಿಯ ಸೇವೆಯನ್ನು ಮಾಡುವುದಕ್ಕೆ ತನಗೆ ಹೆಚ್ಚು ಆತುರವಿರವುದಾಗಿ ಅವನು ಒಪ್ಪಿಕೊಂಡನು ವೆಂಕಟಪತಿ ಆಚಾರ್ಯನು ಸಾವಕಾಶಮಾಡದೆ ಮುದ್ದಣ್ಣಾಚಾರ್ಯನನ್ನು ಮಠದಲ್ಲಿ ಬೇರೊಂದು ಕೆಲಸಕ್ಕೆ ನೇಮಿಸಿ, ಪುರಾಣಿಕೆಯನ್ನು ತಿಪ್ಪಾಶಾಸ್ತ್ರಿಗೆ ಕೊಡಿಸಿ, ಸ್ವಾಮಿಗಳ ದೊಡ್ಡ ಮಿತ್ರನಾಗಿಮಾಡಿದನು.

ಈ ಶಾಸ್ತ್ರಿಯು ಸಂಸ್ಕೃತದಲ್ಲಿ ಚೆನ್ನಾಗಿ ಪರಿಶ್ರಮವಿದ್ದು, ಹೆಚ್ಚು ಅನು ಭವಸ್ಥನಾದುದರಿಂದ ಪುರಾಣಹೇಳುವ ಕೆಲಸದಲ್ಲಿ ಹೆಸರುಗೊಂಡನು ಸರ್ವರಿಗೂ ಅವನ ಮೇಲೆ ಅನುದಿನ ಪ್ರೀತಿ ಹೆಚ್ಚುತ್ತಾ ಬಂತು. ಈ ನೇಮಕ ದಿಂದ ವಾಗ್ದೇವಿಗಾದ ಹರುಷಕ್ಕೆ ಮಿತವೇ ಇಲ್ಲ. ತಿಪ್ಪಾಶಾಸ್ತ್ರಿಗೆ ನಿರಂತರ ತನ್ನ ಸಾಮೀಪ್ಯವೇ ದೊರಕಿತು. ಅವನ ಆಸೆಯನ್ನು ಪೂರೈಸುವುದಕ್ಕೆ ಸ್ವಲ್ಪ ವಾದರೂ ಸಹಾಯ ಮಾಡದೆ ಇದ್ದರೂ ತನ್ನ ದಯದಿಂದಲೇ ಈ ಉದ್ಯೋಗ ಸಂಪಾದಿಸಿದೆನೆಂದು ಅವನು ತಿಳಿದುಕೊಂಡಿರುವನು ಮುಂದಿನ ಕಾರ್ಯ ದೇವರು ಇಟ್ಟಹಾಗೆ ಆಗಲೆಂದು ವಾಗ್ದೇವಿಯು ಉತ್ಕರ್ಷಯುಕ್ತಳಾದಳು

ತಿಪ್ಪಾಶಾಸ್ತ್ರಿಗೆ ಪುರಾಣಹೇಳುವುದಕ್ಕೆ ನೇಮಿಸಿದ ಸುದ್ದಿಯು ಸಿಕ್ಕಿದ ಕೂಡಲೇ ವೇದವ್ಯಾಸ ಉಪಾಧ್ಯನು ಮುಖಭಂಗಿತನಾದನು. ಆಹಾ, ತನ್ನ ಉದ್ಯೋಗವು ತನಗೆ ಪುನಃ ಬೇಗನೆ ದೊರೆಯ ಬಹುದೆಂಬ ಆಸೆಯು ಭಂಗ ವಾಯಿತು. ವಿಷ್ಣುವಿನ ಆರಾಧನೆ ಬಹು ಪ್ರಯಾಸಪಟ್ಟು ಮಾಡಿದರೂ ತನ್ನ ಸೇವೆಯನ್ನು ಶ್ರೀಹರಿಯು ಅಂಗೀಕರಿಸಿಕೊಳ್ಳಲಿಲ್ಲವಷ್ಟೇ! ಇದು ಪೂರ್ವಾ ರ್ಜಿತವೇ! ಇನ್ನು ಏನುಮಾಡಲೆಂದು ದೀರ್ಘಸ್ವರದಿಂದ ರೋದನಮಾಡು

ಹಾಗ ಪತಿವ್ರತಾ ಶಿರೋಮಣಿಯಾದ ಅವನ ಪತ್ನಿಯು ಗಂಡನನ್ನು ಸಮಾಧಾನಪಡಿಸುವುದಕ್ಕೆ ತೊಡಗಿದಳು. "ವಿಷ್ಣುವಿನ ಆರಾಧನೆ ಮಾಡಿದ್ದಕ್ಕಾಗಿ ಏನೂ ಪಶ್ಚಾತ್ತಾಪ ಪಡಬೇಡಿ. ಅದೆಂದೂ ನಿರರ್ಥಕವಾಗದು. ಹರಿಯು ತನ್ನ ಭಕ್ತರನ್ನು ಕಷ್ಟದಲ್ಲಿ ಹಾಕಿ ಅವರ ಭಕ್ತಿಭಾವವನ್ನು ಪರೀಕ್ಷಿಸಿನೋಡುತ್ತಾನಲ್ಲವೆ, ಅವರನ್ನು ಬಿಟ್ಟೀಹಾಕುವುದು ಅವನ ಬಿರುದಿಗೆ ವಿರೋಧ, ಚಂಚಲನೇತ್ರರ ಮಠದಲ್ಲಿಯೇ ಉದ್ಯೋಗವಾಗಬೇಕೆಂದು ನಮ್ಮ ಅಭಿಮತವಲ್ಲ. ಹ್ಯಾಗಾದರೂ ನಮ್ಮ ಜೀವನೋಪಾಯ ನಡೆಯಬೇಕೆಂಬುದು ನಮ್ಮ ಪ್ರಧಾನ ಉದ್ದೇಶವಷ್ಟೇ ಇನ್ನೆಲ್ಲಿಯಾದರೂ ಅನ್ನಸ್ಥಿತಿ ನಮಗೆ ದೊರಕದೆಂಬ ಅನುಮಾನವ್ಯಾಕೆ? ದೇವರ ಮೇಲೆ ಕೊಂಚವಾದರೂ ಅವಿಶ್ವಾಸವಿಡದೆ ಅವನನ್ನೇ ಏಕಭಾವದಿಂದ ಧ್ಯಾನಿಸಿದರೆ ನಮ್ಮ ಅಭೀಷ್ಟವನ್ನು ಅವನು ಕ್ಷಿಪ್ರ ಸಲ್ಲಿಸುವನು" ಎಂದು ಅವಳು ತನ್ನ ಗಂಡನಿಗೆ ಜ್ಞಾನಹೇಳಿದಳು. ಅವಳ ಅಭಿಪ್ರಾಯವನ್ನು ಅವನು ಒಪ್ಪಿ, ಬೇರೆ ಯಾವುದಾದರೂ ಊರಿಗೆ ಹೋಗುವುದು ಒಳ್ಳೆಯದೆಂದು ನಿರ್ಣಯಮಾಡಿದನು.

ಅಷ್ಟರಲ್ಲಿ ಈ ಬಡಬ್ರಾಹ್ಮಣನ ಸಿಟ್ಟುವೃದ್ಧಿಯಾಗುವುದಕ್ಕೆ ಇನ್ನೊಂದು ಹೇತು ಉಂಟಾಯಿತು. ವಾಗ್ದೇವಿಯನ್ನು ನಿಂದೆಮಾಡಿದ ಪಂಚಯೌವನಸ್ಥರಲ್ಲಿ ವಿಘ್ನೇಶ್ವರನೆಂಬವನು ವೇದವ್ಯಾಸ ಉಪಾಧ್ಯನ ಸೋದರ ಅಳಿಯನು. ಇವನು ಅಪರೂಪವಾಗಿ ಸೋದರಮಾವನ ಮನೆಗೆ ಹೋಗಿಬರುವ ಪದ್ಧತಿಯಿದ್ದುದು. ಬಹಿಷ್ಕಾರದಲ್ಲಿರುವವನಿಗೆ ಸಂಪರ್ಕವಾದನೆಂಬ ನೆವವನ್ನು ಹುಡುಕಿ. ಪ್ರಥಮತಃ ವೇದವ್ಯಾಸ ಉಪಾಧ್ಯಗೆ ಚಂಚಲನೇತ್ರರು ಬಹಿಷ್ಕಾರ ಪತ್ರ ಕೊಟ್ಟರು. ಉರಿಯುವ ಬೆಂಕಿಗೆ ತುಪ್ಪ ಹೊಯಿದಂತಾಯಿತು. ಮೊದಲೇ ಉದ್ಯೋಗವು ತಪ್ಪಿದ್ದಕ್ಕಾಗಿ ಹೆಚ್ಚು ವ್ಯಥೆಯಲ್ಲಿರುವ ವೇದವ್ಯಾಸ ಉಪಾಧ್ಯನು ಬಹಿಷ್ಕಾರಪತ್ರಿಕೆಯು ತಲ್ಪಿದಾಗ ಮಹಾಕೋಪ ತಾಳಿ, ತನ್ನನ್ನು ವ್ಯರ್ಥವಾಗಿ ಕಷ್ಟಬಡಿಸುವ ದಿಂಡಸನ್ಯಾಸಿಗೆ ಬುದ್ಧಿಕಲಿಸುವಗೋಸ್ಕರ ಒಂದು ಸಣ್ಣ ಫೈಸಮಾಡಲಿಕ್ಕೆ ಉದ್ಯುಕ್ತನಾದನು. ಅವನ ಪತ್ನಿಯು ಶಾಂತಸ್ವಭಾವವುಳ್ಳವಳಾದರೂ "ಇಂಥಾ ಘೋರವಾದ ಅನ್ಯಾಯ ನಡೆದ ಮೇಲೆ ಅದನ್ನು ಸಹಿಸಿಕೊಂಡಿರಕೂಡದು. ಮುಯ್ಯಿಗೆ ಮುಯ್ಯಿ ತೀರಿಸಲೇಬೇಕೆಂಬ ಹಾಗೆ ಗಂಡನಿಗೆ ಆಲೋಚನೆಕೊಟ್ಟಳು. ಹೆಂಡತಿಯ ಅನುಮತಿ ಸಿಕ್ಕಿದ ಮೇಲೆ ಯಾರ ಲಕ್ಷ್ಯವೂ ಮಾಡದೆ, ವೇದವ್ಯಾಸ ಉಪಾಧ್ಯನು ತನ್ನ ಆಪ್ತ

ರಾದ ಕೆಲವರ ಹತ್ರ ಮುಂದೆ ಮಾಡಬೇಕಾದ ಉಪಾಯವನ್ನು ಕುರಿತು ಆಲೋಚನೆಮಾಡಿ, ಅವರ ಮನೋಗತವನ್ನು ತಿಳಿದು, ಸ್ಥಿರಮನಸ್ಸಿನಿಂದ ತನ್ನ ಇಚ್ಛೆಯನ್ನು ಪೂರೈಸಿಕೊಳ್ಳುವುದಕ್ಕೆ ಕೊಂಚ ಸಮಯ ಊರು ಬಿಟ್ಟು ಹೋಗುವ ಅಗತ್ಯವಿರುವುದರಿಂದ ಪಯಣಕ್ಕೆ ಬೇಕಾದ ಸನ್ನಾಹಗಳನ್ನು ಮಾಡುವುದಕ್ಕೆ ಉದ್ಯುಕ್ತನಾದನು.

## ಹದಿನಾಲ್ಕು

ಚಂಚಲನೇತ್ರರ ಮಠವಿರುವ ಕುಮುದಪುರವು ಶ್ರೀಮದ್ವೀರ ನರಸಿಂಹರಾಯನ ವಸಂತನಗರವೆಂದು ವಾಡಿಕೆಯಾಗಿ ಕರೆಯಲ್ಪಡುವ ರಾಜ್ಯದ ಒಂದು ಪಟ್ಟಣವಾಗಿರುತ್ತದೆ. ಇದರಂತೆಯೇ ಇನ್ನೂ ಐದು ಪಟ್ಟಣಗಳು ಆ ನಗರಕ್ಕೆ ಇರುವುವು. ಅವುಗಳ ಹೆಸರುಗಳು:– ಅರಸನ ಅರಮನೆ ಇರುವ ನೃಸಿಂಹಪುರ, ಅವನ ನೆಂಟರಿಷ್ಟರು ಇರುವ ಕೋಮಲಪುರ, ಸೈನ್ಯದ ಮುಖ್ಯ ಸ್ಥಾನವಾದ ಕ್ಷತ್ರಿಯಪುರ, ವ್ಯಾಪಾರ ಪ್ರಾಮುಖ್ಯಸ್ಥಳವಾದ ವರ್ತಕಪುರ, ವಿವಿಧ ಧಾನ್ಯ ದವಸಗಳು ಬೆಳೆಯುವ ಪ್ರಧಾನ ಊರಾದ ಶಾಂತಿಪುರ. ಹೀಗೆ ಐದು ಪಟ್ಟಣಗಳೂ ಅವುಗಳ ಉಪಪಟ್ಟಣಗಳೂ ಹಳ್ಳಿಪಳ್ಳಿಗಳೂ, ಕಾಡುಪ್ರದೇಶಗಳೂ ಅಸಂಖ್ಯಾತವಾಗಿರುವ ಆ ದೊಡ್ಡ ರಾಜ್ಯಕ್ಕೆ ಷಟ್ಪುರ ನಗರವೆಂಬ ಪುರಾತನ ಹೆಸರು ಇರುವದು. ಈ ಆರು ಪಟ್ಟಣಗಳಲ್ಲಿ ಕೋಮಲಪುರ ಬಿಟ್ಟು, ಬೇರೆ ಐದು ಪುರಗಳಲ್ಲಿ ಪ್ರತಿ ಒಂದರಲ್ಲಿಯೂ ಬಹು ಮಂದಿ ಬ್ರಾಹ್ಮಣರು ವೇದಜ್ಞರಾಗಿ ಅಗ್ರಹಾರಗಳಲ್ಲಿ ಉಪಜೀವನ ನಡಿಸಿ ಕೊಂಡಿರುವರು.

ಒಂದೊಂದು ಪಟ್ಟಣಕ್ಕೆ ಒಂದೊಂದು ಸನ್ಯಾಸಿಯ ಮಠವಿರುವುದು. ನೃಸಿಂಹಪುರದಲ್ಲಿ ಜ್ಞಾನಸಾಗರತೀರ್ಥರು, ವರ್ತಕಪುರದಲ್ಲಿ ಅಚಲನೇತ್ರರು, ಕ್ಷತ್ರಿಯಪುರದಲ್ಲಿ ಪೂರ್ಣಾನಂದತೀರ್ಥರು, ಶಾಂತಿಪುರದಲ್ಲಿ ಹರಿಪದಾಂಬುಜ ತೀರ್ಥರು ಹೀಗೆ ನಾಲ್ಕು ಯತಿಗಳು. ಕುಮುದ ಪುರದ ಚಂಚಲನೇತ್ರರು ಕೂಡಿ ಐವರು ಯತಿಗಳು ಐಶ್ವರ್ಯದಲ್ಲಿಯೂ ವಿದ್ಯೆಯಲ್ಲಿಯೂ ಒಬ್ಬರಿಗೊಬ್ಬರು ಮಿಗಿಲೆನಿಸಿಕೊಂಡರು. ಇವರೆಲ್ಲರಿಗೂ ಆವಾವ ಮಠಕ್ಕೆ ಸೇರಿದ ಶಿಷ್ಯರ ಮೇಲೆ ಪೂರ್ಣವಾದ ಅಧಿಕಾರವಿರುವದಾದರೂ ನೃಸಿಂಹಪುರಮಠಕ್ಕೆ ಬಂದು ಹೆಚ್ಚಿನ ಸ್ವಾತಂತ್ರ್ಯವಿರುವದು. ಬೇರೆ ನಾಲ್ಕು ಮಠಾಧಿಪತಿಗಳ್ಯಾರಾ

ದರು ಶಿಷ್ಯನನ್ನು ಆರಿಸಿ ಆಶ್ರಮಕೊಡುವ ಮುಂಚೆಯೇ ಮುಕ್ತರಾದರೆ ಅಂಥ ಮಠಕ್ಕೆ ಯೋಗ್ಯನಾದವನೊಬ್ಬಗೆ ಆಶ್ರಮ ಕೊಡುವ ಸ್ವತಂತ್ರವು ಆ ಒಂದು ಮಠಕ್ಕೆ ಮಾತ್ರವಿರುವದು. ಹಾಗೆಯೇ ತಕ್ಕ ಕಾರಣಗಳಿದ್ದರೆ ಬೇರೆ ಮಠಗಳ ಅನುಮತಿಯಿಂದ ಯಾವದೊಂದು ಮಠದ ಅಯೋಗ್ಯ ಶಿಷ್ಯನನ್ನು ತ್ಯಜಿಸಿ ಇನ್ನೊಬ್ಬಗೆ ನೃಸಿಂಹಪುರದ ಸನ್ಯಾಸಿಗಳು ಆಶ್ರಮ ಕೊಡಬಹುದು ಈ ಸನ್ಯಾಸಿಗಳು ತಾವೇ ಒಂದು ದೊಡ್ಡ ಅನ್ಯಾಯಮಾಡಿದರೆ ಉಳಿದ ನಾಲ್ಕು ಮಠದವರು ಅವರನ್ನು ವಿಚಾರಮಾಡಿ, ರಾಜ್ಯದೊಡೆಯನ ಪರಿಮುಖಶಿಕ್ಷೆಗೆ ಗುರಿಪಡಿಸಬಹುದು. ಈಗ ವಿವರಿಸುವ ಈ ಕಟ್ಟು ಬಹು ಪುರಾತನದ್ದು. ಅದು ಈ ವರೆಗೆ ಯಾವನೊಬ್ಬ ಸನ್ಯಾಸಿಯಿಂದಾದರೂ ಭಂಗವಾಗದೆ ಅನುಸರಿಸೋಣಾಗಿಯದೆ.

ವೇದವ್ಯಾಸ ಉಪಾಧ್ಯನು ಚಂಚಲನೇತ್ರರಿಂದ ಉಂಟಾದ ಅನ್ಯಾಯವನ್ನು ಸಹಿಸಲಿಕ್ಕೆ ಕೂಡದೆ, ಅವರು ಮಾಡುವ ಅನಾಚಾರ ಮುಂತಾದ ನ್ಯೂನತೆಗಳನ್ನು ನೃಸಿಂಹಪುರ ಮಠಾಧಿಪತಿಗಳ ತಿಳುವಳಿಕೆಗೆ ತರುವ ಗೋಸ್ಕರ ಒಂದು ಬಿನ್ನವತ್ತಳೆಯನ್ನು ಬರೆದು, ಜ್ಞಾನತೀರ್ಥ ಶ್ರೀಪಾದಂಗಳವರ ಸನ್ನಿಧಿಗೆ ಒಪ್ಪಿಸಿದನು. ಅವರು ಅದನ್ನು ಓದಿಸಿನೋಡಿ ಇಡೀ ನಗರದಲ್ಲಿ ಅತಿ ಪವಿತ್ರರೆನಿಸಿಕೊಂಡ ಯತಿಶ್ರೇಷ್ಠರಾದ ಚಂಚಲನೇತ್ರರು ಆ ಬಿನ್ನಹಪತ್ರದಲ್ಲಿ ಬರೆದಿರುವ ಹಾಗೆ ದುಷ್ಕೃತ್ಯಗಳನ್ನು ಮಾಡಿ ತಮ್ಮ ಮಠಕ್ಕೂ ತಮ್ಮ ಸುನಾಮಕ್ಕೂ ಲಾಂಛನ ತಗಲುವಂತೆ ನಡಕೊಳ್ಳುವದಾಗಿ ನಂಬಲಿಕ್ಕೆ ಸರ್ವಥಾ ಮನಸ್ಸು ಒಡಂಬಡದೆ, ವೇದವ್ಯಾಸ ಉಪಾಧ್ಯನನ್ನು ತೀರಾ ಧಿಕ್ಕರಿಸಿ,– "ಎಲೋ, ಕುಹಕಿಯೇ! ಸುಚರಿತರಾದ ಯತಿಗಳನ್ನು ದ್ವೇಷಮೂಲಕವಾಗಿ ಅಥವಾ ಬೇರೆಯವರ ದುರ್ಬೋಧನೆಯಿಂದ ನಾಯಿಜೊಗಳುವಂತೆ ನಿಂದಿಸುವಿಯಾ? ನಿನ್ನ ಮುಖಾವಲೋಕನ ಮಾಡಿದರೇನೇ ಸಚೇಲಸ್ನಾನಮಾಡಬೇಕಾಗುವುದು. ನಮ್ಮ ಕಣ್ಣೆದುರು ನಿಲ್ಲದೆ ನಡೆದು ಬಿಡು, ಇಲ್ಲವಾದರೆ ಹರಿಕಾರರನ್ನು ಕರೆದು, ನಿನ್ನನ್ನು ದಬ್ಬಿಸಿಬಿಡಬೇಕಾಗುವದು" ಎಂದು ಅತಿ ರೋಷದಿಂದ ಹೇಳಿದರು.

ವೇದವ್ಯಾಸ ಉಪಾಧ್ಯನು ಕೊಂಚವಾದರೂ ಹೆದರದೆ, ಘಟ್ಟಿಯಾಗಿ ನಿಂತು ಕೊಂಡು,– "ಪರಾಕೇ! ನೀತಿ ಮಾಡುವಿರೆಂಬ ಆಶೆಯಿಂದ ವಾದಾಕ್ರಾಂತನಾಗಿರುವ ಕಿಂಕರನಾದ ನನ್ನನ್ನು ಕ್ಷಣತಾಮಸವಿಲ್ಲದೆ ತುಚ್ಛೀಕರಿಸಿ;

ಅನುಗ್ರಹಿಸಿದ ಸ್ಥಾನೋಪಸನಾಮವನ್ನು ಭಕ್ತಿಪೂರ್ವಕವಾಗಿ ಸ್ವೀಕರಿಸಿ ಕೋಥೇನೆ. ಸಮರ್ಥರ ಮನೆಯ ಸ್ಥಾನಕ್ಕೆ ಸರ್ವರೂ ಮರ್ಯಾದೆ ಕೊಡುವರೆಂಬ ವಚನವಿದೆ. ಆದುದರಿಂದ ನಾನು ಸರ್ವಥಾ ಕುಗ್ಗದೆ ಚರಣಾರವಿಂದಗಳಿಗೆ ನಮಿಸುತ್ತೇನೆ." ಎಂದು ಯತಿಶ್ರೇಷ್ಠರಿಗೆ ಪ್ರಣಾಮಮಾಡಿ, ಮೋರೆ ಸಣ್ಣದು ಮಾಡಿಕೊಂಡು, ಬೇಗನೆ ಬೀದಿಗೆ ಬಂದು ಬಿಟ್ಟನು. ಅಲ್ಲಿ ಕಾಣಸಿಕ್ಕಿದ ಸ್ನೇಹಿತನೊಬ್ಬನು ಸ್ನಾನಕ್ಕೆ ತನ್ನಲ್ಲಿಗೆ ದಯಮಾಡಬೇಕೆಂದು ಅಪೇಕ್ಷಿಸಿ, ವೇದವ್ಯಾಸನನ್ನು ಕರತಂದು, ಸನ್ಮಾನ ಉಪಚಾರಗಳಿಂದ ದಿವ್ಯ ಭೋಜನವನ್ನಿತ್ತು, ತೃಪ್ತಿಪಡಿಸಿದ ನಂತರ ವ್ಯಾಕುಲದ ಮುದ್ರೆ ಒತ್ತಲ್ಪಟ್ಟಿರುವ ಅವನ ಮುಖವನ್ನು ನೋಡಿ, ಅವನ ಸಂಕಷ್ಟದ ಸರಿಯನ್ನು ತಿಳಿದು, ಸಿಟ್ಟುಗಾರರಾದ ಜ್ಞಾನಸಾಗರ ತೀರ್ಥರ ದರ್ಶನಕ್ಕೆ ಉಚಿತವಾದ ಸಮಯವು ಭಿಕ್ಷೆಯಾದ ಮೇಲೆ ಎಂಬ ಗುಟ್ಟು ತಿಳಿಯದೆ, ಅವರನ್ನು ಅಕಾಲದಲ್ಲಿ ಕಂಡುದರಿಂದ ಬಂದ ದೋಷಕ್ಕೆ ತತ್ಕಾಲನಿವಾರಣೋಪಾಯವಿಲ್ಲದ ಕಾರಣ ಉಳಿಕೆ ಮೂರು ಮಠಾಧಿಪತಿಗಳನ್ನು ಕಂಡು, ಕಾರ್ಯಸಾಧನೆ ಮಾಡಿಕೊಳ್ಳುವದು ಉತ್ತಮವೆಂದು ಆ ಸ್ನೇಹಿತನು ಹೇಳಿದ ಬದ್ಧಿಯನ್ನನುಸರಿಸಿ, ಉಪಾಧ್ಯನು ಮರುದಿವಸ ಕ್ಷತ್ರಿಯಪುರಕ್ಕೆ ಹೊರಟು, ಪೂರ್ಣಾನಂದತೀರ್ಥರ ಭೇಟಿ ಪಡೆಯುವದಕ್ಕೆ ಅವರ ಮಠಕ್ಕೆ ಬಂದನು.

ಆವಾಗಲೇ ಯತಿಗಳು ಭಿಕ್ಷೆತಕ್ಕೊಂಡಾಗ ಕೊಂಚ ನಿದ್ರೆ ಗೈಯುವದಕ್ಕೆ ಇಚ್ಛಿಸುವ ಸಮಯವಾಯಿತು. ಯಾರೊಬ್ಬನನ್ನೂ ಕೇಳದೆ, ವೇದವ್ಯಾಸನು ಅವರ ಸಿಂಹಾಸನದ ಕೋಣೆಗೆ ಪ್ರವೇಶಿಸಿ, ಪ್ರಣಾಮಮಾಡಿದನು. ಅರೆನಿದ್ರೆಯಿಂದ ತೂಗುವ ಕಣ್ಣುಗಳಿಂದ ಪೂರ್ಣಾನಂದರು ಅವನನ್ನು ನೋಡಿ ನಾರಾಯಣ ನಾಮವನ್ನು ಅರ್ಧ ಧ್ವನಿಯಿಂದ ಉಚ್ಚರಿಸಿ, ಕೂರಿಸಿಕೊಂಡು, ಅವನ್ಯಾರೆಂದು ತಿಳಿದು, ಬಂದ ಉದ್ದಿಶ್ಯ ಕೇಳಿದರು. ಉಪಾಧ್ಯನು ಬಾಯಿಯಿಂದ ಹೆಚ್ಚು ಮಾತಾಡದೆ ವಿಜ್ಞಾಪನಾಪತ್ರವನ್ನು ಸಮ್ಮುಖದಲ್ಲಿ ಇರಿಸಿದನು. ಯತಿಗಳು ಅದನ್ನು ತಾವೇ ಓದಿನೋಡಿ, ನಿದ್ರಾಭಂಗವಾದ ಕೆಟ್ಟ ಸಮಯದಲ್ಲಿ ಹುಟ್ಟಿದ ಸಿಟ್ಟಿನಿಂದ ಉಪಾಧ್ಯನ ಮುಖದ ಮೇಲೆ ಆ ಪತ್ರವನ್ನು ಬಿಸಾಡಿ—"ಪರಿಶುದ್ಧರಾದ ಚಂಚಲನೇತ್ರ ಶ್ರೀಪಾದಂಗಳವರ ಮೇಲೆ ಚಾಡಿಮಾತುಗಳಿಂದ ನಮಗೆ ವೈರ ಉಂಟಾಗುವ ಹಾಗಿನ ಕುಯುಕ್ತಿ

ನಡಿಸುವದಕ್ಕಾಗಿ ಬಂದಿಯಾ? ಕತ್ತೆ! ತೊಲಗು" ಎಂದು ಅಪ್ಪಣೆ ಕೊಟ್ಟರು. ಶ್ವಾನೋಪನಾಮಕ್ಕೆ ಗಾರ್ದಭೋಪನಾಮ ಕೂಡಿಸಿಕೊಂಡ ಹಾಗಾಯಿತು. ಹೆಚ್ಚುಮಾತಾಡಿದರೆ ಅಂಗುಷ್ಠ ಮತ್ತು ತರ್ಜನಿ ಬೆರಳುಗಳನ್ನು ಅರ್ಧ ಚಂದ್ರಾಕೃತಿಯಾಗಿ ಬಿಡಿಸಿಕೊಂಡು, ಕುತ್ತಿಗೆಯ ಸಮೀಪಕ್ಕೆ ತರುವದಕ್ಕೆ ಸಿದ್ಧವಾಗಿರುವ ಹರಿಕಾರರನ್ನು ನೋಡಿ, ವೇದವ್ಯಾಸ ಉಪಾಧ್ಯನು ದಾರಿಯ ಮೇಲೆ ಬಂದು ನಿಂತು ತಂಗಾಳಿಯನ್ನು ಉಶ್ವಾಸಿಸಿಕೊಂಡನು.

ಮುಖ್ಯವಾಗಿ ತಾನು ಮನೆಯಿಂದ ಹೊರಟ ಮುಹೂರ್ತವು ಕೆಟ್ಟದ್ದಾಗಿರಬೇಕು. ಹಾಗಲ್ಲದಿದ್ದರೆ ಹೀಗೆ ಅಪಜಯಸ್ತ್ರೀಯು ತನ್ನ ಬೆನ್ನು ಹಿಡಿಯುವವಕ್ಕಿರಲಿಲ್ಲವೆಂದು ಸಂತಾಪಪಡುತ್ತಿರುವ ಸಮಯದಲ್ಲಿ ಮತ್ತೊಬ್ಬ ಸ್ನೇಹಿತನು ರಾತ್ರಿ ಊಟಕ್ಕೆ ತನ್ನಲ್ಲಿಗೆ ಕರಕೊಂಡು ಹೋಗಿ ದಿವ್ಯ ಊಟದಿಂದ ಗೆಳೆಯನನ್ನು ಸಂತೋಷಪಡಿಸಿ, ಅವನು ಆ ಪುರಕ್ಕೆ ಬಂದ ಉದ್ದೇಶವನ್ನು ಅರಿತು ಹೆಚ್ಚು ಪಾಶ್ಚಾತ್ತಾಪಪಟ್ಟನು. ಉದ್ವೇಗದಿಂದ ಸಂಕಲ್ಪಸಿದ್ಧಿಯಾಗುವುದಿಲ್ಲ. ಸಂಸ್ಥಾನಾಧಿಪತಿಗಳ ದರ್ಶನಪಡೆಯುವದಕ್ಕೆ ಸರಿಯಾದ ಕಾಲವನ್ನು ಬಲ್ಲವರಿಂದ ತಿಳಿದು, ಅವರ ಪಾರುಪತ್ಯಗಾರರನ್ನು ಮುಂದಾಗಿ ಕಂಡು, ಅವರ ಸಹಾಯದ ಬಲವನ್ನು ದೊರಕಿಸಿಕೊಳ್ಳದೆ ಒಮ್ಮಿಂದೊಮ್ಮೆ ಎದುರಿಗೆ ಬೀಳುವದು ಕಾರ್ಯಹಾನಿಯ ಮುಖ್ಯಕಾರಣವೆಂದು ಈ ಸ್ನೇಹಿತನು ಸೂಚನಾರೂಪವಾಗಿ ಆಡಿದ ಮಾತುಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ವ್ಯಾಕುಲದಿಂದ ಮುಖಕಂದಿದ ಆ ಬ್ರಾಹ್ಮಣನು ಮರುದಿವಸ ಮುಂಜಾನೆ ವರ್ತಕಪುರಾಭಿಮುಖನಾದನು

ಅಲ್ಲಿಗೆ ತಲ್ಪುತ್ತಲೇ ನೆಟ್ಟಗೆ ಮಠಕ್ಕೆ ಹೋಗುವುದು ಸರಿಯಲ್ಲವಾದುದರಿಂದ ಮಠದ ಪಾರುಪತ್ಯಗಾರ ವೆಂಕಟರಾಮಾಚಾರ್ಯನ ಭೇಟಿಯನ್ನು ಮಾಡುವ ಬಯಕೆಯಿಂದ ವೇದವ್ಯಾಸಉಪಾಧ್ಯನು ಅವನ ಮನೆಗೆ ಹೋಗುವಾಗ ವೃದ್ಧಿಸೂತಕದ ದೆಶೆಯಿಂದ ಮಠಪ್ರವೇಶಮಾಡಲಿಕ್ಕೆ ಅವನಿಗೆ ನಂದರ್ಭವಿಲ್ಲವೆಂದು ತಿಳಿದು ಬಂತು. ಸೂತಕ ನಿವಾರಣೆಯಾಗುವ ವರೆಗೂ ಪರಊರಲ್ಲಿರಲಿಕ್ಕೆ ಮನಸ್ಸಿಲ್ಲದೆ ಅವನು ಬೈನಾರಿ ಸಮಯ ಗುರುದರ್ಶನಕ್ಕೆ ಹೊರಟನು. ಅಚಲನೇತ್ರರ ಪೂರ್ವಾಶ್ರಮದ ಸಹೋದರಿಯ ಗಂಡನು ಅಂದು ತೀರಿಕೊಂಡನೆಂಬ ದುಃಖಕರವಾದ ವಾರ್ತೆಯು ಸಿಕ್ಕಿ ಬಹು ಚಿಂತಾಕ್ರಾಂತರಾಗಿ ಅವರು ಕುಂತಿರುವ ಸಮಯ ಉಪಾಧ್ಯನು ದಂಡ ಪ್ರಣಾಮ

ಮಾಡಿ, ನಿಂತು ಕೊಂಡನು. "ಧಾರಪ್ಪಾ! ಯಾಕೆ ಬಂದಿಯೊ" ಎಂಬ ಪ್ರಶ್ನೆಗಳಿಗೆ ಉತ್ತರಕೊಟ್ಟು, ತನ್ನ ಕೈಯಲ್ಲಿರುವ ಬಿನ್ನವತ್ತಳೆಯನ್ನು ಸ್ವಾಮಿಗಳ ಎದುರು ಇರಿಸಿದಾಗ ಗುರುಗಳು ಅದನ್ನು ಬಿಡಿಸಿನೋಡಿ— "ಇವನ್ಯಾರೋ ಮುದಿಕಾಗೆ. ತಪೋಬಲಿಗಳಾದ ಚಂಚಲನೇತ್ರರನ್ನು ನಿರ್ನಿಮಿತ್ತವಾಗಿ ನಿಂದಿಸುವವನು. ಇವನನ್ನು ಹೊರಗೆ ದೂಡಿರಿ" ಎಂದು ಆಜ್ಞೆಮಾಡಿದರು. ನಾವಕಾಶಮಾಡದೆ ಹರಿಕಾರನು ಉಪಾಧ್ಯನನ್ನು ರಟ್ಟೆಹಿಡಿದು, ಅಂಗಳಕ್ಕೆ ಇಳಿಸಿ ಬಿಟ್ಟನು.

ಬಾಯಿಮುಚ್ಚಿ ಉಪಾಧ್ಯನು ಬೀದಿಗೆ ಇಳಿದು ಕಣ್ಣೀರು ಸುರಿಸುತ್ತಾ ಒಂದು ಅಶ್ವತ್ಥ ವೃಕ್ಷದ ಅಡಿಯಲ್ಲಿ ನಿಂತಿರುವ ವೇಳೆಯಲ್ಲಿ ಅವನ ಸಹಾಧ್ಯಾಯಿ ಸುಂದೂರು ಭೀಮಾಚಾರ್ಯನು ಸಮೀಪಿಸಿ, ನಮಸ್ಕಾರಮಾಡಿ ಬಡವನಾದ ತನ್ನ ಗೃಹಕ್ಕೆ ದಯಮಾಡಿ, ಭೋಜನಸುಖವನ್ನು ಪಡೆಯಬೇಕೆಂದು ಬೇಡಿಕೊಂಡನು. ವೇದವ್ಯಾಸನು ಸಹಾಧ್ಯಾಯಿಯ ಮನೆಯಲ್ಲಿ ಮೃಷ್ಟಾನ್ನ ಭೋಜನಗೈದು, ಪ್ರಾಣಸ್ನೇಹಿತನು ತನ್ನ ಅಗತಿಯ ಕುರಿತು ಮಾಡಿದ ಪ್ರಶ್ನೆಗಳಿಗೆ ಕೊಟ್ಟ ಪ್ರತ್ಯುತ್ತರಗಳಿಂದ ಅವನಿಗುಂಟಾದ ವ್ಯಸನವು ಭಾರಿಯಾಗಿ ತೋರಿ. ಆಚಾರ್ಯನು ಅದರ ನಿವಾರಣೆಯ ಯುಕ್ತಿಯನ್ನು ಮಾಡಲಿಕ್ಕೆ ಪವಿತ್ರಕರ್ತನಾಗಬೇಕೆಂದು ನಿಶ್ಚಯಿಸಿ— "ಇಷ್ಟು ಸಣ್ಣ ಕೆಲಸಕ್ಕೆ ಹೆದರುವಿಯಾ! ಭೀಮಾಚಾರ್ಯನ ಜೀವ ಒಂದಿದ್ದರೆ ನಿನ್ನ ಸಂಗಡ ಯಮಲೋಕದ ತನಕವಾದರೂ ಬಂದು, ಜಯಶ್ರೀಯು ನಿನ್ನನ್ನು ವರಿಸುವಂತೆ ಪ್ರಯತ್ನಮಾಡುವೆನು" ಎಂದು ಭಾಷೆಕೊಟ್ಟು ಮರುದಿನ ಸಾಯಂಕಾಲದ ವರೆಗೂ ಅವನನ್ನು ತನ್ನಲ್ಲಿಯೇ ನಿಲ್ಲಿಸಿಕೊಂಡು ಕಡಬು ಕಾಯಿಹಾಲು ಹಸಿಗೇರುಬೀಜದ ಪಲ್ಯ ಮೊದಲಾದ ರುಚಿಕರವಾದ ಹಲವು ಶಾಕಗಳು ಎರಡು ಬಗೆ ಹುಳಿ ಎರಡು ಬಗೆ ತೊವ್ವೆ ಎರಡು ಬಗೆ ಸಾರು ಪರಮಾನ್ನ ಸಕ್ರೆಭಕ್ಷ್ಯ ಎಲೆ ಅಲಂಕಾರಕ್ಕೆ ಕೋಸಂಬರಿ ಸುದಾಹಾಕಿ ವೇದವ್ಯಾಸ ಉಪಾಧ್ಯನ ಒಡಲಲ್ಲಿರುವ ಪರಮಾತ್ಮನನ್ನು ತೃಪ್ತಿಪಡಿಸಿದನು.

ಮರುದಿನ ಬೆಳಗಾಗುತ ಉಪಾಧ್ಯನು ಭೀಮಾಚಾರ್ಯನನ್ನು ಬೇಗನೆ ಎಬ್ಬಿಸಿ ಅವನ ಸಂಗಡ ಶಾಂತಿಪುರಕ್ಕೆ ಹೋಗಿ, ಒಂದು ಬಿಡಾರವನ್ನು ಹೊಕ್ಕನು. ಹಾಗೆಯೇ ಗುರುದರ್ಶನ ಮಾಡಿಬಿಡೋಣವೇನೆಂದು ಕೇಳಲು "ನೀನು ಬಹು ಉದ್ವೇಗಿ; ನಿನ್ನ ಮತಿಹೀನತೆಯಿಂದಲೇ ಕಾರ್ಯಸಾಧನೆಯು

ಕೆಟ್ಟುಹೋಗಿ "ಶ್ವಾನ" "ಗಾರ್ದಭ" "ಕಾಕ" ಹೀಗೆ ಮೂರು ಅಡ್ಡ ಹೆಸರುಗಳನ್ನು ಸಂಪಾದಿಸಿ, ತ್ರಯೋಪನಾಮಿ ಉಪಾಧ್ಯನಾಗಿದ್ದೀ. ಇನ್ನು ಕೋಣನೆನ್ನಿಸಿಕೊಳ್ಳುವ ಬಿರುದೊಂದು ಉಳಿದದೆ. ಅದು ಸಿಕ್ಕಿತೇ ಊರಿಗೆ ಮರಳಬಹುದೆಂ"ದು ಭೀಮಾಚಾರ್ಯನು ಉಪಾಧ್ಯಗೆ ಹೇಳಿಸಿದನು. ಉಪಾಧ್ಯನು ಸ್ವಲ್ಪ ಲಜ್ಜಾಯಮಾನನಾದರೂ—"ಪುನಃ ಕಾಚೇನ ಕೋಚಯ" ಎಂಬ ವಚನಕ್ಕೆ ಸರಿಯಾಗಿ— "ನಿಮ್ಮ ಅಧಿಕಪ್ರಸಂಗ ಅಂತಿರಲಿ. ನಿಮಗೆ ನನ್ನ ಸಂಗಡ ಬರಲಿಕ್ಕೆ ಸಂದರ್ಭವಾಗದಾದರೆ ನಾನೇ ಹೋಗಿಬರುವೆನು" ಎಂದು ಹೊರಟನು. "ಇವನಿಗೆ ಮುಂದಾಗಿ ಧೈರ್ಯಕೊಟ್ಟು ಕೆಟ್ಟೆನಲ್ಲಾ! ಹ್ಯಾಗಾದರೂ ಇವನನ್ನು ಸಂಬಾಳಿಸದೆ ಹೋದರೆ ಮರ್ಯಾದೆ ಕಳಕೊಂಡ ಹಾಗಾಗುವುದು" ಎಂಬ ಭಯದಿಂದ ಭೀಮಾಚಾರ್ಯನು ಉಪಾಧ್ಯನ ಜನ್ನುಹಿಡಿದು —"ಅಗೋ! ಮುಂಚೆ ಗುರುಗಳ ಸಂದರ್ಶನದಿಂದ ಹೆಚ್ಚು ಪ್ರಯೋಜನವಿರದು. ಅವರ ಮಠದ ಪಾರುಪತ್ಯಗಾರ ಬಾಲಮುಕುಂದಾಚಾರ್ಯನ ಭೇಟಿ ತಕ್ಕೊಂಡು, ಅವನ ಆಲೋಚನೆ ದೊರಕಿದ ಮೇಲೆ ಮುಂದಿನ ಅನುಸಂಧಾನ ನೋಡೋಣ" ಎಂದು ಹೇಳಿದ ಬುದ್ಧಿಯು ವೇದವ್ಯಾಸ ಉಪಾಧ್ಯಗೆ ಪಥ್ಯವಾಯಿತು

ಹಾಗೆಯೇ ಸಹಾಧ್ಯಾಯಿಗಳಿಬ್ಬರೂ ಬಾಲಮುಕುಂದಾಚಾರ್ಯನ ಗೃಹಕ್ಕೆ ಹೋಗಿ, ಅವನಿಗೆ ವಿನಯಪೂರ್ವಕ ನಮಸ್ಕಾರಮಾಡಿದರು ವೇದವ್ಯಾಸನು ಬಂದ ಕೆಲಸದ ಸ್ವಭಾವವನ್ನು ಭೀಮಾಚಾರ್ಯನು ಬಾಲಮುಕುಂದಾಚಾರ್ಯಗೆ ವಿವರಿಸಿದನು. ಜೇರ ಮೂರು ಮಠಾಧಿಪತಿಗಳನ್ನು ಕಂಡಿಯೋ ಎಂದು ಬಾಲಮುಕುಂದನು ಉಪಾಧ್ಯಗೆ ಮಾಡಿದ ಪ್ರಶ್ನೆಗೆ ಲೋಪವಿಲ್ಲದ ಪ್ರತ್ಯುತ್ತರವನ್ನು ಭೀಮಾಚಾರ್ಯನೇ ಕೊಟ್ಟನು. ಆ ವೇಳೆ ಬಾಲಮುಕುಂದಗೆ ಕಿನ್ನನೆ ನಗೆಬಂದರೂ ನಗೆಯನ್ನು ತಡೆದಿಟ್ಟು ತನ್ನಿಂದಾಗಬೇಕಾದ ಸಹಾಯ ಯಾವದೆಂದು ಕೇಳಿದನು. "ಸರ್ವವೂ ತಮ್ಮಿಂದಾಗಬೇಕು" ಎಂದು ಭೀಮಾಚಾರ್ಯನು ಅವನ ಸ್ವಾಭಾವಿಕ ವಾಚಾಲತ್ವದಿಂದ ಹೇಳಿಕೊಂಡನು. ಉಪಾಧ್ಯಗೆ ಕೂಡುವಷ್ಟು ಸಹಾಯಮಾಡಲಿಕ್ಕೆ ತುಂಬಾ ಮನಸ್ಸಿದ್ದರೂ ತನ್ನ ಧನಿಗಳು ಸಾಧುಯತಿಗಳೆಂಬದರಿಂದ ತನ್ನ ಪ್ರಯತ್ನ ಪೂರ್ಣವಾಗಿ ನಡಿಯುವದೆಂಬ ಧೈರ್ಯ ಸರ್ವಥಾ ಹೇಳವಲ್ಲೆನೆಂದು ಅವನು ಪ್ರತ್ಯುತ್ತರಕೊಟ್ಟನು.

ವಾಗ್ದೇವಿಯು ಅತೀ ಸುಂದರಸ್ತ್ರೀ ಎಂಬದು ಉಪಾಧ್ಯನ ಸಂಭಾಷಣೆಯಿಂದ ತಿಳಿದುಬಂದುದರಿಂದ ಕೋಮಲಾಂಗಿಯರಾದ ಜನ್ನನೆಯರಿಗೆ ಭಯಾನಕನಾಗಿ ತೋರುವ ಅತಿ ಮನೋಹರ ಪುರುಷನಾದ ಬಾಲಮುಕುಂದನು ಆವಳ ಮುಖನಿರೀಕ್ಷಣೆಯ ಸುಖವನ್ನಾದರೂ ಪಡೆಯಬೇಕೆಂದು ಇಚ್ಛೆಯುಳ್ಳವನಾದನು. ಅದನ್ನು ಪೂರೈಸಿಕೊಳ್ಳುವದಕ್ಕೆ ಅನುಕೂಲವಾಗುವ ಹಾಗಿನ ಸಮಯವು ಇದೇ. ವೇದವ್ಯಾಸನ ಬಿನ್ನವತ್ತಳೆಯ ನೆವನಹಿಡಿದು, ಮಠಾಧಿಪತಿಗಳ ಕಡೆಯಿಂದ ಸ್ವದನ್ನೂರು ಕುಮುದಪುರದಲ್ಲಿ ನಡೆಸಿದಾದ, ಒಂದು ಅನ್ವೇಷಣವನ್ನು ಮಾಡುವ ಹಾಗೆ ನಿರೂಪವಾದರೆ ತನ್ನ ಬಯಕೆಯು ತೀರುವದು ಈ ಮರುಳ ಉಪಾಧ್ಯನು ಕಾರ್ಯಸಾಧನೆಯ ಕ್ರಮವೇ ತಿಳಿಯದೆ, ಯದ್ವಾತದ್ವಾ ಮಾಡಿಹಾಕಿಬಿಟ್ಟನಲ್ಲಾ! ಇದು ಮಹತ್ಕಾರ್ಯ ಇವರಲ್ಲಿ ತನ್ನ ಧನಿಗಳೊಬ್ಬರೇ ಮುಂದರಿಸಲಿಕ್ಕೆ ಸಂದರ್ಭವಿಲ್ಲ! ಏನು ಉಪಾಯ ವರ್ತಿಸಬಹುದೆಂಬ ಚಿಂತೆಯು ಅವನಿಗೆ ತಗಲಿಕೊಂಡಿತು ಆದರೆ ತನ್ನ ಮನೋಭಾವವನ್ನು ವ್ಯಕ್ತಪಡಿಸದೆ ಸುಮ್ಮಗಿದ್ದು, ಸಾಯಂಕಾಲ ದೀವಟಿಗೆ ಸಲಾಮಿನ ಕಾಲ ಮಠಕ್ಕೆ ಒಂದರೆ ಸ್ವಾಮಿಗಳಿಗೆ ಕಾಣಲಿಕ್ಕೆ ಅನುಕೂಲವಿರುವದೆಂದು ಭೀಮಾಚಾರ್ಯಗೆ ತಿಳಿಸಿದನು.

## ಹದಿನೈದು

ಬಾಲಮುಕುಂದಾಚಾರ್ಯನು ಸೂಚಿಸಿದ ಸಮಯಕ್ಕೆ ಭೀಮಾಚಾರ್ಯನು ವೇದವ್ಯಾಸ ಉಪಾಧ್ಯನನ್ನು ಕರೆದುಕೊಂಡು ಮಠಕ್ಕೆ ಬಂದನು ಹರಿಪದಾಂಬುಜತೀರ್ಥರು ಬಹು ನಿಧಾನಿಗಳು. ಪ್ರಣಿಪಾತಮಾಡಿ ನಿಂತುಕೊಂಡ ವಿಪ್ರರೀರ್ವರನ್ನೂ ಸಮ್ಮುಖದಲ್ಲಿ ಕುಳ್ಳಿರಿಸಿಕೊಂಡು, ಯಾವ ಉದ್ದಿಶ್ಯ ಎಲ್ಲಿಂದ ಬರೋಣಾಯಿತೆಂದು ಕೇಳಿದಾಗ ಬಾಲಮುಕುಂದಾಚಾರ್ಯನು ವೇದವ್ಯಾಸ ಉಪಾಧ್ಯನ ಸ್ಥಿತಿಗತಿಯನ್ನೆಲ್ಲಾ ಸವಿಸ್ತಾರವಾಗಿ ತಿಳಿಸಿ, ಅವನು ತಂದ ಬಿನ್ನವತ್ತಳೆಯನ್ನು ಗುರುಗಳ ಮುಂದೆ ಇರಿಸಿದನು. ಅವರು ಅದನ್ನು ತಾವೇ ಓದಿ ನೋಡಿ, ಚಂಚಲನೇತ್ರರ ಮೇಲೆ ಹೇಳೋಣಾಗುವ ಅಪವಾದಗಳನ್ನು ನಂಬಲಿಕ್ಕೆ ಆಗುವುದಿಲ್ಲ. ದ್ವೇಷಸಾಧನೆ ಮಾಡುವ ಜನರು ಅಡ್ಡಾದಿಡ್ಡಿಯಾಗಿ ಆಡುವರು. ಅದು ಹ್ಯಾಗೂ ಇರಲಿ ಹೆಚ್ಚು ಅನುಭವಸ್ಥರಾದ ಬೇರೆ ಮೂರು ಮಠಾಧಿಪತಿಗಳು ಪ್ರವೇಶಿಸಲಿಕ್ಕೆ

ನಿರಾಕರಿಸಿದ ಪ್ರಸಕ್ತಿಯಲ್ಲಿ ತನ್ನಿಂದ ಕೈಹಾಕಕೂಡುವುದಿಲ್ಲವೆಂದು ಖಂಡಿತ ವಾದ ಉತ್ತರಕೊಟ್ಟರು. ಆಗ ಭೀಮಾಚಾರ್ಯನು ವಕೀಲನಂತೆ ಹೆಚ್ಚು ಸಮಯ ಯತಿಗಳ ಕೂಡೆ ಜಿಜ್ಞಾಸಮಾಡಿದನು. ಪರಂತು ಯತಿಗಳು ಒಮ್ಮೆ ಕೊಟ್ಟ ತೀರ್ಪನ್ನು ಪುನರಾಲೋಚನೆ ಮಾಡಲಿಕ್ಕಿಲ್ಲವೆಂದು ಹೇಳಿ ಬಿಟ್ಟರು. ವೇದವ್ಯಾಸ ಉಪಾಧ್ಯನು ಒಳ್ಳೇ ಪಂಡಿತನೆಂದು ತೋರುವುದ ರಿಂದ ತನ್ನ ಮಠದಲ್ಲಿ ಹುಡುಗರಿಗೆ ಪಾಠ ಹೇಳಿಕೊಂಡಿದ್ದರೆ ಒಳ್ಳೇ ಸಂಬಳ ಸಿಕ್ಕೀತೆಂದು ಅನುಗ್ರಹ ವಚನವನ್ನು ಕೊಡುವುದಕ್ಕಿಂತ ಹೆಚ್ಚಿನ ಉಪಕೃತಿ ಯನ್ನು ಮಾಡಲನಂದರ್ಭವೆಂತ ಮಧುರೋಕ್ತಿಯಿಂದ ಭೀಮಾಚಾರ್ಯ ನನ್ನು ನಸುನಗುತ್ತಾ ಉಪಚರಿಸಿದರು. ಹಾಗಾಗಲಿ. ಒಂದು ವೇಳೆ ರಾಜ ಸ್ಥಾನದಿಂದ ವೇದವ್ಯಾಸ ಉಪಾಧ್ಯನ ದೂರಿನ ಕುರಿತು ಬೇರೆ ನಾಲ್ಕು ಮಠ ದವರು ವಿಚಾರಣೆ ನಡೆಸಬೇಕಾಗಿ ಅಪ್ಪಣೆಯಾದರೆ ತಮ್ಮ ಹಟಪೂರೈಸ ಲಿಕ್ಕೆ ಅನುಕೂಲವಾಗುವುದು. ಇನ್ನು ಇಲ್ಲಿ ಹೆಚ್ಚು ಚರ್ಚೆಮಾಡದೆ. ಅಪ್ಪಣೆತಕ್ಕೊಂಡು ನಡೆದುಬಿಡುವಾ ಎಂದು ಅಂತರಂಗದಲ್ಲಿ ಭೀಮಾ ಚಾರ್ಯನು ಹೇಳಿದ ಮಾತು ವೇದವ್ಯಾಸಗೆ ಸರಿಯಾಗಿ ತೋರಿತು. ಬಿಡಾ ರಕ್ಕೆ ಹೋಗಲಿಕ್ಕೆ ಅಪ್ಪಣೆ ಪಡಕೊಂಡು, ಆಚಾರ್ಯನೂ ಉಪಾಧ್ಯನೂ ಒಟ್ಟಿನಲ್ಲಿ ಹೊರಟರು. ಅವರ ಬೆನ್ನಿಗೆ ಬಾಲಮುಕುಂದನು ಬಂದು ರಾತ್ರಿ ಭೋಜನಕ್ಕೆ ತನ್ನಲ್ಲಿಗೆ ದಯಮಾಡುವ ಹಾಗೆ ಅಪೇಕ್ಷಿಸಿ, ಅವರಿಬ್ಬರನ್ನೂ ಸಂಗಡ ಕರೆದುಕೊಂಡುಹೋಗಿ ಅವರಿಗೆ ಸತ್ಕಾರಮಾಡಿ ದಣಿಸಿದನು. ಭೋಜನದ ತರುವಾಯ ತಾಂಬೂಲಾದಿ ಉಪಚಾರಗಳು ಅಂತ್ಯವಾಗುವ ಮೊದಲು ಅವರೊಳಗೆ ಸಂಭಾಷಣೆ ನಡಿಯಿತು.

ಬಾಲಮುಕುಂದ —"ಆಚಾರ್ಯರೇ, ತಮ್ಮ ಸ್ನೇಹಿತನ ಕಾರ್ಯಕ್ಕೆ ನಾನು ಚೆನ್ನಾಗಿ ಮನಸ್ಸು ಕೊಡಲಿಲ್ಲವೆಂಬ ಅನುಮಾನ ತಮಗುಂಟಾಗಿಯ ದೆಂದು ತಿಳಿಯುತ್ತೇನೆ."

ಭೀಮಾಚಾರ್ಯ—"ತಾವು ಎಂದೂ ಹಾಗೆ ತಿಳಿದುಕೊಳ್ಳಬಾರದು. ನನ್ನ ಸ್ವಭಾವ ತಾವು ಅರಿತವರಲ್ಲ. ವೇದವ್ಯಾಸನು ಜಯಹೊಂದುವ ಮಾರ್ಗವನ್ನೇಬಿಟ್ಟು ಕಾರ್ಯಹಾನಿಗೆ ಆಮಂತ್ರಣ ಕೊಟ್ಟನು. ಹಿಂದು ಮುಂದು ನೋಡದೆ, ಸಂಸ್ಥಾನಾಧಿಪತಿಗಳ ಮುಂದೆ ಬಿದ್ದು, ಸಮಯೋಚಿತ ತಿಳಿಯದೆ, ಪ್ರಥಮತಃ ಅವರ ಸಿಟ್ಟಿಗೆ ಒಳಗಾದರೆ ಮಾಡತಕ್ಕದ್ದೇನು?"

ವೇದವ್ಯಾಸ—"ಸರ್ವರಿಗೂ ಬುದ್ಧಿ ಏಕಪ್ರಕಾರವಾಗಿದೆಯೇ? ಏನು ಮಾಡಲಿ! ನನ್ನ ಗ್ರಹ ಗತಿಯ ದೋಷದಿಂದ ಅಪಜಯವಾಯಿತು. ನಾನು ತೊಡಗಿದ ಕಾರ್ಯ ಯಾರೂ ವಿಹಿತವಲ್ಲದ್ದೆನ್ನರು."

ಭೀಮಾಚಾರ್ಯ—"ನಮ್ಮ ಅವಗುಣಗಳು ನಮಗೆ ತಿಳಿಯುವುದಿಲ್ಲ. ನಮ್ಮ ತಪ್ಪುಗಳನ್ನು ಅನ್ಯರೇ ಕಂಡುಹಿಡಿಯುವರು."

ವೇದವ್ಯಾಸ—"ತಪ್ಪುಗಳನ್ನು ಮಾಡದ ಮನುಜನ್ಯಾರು? ಎಂಥಾ ಮತಿವಂತನೂ ತಪ್ಪಿಬೀಳುವುದುಂಟು. ಮಿಕ್ಕಾದವರ ಪಾಡೇನು?"

ಬಾಲಮುಕುಂದ—"ಈ ಶುಷ್ಕ ವಾದವು ಹಾಗಿರಲಿ. ಕಾರ್ಯಚಿಂತನೆ ಮುಂಬರಿಯಲಿ. 'ಕಂಡಂತೆ ಆಡಿದರೆ ಕೆಂಡದಂಥ ಉರಿ' ಎನ್ನುವರು. ಉಪಾಧ್ಯರೆ! ಸರ್ವಥಾ ಸಿಟ್ಟುಮಾಡಬೇಡಿ. ತಾವು ಕೊಂಚವಾದರೂ ತಾಳ್ಮೆಯುಳ್ಳವರಲ್ಲ. ಎಷ್ಟು ಸತ್ಯವಂತರಾದರೇನು?"

ಭೀಮಾಚಾರ್ಯ—"ತಮ್ಮ ಅಪ್ಪಣೆ ವಿಹಿತವೇ. ನಾನೀ ಬಡಬ್ರಾಹ್ಮಣನ ಪಕ್ಷ ಹಿಡಿದಾಯಿತು. ಇನ್ನು ಅವನನ್ನು ಎಂದೂ ಬಿಡೆ. ಮುಖ್ಯತಃ ನಾವು ತಮ್ಮ ಮರೆಹೊಕ್ಕ ಮೇಲೆ ಇನ್ನೊಬ್ಬರ ಆಶ್ರಯ ಬೇಡಲಾರೆವು ನಮಗೆ ಮನಃಪೂರ್ವಕವಾಗಿ ಸಹಾಯ ಮಾಡುವುದಕ್ಕೆ ಇನ್ನೊಬ್ಬ ಮಹಾರಾಯನು ಸಿಕ್ಕನು."

ಬಾಲ ಮುಕುಂದ—"ಸ್ವಾಮಿ! ಹಾಗೆ ನನ್ನನ್ನು ಹೊಗಳಬಾರದು. ನಾನು ಅಷ್ಟು ಬುದ್ಧಿವಂತನಲ್ಲ. ತಮ್ಮಂಥವರ ದಯೆಯಿಂದ ಮರ್ಯಾದೆಯಿಂದ ಕಾಲಕ್ಷೇಪ ಮಾಡಿಕೊಂಡು ಬರುತ್ತೇನೆ."

ಭೀಮಾಚಾರ್ಯ—"ತಮ್ಮ ಪಾದದಾಣೆ ವೇದವ್ಯಾಸನು ನಿಷ್ಕಪಟಿ. ಅವನು ಬರೇ ದ್ವೇಷ ಸಾಧನೆಗೋಸ್ಕರ ಇಷ್ಟು ಪ್ರಯಾಸಪಡುವವನಲ್ಲ. ಅವನಿಗಾದ ಅನ್ಯಾಯವು ಘೋರವಾದದ್ದು."

ಬಾಲ ಮುಕುಂದ—"ಆಚಾರ್ಯರೇ ಹಾಗೆಂದರೆ ಕೇಳುವವನಲ್ಲ- ಅವನಿಗಾದ ಅನ್ಯಾಯ ಯಾವುದು?"

ಭೀಮಾಚಾರ್ಯ—"ಅವನ ಅನ್ನವನ್ನೇ ಚಂಚಲನೇತ್ರರು ತೆಗೆಯಲಿಲ್ಲವೇ?"

ಬಾಲ ಮುಕುಂದ—"ಒಂದು ವೇಳೆ ಕೋಪದಿಂದ ಯತಿಗಳ ಬಾಯಿಯಿಂದ ಅವಾಚ್ಯವೇ ಬಂತೆನ್ನುವಾ. ಅಷ್ಟು ಮಾತ್ರದಿಂದ ಇವರು ಪುಸ್ತಕ

ವನ್ನು ಕಟ್ಟಿಟ್ಟು ಹೋಗಿಬಿಡಬೇಕೇ?"

ಭೀಮಾಚಾರ್ಯ—"ತಮ್ಮ ಮಾತು ನ್ಯಾಯವಾದದ್ದೇ. ಆದರೂ ಶ್ರೀಪಾದಂಗಳವರ ಬಾಯಿಯಿಂದ ಅಂಥಾ ಅಭಾಸದ ಮಾತು ಹೊರಟ ಪನ್ಮಂಥ ಉಪಾಧ್ಯಗೆ ಸಿಟ್ಟು ಬರಲಿಕ್ಕೆ ಒಳ್ಳೆಕಾರಣವಿತ್ತು. ಈಗ ಅವನ ಜೀವನ ನಡಿಯುವದು ಹ್ಯಾಗೆ?"

ಬಾಲಮುಕುಂದ—"ಜೀವನೋಪಾಯವನ್ನು ನಮ್ಮ ಶ್ರೀಪಾಂದಗಳವರು ವಾಗ್ದತ್ತಮಾಡಿ ಆಯಿತಲ್ಲ—ನಮ್ಮ ಮಠದಲ್ಲಿ ಯೋಗ್ಯವಾದ ಉದ್ಯೋಗವನ್ನು ಕೊಡಲಿಕ್ಕೆ ಅವರು ತುಂಬಾ ಸಂತೋಷಉಳ್ಳವರಾಗಿರುತ್ತಾರೆ. ಇನ್ನೇನಾಗಬೇಕು?"

ವೇದವ್ಯಾಸ—"ಸ್ವಾಮಿ, ಶ್ರೀಪಾದಂಗಳವರು ನನ್ನ ಮೇಲೆ ಇಟ್ಟಿರುವ ಕೃಪೆಗಾಗಿ ಅವರನ್ನು ಸದಾ ವಂದಿಸುವೆನು. ಶ್ವಾನಸೂಕರವು ಹೊಟ್ಟೆ ಹೊರೆವುದಿಲ್ಲವೇ?"

ಬಾಲಮುಕುಂದ—"ಆ ಯತಿಗಳ ಮೇಲೆ ತಾವು ಹಟ ಹಿಡಿಯತಕ್ಕ ಕಾರಣ ಇನ್ನಾವದು?"

ಭೀಮಾಚಾರ್ಯ—"ನಿರ್ನಿಮಿತ್ತವಾಗಿ ಆ ಬಡಬ್ರಾಹ್ಮಣನನ್ನು ಬಹಿಷ್ಕಾರಕ್ಕೆ ಒಳಪಡಿಸಿದ್ದು ನೀತಿಯೇ? ತನ್ನ ಕಾಲಬುಡದಲ್ಲಿರುವ ಕುಂಬಳಕಾಯಿ ಬಿಟ್ಟು ಅನ್ಯರ ಕಣ್ಣಿನಲ್ಲಿ ನಾಸಿವೆಯನ್ನು ಹುಡುಕುವುದು ಯೋಗ್ಯವೇನು?"

ಬಾಲಮುಕುಂದ—"ಆ ಮಾತು ಸರಿಯೇ."

ಭೀಮಾಚಾರ್ಯ—"ಹಾಗಾದರೆ ವೇದವ್ಯಾಸನ ಸಾಧನೆಯು ದುಸ್ಸಾಧನೆಯೇ?"

ಬಾಲಮುಕುಂದ —" ದುಸ್ಸಾಧನೆಯಾಗಲೀ ಸುಸಾಧನೆಯಾಗಲೀ ಒಂದು ಕಾರ್ಯದಲ್ಲಿ ಒಬ್ಬನು ಪ್ರವೇಶಿಸಬೇಕಾದರೆ ಅದನ್ನು ಪೂರೈಸಿಕೊಳ್ಳಬಹುದೋ ಎಂಬ ವಿಚಾರಮಾಡಬೇಕು. ಸಮರ್ಥರಲ್ಲಿ ದ್ವೇಷಕಟ್ಟಿಕೊಳ್ಳುವಷ್ಟು ಹುಚ್ಚುತನ ಇನ್ನೊಂದಿರದು."

ವೇದವ್ಯಾಸ--ಸ್ವಾಮಿ ಅನಾವಶ್ಯಕ ದ್ವೇಷಸಾಧನೆಗೆ ನಾನು ಹೊರಟವನಲ್ಲ. ಯತಿಗಳಿಂದ ತನಗಾದ ಅಪಕಾರಗಳನ್ನೆಲ್ಲ ಸಹಿಸದೆ ಬಹಿಷ್ಕಾರ ಪತ್ರಿಕೆ ಹುಟ್ಟಿದ ಮೇಲೆ ನಿರ್ವಾಹ ವಿಲ್ಲದುದರಿಂದ ಎದುರಿಗೆ ನಿಲ್ಲ

ಬೇಕಾಯಿತು."

ಬಾಲಮುಕುಂದ—"ಆ ಮಾತು ಹಾಗಿರಲಿ. ನಿಮ್ಮಿಂದ ಇನ್ನಾದರೂ ಈ ಸಾಧನೆ ನಡಿಯುವುದು ಪ್ರಯಾಸವೆಂತ ನನ್ನ ಮನಸ್ಸಿಗೆ ತೋರುತ್ತೆ."

ಭೀಮಾಚಾರ್ಯ—"ತಾವೇ ಇಷ್ಟು ಅಪಧೈರ್ಯದ ಮಾತು ಹೇಳಿದರೆ ನನ್ನಿಂದ ಆಗುವುದೇನು? ವೇದವ್ಯಾಸ ಉಪಾಧ್ಯಗೆ ತಮ್ಮ ಆಶ್ರಯ ಸಿಕ್ಕುವ ಹಾಗಿಲ್ಲವಾದರೆ ನಾನು ಇಲ್ಲಿಂದಲೇ ಊರಿಗೆ ಮರಳುತ್ತೇನೆ. ವೇದವ್ಯಾಸನು ಹೊಳೆಗೆ ಹಾರಲಿ."

ಬಾಲಮುಕುಂದ—"ಈ ದ್ವಿಜೋತ್ತಮನನ್ನು ಬಿಟ್ಟು ಹಾಕಬಹುದೇ? ಒಂದು ನನ್ನ ಆಲೋಚನೆ ಹೇಳಿಬಿಡುತ್ತೇನೆ. ಅದನ್ನು ಪ್ರಕಟಪಡಿಸದೆ ಅನುಸರಿಸಿದರೆ ಪ್ರಯೋಜನ ಸಿಕ್ಕುವುದು."

ವೇದವ್ಯಾಸ, ಭೀಮಾಚಾರ್ಯ — ತಮ್ಮ ಪಾದದಾಣೆ ಪ್ರಕಟಮಾಡುವುದಿಲ್ಲ. ಮಾಪತಕ್ಕ ಯುಕ್ತಿ ಯಾವುದೋ ಅಪ್ಪಣೆಯಾಗಲಿ.

ಬಾಲಮುಕುಂದ—"ಷಟ್ಪುರನಗರವನ್ನಾಳುವ ಅರಸು ಅತಿ ಪ್ರತಾಪಿಯೂ ನೀತಿವಂತನೂ ಧರ್ಮಪರಿಪಾಲಕನೂ ಎಂಬ ಖ್ಯಾತಿಯು ರಾಜ್ಯವೆಲ್ಲಾ ತುಂಬಿಯದೆ. ಪಂಚಮಠದಲ್ಲಿರುವ ಯಾವನೊಬ್ಬ ಸನ್ಯಾಸಿಯೂ ಮಾಡಿದ ಅಪರಾಧವನ್ನು ಉಳಕೆ ನಾಲ್ಕು ಮಠಾಧಿಪತಿಗಳು ಬಚ್ಚಿಟ್ಟುಬಿಟ್ಟರೆ, ಅದರ ವಿಚಾರವನ್ನು ಪ್ರಥ್ವಿಪಾಲಕರು ಮಾಡುವ ಸಂಪ್ರದಾಯವಿದೆ. ಆದುದರಿಂದ ಆ ವೇದವ್ಯಾಸ ಉಪಾಧ್ಯನು ಕಂಗೆಡುವದ್ಯಾಕೆ? ನೃಸಿಂಹಪುರಕ್ಕೆ ಶೀಘ್ರ ಹೋಗಿ ರಾಜದ್ವಾರದಲ್ಲಿ ದೂರು ಹೇಳಿದರೆ ನಿವೃತ್ತಿ ಸಿಕ್ಕದಿರದು. ಬಳಿಕ ತಾವು ನನ್ನನ್ನು ಕಂಡರೆ ಮುಂದಿನ ಉಪಾಯ ಹೇಳುವೆನು. ನಾಪಕಾಶ ಮಾಡದೆ ಆ ಪಟ್ಟಣಕ್ಕೆ ತೆರಳಿ ಬೇಕಾದ ರಾಜಸೇವಕರನ್ನು ಆದಿಯಲ್ಲಿ ಕಂಡು ಜಾಗ್ರತೆಯಿಂದ ವ್ಯವಹರಿಸಿದರೆ ಪ್ರಯಾಸವಿಲ್ಲದೆ ಕೆಲಸ ಕೈಗೂಡುವದು ನಾವಿರಮಾತ್ಯಾಕೆ?"

## ಹದಿನಾರು

ಚತುರೋಪಾಯದಲ್ಲಿ ಘಟ್ಟಿಗನಾದ ಬಾಲಮುಕುಂದನು ತನ್ನ ಮನಸ್ಸಿನ ಬಯಕೆಯಂತೆಯೇ ದ್ವಿಜಶೀರ್ಷರ ಹಟವು ಪೂರ್ಣವಾದರೆ ಯತಿಯ ಮುಂದಿನ ಅವಸ್ಥೆಯು ಹ್ಯಾಗಾದರೇನೆಂಬ ತಾತ್ಕಾಲದ ಪರಿಗಣನದಿಂದ ಸೂಚಿಸಿದ ಉಪಾಯವು ಬುದ್ಧಿವಂತಿಗೆಯ ಲಕ್ಷಣವೆನ್ನಬಹುದು. ವೇದವ್ಯಾಸ

ಉಪಾಧ್ಯನೂ ಭೀಮಾಚಾರ್ಯನೂ ನೃಸಿಂಹಪುರಕ್ಕೆ ತಾಮಸವಿಲ್ಲದೆ ಪಯಣವಾದರು. ಅಲ್ಲಿ ಕುಮಾರ ರಾಮನೆಂಬ ವರ್ತಕನ ಮನೆಯಲ್ಲಿ ಒಂದು ಕೋಣೆಯನ್ನು ಬಾಡಿಗೆಗೆ ಮಾಡಿಕೊಂಡು ಇಳಕೊಂಡರು. ರಾಜಸ್ಥಾನದ ಪ್ರಮುಖ ಉದ್ಯೋಗಸ್ಥರ ಗುಣದೋಷಗಳನ್ನೂ ಚಿತ್ತಪ್ರವೃತ್ತಿಯನ್ನೂ ಬಲ್ಲವರಿಂದ ವಿಚಾರಿಸಿ ತಿಳುಕೊಂಡು ಪ್ರಥಮದಲ್ಲಿ ಒಬ್ಬ ವಕೀಲನ ಸಹಾಯವನ್ನು ಪಡೆಯುವಗೋಸ್ಕರ ಪರಂತು ಗೋವಿಂದ ಪಂಡಿತನೆಂಬ ಹೆಸರುಹೋದ ವಕೀಲನ ಮನೆಗಭಿಮುಖವಾದರು. ಪುಣ್ಯವಶಾತ್ ಮನೆಯ ಬಾಗಿಲಲ್ಲಿಯೇ ಗಾಳಿಗೆ ಮೈಯೊಡ್ಡಿ ಕೂತಿರುವ ಪಂಡಿತನನ್ನು ಕಂಡು ನಮಸ್ಕರಿಸಿ ತಾವು ಬಂದ ಉದ್ದೇಶವನ್ನು ಅವನಿಗೆ ತಿಳಿಸಿದರು. ದೇವ ಬ್ರಾಹ್ಮಣರ ಮೇಲೆ ಅತಿ ವಿಶ್ವಾಸವುಳ್ಳ ಆ ನ್ಯಾಯಶಾಲಿಯು ಉಭಯ ದ್ವಿಜರನ್ನು ಅಧಿಕವಾಗಿ ಉಪಚರಿಸಿ ಅವರ ಆಗಮನದ ಕಾರಣವನ್ನು ವಿಚಾರಿಸಿ ಹೆಚ್ಚು ಸಮಯದವರೆಗೂ ಚೆನ್ನಾಗಿ ಆಲೋಚನೆ ಮಾಡಿದ ಬಳಿಕ ಅವರ ಕೆಲಸವನ್ನು ತಾನು ಸುಧಾರಿಸಿಕೊಡುವೆನೆಂದು ಭರವಸೆ ಕೊಟ್ಟು ಅವರಿಗೆ ಮರುದಿವಸ ಮುಂಜಾನೆ ಬರಹೇಳಿದನು. ಅವನ ಅನುಜ್ಞೆಯನ್ನನುಸರಿಸಿ ಮರುದಿನ ಬೆಳಿಗ್ಗೆ ವೇದವ್ಯಾಸನೂ ಭೀಮಾಚಾರ್ಯನೂ ವಕೀಲನನ್ನು ಕಂಡಾಗ ಅವನು ಬರೆದಿಟ್ಟ ಅರ್ಜಿಯ ಮಸೂದೆಯನ್ನು ಭೀಮಾಚಾರ್ಯನಿಗೆ ತೋರಿಸಿದನು.

ಆಚಾರ್ಯನು ಮಾತಿನಲ್ಲಿ ಅತಿ ಚಪಲನೂ ಮಿತಶ್ಲಾಘನಾಯುಕ್ತವಾದ ಕರ್ಣಮಧುರ ಭಾಷಣದಿಂದ ಅತಿ ಕಠಿಣ ಹೃದಯವನ್ನಾದರೂ ದ್ರವಿಸುವ ಶಕ್ತಿಯುಳ್ಳವನಾದುದರಿಂದ ಆ ಮಸೂದೆಯನ್ನು ಅಡಿಗಡಿಗೆ ಓದಿ ನೋಡುತ್ತಾ "ವ್ಹಾ! ವ್ಹಾ! ಈ ವಕೀಲ ಘಟ್ಟಿಗ, ಇವನನ್ನಗಲಬಾರದು" ಎಂದು ವಕೀಲನು ಕೇಳುವಷ್ಟು ಮೆಲ್ಲಗೆ ವೇದವ್ಯಾಸನ ಕಿವಿಯಲ್ಲಿ ಹೇಳಿದನು. ಆ ಮಾತು ಕೇಳುತ್ತಲೇ ಸ್ತೌತ್ಯ ಪ್ರಿಯನಾದ ಪರಂತು ಗೋವಿಂದ ಪಂಡಿತನು, "ಧರಾಮರರೇ! ತಮ್ಮ ಆಶೀರ್ವಾದವನ್ನು ಮಾತ್ರವೇ ನಾನು ಬಯಸುವವನಲ್ಲದೆ ತಮ್ಮ ದುಡ್ಡಿನ ಮೇಲೆ ಅಭಿಲಾಷೆಯುಳ್ಳವನಲ್ಲ ಬಲ್ಲಿರೋ! ತಾವು ಕೈಕೊಂಡ ಕಾರ್ಯವು ಕೊಳೆತ ಬೆರಳನ್ನು ಕೊಯ್ಯುವ ವಿಚಾರವಾಗಿದೆ. ಅದಕ್ಕೆ ನನ್ನಿಂದ ಕೂಡುವಷ್ಟು ಸಹಾಯಮಾಡಿ ಕೀರ್ತಿ ಪಡೆಯ ಬೇಕೆಂಬುದೊಂದೇ ಕುತೂಹಲವಲ್ಲದೆ ಮತ್ತೊಂದು ಆಶೆ ನನಗಿಲ್ಲ.

ನೋಡಿರಿ! ತಾವುಗಳು ಇಷ್ಟುಸುಂದರ ಭೋಜನಕ್ಕೂ ನಮ್ಮಲ್ಲಿಯೇ ಇಷ್ಟು ಕೊಳ್ಳಿ. ವಿಚಾರ ಮತ್ತೇನು ಮಾಡುವದು ಯಾಕೆ?" ಎಂದನು. ತಾವು ಹೊರಟ ಮುಹೂರ್ತದ ಬಲದಿಂದ ತಮಗೆ ಇಷ್ಟು ಸುಲಭವಾಗಿ ಎಲ್ಲವು ಸಾನುಕೂಲವಾಗುವದಾಯಿತೆಂದು ನಾವೆಲ್ಲರೂ ಒಂದು ಪುರುಷ ಪ್ರಮಾಣ ಹಿಡಿದಷ್ಟು. 'ಪ್ರತ್ಯೇಕ ಒಂದು ವಿವಾಹದ ಯೋಚನೆ ಇನ್ನಾಕೆ? ಖರ್ಚು ಉಳಿಯಿತು. ಧರ್ಮಕ್ಕೆ ದಾರಿಯಿತ್ತು. ಸಾಗಲಿಕ್ಕೂ ವೃತ್ತಾಂತನು ಒಪ್ಪಿದ್ದಾನೆ. ಇನ್ನು ರಾಜಾಂಗದವರಂತೆ ತಿರುಗುವದು ಕೇಳುವವರ್ಯಾರು? ನಾನು ನಿನ್ನ ಸಂಗಡ ಹೊರಟ ಕಾರಣ ನಿನಗೆ ಇಷ್ಟು ಅನುಕೂಲ ದೊರೆಕಿತು. ಇಲ್ಲವಾದರೆ ನನ್ನ ಮನೆಗೆ ಇನ್ನೂ ಕೆಲವು ಗುಣವಾನುಗಳನ್ನು ಕೂಡಿಸಿಕೊಳ್ಳಬಹುದಿತ್ತು' ಎಂದು ಭೀಮಾಚಾರ್ಯನು ವೇದವ್ಯಾಸನ ಅಪಾರ್ಥವನ್ನು ಚೇಷ್ಟೆಮಾಡಿದನು. 'ತಮ್ಮ ಮಾತು ಸತ್ಯವೇ" ಎಂದು ವೇದವ್ಯಾಸನು ಉತ್ತರಕೊಟ್ಟು ಸುಮ್ಮನಾದನು. ಆತನ ಮನಸ್ಸಿನ ಭಾವ ಭೀಮಾಚಾರ್ಯನಮೇಲ ರೂಢವಾಗಿರಲಿಲ್ಲ. ಈ ದರ್ಕಾಬಾಯಿ ಬ್ರಾಹ್ಮಣನು ತನಗೇಕೆ ಗಂಟುಬಿದ್ದನೆಂಬ ಚಿಂತೆಯನ್ನು ಬಯಲುಪಡಿಸದೆ ಸಹಿಸಿಕೊಂಡನು.

ವಸಂತನಗರದ ದರ್ಬಾರಿನ ವರ್ಣನೆಯನ್ನು ಸ್ವಲ್ಪ ಮಟ್ಟಿಗಾದರೂ ಇಲ್ಲಿ ಮಾಡಬೇಕಾಗಿದೆ. ಶ್ರೀಮನ್ ವೀರನರಸಿಂಹಭೂಪತಿಯು ಶ್ರೇಷ್ಠ ಮತಿಯುಳ್ಳವನು. ನ್ಯಾಯ ಪರಿಪಾಲನೆಯಲ್ಲಿ ತಾನೇ ಬಹು ಸೂಕ್ಷ್ಮವಿಚಾರ ಮಾಡುವ ಸದ್ಗುಣವಂತನು. ಆದರೂ ತನ್ನ ಕೈಕೆಳಗಿನ ಅಧಿಕಾರರ ಅಭಿಪ್ರಾಯವನ್ನು ತಿಳುಕೊಳ್ಳುವ ಪೂರ್ವಪದ್ಧತಿಯನ್ನು ಯಾವ ಸಂಗತಿಯಲ್ಲಾದರೂ ಬಿಟ್ಟುಬಿಡುವವನಲ್ಲ. ಅವನು ಜಿನಮತದವನಾದಾಗ್ಯೂ ಅನ್ಯ ಮತಸ್ಥರ ಮೇಲೆ ಎಷ್ಟಾದರೂ ದ್ವೇಷವಿಡದೆ ಅವರನ್ನು ಬಹು ಅನುರಾಗದಿಂದ ಪಾಲಿಸುವನು. ಆದಿಕೇಶವ ರಾವ್ ಎಂಬ ಹಿರೀದಿವಾನ, ಚನ್ನಬಸವಯ್ಯನೆಂಬ ಕಿರೀ ದಿವಾನ ಹೀಗೆ ಇಬ್ಬರು ಪ್ರಧಾನಿಗಳು ದಿನವಹಿ ದರಬಾರಿನಲ್ಲಿ ಹಾಜರಿರುವರು. ಹಿರೀ ದಿವಾನನು ಒಳ್ಳೆ ಕುಶಲ ಬುದ್ಧಿಯುಳ್ಳವನು ಮತ್ತು ಮಿತಭಾಷಿ. ಕಿರೀ ದಿವಾನನು ಸ್ವಲ್ಪ ಮಂದಬುದ್ಧಿಯುಳ್ಳ ಅಧಿಕ ಪ್ರಸಂಗಿ. ಇವರಿಬ್ಬರೂ ಸ್ವಮತಾಭಿಮಾನಿಗಳಾಗಿ ಅನ್ಯ ಮತದ್ವೇಷಿಗಳು. ಆದಿಕೇಶವರಾಯನು ಕಡುವೈಷ್ಣವನು; ಶಿವನಾಮೋಚ್ಚಾರಣ ಅವನ

ಕಿವಿಗೆ ಬಿದ್ದೊಡನೆ ತನ್ನ ಎರಡೂ ಕಿವಿಗಳಿಗೂ ಬೆರಳುಗಳನ್ನು ಸೇರಿಸಿಬಿಟ್ಟು "ರಾಮ ರಾಮ" ಎನ್ನುವನು, ರಾಮನಾಮೋಚ್ಚಾರವು ಚನ್ನಬಸವಯ್ಯನ ಶ್ರೋತ್ರೇಂದ್ರಿಯಕ್ಕೆ ಬೀಳುವ ಮೊದಲೇ ಅವನು ಕಿವಿಗಳನ್ನು ಬೆರಳುಗಳಿಂದ ಮುಚ್ಚಿಕೊಂಡು "ಶಿವಾ ಶಿವಾ" ಎನ್ನುವನು.

ಹಿರೀ ದಿವಾನರಿಗೆ ಮಾರಮುನಷಿ ಅಶ್ವತ್ಥನಾರಾಯಣರಾಯ. ಕಿರೀ ದಿವಾನರ ದೊಡ್ಡ ಮುನಷಿ ವೀರಭದ್ರಯ್ಯ. ಇವರಿಬ್ಬರಿಗೂ ತಮ್ಮ ಧನಿಗಳಂತೆ ಅನ್ಯ ಮತದ್ವೇಷ ಪುಷ್ಕಳವಿರುವುದು. ರಾಜಸ್ಥಾನದಲ್ಲಿ ನಡೆಯುವ ಪ್ರತಿ ಚರ್ಚೆಯಲ್ಲಿಯೂ ಆದಿಯಲ್ಲಿ ಕಿರೀ ಪ್ರಧಾನಿಯ ಅಭಿಪ್ರಾಯ, ಕಡೆಗೆ ಹಿರೀ ಪ್ರಧಾನಿಯ ಆಲೋಚನೆ ತಕ್ಕೊಂಡು ಅರಸನು ಅವೆರಡನ್ನು ಚೆನ್ನಾಗಿ ಮಥಿಸಿ ನೋಡಿ ತೀರ್ಪನ್ನು ನುಡಿಯುವ ವಾಡಿಕೆಯು ನಡೆಯುವದು. ಹೆಚ್ಚಾಗಿ ಮತ ಸಂಬಂಧವಾದ ವಿವಾದಗಳಲ್ಲಿ ರಾಜನು ಸ್ವಯಂಜ್ಯೋತಿ ಗುರುವರ್ಯನೆಂಬ ಅಭಿಧಾನವುಳ್ಳ ಸ್ವಜಾತಿಸನ್ಯಾಸಿಯನ್ನು ಕರೆಸಿ ಅರ್ಧಾಸನ ಕೊಟ್ಟು ಕೂರಿಸಿ ಭಯಭಕ್ತಿಯಿಂದ ಅವರ ಅಭಿಪ್ರಾಯವನ್ನು ಕೇಳುವದಿತ್ತು. ಆದರೆ ಅವರ ಅಭಿಪ್ರಾಯವು ಮನಸ್ಸಿಗೆ ಸರಿಕಾಣದೆ ಹೋದರೆ ಅದನ್ನು ತ್ಯಜಿಸಿ ಅರಸನು ಯುಕ್ತಕಂಡಂತೆ ತೀರ್ಮಾನಿಸುವಷ್ಟು ನಿರ್ಧಾರವುಳ್ಳವನಾದ ಕಾರಣ ಗುರುವರ್ಯನು ಅನೇಕಸಾರಿ ತನ್ನ ಖಂಡಿತವಾದ ಸಿದ್ಧಾಂತವನ್ನು ತಿಳಿಸದೆ "ಜಿನಧರ್ಮವನ್ನು ಪಾಲಿಸು" ಎಂದು ಹೇಳಿಮೌನ ತಾಳುವನು. ಆ ಮಾತು ಅವನ ಬಾಯಿಯಿಂದ ಬಿದ್ದಾಕ್ಷಣ ಸಿಂಹಾಸನದ ಎದುರು ಇರುವ ದೊಡ್ಡಘಂಟೆಯ ಸೂತ್ರವನ್ನು ಜಮೇದಾರ ರಾಮಸಿಂಗನು ಎಳೆಯುವನು. ಆಗ ಘಂಟೆಯು ಗಂಭೀರವಾದ ಸ್ವರವನ್ನುಂಟುಮಾಡುವದು. ಕೂಡಲೇ ಕ್ಷಿತೀಶನು ತೀರ್ಪು ವಿಧಿಸುವನು. ಅದರ ಪ್ರವರ್ತನೆಯು ಚೊಕ್ಕವಾಗಿ ನಡಿಯಲಿಕ್ಕೆ ಬೇಕಾದ ಸಿಬ್ಬಂದಿಯು ಸಿದ್ಧವಿರುತ್ತದೆ. ಒಟ್ಟಿನ ಮೇಲೆ ರಾಜದ್ವಾರದಲ್ಲಿ ನಡೆಯುವ ಆಚಾರ ವಿಚಾರವೆಲ್ಲಾ ಶ್ಲಾಘನೆಗೆ ಯೋಗ್ಯವಾದದ್ದೇ.

ಭೀಮಾಚಾರ್ಯನು ವೇದವ್ಯಾಸ ಉಪಾಧ್ಯನ ಸಂಗಡ ದಿವಾನರ ಹಜೂರು ಕಚೇರಿಯಲ್ಲಿ ಸಂದರ್ಭವಿರುವಷ್ಟರ ಮಟ್ಟಿಗೆ ಕೆಲವು ಉದ್ಯೋಗಸ್ಥರ ಭೇಟಿಮಾಡಿ ತಮ್ಮ ಸಂಕಷ್ಟಗಳ ಭಾರವನ್ನು ಮೆಲ್ಲಗೆ ತಿಳಿಸಿದಾಗ ತಮ್ಮಿಂದಾಗುವ ಸಹಾಯ ಮಾಡುವೆವೆಂದು ಅವರು ಧೈರ್ಯಕೊಟ್ಟರು.

ದಿವಾನರ ಮನೆಗಳಿಗೆ ಹೋಗಿ ಅವರನ್ನು ಕಾಣುವದು ಅಥವಾ ಬೇರೆಯವರ ಪರಿಮುಖ ತಮ್ಮ ಬಯಕೆಯ ಕುರಿತು ಪ್ರಸ್ತಾಪಮಾಡಿಸುವುದು ಕಾರ್ಯ ಸಾಧನೆಗೆ ಪ್ರತಿಕೂಲವಾದ್ದೆಂದು ತಿಳಿದು ಅಂಥಾ ವಕ್ರಮಾರ್ಗವನ್ನು ಬಿಟ್ಟು ವಕೀಲನ ಬುದ್ಧಿವಂತಿಗೆ ಮೇಲೆಯೇ ವಿಶ್ವಾಸಪಿಟ್ಟುಕೊಂಡಿದ್ದನು. ವಕೀಲನು ಮಾಡಿದ ಮಸೂದೆಯ ನಕಲು ಬರದು ಅದಕ್ಕೆ ಆ ರಾಜ್ಯದಲ್ಲಿ ವಾಡಿಕೆ ಯಿರುವ ದರ್ಬಾರಿನ ರಸ ಚೀಟುಗಳನ್ನು ಅಂಟಿಸಿ ಅದಕ್ಕೆ ವೇದವ್ಯಾಸ ಉಪಾಧ್ಯನು ಇಬ್ಬರು ಗೃಹಸ್ಥರ ಸಾಕ್ಷಿಸಮೇತ ತನ್ನ ಸಹಿಯನ್ನು ಮಾಡಿದ ಬಳಿಕ ವಕಾಲತು ಸಹಿತ ಓಲಗ ಶಾಲೆಯ ಮುಂದುಗಡೆ ಇರುವ ಪೆಟ್ಟಿಗೆ ಯಲ್ಲಿ ಹಾಕಿದನು. ಅದು ಅದೇ ಸಾಯಂಕಾಲ ಅರ್ಜಿಗುಮಾಸ್ತ ದಾಮೋ ದರ ಪಂತನ ಕೈವಶವಾಯಿತು. ಈತನ ಸ್ನೇಹವನ್ನು ಭೀಮಾಚಾರ್ಯನು ಮೊದಲೇ ಮಾಡಿಕೊಂಡಿದ್ದನು. ಅವನು ಮರೆಯದೆ ಈ ಅರ್ಜಿಯು ಬೇಗನೆ ಸುನಾವಣೆಯಾಗುವ ಹಾಗಿನ ಉಪಾಯ ವರ್ತಿಸಿ ಅದರ ವಿಚಾರಣಕ್ಕೆ ನಿಶ್ಚಯಿಸಿದ ದಿವಸ ಹಗಲು ಎರಡು ತಾಸಿಗೆ ಹಾಜರಾಗಬೇಕೆಂಬಾಜ್ಞೆ ಇರುವ ಇಸ್ತಿಹಾರನ್ನು ವೇದವ್ಯಾಸ ಉಪಾಧ್ಯನ ವಕೀಲನಿಗೆ ಮುಟ್ಟಿಸಿದನು.

ನಿಯಮಿತ ದಿನ ಭೀಮಾಚಾರ್ಯನೂ ವೇದವ್ಯಾಸ ಉಪಾಧ್ಯನೂ ವಕೀಲನ ಸಂಗಡ ರಾಜಸ್ಥಾನಕ್ಕೆ ಹೋದರು ಅರಸನು ಕ್ಲಪ್ತ ಸಮಯಕ್ಕೆ ವಾಡಿಕೆಯಾದ ಪರಿವಾರ ಸಮೇತ ಓಲಗ ಶಾಲೆಗೆ ಪ್ರವೇಶಿಸಿ ಸಿಂಹಾಸನ ದಲ್ಲಿ ಕುಳಿತುಕೊಂಡಾಕ್ಷಣ ಸರ್ವರೂ ಎದ್ದುನಿಂತು ನಮನಮಾಡಿ ಕೂರ ಬಹುದೆಂದು ಕೈ ಸಂಜ್ಞೆಯಿಂದ ರಾಜಾಜ್ಞೆಯಾದ ಬಳಿಕ ತಮ್ಮ ತಮ್ಮ ಸ್ಥಾನಕ್ಕೆಹೋದರು. ವೇದವ್ಯಾಸನ ಅರ್ಜಿಯು ಮತಸಂಬಂಧವಾದ ವಿವಾದ ವಾಗಿರುವುದರಿಂದ ಅದನ್ನು ತೀರಿಸುವ ಕಾಲದಲ್ಲಿ ರಾಜನ ಸ್ವಜಾತಿಗುರು ವರ್ಯರಿರಬೇಕಾದ್ದು ಪೂರ್ವಕಟ್ಟಳೆಯ ಪ್ರಕಾರ ಅಗತ್ಯವಾಯಿತು. ಸ್ವಯಂ ಜ್ಯೋತಿ ಗುರುವರ್ಯರಿಗೆ ಮುಂದಾಗಿ ದಿವಾನರ ಕಚೇರಿಯಿಂದ ಸೂಚನೆ ಕೊಟ್ಟಿರುತಿತ್ತು. ಅದಕ್ಕನುಗುಣವಾಗಿ ಗುರುವರ್ಯರು ತಮ್ಮ ಬಿರುದಾವಳಿ ಸಮೇತ ಓಲಗ ಶಾಲೆಗೆ ಬಂದರು. ಎಲ್ಲರೂ ಎದ್ದುನಿಂತು ಅವರಿಗೆ ಯಥೋ ಚಿತ ಅಭಿವಂದನೆಮಾಡಿದರು. ರಾಜನು ದಂಡಪ್ರಣಾಮಮಾಡಿ ಗುರುವಿಗೆ ಕೈಕೊಟ್ಟು ಅರ್ಧಾಸನವನ್ನಿತ್ತನು. ಉಭಯತರೂ ಕೊಂಚಹೊತ್ತು ಪರಸ್ಪರ ಯೋಗಕ್ಷೇಮವನ್ನು ಕುರಿತು ಪ್ರಶ್ನೋತ್ತರವಾಡಿದ ಮೇಲೆ ಅಂದು ನೇಮಿ

ಸಲ್ಪಟ್ಟ ಕೆಲಸದ ವಿನಿಯೋಗಕ್ಕೆ ಮನಸ್ಸುಕೊಟ್ಟರು.

ಜಮೇದಾರ ರಾಮಸಿಂಗನು "ವೆದ್ಯಾಸ ಉಪಾಧಿ, ವೆದ್ಯಾಸ ಉಪಾಧಿ ವೆದ್ಯಾಸ ಉಪಾಧಿ" ಎಂದು ಮೂರಾವರ್ತಿ ಒದರಿದನು. ವೇದವ್ಯಾಸ ಉಪಾಧ್ಯನು ಆಗ್ನೇಯ ಕೋಣದಂತೆ ಒಂದು ಮೂಲೆಯಲ್ಲಿ ನಿದ್ರಾವಸ್ಥೆಯಲ್ಲಿ ಬಿದ್ದುಕೊಂಡಿದ್ದನು. ಭೀಮಾಚಾರ್ಯನು ಶೀಘ್ರ ಅವನನ್ನು ಎಬ್ಬಿಸಿ "ಏ ಖೋಡಿ ನಿನ್ನ ಪಾಳೆ ಕಳೀತು! ಮೂರಾವರ್ತಿ ಕರೆದರೂ ಸುಟ್ಟ ನಿದ್ರೆ ನಿನಗೆ ಇನ್ನೂ ಕಾಡುತ್ತದೆಯೋ? ಬಾ" ಎಂದು ಗದರಿಸಲು, ವೇದವ್ಯಾಸನು ನಾರಾಯಣ ಸ್ಮರಣೆ ಪುರಸ್ಸರ ಕಣ್ಣುಗಳನ್ನು ತಿಕ್ಕಿಕೊಳ್ಳುತ್ತಾ ಅರ್ಜಿದಾರರು ನಿಂತುಕೊಳ್ಳುವ ಸ್ಥಾನಕ್ಕೆ ಒಂದು ರಾಜನಿಗೆ ಸಲಾಂ ಕೊಟ್ಟನು.

## ಹದಿನೇಳು

ಮೀರಮುನಷಿ ಅನಂತನಾರಾಯಣರಾಯನ ಸಂಕೇತಕ್ಕನುಗುಣವಾಗಿ ದಾಮೋದರಪಂತನು ಎದ್ದು ನಿಂತು ವೇದವ್ಯಾಸನ ಮನವಿಯನ್ನು ಓದಲಾರಂಭಿಸಿದನು. ಹ್ಯಾಗೆಂದರೆ—

"ಶ್ರೀಮದ್ರಾಜಾಧಿರಾಜಮಹಾರಾಜ ವಸಂತನಗರದ ಭೂಪತಿಗಳ ಸಂಸ್ಥಾನಕ್ಕೆ ಕುಮುದಪುರದ ವೇದವ್ಯಾಸ ಉಪಾಧ್ಯನು ಅತಿ ವಿನಯದಿಂದ ಬರೆಕೊಂಡ ಅರ್ಜಿ, ಜೀಯರು! ನಾನು ಗೀರ್ವಾಣ ಭಾಷೆಯಲ್ಲಿ ಅಭಿಜ್ಞತೆಯುಳ್ಳವನಾದ ಕಾರಣ ಕುಮುದಪುರದ ಶ್ರೀಮತ್ ಚಂಚಲನೇತ್ರ ಯತಿಗಳು ತಮ್ಮ ಮಠದಲ್ಲಿ ನನ್ನನ್ನು ಪುರಾಣಿಕನಾಗಿ ನೇಮಿಸಿರುತ್ತಿದ್ದರು. ನಾನು ಆ ಉದ್ಯೋಗವನ್ನು ಸರಿಯಾಗಿ ನಡಿಸಿಕೊಂಡು ಬರುತ್ತಿದ್ದೆ. ಈ ಯತಿಗಳು ಷಡ್ವೈರಿಗಳನ್ನು ಜಯಿಸಿದವರೆಂಬ ಪ್ರಖ್ಯಾತಿಯುಳ್ಳವರಾಗಿ ತಮ್ಮ ಸದ್ಗುಣಗಳಿಂದ ಸಕಲ ಜನರಿಗೂ ಮಾನ್ಯರಾಗಿರುವ ಕಾಲದಲ್ಲಿ ದುರದೃಷ್ಟದಿಂದಲೋ ದುರ್ದೆಶೆಯಿಂದಲೋ ವಾಗ್ದೇವಿ ಎಂಬ ಹೆಸರಿನ ಒಬ್ಬಾಕೆಯ ಮೋಹಜಾಲದಲ್ಲಿ ಸಿಕ್ಕಿಬಿದ್ದು ಯತಿಯಾಗಿ ತಾನು ನಡಿಯಬೇಕಾದ ಮಾರ್ಗವನ್ನೇ ಪರಿತ್ಯಜಿಸಿ ಹೆಸರು ಪೂರ್ತಿ ಸನ್ಯಾಸಧರ್ಮವನ್ನು ನಡೆಸುವ ತೀರಾ ಕಪಟಸನ್ಯಾಸಿಯಂತೆ ಪ್ರವರ್ತಿಸುವದರಿಂದ ಹುಟ್ಟುವ ಅಸಹ್ಯವನ್ನು ತಡೆಯಕೂಡದೆ ಒಂದು ದಿನ ಏಕಾಂತದಲ್ಲಿ ನಾನು ರವಷ್ಟು ಅನುವಾದಿಸಿದ್ದಕ್ಕಾಗಿ ಅವರು ಏಕಾಏಕಿ ಪ್ರಕೋಪಿಸಿ ನನ್ನ ಮೇಲೆ ದ್ವೇಷತಾಳಿದರು. ಮತ್ತು

ನನ್ನನ್ನು ಉದ್ಯೋಗದಿಂದ ತೆಗೆದುಹಾಕಿದರು. ನಾನು ಸುಮ್ಮಗಾದೆ. ಹಾಗೆಯೇ ಕೆಲವು ದಿವಸಗಳಲ್ಲಿ ನದೀ ಸ್ನಾನಕ್ಕೆ ಹೋಗುವ ನೆವನದಿಂದ ಪಾಗ್ದೇವಿಯು ತನ್ನ ಪೆಂಪುತೋರಿಸುವದಕ್ಕಾಗಿ ಗೆಳೆಯರ ಕೂಟದಿಂದ ಪರಿವೃತಳಾಗಿ ಮಾಡುತ್ತಿದ್ದ ಪರ್ಯಟನವನ್ನು ಕೆಲವು ಯುವ್ವನಸ್ಥರು ನೋಡಿ ಪದ್ಯರೂಪವಾಗಿ ಅವಳನ್ನು ನಿಂದಿಸಿದ ಸಿಟ್ಟಿನಿಂದ ಚಂಚಲ ನೇತ್ರ ಸ್ವಾಮಿಗಳು ಆ ಯೌವ್ವನಸ್ಥರನ್ನು ಬಹಿಷ್ಕರಿಸಿ ಅವರನ್ನು ಸಂಪರ್ಕ ವಾಗಿ ನಡಕೊಂಡರೆಂಬ ಹೇತುವಿನಿಂದ ಮರ್ಯಾದಸ್ಥರಾದ ಬೇರೆ ಕೆಲವರನ್ನು ಸಹಾ ತ್ಯಜಿಸಿಟ್ಟಿದ್ದಾರೆ. ಈ ಯತಿಗಳ ಭ್ರಷ್ಟತನದಿಂದ ಇಡೀ ಬ್ರಾಹ್ಮಣ್ಯಕ್ಕೆ ಅಸೂಯೆ ಉಂಟಾಗಿಯದೆ. ಹಾಗೆ ತ್ಯಜಿಸಲ್ಪಟ್ಟವರಲ್ಲಿ ನಾನು ಒಬ್ಬನಾದುದರಿಂದ ನಾನು ಪಡುವ ಅನ್ಯಾಯದ ಬಾಧೆಯನ್ನು ತಡೆಯಲಿ ಕ್ಕಾಗದೆ ವಸಂತನಗರದಲ್ಲಿರುವ ಬೇರೆ ನಾಲ್ಕು ಮಠಾಧಿಪತಿಗಳಿಗೆ ಬರಹ ಮೂಲಕವಾಗಿ ಅರಿಕೆ ಮಾಡಿಕೊಂಡೆನು. ಆದರೆ ಅವರ್‍ಯಾರೂ ನನ್ನ ಮನ ವಿಗೆ ಕಿವಿಕೊಡದೆ ನನಗೆ ಧಿಕ್ಕರಿಸಿಬಿಟ್ಟಿದ್ದಾರೆ. ಹೀಗಾಗಿ ನನ್ನ ಸಂಕಷ್ಟವು ಮತ್ತೂ ಹೆಚ್ಚಾಗಿಯದೆ ಆದುದರಿಂದ ಮಹಾಸ್ವಾಮಿಯ ಓಲಗದಲ್ಲಿ ನಿವೃತ್ತಿ ಹೊಂದುವ ಆಶೆಯಿಂದ ಸನ್ನಿಧಾನದ ಮರೆಹೊಕ್ಕಿರುತ್ತೇನೆ. ನೀತಿ ಪರಿಪಾಲ ನಾರ್ಥವಾಗಿ ಮಹಾಸ್ವಾಮಿಗಳ ಸರ್ಕಾರದವರು ಲೋಕನಿಂದ್ಯವಾದ ಕೃತ್ಯ ದಲ್ಲಿ ಅಮರಿಕೊಂಡಿರುವ ಸ್ತ್ರೀಲಂಪಟ ಯತಿಯನ್ನು ದಂಡಕ್ಕೆ ಗುರಿಪಡಿಸ ಬೇಕಾಗಿ ದೀನಭಾವದಿಂದ ಬೇಡಿಕೊಳ್ಳುತ್ತೇನೆ, ದೇವರು"

"ಓದಿ ಹೇಳಿದ ಅರ್ಜಿಯನ್ನು ನೀನು ಬರಕೊಂಡದ್ದೋ? ಅದರಲ್ಲಿ ಬರೆದ ಸಂಗತಿಗಳೆಲ್ಲ ಯಥಾರ್ಥವೋ?" ಎಂದು ಮೀರಮುನಷಿಯವರಿಂದ ಕೇಳಲ್ಪಟ್ಟಾಗ "ಅರ್ಜಿಯಲ್ಲಿ ಅನೃತ ಒಂದಾದರೂ ಇಲ್ಲ, ಶ್ರೀರಾಮನಾಣೆ" ಎಂದು ವೇದವ್ಯಾಸ ಉಪಾಧ್ಯನು ಪ್ರಮಾಣಮಾಡಿ ಹೇಳಿದನು. ರಾಮಾ ಎಂಬ ಶಬ್ದವನ್ನು ಕೇಳಿದೊಡನೆ ಕಿರಿ ದಿವಾನನು ತನ್ನ ಕಿವಿಗಳಲ್ಲಿ ಕೈಬೆರಳು ಗಳನ್ನು ಹೊಗಿಸಿಬಿಟ್ಟು "ಶಿವಾ ಶಿವಾ ಎನ್ನಬಾರದೇ ಹಾರುವಾ" ಎಂದನು. "ಶಿವಾ ಶಿವಾ" ಎಂಬ ಶಬ್ದ ಕೇಳುತ್ತಲೇ ಹಿರೀ ಪ್ರಧಾನನು ತನ್ನ ಕಿವಿಗಳನ್ನು ತದ್ರೀತಿ ಮುಚ್ಚಿಕೊಂಡು "ರಾಮ ರಾಮ" ಎಂದನು. ಕೊಂಚ ಸಮಯದ ವರೆಗೆ ಹಿರಿ ಮತ್ತು ಕಿರಿ ದಿವಾನರು ಗಾಳಿಯೂ ನುಸುಕಾಡದಂತೆ ಕಿವಿಗಳನ್ನು ಮುಚ್ಚಿಕೊಂಡೇ ಅವರವರ ದೇವರ ನಾಮಗಳನ್ನು ಉಚ್ಚರಿಸಿದರು. ಶಾನೆ

ಹೊತ್ತು ಹೀಗೆ ಕಳೆದರೆ ಅರಸನು ಕೋಪಿಸುವನೆಂಬ ಹೆದರಿಕೆಯಿಂದ ಉಭಯ ದಿವಾನರು ತಮ್ಮ ಕಿವಿಗಳಿಗೆ ಅವುಗಳ ಸ್ವಾತಂತ್ರ್ಯವನ್ನು ಕೊಟ್ಟರು. "ನೀನು ಮನವಿಯಲ್ಲಿ ಯತಿಯ ಮೇಲೆ ಬರೆದಿರುವ ಅಪವಾದವನ್ನು ಪ್ರತಿಪಾದನ ಮಾಡುವಿಯಾ?" ಎಂದು ಅರಸನು ಪ್ರಶ್ನೆಮಾಡಲು, "ಮಹಾಸ್ವಾಮಿಾ, ನನ್ನ ಕೇಳಿಕೆಯನ್ನು ಪ್ರತಿಪಾದಿಸುವದಕ್ಕೆ ಸಿದ್ಧನಾಗಿರುತ್ತೇನೆ. ವಿಚಾರಣೆಗೆ ಮಾತ್ರ ಅಪ್ಪಣೆಯಾಗಲಿ" ಎಂದು ವೇದವ್ಯಾಸನು ಬೇಡಿಕೊಂಡನು. ಅರ್ಜಿದಾರನ ವಕೀಲನು ಏನಾದರೂ ಹೇಳಿಕೊಳ್ಳುವದಕ್ಕೆ ಆಶೆಯುಳ್ಳವನೋ ಎಂದು ಕಿರೀದಿವಾನನು ಕೇಳಿದಾಗ ವಕೀಲನು ಸಣ್ಣದೊಂದು ಉಪನ್ಯಾಸವನ್ನು ಮಾಡಿದನು. ಹ್ಯಾಗೆಂದರೆ—

ಮಹಾಸ್ವಾಮಿಾ, ಸಕಲಸಂಗತಿಗಳು ಫಿದ್ವಿಯ ಅರ್ಜಿಯಲ್ಲಿ ಕೂಲಂಕಷವಾಗಿ ಬರಿಯೋಣಾಗಿದೆ. ಪರಂತು ಅವುಗಳ ಯಥಾರ್ಥತೆಯನ್ನು ನಿಷ್ಕರ್ಷೆ ಮಾಡುವ ಹಾಗೆ ಒಂದು ನ್ಯಾಯವಾದ ವಿಚಾರಣೆಯು ಅಗತ್ಯವದೆಯಷ್ಟೇ. ಪರಂತು ಫಿದ್ವಿಯು ಮಾರ್ಗತಪ್ಪಿ ಸನ್ನಿಧಾನದ ಮುಂದೆ ಬಂದವನಲ್ಲ. ಅಂದರೆ ಅವನು ಮುಂದಾಗಿ ನಾಲ್ಕು ಮಠಾಧಿಪತಿಗಳಿಗೆ ಚಂಚಲನೇತ್ರರ ದೂರನ್ನು ಹೇಳಿದ್ದಾನೆ. ಪರಂತು ಆ ಯತಿಗಳು ಫಿದ್ವಿಯ ಮಾತಿಗೆ ಕಿವಿಗೊಡದೆ ಅವನನ್ನು ತುಚ್ಛೀಕರಿಸಿದ ದೆಸೆಯಿಂದ ಅವನು ಕಳೆಗುಂದಿ ಮಹಾಸ್ವಾಮಿಯ ಪಾದಗಳ ಮುಂದೆ ಬಂದು ನಿವೃತ್ತಿ ಹೊಂದುವನೆಂಬ ಕೋರಿಕೆಯಲ್ಲಿದ್ದಾನೆ. ಮುಖ್ಯವಾಗಿ ಅವನು ಮುಯ್ಯಿಗೆ ಮುಯ್ಯಿ ತೀರಿಸಲಿಕ್ಕೆ ಬಂದವನಲ್ಲ, ಅವನ ನಿಜಸ್ಥಿತಿ ತಿಳಿದವರು ಅವನ ಮೇಲೆ ಅಂಥಾ ಅನುಮಾನ ಗ್ರಹಿಸಲಿಕ್ಕಿಲ್ಲ. ಅಂದರೆ ಇಡೀ ಬ್ರಹ್ಮಸಮೂಹಕ್ಕೇನೆ ಕುಂದು ಬರುವ ಹಾಗಿನ ಕುಮಾರ್ಗವನ್ನು ಚಂಚಲನೇತ್ರರು ಅವಲಂಬಿಸಿ ಲೋಕ ನಿಂದ್ಯಕ್ಕೆ ಗುರಿಯಾಗಿರುವದರಿಂದ ಫಿದ್ವಿಯು ಕೇಳಿಕೊಳ್ಳುವ ನಿವೃತ್ತಿಯು ಅವನೊಬ್ಬನ ಮಟ್ಟಿಗೆ ಮಾತ್ರವಲ್ಲ, ಸರ್ವಲೋಕೋಪಕಾರಾರ್ಥವಾಗಿ ಅವನು ವದ್ದಾಡುವದಾಗಿರುತ್ತದೆ. ಪರಂತು ಏವಂಚ ಇಂಥಾ ಮೊಕದಮೆಯಲ್ಲಿ ಮಹಾಸ್ವಾಮಿಗಳ ಅಪ್ಪಣೆಯಾಗದಿದ್ದರೆ ನೀತಿಯೇ ಮುಳುಗುವದಾಗುತ್ತದೆ. ಪರಂತು ಹೆಚ್ಚಿಗೆ ಅರಿಕೆ ಮಾಡಿಕೊಳ್ಳಲಿಕ್ಕೆ ನಾನು ಶಕ್ತನಲ್ಲ. ಇನ್ನೂ ಫಿದ್ವಿಯ ಪುಣ್ಯ ಮಹಾಸ್ವಾಮಿಯ ಚಿತ್ತವೆನ್ನುತ್ತೇನೆ, ಪರಂತು ಬೇರೇನು ಹೇಳಲಿ ಪರಾಕೆ"

ವಕೀಲನ ಭಾಷಣದಲ್ಲಿ ಅಡಗಿರುವ ಪರಂತು ಎಂಬ ಶಬ್ದಗಳನ್ನು

ಭೀಮಾಚಾರ್ಯನು ಜಾಗ್ರತೆಯಿಂದ ಎಣಿಸಿಕೊಂಡು ನೆನಪಿನಲ್ಲಿ ಇಟ್ಟು ಕೊಂಡನು. ಮತ್ತು ಮುಗುಳು ನಗೆಯಿಂದ ವೇದವ್ಯಾಸನ ಮೋರೆಯನ್ನು ನೋಡುತ್ತಾ "ಪರಂತು" ಗಳ ಮಾಲೆಯನ್ನು ಮಾಡಿಸಿ ನಿನ್ನ ಕುತ್ತಿಗೆಗೆ ಹಾಕಿಕೊ, ಕಾಸೊಂದು ಖರ್ಚಿಲ್ಲದೆ ಅದೃಶ್ಯಾಭರಣ ಒಂದು ದೊರಕಿಸಿ ಕೊಂಡಂತಾಯಿತು." ಎಂದನು.

ವಾಡಿಕೆಯಂತೆ ಕಿರೀದಿವಾನರ ಅಭಿಪ್ರಾಯ ಮುಂದಾಗಿ ತಿಳಿಯುವ ಅವಶ್ಯವಿದೆ, ಎಂದು ಮಹಾಸ್ವಾಮಿಯ ಅಪ್ಪಣೆಯಾಯಿತು. ಆಗ ಚೆನ್ನಬಸವಯ್ಯನು ಎದ್ದು ನಿಂತು ಮಾತಾಡಲಿಕ್ಕೆ ಉಪಕ್ರಮಿಸಿದನು. "ಮಹಾಸ್ವಾಮಿಯ ಪಾದಕ್ಕೆ ನಮೋನಮಃ! ಈ ಹಾರುವನ ಮನವಿಯಲ್ಲಿ ಒಬ್ಬ ಸನ್ಯಾಸಿಯ ಮೇಲೆ ಘೋರವಾದ ದೋಷಾರೋಪಣೆ ತುಂಬಾ ಇದೆ. ಹಾರುವರ ಮಕ್ಕಳು ಇಂಥಾ ಭಂಡಾಟ ಮಾಡಬಹುದೇ? ಬಾಯಿಯಲ್ಲಿ ಬಣ್ಣಾಚಾರ ನಡತೆಯಲ್ಲಿ ಅನಾಚಾರವಾಯಿತಲ್ಲ! ಪ್ರಪಂಚದ ಗೊಡವೆಯನ್ನು ಬಿಡಬೇಕಾದ ಯತಿಯು ಸ್ತ್ರೀಮೋಹಕ್ಕೆ ಒಳಗಾಗಿ ಮನಸ್ವಿ ನಡಕೊಳ್ಳುವದಾದರೆ ಅವನ ಗುರುತ್ವ ಹ್ಯಾಗೆ ಉಳದೀತು? ಅವನು ಶಿಷ್ಯರಿಗೆ ಹೇಗೆ ಮಾನ್ಯನಾದಾನು? ಲೋಕದಲ್ಲಿ ಧರ್ಮಾಧರ್ಮ ವಿಚಾರ ಹ್ಯಾಗೆ ನಡೆದೀತು? ಮಹಾಸ್ವಾಮಿಯ ರಾಜ್ಯದಲ್ಲಿ ಇದುವರಿವಿಗೂ ಇಂಥಾ ಹೊಲಸು ನಡೆದಂತೆ ನನ್ನ ಅನುಭವದಲ್ಲಿಲ್ಲವು. ಈಗ ಎದುರಿಗೆಬಂದಿರುವ ಪ್ರಕರಣದಲ್ಲಿ ಶೀಘ್ರ ಅನ್ವೇಷಣ ಮಾಡುವದೇ ಕರ್ತವ್ಯವೆಂದು ನನ್ನ ಮನಸ್ಸಿಗೆ ತೋರುತ್ತೆ. ಆ ಕಪಟ ಯತಿಯನ್ನೂ ಅವನ ಸತಿಯನ್ನೂ ರಾಜದ್ವಾರಕ್ಕೆ ಕರತರಿಸಿ ಶಿಕ್ಷೆಗೆ ಗುರಿಪಡಿಸುವದು ನ್ಯಾಯವಾದೀತೆಂಬ ನನ್ನ ವಿಜ್ಞಾಪನೆಯು ಮಹಾಸ್ವಾಮಿಯ ಚಿತ್ತಕ್ಕೆ ಒಡಂಬಡಿಕೆಯಾಗುವದೆಂದು ಭಾವಿಸುತ್ತೇನೆ. ಹೆಚ್ಚಿಗೆ ಅರಿಕೆ ಮಾಡಿಕೊಳ್ಳಲಿಕ್ಕೆ ಪಾದಸೇವಕನು ಶಕ್ತನಲ್ಲ."

ಹಿರೇ ದಿವಾನರ ಅಭಿಪ್ರಾಯ ಹ್ಯಾಗೆಂದು ಅರಸನು ಕೇಳಿದನು. ಆದಿಕೇಶವರಾಯನು ಬಿನ್ನವಿಸಿದ್ದೇನಂದರೆ—

"ಮಹಾಸ್ವಾಮಿಯ ಪಾದಕ್ಕೆ ಬಡಕಿಂಕರನು ಹೆಚ್ಚು ಸಮಯ ಅರಿಕೆ ಮಾಡಿಕೊಳ್ಳತಕ್ಕದ್ದೇನದೆ? ಈ ಮೊಖದಮೆಯಲ್ಲಿ ದೋಷಾರೋಪಣೆ ಮಾಡಲ್ಪಟ್ಟ ಯತಿಯು ವೈಷ್ಣವಮತದ ಸನ್ಯಾಸಿಯಾಗಿ ಅದೇ ಮತದವನಾದ ನನಗೂ ಮಾನ್ಯನಾದ ಪ್ರಯುಕ್ತ ನನ್ನ ಅಭಿಪ್ರಾಯ ಎಷ್ಟು ನಿಷ್ಪಕ್ಷಪಾತ

ದ್ದಾದರೂ ನಾನು ವಕೀಲಿ ಮಾಡುತ್ತೇನೆಂಬ ಅಪವಾದ ಜನರು ನನ್ನ ಮೇಲೆ ಹಾಕದೆ ಇರಲಾರರು. ಅದು ಹಾಗಿರಲಿ. ಪ್ರಕೃತದ ವಿಚಾರದಲ್ಲಿ ನನ್ನ ಅಭಿಪ್ರಾಯ ಹೇಳುವದಕ್ಕೆ ನಾನು ಅಂಜತಕ್ಕ ಅಗತ್ಯವೇನೂ ಇಲ್ಲ. ಒಬ್ಬ ಯತಿಯ ಮೇಲೆ ಒಬ್ಬಾತನು ಎದ್ದು ನಿಂತು ದೋಷಾರೋಪಣೆ ಮಾಡುವದಕ್ಕೆ ಧೈರ್ಯಪಟ್ಟಾಗ ಅದನ್ನು ಕುರಿತು ಪರಿಶೋಧನೆ ಮಾಡಿ ಅಪವಾದದ ಸತ್ಯಾಸತ್ಯ ನಿಷ್ಕರ್ಷೆಮಾಡುವದು ಬೇರೆ ನಾಲ್ಕು ಮಠದವರ ಕೆಲಸವಾಗಿತ್ತು. ಪರಂತು ಅವರು ವಾದಿಯ ಬಿನ್ನಹವನ್ನು ಗಣ್ಯಕ್ಕೆ ತಾರದೆ ಸುಮ್ಮಗಿರುವದು ಕೇವಲ ಅನ್ಯಾಯವಾದ್ದೆಂತ ನಾನು ತಿಳಕೋಧೇನೆ. ವಾದಿಯು ಮಹಾಸ್ವಾಮಿಯ ಮುಂದೆ ತಂದ ಮನವಿಯು ನಿಷ್ಕಾರಣವಾದ್ದೆಂದು ಯಾರೂ ಹೇಳಕೂಡದು. ವಿಚಾರಮಾಡತಕ್ಕ ಮಠಾಧಿಪತಿಗಳು ಈ ವಿಷಯದಲ್ಲಿ ಪ್ರವೇಶಿಸದೆ ಇದ್ದ ಕಾರಣ ವಾದಿಯು ಮಹಾಸ್ವಾಮಿಗೆ ದೂರು ಕೊಟ್ಟದ್ದು ಸರಿಯಾದ್ದೇ. ಯತಿಯನ್ನೂ ವಾಗ್ದೇವಿಯನ್ನೂ ಕರತರಿಸಿ ಶಿಕ್ಷೆಗೆ ಗುರಿಪಡಿಸಬೇಕೆಂಬಂತೆ ಕಿರೀ ದಿವಾನರು ಅಭಿಪ್ರಾಯಪಟ್ಟದ್ದು ಉಚಿತವೆಂದು ನಾನು ಹ್ಯಾಗೆ ಹೇಳಲಿ! ಮತಸಂಬಂಧವಾದ ಕಾರ್ಯದಲ್ಲಿ ಬೇರೆ ಮಠಾಧಿಪತಿಗಳು ಪ್ರವೇಶಿಸಿ, ತಮ್ಮ ಹಾಗೆ ಮಠಾಧಿಪತಿಯಾದ ಇನ್ನೊಬ್ಬ ಸನ್ಯಾಸಿಯ ಮೇಲ ಬಂದ ಅಪವಾದದ ಮೂಲಶೋಧನೆ ಮಾಡದೆ ಹೋದರೆ ಮಹಾಸ್ವಾಮಿಯ ಸರ್ಕಾರದಿಂದ ಆಯಾ ಮಠಕ್ಕೆ ಸಲ್ಲುವ ತಸ್ತೀಕುಇನಾಮು ಉತ್ತಾರ ಇತ್ಯಾದಿ ಉಚಿತಗಳನ್ನು ತಾಮುಸವಿಲ್ಲದೆ ಜಪ್ತಮಾಡುವ ಅಗತ್ಯಬೀಳುವದೆಂದು ಎಚ್ಚರಿಸಿ, ಅವರು ಆ ಮೇಲೆಯೂ ಸುಮ್ಮಗಿದ್ದುಕೊಂಡರೆ ಮಹಾಸ್ವಾಮಿಯ ಸನ್ನಿಧಿಯಿಂದಲೇ ಮುಂದಿನ ವಿಚಾರಣೆಯು ನಡಿಯುವದು ವಿಹಿತವಾದ ಮಾರ್ಗವೆಂತ ನನಗೆ ತೋರುತ್ತದೆ. ಹೆಚ್ಚು ಅರಿಕೆಮಾಡಿ ಕೊಳ್ಳಲಿಕ್ಕೆ ಶಕ್ತನಲ್ಲ, ಮಹಾಸ್ವಾಮಿ!"

ಬಳಿಕ ಅರಸನು ತನ್ನ ಗುರುವಿನ ಮುಖವನ್ನು ನೋಡಿದಾಗ ಕೊಂಚ ಸಮಯ ಬಾಯಿಬಿಚ್ಚದೆ ಕೊನೆಗೆ "ಜಿನಧರ್ಮವನ್ನು ಪಾಲಿಸು" ಎಂದು ದೀರ್ಘಸ್ವರದಿಂದ ಗುರುವರ್ಯನು ಹೇಳಿದನು. ಆ ಕ್ಷಣ ಜಮೇದಾರ ರಾಮಸಿಂಗನು ಘಂಟೆಯ ಸೂತ್ರವನ್ನು ಎಳೆದನು ಘಂಟೆಯಿಂದ ಗಂಭೀರ ನಾದ ಹುಟ್ಟಿತು. "ಹಿರೇ ದಿವಾನರ ಅಭಿಪ್ರಾಯವು ನ್ಯಾಯವಾದ್ದು. ಮಿಕ್ಕ ನಾಲ್ಕು ಸನ್ಯಾಸಿಗಳು ವೇದವ್ಯಾಸ ಉಪಾಧ್ಯನ ಮನವಿಯನ್ನು ಕುರಿತು

ಯುಕ್ತವಾದ ಪರಾಮರ್ಶೆಯನ್ನು ಮಾಡದೆ ಪಕ್ಷಪಾತ ಮಾಡಿದರೆ ಅವರಿಗೆ ಸರ್ಕಾರದಿಂದ ಸಿಕ್ಕುವ ಇನಾಮು ಮರ್ಯಾದೆ ಕಳಕೊಳ್ಳಬೇಕಾಗುವದೆಂದು ಅವರಿಗೆ ಎಚ್ಚರಿಸಿ, ಆಜ್ಞಾ ಪ್ರಕಾರ ಹೋಗಬೇಕು. ಅವರು ಅದನ್ನು ಮನ್ನಿಸದೆ ಹೋದ ಪಕ್ಷದಲ್ಲಿ ಮನವಿದಾರನು ಪುನಃ ಅರಿಕೆಮಾಡಿಕೊಂಡರೆ ನೋಡಬಹುದು" ಎಂದು ರಾಜಾಜ್ಞೆಯಾಯಿತು.

ಈ ತೀರ್ಪು ಸರ್ವರಿಗೂ ಹಿತವಾಯಿತು. ಭೀಮಾಚಾರ್ಯನು ಅತಿ ಸಂತೋಷಪಟ್ಟನು. ತಾನು ವೇದವ್ಯಾಸ ಉಪಾಧ್ಯನ ಪಕ್ಷ ಹಿಡಿದು ಮಾಡಿದ ಪ್ರಯತ್ನವು ಸಫಲವಾಯಿತು. ಅದರ ಅವಸಾನವು ಹ್ಯಾಗೂ ಆಗಲಿ; ಇನ್ನು ತಾನು ಊರಿಗೆ ಹೋಗುವದೇ ಸೈ; ನೀನು ಬೇಕಾದ್ದು ಮಾಡೆಂದು ಗೆಳೆಯಗೆ ಹೇಳಲಾಗಿ—"ಆಹಾ! ನನ್ನ ಕೊರಳು ಕೊಯ್ಯುವ ಯುಕ್ತಿ ಮಾಡುವಿರಾ, ಆಚಾರ್ಯರೇ? ತಮ್ಮ ಪ್ರಯತ್ನದ ಬಲದಿಂದ ನಾನು ಗೆದ್ದ ಹಾಗಾಯಿತು. ಮುಂದೆ ನಡೆಯತಕ್ಕ ಕೆಲಸವಂತೂ ಪ್ರಯಾಸವಾದ್ದು. ಇದು ತಮಗೆ ಚನ್ನಾಗಿ ಗೊತ್ತಿದ್ದು ನನ್ನ ಕೈಬಿಡಲಿಕ್ಕೆ ನೋಡುತ್ತೀರಾ, ಸ್ವಾಮಿಾ? ತಮ್ಮ ಭಕ್ತನಾದ ನನ್ನ ಮೇಲೆ ಪೂರ್ಣ ವಾತ್ಸಲ್ಯವಿಟ್ಟು ನಡಿಸಬೇಕು" ಎಂದು ವೇದವ್ಯಾಸನು ನಮಿಸಿದನು. ಇವರೊಳಗೆ ಹೀಗೆ ಸಂಭಾಷಣೆ ನಡಿಯುವಾಗ ಪರಂತು ಗೋವಿಂದ ಪಂಡಿತರು ಬಂದು—"ಆಚಾರ್ಯರೇ! ತಮ್ಮ ಪಂಥ ಗೆದ್ದ ಹಾಗಾಯಿತು" ಎಂದರು. "ಸ್ವಾಮಿಾ ತಮ್ಮ ಸಾಹಸದಿಂದ ಗೆದ್ದೆವು: ಮುಂದೆ ಆಗತಕ್ಕ ಮಹತ್ಕಾರ್ಯ ಹೀಗೆಯೇ ಇದೆ. ತಮ್ಮ ಕಟಾಕ್ಷದ ಪ್ರಭಾವದಿಂದ ಬಡ ವೇದವ್ಯಾಸನು ಜಯಪಡಬೇಕಲ್ಲದೆ ಅವನೊಬ್ಬನ ಕೈಯಿಂದ ಏನಾಗುವದು? 'ಏಕೋ ದೇವೋ ಕೇಶವೋವಾ ಶಿವೋವಾ.' ಕಡೇವರಿಗೂ ಯಾರಾದರೂ ಒಬ್ಬನನ್ನೇ ನಂಬಬೇಕಲ್ಲದೆ ಇದ್ದವರ ಕೈಕಾಲು ಹಿಡಿದು ಏನು ಪುರುಷಾರ್ಥವಿದೆ? ಕರುಣಿಗಳಾದ ತಮ್ಮ ಮೇಲೆ ವೇದವ್ಯಾಸನು ಪೂರ್ಣ ವಿಶ್ವಾಸವಿಟ್ಟಿರುವದು ದಿಟ. ಅವನನ್ನು ಸರ್ವಥಾ ಬಿಟ್ಟು ಹಾಕಬಾರದು" ಎಂದು ಭೀಮಾಚಾರ್ಯನು ಪಂಡಿತಗೆ ಹೊಗಳಿ ಚೆನ್ನಾಗಿ ಉಬ್ಬಿಸಿಬಿಟ್ಟನು. "ಆಚಾರ್ಯರೇ! ತಾವು ನನ್ನ ತೀರ್ಥರೂಪರಿಗೆ ಸಮಾನರಾಗಿದ್ದೀರಿ; ತಮ್ಮ ಮಾತು ನನ್ನ ತಲೆಯ ಮೇಲೆ ಇರಲಿ. ವೇದವ್ಯಾಸ ಉಪಾಧ್ಯನು ಹೆದರಬೇಕ್ಯಾಕೆ? ಪ್ರತಿಫಲವಾಗಿ ನಾನು ಒಂದು ಕಾಸಾದರೂ ಈಸುಕೊಳ್ಳದೆ ಅವನಿಗೆ ಪೂರ್ಣಸಹಾಯ ಮಾಡಲಿಕ್ಕೆ ಅನುಮತಿಸಿದ್ದೇನೆ;

ಸಾವಿರ ಮಾತ್ಯಾಕೆ?" ಎಂದು ಧೈರ್ಯಕೊಟ್ಟು ಅಂದು ರಾತ್ರಿ ಭೋಜನಕ್ಕೆ ಬೇರೆ ಎಲ್ಲಿಗೂ ಹೋಗಕೂಡದು; ತನ್ನಲ್ಲಿಗೇನೇ ಬರಬೇಕಾಗಿ ವಕೀಲನು ಸಿಪ್ರರಿಬ್ಬರಿಗೂ ಹೇಳಿಕೊಂಡನು. ಆ ರಾತ್ರಿ ವಕೀಲರಲ್ಲಿ ದಿವ್ಯಭೋಜನವಾಯಿತು. ಮರುದಿನ ಬೆಳಿಗ್ಗೆ ದ್ವಿಜರೀರ್ವರೂ ಗೋವಿಂದ ಪಂಡಿತನ ಅಪ್ಪಣೆ ಪಡಕೊಂಡು, ಹರುಷದಿಂದ ನೃಸಿಂಹಪುರಕ್ಕೆ ತೆರಳಿ, ನೃಪತಿಯ ಪರವಾನೇ ಕಾದುಕೊಂಡಿದ್ದರು.

## ಹದಿನೆಂಟು

ಒಂದೆರಡು ದಿನಗಳಲ್ಲಿ ಅರಮನೆಯ ದೊಡ್ಡಮುದ್ರೆ ಒತ್ತಿರುವ ಪರವಾನೆಯು ಜ್ಞಾನಸಾಗರತೀರ್ಥರಿಗೆ ತಲ್ಪಿತು. ಅವರು ಅದನ್ನು ಓದಿಸಿಕೇಳಿದಾಗ ವೇದವ್ಯಾಸ ಉಪಾಧ್ಯನ ಮನವಿಯ ಮೇಲೆ ನೃಪತಿಯು ಕೊಟ್ಟ ಅಪ್ಪಣೆಯ ಅಂದವು ತಿಳಿಯಿತು. "ಅಹಾ! ಈ ಹಾರುವನು ಚಾಣಿಕ್ಯನ ಹಾಗೆ ಒಳ್ಳೆ ಸಾಹಸಿಯೇ ಸೈ. ಶ್ರೀಪಾದಂಗಳ್ಯಾರೂ ಅವನಿಗೆ ಇಂಬುಗೊಡದೆ, ನಮ್ಮಂತೆಯೇ ಧಿಕ್ಕರಿಸಿಬಿಟ್ಟರೇ!" ಮನವಿದಾರನು ಪಟ್ಟಣದಲ್ಲೆಲ್ಲಾದರೂ ಬಂದಿರುವನೋ ವಿಚಾರಿಸಿ ಹೇಳಬೇಕಾಗಿ ಸ್ವಾಮಿಗಳು ಅಪ್ಪಣೆಕೊಟ್ಟರು. ಮಠದ ಹರಿಕಾರರು ಅಲ್ಲಲ್ಲಿ ತಿರುಗಾಡಿ ನೋಡುವಾಗ ವೇದವ್ಯಾಸ ಉಪಾಧ್ಯನೂ ಭೀಮಾಚಾರ್ಯನೂ ಮಿಠಾಯಿ ಸಂತೆಯ ಸಮೀಪ ತಿರುಗಾಡಿಕೊಂಡಿದ್ದರು. ಆ ವದಂತಿಯನ್ನು ಶ್ರೀಪಾದಂಗಳಿಗೆ ಚಾಕರರು ತಿಳಿಸಿದರು.

ಸ್ವಾಮಿಗಳು ತನ್ನ ಮಠದ ಪಾರುಪತ್ಯಗಾರ ರಾಧಾಕೃಷ್ಣಾಚಾರ್ಯನನ್ನು ಕರಸಿಕೊಂಡು, ಭೂಪಾಲನ ಪರವಾನೆಯನ್ನು ಅವನಿಗೆ ತೋರಿಸಿ, ಅವನ ಆಲೋಚನೆಯನ್ನು ಕೇಳಿದರು. ವೇದವ್ಯಾಸ ಉಪಾಧ್ಯನು ಆರಂಭದಲ್ಲಿ ಮಠಕ್ಕೆ ಬಂದು ಹೇಳಿಕೊಂಡಾಗ ಅವನಿಗೆ ಯಾವದೊಂದು ಸುಸೂತ್ರವಾದ ಉತ್ತರಕೊಡದೆ, ಧಿಕ್ಕರಿಸಿಬಿಟ್ಟ ಸಮಾಚಾರವನ್ನು ಕೇಳಿ, ಕೊಂಚ ಚಿನ್ತ್ಮಾಯನಪಟ್ಟನೆಂದು ಪಾರುಪತ್ಯಗಾರನು ಬಿನ್ನವಿಸಿದನು. ಈಗ ಅನುಸರಿಸಬೇಕಾದ ಕ್ರಮ ಹೇಳಬೇಕಾಗಿ ಜ್ಞಾನಸಾಗರರು ಪಾರುಪತ್ಯಗಾರಗೆ ಅಪೇಕ್ಷಿಸಿದರು. ಸನ್ನಿಧಿಯಿಂದಲೇ ಅವಶ್ಯವಿರುವ ವಿಚಾರಣೆ ನಡೆದು, ವೇದವ್ಯಾಸನ ಮನವಿಯ ಇತ್ಯರ್ಥವಾಗಲಿಕ್ಕೆ ಪೂರ್ವದ ಕಟ್ಟಿನ ಪ್ರಕಾರ ಸ್ವತಂತ್ರವಿದ್ದರೂ ದುರ್ದಾನಕ್ಕೆ ಸಮಾನವಾದ ಈ ವಿಷಯದಲ್ಲಿ ಬೇರೆ ಮೂರು ಮಠ

ದವರಿಗೂ ಬರೆದು ಅವರ ಅಭಿಪ್ರಾಯ ತಿಳುಕೊಂಡು ಮುಂದರಿಸುವದು ಒಳ್ಳೆಯದೆಂದು ರಾಧಾಕೃಷ್ಣಾಚಾರ್ಯನು ಕೊಟ್ಟ ಆಲೋಚನೆಯು ಶ್ರೀಪಾದಂಗಳ ಮನಸ್ಸಿಗೆ ಸಮ್ಮತವಾಗಿ, ಹಾಗೆ ವರ್ತಿಸುವುದಕ್ಕೆ ಅವರು ಅವನಿಗೆ ಅಪ್ಪಣೆಕೊಟ್ಟರು. ಪಾರುಪತ್ಯಗಾರನು ನೃಪಾಲನ ಪರವಾನೆಯ ಸಹಿ ನಕಲುಗಳನ್ನುಮಾಡಿಸಿ, ಬೇರೆ ಮೂರು ಮಠಾಧಿಪತಿಗಳಿಗೂ ಕಳುಹಿ ಕೊಟ್ಟು, ಅವರ ಅಭಿಪ್ರಾಯ ಶೀಘ್ರ ತಿಳಿಸಬೇಕೆಂದು ಅಪೇಕ್ಷಿಸಿನು.

ಆಶ್ರಮಜ್ಯೇಷ್ಠರಾದ ಜ್ಞಾನತೀರ್ಥರು ಇದನ್ನು ಕುರಿತು ಸೂಚಿಸುವ ಮಾರ್ಗಕ್ಕೆ ಅಸ್ತು ಎಂಬುದಾಗಿ ತಮ್ಮ ಭಾವವನ್ನು ಪೂರ್ಣಾನಂದ ತೀರ್ಥರೂ ಅಚಲನೇತ್ರರೂ ತಿಳಿಸಿದರು. ಹರಿಪದಾಂಬುಜತೀರ್ಥರು ಬಾಲಮುಕುಂದಾ ಚಾರ್ಯನನ್ನು ಕರೆಸಿ, ಅವನ ಕೂಡೆ ಗುಪ್ತಾಲೋಚನೆ ಮಾಡಿದರು ಕೊಂಚನಮಯ ಅವನು ಚಿಂತಿಸಿ ಚಂಚಲನೇತ್ರರ ಕೂಡೆ ಮುಖತಃ ಚರ್ಚೆ ಮಾಡಿ ಮುಂದಿನ ಕೆಲಸವನ್ನು ಮಾಡುವುದು ಒಳ್ಳೆಯದೆಂದು ತನ್ನ ಮತ ವೆಂದನು. “ಬಾಲಮುಕುಂದನೇ! ನೀನೇ ನರಸಿಂಹ ಪುರದ ತನಕ ಹೋಗಿ ಆಶ್ರಮದಲ್ಲಿ ಹಿರಿಯರಾದ ಜ್ಞಾನಸಾಗರರನ್ನು ಕಂಡು, ನಿನ್ನ ಮನಸ್ಸಿಗೆ ಯುಕ್ತತೋರುವಂತೆ ಈ ಕಾರ್ಯವನ್ನು ನಿರ್ವಹಿಸು”ಎಂದು ಹರಿಪದಾಂಬು ಜತೀರ್ಥರ ಅಪ್ಪಣೆಯಾಯಿತು.

ದೀರ್ಘದರ್ಶಿಯಾದ ಬಾಲಮುಕುಂದಾಚಾರ್ಯನು ಯಜಮಾನರು ಕೊಟ್ಟ ಅನುಜ್ಞೆಗನುಸರಿಸಿ ವ್ಯರ್ಥವಾಗಿ ಸಮಯ ಕಳೆಯದೆ ಸಂತೋಷ ಚಿತ್ತದಿಂದ ತನ್ನ ಗೌರವಕ್ಕೆ ಯೋಗ್ಯವಾದ ರೀತಿಯಲ್ಲಿ ಸೇವಕ ಜನರನ್ನು ಸಂಗಡ ಕರೆದುಕೊಂಡು ವಾಹನಾರೂಢನಾಗಿ ನೃಸಿಂಹಪುರಕ್ಕೆ ತಲ್ಪಿದನು ಈ ವರದಿಯು ಮಠಕ್ಕೆ ಮುಟ್ಟಿತು. ಜ್ಞಾನಸಾಗರ ತೀರ್ಥರು ತಮ್ಮ ಮಠಕ್ಕೆ ಬಾಲಮುಕುಂದಾಚಾರ್ಯನನ್ನು ಕರೆಸಿಕೊಂಡರು. ಅವನಿಗೆ ಮಧ್ಯಾಹ್ನ ಭೋಜನವು ಮಠದಲ್ಲಿಯೇ ಆಯಿತು. ಅನಂತರ ಬಾಲಮುಕುಂದನು ಯತಿಗಳ ಸಮಯವನ್ನು ನೋಡಿ, ತಾನು ಹರಿಪದಾಂಬುಜತೀರ್ಥರಿಂದ ಕಳುಹಿಸಲ್ಪಟ್ಟವನೆಂದು ತಿಳಿಸಿದನು. ಅವರ ಅಭಿಪ್ರಾಯವನ್ನು ತಿಳಿಯಲಿಕ್ಕೆ ಆಶಿಸುತ್ತೇನೆಂದು ಜ್ಞಾನಸಾಗರರು ಹೇಳಿದಾಗ—“ಅವರು ವಿಶೇಷ ಹೇಳ ತಕ್ಕದ್ದೇನೂ ಇಲ್ಲ. ಒಂದು ಅಪವಾದವು ಚಂಚಲನೇತ್ರರ ಮೇಲೆ ಬಂದಿರು ವಾಗ ಅದನ್ನು ಕುರಿತು ಉಳಿದ ಮಠದವರು ವಿಚಾರತಕ್ಕೊಳ್ಳಲಿಲ್ಲವೆಂಬ

ಮಾತಿನ ಪಾತಿ ಬಾರದಂತೆ ಒಂದೊಂದು ಮಠದ ಕಡೆಯಿಂದ ಒಬ್ಬೊಬ್ಬ ಪ್ರಮುಖ ಮನುಷ್ಯನು ಆರಿಸಲ್ಪಡಬೇಕು; ಅಂಥಾ ನಾಲ್ವರು ಕುಮುದಪುರಕ್ಕೆ ತೆರಳಿ, ಅಲ್ಲಿ ಕೂಲಂಕಷವಾದ ವರ್ತಮಾನವನ್ನು ಸಂಗ್ರಹಿಸಿ, ಮರಳಿ ಬಂದನಂತರ ಮಿಕ್ಕ ಶ್ರೀಪಾದಂಗಳವರು ಅದನ್ನೆಲ್ಲ ಚೆನ್ನಾಗಿ ಶೋಧಿಸಿ ನೋಡಿ ಯುಕ್ತವೆಂದು ತೋರುವ ಇತ್ಯರ್ಥವನ್ನು ಮಾಡಿದರೆ ರಾಜದ್ವಾರದಲ್ಲಿ ವೇದವ್ಯಾಸನು ಪುನರಪಿ ಹೋಗತಕ್ಕ ಅಗತ್ಯ ಬೀಳದು. ತತ್ರಾಪಿ ಅಂಥಾ ಇತ್ಯರ್ಥವನ್ನು ಸಮ್ಮತಿಸದೆ ಅವನು ಎರಡನೆ ಮನವಿಮಾಡಿಕೊಂಡರೆ ರಾಜನು ಅದರಲ್ಲಿ ಪ್ರವೇಶಿಸಲಿಕ್ಕೆ ನಿರಾಕರಿಸಿಬಿಡುವನು. ಹೀಗೆ ನನ್ನ ಧನಿಗಳು ಅಭಿಪ್ರಾಯ ಪಡುವರು" ಎಂದು ಉತ್ತರಕೊಟ್ಟನು.

ಹರಿಪದಾಂಬುಜರು ನಿಜವಾಗಿ ವಿಚಕ್ಷಣರಾದ ಕಾರಣ ಇಷ್ಟು ಒಳ್ಳೆಯ ಉಪಾಯವನ್ನು ಹುಡುಕಿದ್ದಕ್ಕಾಗಿ ಜ್ಞಾನಸಾಗರರು ಅವರನ್ನು ಸ್ವಲ್ಪ ಹೊಗಳಿದರು ಬೇರೆ ಎರಡು ಮಠದವರು ತಮಗೆ ಯುಕ್ತಕಂಡಂತೆ ವರ್ತಿಸಿದ್ದಲ್ಲಿ ತಾವು ಅನ್ಯಥಾ ಹೇಳತಕ್ಕದ್ದೇನಿಲ್ಲವೆಂದು ಉತ್ತರಕೊಟ್ಟಿರುವರು. ಈಗ ತಕ್ಕ ಪುರುಷನನ್ನು ಆರಿಸಿದರೆ ಆಯಿತಷ್ಟೆ? ತಮ್ಮ ಮಠದಿಂದ ಪಾರುಪತ್ಯಗಾರ ರಾಧಾಕೃಷ್ಣಾಚಾರ್ಯನೇ ಸಾಕೆಂದು ಜ್ಞಾನಸಾಗರರು ನಿರ್ಣಯಿಸಿ, ಪೂರ್ಣಾನಂದತೀರ್ಥರಿಗೂ ಅಚಲನೇತ್ರರಿಗೂ ತಾವು ಮಾಡಿದ ನೇಮಕವನ್ನು ತಿಳಿಸಿದರು. ಕ್ಷತ್ರಿಯಪುರದ ಮಠದಿಂದ ಪಾರುಪತ್ಯಗಾರ ಸೂರ್ಯನಾರಾಯಣಾಚಾರ್ಯನೂ ವರ್ತಕಪುರದ ಮಠದಿಂದ ಅಲ್ಲಿಯ ಪಾರುಪತ್ಯಗಾರ ವೆಂಕಟರಾಮಾಚಾರ್ಯನೂ ನೇಮಿಸಲ್ಪಟ್ಟು, ನರಸಿಂಹಪುರಕ್ಕೆ ಅವರಿಬ್ಬರೂ ಬಂದರು. ಶಾಂತಿಪುರ ಮಠದ ಕಡೆಯಿಂದ ಬಾಲಮುಕುಂದಾಚಾರ್ಯನನ್ನು ನೇಮಿಸಿರುವದಾಗಿ ಹರಿಪದಾಂಬುಜರಿಂದ ಅವನು ಉತ್ತರ ತರಿಸಿಕೊಟ್ಟನು. ಸುಮುಹೂರ್ತದಲ್ಲಿ ನಾಲ್ವರು ಪಾರುಪತ್ಯಗಾರರು ನೃಸಿಂಹಪುರ ಮಠದ ರಾಯಸಪತ್ರವನ್ನು ತಕ್ಕೊಂಡು, ಅವರವರ ಚಾಕರರ ಸಮೇತ ಕುಮುದಪುರಕ್ಕೆ ಹೊರಟರು. ವೇದವ್ಯಾಸ ಉಪಾಧ್ಯನೂ ಮನಸ್ಸಿದ್ದರೆ ಅವರ ಸಂಗಡ ಹೋಗಬಹುದೆಂದು ನೃಸಿಂಹಪುರ ಮಠದಿಂದ ರಾಯಸಪತ್ರವು ಹೊರಟಿತು.

## ಹತ್ತೊಂಬತ್ತು

ನೃಸಿಂಹಪುರ ಮಠದ ಪಾರುಪತ್ಯಗಾರ ರಾಧಾಕೃಷ್ಣಾಚಾರ್ಯನ

ಬುದ್ಧಿವಂತಿಗೆಯು ಸಾಮಾನ್ಯವಲ್ಲ. ದೊಡ್ಡ ಕಾರ್ಯಗಳಲ್ಲಿ ಜಯಸಿಕ್ಕುವಂತೆ ವೈನಂಗಳನ್ನು ಮಾಡುವ ಸಾಮರ್ಥ್ಯವುಳ್ಳವನು. ಮತ್ತು ಸಿಟ್ಟಿನ ವಶವಾಗದೆ ಎಂಥಾ ಮೂರ್ಖನಿಗಾದರೂ ಅನುನಯಯುಕ್ತವಾದ ವಾಕ್‌ಚಾತುರ್ಯ ದಿಂದ ತನ್ನ ಪಕ್ಷಕ್ಕೆ ಆಕರ್ಷಿಸಿಕೊಂಡು, ಅವನಿಂದ ಸಿಕ್ಕುವಷ್ಟು ಪ್ರಯೋಜನ ವನ್ನು ದೊರಕಿಸಿಕೊಳ್ಳುವ ಮತಿವಂತಪುರುಷನೇ ಸರಿ.

ಕ್ಷತ್ರಿಯಪುರ ಮಠದ ಪಾರುಪತ್ಯಗಾರ ಸೂರ್ಯನಾರಾಯಣಾ ಚಾರ್ಯನು ಬಹುಸಾಧು. ಒಳ್ಳೇ ಭೋಜನದ ಅಭಿರುಚಿಯಿರುವವನೂ ನಿಷ್ಠಾವಂತನೂ ಖರೆ. ಆದರೆ ಎತ್ತಿದವರ ಕೂಸೆಂಬ ಗಾದೆಯಂತೆ ಯಾರೇನು ಹೇಳಿದರೂ ಹೌದೆನ್ನುವವನೇ.

ವರ್ತಕಪುರ ಮಠದ ಪಾರುಪತ್ಯಗಾರ ವೆಂಕಟರಾಮಾಚಾರ್ಯನು ಜ್ಞಾನಿಯೂ ವೈರಾಗ್ಯಪರನೂ ನೀತಿಶೀಲನೂ ಪರಾಪೇಕ್ಷೆಯಿಲ್ಲದವನೂ ಹೌದು. ಪರಂತು ಮಿತಿಮೀರಿದ ಆಲಸ್ಯವುಳ್ಳವನು. ಸ್ವಕಾರ್ಯದಲ್ಲಿಯೂ ಹಟಸಾಧನೆ ಮಾಡತಕ್ಕವನಲ್ಲ. ದೊಡ್ಡ ಐಶ್ವರ್ಯವಂತನಾದುದರಿಂದ ಯಾರ ಬಿಸಾತು ಮಾಡುವ ಅಗತ್ಯವು ಅವನಿಗೆ ಬೀಳುತ್ತಿದ್ದಿಲ್ಲ.

ಇನ್ನು ವರ್ಣಿಸಲಿಕ್ಕೆ ಉಳಿದ ಬಾಲಮುಕುಂದಾಚಾರ್ಯನು ಶಾಂತಿ ಪುರ ಮಠದ ಪಾರುಪತ್ಯಗಾರ. ಆ ಮಠದ ಹೆಸರಿಗೆ ಹೋಲುವ ಶಾಂತಗುಣ ವುಳ್ಳ ಬಹುಸುಂದರ ಪುರುಷನು. ಮಾತಿನಲ್ಲಿ ದೊಡ್ಡ ಚಮತ್ಕಾರ ಉಳ್ಳವನು. ಕೋಪವು ಅವನಿಗೆ ಸರ್ವಥಾ ಸೋಕದು; ಖರ್ಚುಗಾರ, ಹಣದಲ್ಲಿ ಕಡಿಮೆ ಯವನಲ್ಲ. ಇವನ ಮುಖವನ್ನೀಕ್ಷಿಸಿದ ಮಾತ್ರದಲ್ಲಿ ಎಂಥಾ ಕಠಿಣ ಹೃದ ಯವೂ ದ್ರವಿಸುವದು; ಎಂಥಾ ಸಿಟ್ಟಿನವನೂ ಒಮ್ಮೆಗೆ ಶಾಂತನಾಗುವನು.

ವೇದವ್ಯಾಸನ ಪ್ರಕರಣವನ್ನು ಪ್ರಥಮ ವಿಮರ್ಶೆಮಾಡುವದಕ್ಕೋ ಸ್ಕರ ಮಠಾಧಿಪತಿಗಳಿಂದ ನೇಮಿಸೋಣಾದ ಆ ನಾಲ್ವರಲ್ಲಿ ಸಭಾನಾಯಕ ನಾಗುವದಕ್ಕೆ ಬಾಲಮುಕುಂದನೊಬ್ಬನೇ ಯೋಗ್ಯನೆಂದು ಅವರು ತಮ್ಮೊ ಳಗೆ ನಿಶ್ಚಯಿಸಿ, ಅವನನ್ನು ಅಧ್ಯಕ್ಷನಾಗಿ ನೇಮಿಸಿದರು. ಬಾಲಮುಕುಂದನು ತನಗಷ್ಟು ದೊಡ್ಡಕರ್ತವ್ಯ ನಡಿಸುವಷ್ಟು ಯೋಗ್ಯತೆ ಇಲ್ಲವೆಂದು ಹೆಸರು ಪೂರ್ತಿ ಆಕ್ಷೇಪ ಮಾಡಿದರೂ ಕ್ರಮೇಣ ತನ್ನ ಸಹಕಾರಿಗಳ ಅಪೇಕ್ಷೆಯಂತೆ ಅಧ್ಯಕ್ಷನಾಗಲಿಕ್ಕೆ ಒಡಂಬಟ್ಟನು.

ಸಭಾಸದರು ಒಟ್ಟಿನಲ್ಲಿಯೇ ಊಟಪಾಟ ಮಾಡಿಕೊಂಡು, ಕುಮುದ

ಪುರದ ಅಂಜನೇಯಾಲಯದ ಹೊರಪೌಳಿಯಲ್ಲಿ ಉಳಕೊಂಡರು. ವೇದವ್ಯಾಸ ಉಪಾಧ್ಯನ ಪಕ್ಷಕ್ಕೆ ಸೇರಿದ ಭೀಮಾಚಾರ್ಯಗೂ ಬಾಲಮುಕುಂದಾಚಾರ್ಯಗೂ ಪರಸ್ಪರ ಸ್ನೇಹ ಮೊದಲೇ ಬಿದ್ದ ದೆಸೆಯಿಂದ ಅವರಿಬ್ಬರೂ ಒಂದೇ ಬಿಡಾರದಲ್ಲಿ ಉಳುಕೊಳ್ಳುವದಕ್ಕೆ ಆಸ್ಪದವಾಯಿತು. ಈ ಸಂಬಂಧ ವೇದ ವ್ಯಾಸಗೆ ಅಸಂತೋಷವಾಗಲಿಲ್ಲ. ಭೀಮಾಚಾರ್ಯನನ್ನು ತನ್ನ ಮನೆಯಲ್ಲಿ ರಿಸಿಕೊಂಡು, ಒಳ್ಳೇ ಊಟ ಹಾಕಬೇಕಾಗುವ ಅನಿವಾರ್ಯ ನಿವಾರಣೆ ಯಾದ ಹಾಗಾಯಿತಲ್ಲವೇ? ಬಾಯಿಯಿಂದ ಮಾತ್ರ ಬಡವನ ಮನೆಗೆ ತಮ್ಮ ಚರಣಗಳ ಮುದ್ರೆ ತಗಲುವದುಂಟೇ ಎಂಬ ಅಸಮಾಧಾನ ಸೂಚಕವಾಕ್ಯ ಗಳನ್ನು ಉಚ್ಚರಿಸಿದನು. ಭೀಮಾಚಾರ್ಯನಿಗೆ ಅಂಜನೇಯಾಲಯದಲ್ಲಿ ಮಠದವರ ಕಡೆಯಿಂದ ಸಿಕ್ಕುವ ಭಲೋ ಭೋಜನದ ಸುಖದಿಂದ ವೇದ ವ್ಯಾಸನ ಪ್ರಸಂಗವೇ ಮರತು ಹೋಯಿತು. ವಿನೋದರೂಪವಾಗಿ ಬಾಲ ಮುಕುಂದನು-"ಆಚಾರ್ಯರೇ, ತಮ್ಮ ಶಿಷ್ಯ ವೇದವ್ಯಾಸನೆಲ್ಲಿ?" ಎಂದು ಕೇಳ ವರೆ ದಂತಶೂನ್ಯನಾದ ಬಾಯಿಯನ್ನು ಪೂರಾ ತೆರೆಯದೆ, ಅರೆ ನಗೆಯಿಂದ "ಪರಾಶರಾತ್ಮಜಂ ವಂದೇ ಶುಕತಾತಂ ತಪೋನಿಧಿಂ" ಎಂದು ಕೈಜೋಡಿಸಿ ಸುಮ್ಮಗಿರುವನು.

ಬಾಲಮುಕುಂದನಂತೆ ಬೇರೆ ಮಠಗಳ ಪ್ರತಿನಿಧಿಗಳಿಗೂ ಭೀಮಾಚಾರ್ಯನು ಅಚ್ಚುಮೆಚ್ಚಿನವನಾಗಿ ಅವರನ್ನಗಲದೆ ಆಪ್ತಭಾವವನ್ನು ಬೆಳಸಿದನು ಕುಮುದಪುರವು ವಸಂತ ನಗರದ ಪಟ್ಟಣಗಳಲ್ಲಿ ಆರೋಗ್ಯಕರವಾಗಿದ್ದು ಅತಿ ಸುಖದಾಯಕ ಪ್ರದೇಶವಾದ ಕಾರಣ ಪಾರುಪತ್ಯಗಾರರೆಲ್ಲರೂ ಪರಿವಾರ ಸಮೇತವಾಗಿ ಅಲ್ಲಿ ಹೆಚ್ಚುದಿವಸಗಳು ಉಳುಕೊಳ್ಳುವದಕ್ಕೆ ಇಚ್ಛಿತರಾದರು. ಭೀಮಾಚಾರ್ಯನು ಅವರ ಮನಸ್ಸಿಗೆ ರವಷ್ಟಾದರೂ ಕರಕರೆಯಾಗದಂತೆ ಆಗಾಗ್ಗೆ ತನ್ನ ನಾಲಿಗೆಯ ಚಮತ್ಕಾರದಿಂದ ಅವರಿಗೆ ಕರ್ಣೋಲ್ಲಾಸ ಮಾಡುತ್ತಾ, ಇನ್ನೊಂದು ಠಾವಿಗೆ ಯಾರಾದರೂ ಕರೆದರೂ ಹೋಗವಲ್ಲನು. "ದೊಡ್ಡ ಮನುಷ್ಯರ ಎಡೆಯಲ್ಲಿ ನಿಮಗೆ ಹ್ಯಾಗೆ ಪೂರೈಸುತ್ತದೆ, ಆಚಾರ್ಯರೇ! ಎಂದು ವೇದವ್ಯಾಸ ಉಪಾಧ್ಯನು ಅಪರೂಪವಾಗಿ ಕೇಳಿದರೆ- "ನೀಚಾಶ್ರಯಂ ನಕರ್ತವ್ಯಂ, ಕರ್ತವ್ಯಂ ಮಹದಾಶ್ರಯಂ" ಈ ವಚನ ಕೇಳರಿಯೆಯಾ ಎಂಬ ಉತ್ತರದಿಂದ ಅವನ ಬಾಯಿ ಮುಚ್ಚಿಸುವನು.

ತನ್ನ ಶೀಲವನ್ನು ಕುರಿತು ಪರಿಶೋಧನೆ ಮಾಡುವದಕ್ಕೋಸರ

ಮಠಾಧಿಪತಿಗಳಿಂದ ನೇಮಿಸಲ್ಪಟ್ಟ ಪ್ರತಿನಿಧಿಗಳ ಸಭೆಯು ಯಾವಾಗ್ಗೆ ಕೂಡುವದೋ ತಿಳಿಯದೆಂದು ಚಂಚಲನೇತ್ರರು ಸ್ವಲ್ಪ ಚಿಂತೆಯಲ್ಲಿದ್ದ ಹಾಗೆ ಕಂಡು, ವೆಂಕಟಪತಿಯು ಅವಸರ ಒಳ್ಳೆದಲ್ಲವೆಂದನು. ಯತಿಗಳು ಆ ಮಾತಿಗೆ ಮೆಚ್ಚಿದರು. ಹ್ಯಾಗಾದರೂ, ಅವರು ತಮ್ಮ ಮಠಕ್ಕೆ ಬಂದು ಒಂದು ದಿವಸವಾದರೂ ತಮ್ಮನ್ನು ಕಾಣದೆ ಇದ್ದದ್ದು ಸ್ವಲ್ಪ ಆಶ್ಚರ್ಯವಲ್ಲವೋ? ಎಂದು ಚಂಚಲನೇತ್ರರು ಪ್ರಶ್ನೆಮಾಡಿದರು. ಅವರು ಮಠಾಧಿಪತಿಗಳ ಪ್ರತಿನಿಧಿಗಳಾಗಿ ಬಂದಿರುವ ದೆಸೆಯಿಂದ ಮಠದ ಕಡೆಯಿಂದ ಮುಂದಾಗಿ ಅವರನ್ನು ಅಭಿಮಂತ್ರಣಮೂಲಕ ಕರಸಿಕೊಂಡ ವಿನಾ ಅವರ ಆಗಮನವನ್ನು ನಿರೀಕ್ಷಿಸುವದು ವ್ಯರ್ಥವೆಂದು ವೆಂಕಟಪತಿಯು ಕೊಟ್ಟ ಉತ್ತರವು ಮಾನ್ಯವಾಯಿತು. "ಹಾಗಾದರ ನಾಳೆ ಮಠದಲ್ಲಿ ನರಸಿಂಹಜಯಂತಿ ಆಚರಣೆ ಗದ್ದಲದಿಂದ ಆಗುವ ಹಾಗೆ ನೋಡಿಕೊಂಡು ಆಚಾರ್ಯರಿಗೆಲ್ಲಾ ಕರಿಸಿಕೊಳ್ಳುವ ಜಾಗ್ರತೆ ಇಡು" ಎಂದು ವೆಂಕಟಪತಿಗೆ ನಿರೂಪವಾಯಿತು. ವೆಂಕಟಪತಿ ಆಚಾರ್ಯನು ಅಂಜನೇಯಾಲಯಕ್ಕೆ ತೆರಳಿ, ಅಲ್ಲಿ ವಸತಿಮಾಡಿಕೊಂಡಿರುವ ನಾಲ್ವರು ಆಚಾರ್ಯರನ್ನೂ ಕಂಡು, ಚಂಚಲನೇತ್ರರ ಅಪೇಕ್ಷೆಯನ್ನು ವಿದಿತಮಾಡಿ, ಪ್ರತ್ಯುತ್ತರ ಕೇಳಿಕೊಂಡನು. ಶ್ರೀಪಾದಂಗಳವರ ಆಜ್ಞೆಯಂತೆ ವರ್ತಿಸದೆ ಇರುವ ಪಾಪಿ ತಮ್ಮ ಕೂಟದಲ್ಲಿ ಯಾರೂ ಇಲ್ಲವೆಂದು ನರಸೋಕ್ತಿಯಿಂದ ಅವರೆಲ್ಲರ ಸಮ್ಮತವನ್ನು ಬಾಲಮುಕುಂದಾಚಾರ್ಯನು ಅವಗತಮಾಡಿದ್ದಕ್ಕಾಗಿ ಮಿಕ್ಕವರೆಲ್ಲರೂ ಸಂತೋಷಪಟ್ಟರು.

ಭೀಮಾಚಾರ್ಯನು ಇಂಥಾ ಸಂದುಕಟ್ಟಿನ ಸಮಯದಲ್ಲಿ ಈ ಸ್ಥಳದಲ್ಲಿ ಇರಬಾರದಿತ್ತು. ಅವನಿಗೆ ಪ್ರತ್ಯೇಕವಾಗಿ ಅಭಿಮಂತ್ರಣವಿಲ್ಲ. ವೆಂಕಟಪತಿಆಚಾರ್ಯನು ದೊಡ್ಡ ಚಮತ್ಕಾರಿ. ಮೊದಲು ನಾಲ್ಕುಮಂದಿ ಆಚಾರ್ಯರಿಗೆ ವ್ಯಕ್ತವಾಗಿ ಅಭಿಮಂತ್ರಣ ಕೊಟ್ಟು ಆ ಮೇಲೆ ಸರ್ವರೂ ಭೋಜನಕ್ಕೆ ದಯಮಾಡಬೇಕಾಗಿ ಶ್ರೀಪಾದಂಗಳವರ ಅಪೇಕ್ಷೆಯೆಂಬ ಮಾತಿನ ಮೂಲಕ ಮಾಡಿದ ಸರ್ವಸಾಧಾರಣ ಹೇಳಿಕೆಯಲ್ಲಿ ಭೀಮಾಚಾರ್ಯನು ಸೇರಲಿಲ್ಲವೆನ್ನಕೂಡದು. ವೆಂಕಟಪತಿಯು ಯತ್ನಕ್ಕೆ ಒಂದು ಪ್ರತೀಕಾರಮಾಡಿ ನೋಡುವದಕ್ಕೋಸ್ಕರ ಭೀಮಾಚಾರ್ಯನು ಫಕ್ಕನೆ ಎದ್ದು ತಾನು ಆ ಬಿಡಾರವಾಸಿಯಲ್ಲವೆಂಬ ಅನ್ವಯವಾಗುವಂತೆ "ಬಾಲಮುಕುಂದಾಚಾರ್ಯರೇ! ನನಗೀಗ ಅಪ್ಪಣೆಯಾಗಲಿ; ಬೇರೊಂದು ಊರಿಗೆ ಹೋಗುವ

ಜಂಬರವಿದೆ” ಎಂದು ಪೌಳಿಯಿಂದ ಕೆಳಗೆ ಇಳಿದನು. ವೆಂಕಟಪತಿಯು ಭೀಮಾಚಾರ್ಯನನ್ನು ಕುರಿತು—“ಸ್ವಾಮಿ! ತಮಗೆ ಪ್ರತ್ಯೇಕವಾಗಿ ಭೋಜನಕ್ಕೆ ಹೇಳಲಿಲ್ಲವೆಂಬ ವಿಕಲ್ಪ ಉಂಟಾಗಬಾರದು. ತಮ್ಮನ್ನು ಅಭಿಮಂತ್ರಣದಲ್ಲಿ ಸೇರಿಸಿರುತ್ತೇನೆ. ತಮಗೆ ತಕ್ಕ ಸಾಭಿಮಾನ ಮಾಡುವ ದಕ್ಕೆ ಶ್ರೀಪಾದಂಗಳವರಿಗೆ ತುಂಬಾ ಮನಸ್ಸು ಅದೆ. ಅವರಿಗೆ ತಮ್ಮ ಪರಿ ಚರ್ಯವಿಲ್ಲವೆಂಬ ಅನುಮಾನ ತಮ್ಮ ಮನಸ್ಸಿನಲ್ಲಿ ಅದೆಯೋ ಅರಿಯೆ” ಎಂದು ವೆಂಕಟಪತಿಆಚಾರ್ಯನು ಅಂದಾಗ ಸ್ವಾಮಿಗಳಿಗೆ ತನ್ನ ಪರಿಚರ್ಯ ವಿರಬಹುದು; ಆದರೆ ತಮ್ಮೊಳಗೆ ಹೆಚ್ಚು ಬಳಕೆ ಇಲ್ಲದೆ ತಾನು ದೂರವಾಗಿ ದ್ದೇನೆಂದು ಭೀಮಾಚಾರ್ಯನ ಪ್ರತಿವಚನವಾಯಿತು. ಆಗಲೇ ಅವನನ್ನು ಕೈ ಹಿಡುಕೊಂಡು ವೆಂಕಟಪತಿಯೇ ಮಠಕ್ಕೆ ಕರತಂದು ಮಮತಾಪೂರ್ವಕ ಮಠಾಧೀಶರ ಭೇಟಿಯನ್ನು ಮಾಡಿಸಿದನು.

ಚಂಚಲನೇತ್ರರು ಭೀಮಾಚಾರ್ಯನನ್ನು ಏಕಾಂತ ಕೋಣೆಗೆ ಕರ ಕೊಂಡು ಕೊಂಚ ಸಮಯ ಅಂತರಂಗದಲ್ಲಿ ವೇದವ್ಯಾಸ ಉಪಾಧ್ಯನ ಅಪ ಹತಿಯನ್ನು ಕುರಿತು ಪ್ರಸ್ತಾಪಿಸಿದರು. ಬಳಿಕ “ನಾಳೆ ಭೋಜನಕ್ಕೆ ವೆಂಕಟ ಪತಿ ಅಭಿಮಂತ್ರಣ ಕೊಟ್ಟಿರುವನಷ್ಟೆ” ಎಂದು ವಿಚಾರಿಸಲು, “ಹೌದು ಪರಾಕೆ! ನನಗೆ ಅಭಿಮಂತ್ರಣಬೇಕೇ! ನಾನು ಸತತ ಚರಣಕಮಲಗಳ ಭ್ರಮರನಲ್ಲವೇ?” ಎಂದು ಬಹು ದೀನತೆಯಿಂದ ಬಿನ್ನವಿಸಿ, ಬಿಡಾರಕ್ಕೆ ಹೋಗುವದಕ್ಕೆ ಅಪ್ಪಣೆಕೇಳಿ, ಪ್ರಣಾಮ ಮಾಡಿದನು. ಚಂಚಲನೇತ್ರರು ಕಾಶ್ಮೀರಶಾಲುಜೋಡಿಯನ್ನು ಉಡುಗೊರೆಮಾಡಿ ಭೀಮಾಚಾರ್ಯನನ್ನು ಸಾದರದಿಂದ ಕಳುಹಿಸಿ ಕೊಟ್ಟರು. ಉಡುಗೊರೆಯನ್ನು ಬಗಲಾಗೆ ಮಡಿಸಿ ಕೊಂಡು ಅವನು ಮರಳಿದನು. ಬಾಲಮುಕುಂದಾಚಾರ್ಯನು ನಸುನಗುತ್ತ “ಆಚಾರ್ಯರೇ! ತಮ್ಮ ಮುಖ ಉಲ್ಲಾಸದಿಂದ ಬೆಳಗುತ್ತಿದೆ” ಎಂದು ಮೋರೆ ಯನ್ನೇ ನೋಡಲು, ನಡದ ವೃತ್ತಾಂತವನ್ನು ವಿವರಿಸಿ, ತನಗೆ ಸಿಕ್ಕಿದ ಉಡು ಗೊರೆಯನ್ನು ತೋರಿಸಿದನು. ಭಾಪುರೆ! ತಮ್ಮ ಬುದ್ಧಿವಂತಿಗೆಗೆ ಮೆಚ್ಚಿದೆ ನೆಂದುಬಾಲಮುಕುಂದನು ಶ್ಲಾಘನೆ ಮಾಡಿದನು. ಹಾಗೂ ಹೀಗೂ ಅಂದಿನ ದಿನಕಳೆಯಿತು.

## ಇಪ್ಪತ್ತು

ಔತಣದ ದಿನವು ಉದಯವಾಯಿತು. ಮಠಕ್ಕೆ ಭೋಜನಕ್ಕೆ ಅಭಿ

ಮಂತ್ರಣ ಪಡೆದವರೆಲ್ಲರೂ ಶೀಘ್ರ ಸ್ನಾನ ಜಪಾನುಷ್ಠಾನವನ್ನು ತೀರಿಸಿ ಬಿಟ್ಟು ಹೆಚ್ಚು ಮೌಲ್ಯದ ಪಟ್ಟೆಮಡಿಗಳನ್ನು ಧರಿಸಿಕೊಂಡು ಕ್ಲಪ್ತ ಸಮಯಕ್ಕೆ ಮಠಕ್ಕೆ ತಲ್ಪಿದರು. ಅವರೆಲ್ಲರನ್ನೂ ನೋಡಿ ಚಂಚಲನೇತ್ರರು ಹರ್ಷಿತರಾದರು. ಭೀಮಾಚಾರ್ಯನು ವೆಂಕಟಪತಿ ಆಚಾರ್ಯನ ಬೆನ್ನು ಬಿಡುತ್ತಿದ್ದಿಲ್ಲ. ಅವರಿಬ್ಬರೂ ಏನೋ ವಿಶೇಷ ಪ್ರಮೇಯದಲ್ಲಿ ಸಂವಾದಿಸಿ ಕೊಂಡಿರುವ ಹಾಗೆ ತೋರುತ್ತಿತ್ತು. ಯಾವ ವಿಷಯದಲ್ಲಿ ಅವರಲ್ಲಿ ಅಂತರಂಗ ಸಂಭಾಷಣೆಯಾಗುತ್ತಿತ್ತೆಂಬ ಗುಟ್ಟು ಯಾರಿಗೂ ಗೊತ್ತಾಗಲಿಲ್ಲ. ಭೀಮಾಚಾರ್ಯನು ವೇದವ್ಯಾಸ ಉಪಾಧ್ಯನ ಮುಖ್ಯ ಸ್ನೇಹಿತನಾಗಿ ಅವನ ಹಟ ಸಾಧನೆಯು ಜಯವಾಗುವಂತೆ ಪ್ರಯತ್ನಮಾಡುವವನೆಂಬ ವದಂತಿಯು ಕುಮುದಪುರದಲ್ಲಿ ಸಿದ್ಧವಾಗಿರುತ್ತ ಚಂಚಲನೇತ್ರರ ಮಠದ ಮೇಲಣಭಿಮಾನಿಯಾಗಿ ತೋರುವ "ಈ ಹೊಸವರಿಯೇನಪ್ಪ" ಎಂದು ಕೆಲವರು ತಮ್ಮೊಳಗೆ ಕುಸುಕುಟ್ಟಿದರು. ಆ ಹೊತ್ತು ನರಸಿಂಹಜಯಂತಿಯ ಉತ್ಸವ ನೋಡಲಿಕ್ಕೂ ಮಠದಲ್ಲಿ ಸಿಕ್ಕುವ ರುಚಿಕರವಾದ ಭೋಜನದ ಸುಖವನ್ನನುಭವಿಸುವದಕ್ಕೂ ಸೆರೆ ಊರುಗಳಿಂದಲೂ ಬ್ರಾಹ್ಮಣರನೇಕರು ಮಡದಿ ಮಕ್ಕಳೊಡಗೂಡಿ ಬಂದಿದ್ದರು. ತಮ್ಮಣ್ಣ ಭಟ್ಟನೂ ಆಬಾಚಾರ್ಯನೂ ಸೊಂಟ ಕಟ್ಟಿ ತರಾತುರಿಯಿಂದ ಮಠದಲ್ಲಿ ಅತ್ತಿತ್ತ ಹೋಗುತ್ತ ಬರುತ್ತ ಇರುವದರಿಂದ ಮಠದ ಕಾರ್ಯಗಳಲ್ಲಿ ಅವರು ಹೆಚ್ಚು ಆಸಕ್ತಿಯುಳ್ಳವರೆಂಬ ಹಾಗೆ ಬೇರೆಯವರಿಗೆ ತೋರುತಿತ್ತು.

ವಾಗ್ದೇವಿಯು ಚಂಚಲನೇತ್ರರ ವಶವಾದಂದಿನಿಂದ ಅವಳ ಆಭರಣಗಳು ದಿನಂಪ್ರತಿ ಅಧಿಕವಾಗುತ್ತಾ ಬಂದವು. ಅವುಗಳೆಲ್ಲವನ್ನು ಅವಳು ಧರಿಸಿಬಿಟ್ಟರೆ ಅವಳ ಸೌಂದರ್ಯಕ್ಕೆ ರತೀ ದೇವಿಯು ಸ್ವಲ್ಪನಾಚುವಳೆನ್ನಬಹುದು. ಸಾಮಾನ್ಯ ಪುರುಷನು ಆ ಸ್ತ್ರೀರತ್ನವನ್ನು ಕಣ್ಣೆತ್ತಿ ನೋಡಲಿಕ್ಕೆ ಧೈರ್ಯಪಡುವದು ಅಪರೂಪ. ವಾಗ್ದೇವಿ ಆ ದಿನ ನಿತ್ಯ ಮನೆಯಲ್ಲಿ ಧರಿಸಿಕೊಳ್ಳುವ ಅತಿ ಸಾಮಾನ್ಯ ಅಲಂಕಾರಯುಕ್ತಳಾಗಿ ನಿರ್ಮಲವಾದ ಒಂದು ಸಾಧಾರಣ ಉಡಿಗೆಯಲ್ಲಿ ಗೆಳತಿಯರ ಮೇಳದಲ್ಲಿ ಒತ್ತಟ್ಟು ಕೂತುಕೊಂಡಿದ್ದಳು. ಬಾಲಮುಕುಂದಾಚಾರ್ಯನು ಸುಮ್ಮಗೆ ಅತ್ತಿತ್ತ ನೋಡಿಕೊಂಡಿರುವ ವೇಳೆಯಲ್ಲಿ ಅವನ ದೃಷ್ಟಿಯು ಈ ರೂಪವತಿಯ ಮೇಲೆ ಬಿತ್ತು. ಅವರಿಬ್ಬರಲ್ಲಿ ಪರಸ್ಪರ ಮೋಹಭಾವಗಳ ಐಕ್ಯತೆ ಒಡನೆ ಉಂಟಾಯಿತು. ಅವ

ಕಷ್ಟು ಉತ್ಕೃಷ್ಟವಾದ ಭಾಸುರಾಂಗನೆಯು ಅಂದು ಅಲ್ಲಿ ಸೇರಿದ ಹೆಂಗಸರ ಸಮೂಹದಲ್ಲಿ ಇನ್ನೊಬ್ಬಳು ಅವನ ಕಣ್ಣಿಗೆ ಬೀಳಲಿಲ್ಲವಾದುದರಿಂದ ವಾಗ್ದೇವಿ ಇವಳೇ ಎಂದು ಅವನ ಮನಸ್ಸಿಗೆ ಮಂದಟ್ಟಾಯಿತು. ವಿಶೇಷ ಆಭರಣ ವೇನೂ ಅವಳು ಧರಿಸಿಕೊಳ್ಳದೆ ಇದ್ದುದು ತಾನೊಬ್ಬಳು ಸಾಮಾನ್ಯ ಸ್ತ್ರೀ ಯೆಂಬ ಗ್ರಹಿಕೆ ಪರಊರ ಜನರಲ್ಲಿ ಜನಿಸುವ ಉದ್ದಿಶ್ಯವಾಗಿರಬೇಕೆಂದು ಅವನ ಮನಸ್ಸಿಗೆ ತೋಚಿತು. ತನ್ನನ್ನು ವರಿಸಿಕೊಂಡ ಯತಿಯಮೇಲೆ ವೇದವ್ಯಾಸ ಉಪಾಧ್ಯನು ಮಾಡಿದ ಮನವಿಯನ್ನು ಕುರಿತು ವಿಚಾರಣೆ ನಡಿಸುವುದಕ್ಕೋಸ್ಕರ ನಾಲ್ಕು ಮಠಾಧಿಪತಿಗಳು ಕಳುಹಿಸಿಕೊಟ್ಟ ಪ್ರತಿನಿಧಿ ಗಳಲ್ಲಿ ಇವನೊಬ್ಬನೆಂಬುದು ಅವಳಿಗೆ ಗೊತ್ತಿತ್ತು. ಈ ವಿಟನನ್ನು ತಾನು ಪ್ರೇಮಪಾಶದಿಂದ ಬಂಧಿಸದೆ ಹೋದರೆ ಸ್ವಾಮಿಕಾರ್ಯವು ಕೆಟ್ಟುಹೋಗು ವುದು, ತನ್ನ ಬಾಳ್ವೆಯು ವ್ಯರ್ಥವಾಗುವುದು. ದೈವವಶಾತ್ ಈ ದಿನ ತಮ್ಮಿಬ್ಬರ ಪರಸ್ಪರ ದೃಷ್ಟಿಸಂದರ್ಶನದಿಂದ ಮನಸ್ಸಿಗೆ ಉಂಟಾದ ಆನಂದ ವನ್ನು ಸಹಜವಾದ ರೀತಿಯಲ್ಲಿ ಅನುಭವಿಸುವುದೇ ಲೇಸು. ಆ ಬಳಿಕ ವೇದ ವ್ಯಾಸ ಉಪಾಧ್ಯನು ಘಟ್ಟಹತ್ತಲೆಂದು ವಾಗ್ದೇವಿಯು ತನ್ನ ಮನಸ್ಸಿನಲ್ಲಿ ಅಂದುಕೊಳ್ಳುತ್ತ ಹಸನ್ಮುಖಿಯಾದಳು. ಬಾಲಮುಕುಂದನೂ ವಾಗ್ದೇ ವಿಯೂ ನೋಡುವವರಿಗೆ ಸಂಶಯ ಉಂಟಾಗದಂತೆ ಕಣ್ಣಿನ ಭಾಷೆಯಿಂದ ತಮ್ಮ ಮನಸ್ಸಿನ ಅಂತಸ್ಥ ಒಬ್ಬರಿಗೊಬ್ಬರು ಅವಗತಮಾಡಿದರು. ಒಂದೆರಡು ಸಲ ಮಾತ್ರ ಭೀಮಾಚಾರ್ಯನು ಇವರಿಬ್ಬರ ನೇತ್ರ ಸಂಧಾನ ವನ್ನು ಹೌದೋ ಅಲ್ಲವೋ ಕಂಡನೆನ್ನ ಬೇಕು. ಕೆಪ್ಪಮಾಣಿಗೆ ಮಾತ್ರ ಈ ಗುಟ್ಟು ಪೂರ್ಣವಾಗಿ ಸಿಕ್ಕಿತು ಬೇರೆ ಯಾರ ಕಣ್ಣಿಗೂ ಈ ಮಾಟ ಗೋಚರ ವಾಗಲಿಲ್ಲ.

ಸ್ವಾಮಿಗಳು ಪೂಜೆಗೆ ಪ್ರಾರಂಭಮಾಡಿದರು. ಜನರೆಲ್ಲ ದೇವರ ಮುಂ ಭಾಗದಲ್ಲಿ ನಾಲಾಗಿ ನಿಂತುಕೊಂಡು ಮಂಗಳಾರತಿಯನ್ನು ನೋಡುವದ ರಲ್ಲಿ ಇದ್ದರು. ಪೂಜೆ ಅಂತ್ಯವಾದ ಮೇಲೆ ಊಟಕ್ಕೆ ಎಲೆಹಾಕಿತು. ಪಂಚ ಮಠದ ಪಾರುಪತ್ಯಗಾರರಿಗೂ ಭೀಮಾಚಾರ್ಯರಿಗೂ ಶ್ರೀಪಾದಂಗಳವರ ಪಕ್ಕದಲ್ಲಿ ಮರ್ಯಾದೆಯ ಎಲೆ ಕೊಡೋಣಾಯಿತು. ಮೃಷ್ಟಾನ್ನಭೋಜನ ವಾದ ತರುವಾಯ ನಾಲ್ಕು ಮಂದಿ ಪಾರುಪತ್ಯಗಾರರಿಗೂ ಸಂತುಷ್ಟಿಯಾ ಗುವ ಹಾಗೆ ಉಡುಗೊರೆ ಆಯಿತು. ತಾಂಬೂಲಾದಿಗಳಿಂದ ಅವರನ್ನು ತೃಪ್ತಿಸಿ

ಆದ ಮೇಲೆ—"ವೇದವ್ಯಾಸ ಉಪಾಧ್ಯನ ಮನವಿಯ ಕುರಿತು ವಿವೇಚನೆ ನಡಿಯುವದಕ್ಕೆ ದಿನ ನೇಮಕವಾಯಿತೇ" ಎಂದು ಚಂಚಲನೇತ್ರರು ಪ್ರಶ್ನೆ ಮಾಡಿದರು. ಶ್ರೀಪಾದಂಗಳವರ ನಿರೂಪ ಪಡಕೊಂಡು ದಿನ ನೇಮಿಸ ಬೇಕಾಗಿರುವದರಿಂದ ಇದು ವರಿಗೂ ಭಾನಸವಾಯಿತೆಂದು ಬಾಲಮುಕುಂ ದಾಚಾರ್ಯನು ಉತ್ತರಕೊಟ್ಟನು. ತನ್ನ ಆಜ್ಞೆಯ ಅಗತ್ಯವೇನದೆ? ಇಷ್ಟ ವಿಷ್ಟ ರೀತಿಯಲ್ಲಿ ವಿಚಾರಣೆ ಮಾಡೋಣವೇ ಕರ್ತವ್ಯವೆಂದು ಚಂಚಲನೇತ್ರ ರೆಂದರು ವಿಚಾರಣೆ ತೊಡಗುವ ದಿನ ತನ್ನ ಕಡೆಯಿಂದ ಯಾರಾದರೂ ಕಾದು ಇರುವ ಅಗತ್ಯವದೆ ಎಂದು ಯತಿಗಳು ಹೇಳಿದರು. ಅಗತ್ಯವಾಗಿ ಇರಬೇಕೆಂದು ಬಾಲಮುಕುಂದಾಚಾರ್ಯನು ಅರಿಕೆ ಮಾಡಿಕೊಂಡನು ಅಂದಿನಿಂದ ನಾಲ್ಕನೇ ದಿನ ಸೋಮವಾರ ಸಭೆಯ ಊಳಿಗ ಉಪಕ್ರಮಿಸು ವದಕ್ಕೆ ನಿರ್ಣಯಮಾಡಿ ಪಾರುಪತ್ಯಗಾರರು ಯತಿಗಳ ಅಪ್ಪಣೆಯನ್ನು ಪಡ ಕೊಂದು ಬಿಡಾರಕ್ಕೆ ನಡದರು.

ಭೀಮಾಚಾರ್ಯನು ಬೇಕೆಂತ ಪಾರುಪತ್ಯಗಾರರ ಕೂಟದಿಂದ ತಪ್ಪಿಸಿ ಕೊಂಡು ವಾಗ್ದೇವಿಯ ಬಿಡಾರದ ಕಡೆಗೆ ಅಕಸ್ಮಾತ್ತಾಗಿ ಬರುವಾಗ ಸ್ವಲ್ಪ ದೂರದಿಂದ ಅವನನ್ನು ನೋಡಿ ಭಾಗೀರಥಿಯು—"ಆಚಾರ್ಯರೇ! ಇಲ್ಲಿ ವರೆಗೆ ದಯಮಾಡಿ ಬಡವರಾದ ನಮ್ಮ ಮೇಲೆ ಕನಿಕರವಿಟ್ಟು ಸಣ್ಣದೊಂದು ತಾಂಬೂಲ ಸೇವೆಯನ್ನು ಸ್ವೀಕರಿಸಿರಿ" ಎಂದು ಅಪೇಕ್ಷಿಸಿದಳು. ಇದೊಂದು ಶುಭಕಾಲವೆಂಬ ಗ್ರಹಿಕೆಯಿಂದ ವಾಗ್ದೇವಿಯು ಭೀಮಾಚಾರ್ಯನ ಪಾದ ಗಳಿಗೆ ಬಿದ್ದು ಕೈ ಜೋಡಿಸಿ ನಿಂತು ಕೊಂಡಳು. ಭೀಮಾಚಾರ್ಯಗೆ ಸಂಹ ರ್ಷವಾಯಿತು ಬಾರೆಂದು ಅವಳಿಗೆ ಸಮ್ಮುಖದಲ್ಲಿ ಕೂಡ್ರಿಸಿಕೊಂಡನು. ತರು ವಾಯ ಸ್ವತೀವ ಸಂಭಾಷಣೆಗೆ ಆರಂಭವಾಯಿತು. ಅದನ್ನು ಮುಂದೆ ವಿವರಿ ಸಿಯದೆ.

## ಇಪ್ಪತ್ತೊಂದು

ಭಾಗೀರಥಿ—"ಆಚಾರ್ಯರೇ! ತಮ್ಮ ಬರುವಿಕೆಯು ನಮ್ಮ ಪೂರ್ವ ಪುಣ್ಯದ ಫಲವೇ. ತಮಗೆ ಬಹುಶಃ ನಮ್ಮ ಗುರುತವಿಲ್ಲ. ನಮ್ಮ ಮೂಲ ಸ್ಥಾನ ತಮ್ಮ ಹೆಂಡತಿ ಭೀಮಕ್ಕನ ತೌರುಮನೆ ಇರುವ ಸಮಂತಪೇಟೆ. ಇತ್ತಲಾಗಿ ನಾವು ಆ ಊರು ಬಿಟ್ಟು ಈ ಪಟ್ಟಣಕ್ಕೆ ಬಂದಿರುವೆವು. ಪಲಾಶದ

ಮರ ಘಟ್ಟಕ್ಕೆ ಹೋದರೂ ಅವಕ್ಕೆ ಮೂರೆ ಎಳೆ ಎಂಬ ಗಾದೆಯಂತೆ ಎಲ್ಲಿಗೆ ಹೋದರೂ ದರಿದ್ರಾವಸ್ಥೆ ನಮ್ಮ ಬೆನ್ನು ಬಿಡಲೇ ಇಲ್ಲ. ಉಣ್ಣಲಿಕ್ಕೆ ಕೂಳೂ ಉಡಲಿಕ್ಕೆ ವಸ್ತ್ರವೂ ಉಳಕೊಳ್ಳಲಿಕ್ಕೆ ಜಾಗೆಯೂ ಸೊನ್ನೆ. ಕೆಲವು ತಿಂಗಳ ಮುಂಚೆ ಶ್ರೀಪಾದಂಗಳವರು ನಮ್ಮ ಮೇಲೆ ದಯವಿಟ್ಟು ಮಠದಲ್ಲಿ ಸಂಶ್ರಯ ಕೊಟ್ಟಿರುವ ಕಾರಣ ಕಷ್ಟಗಳ ಹೊರೆ ಸ್ವಲ್ಪ ಜಗ್ಗಿದಂತಾಗಿಯದೆ.”

ಭೀಮಾಚಾರ್ಯ—“ನೀನು ನನ್ನ ಸಂಪತ್ತಿಯು ತೌರುಮನೆ ಊರಿನವಳು ಹೌದು. ಅವಳು ಆಗಾಗ್ಗೆ ನಿನ್ನ ಪ್ರಸ್ತಾಪ ಮಾಡುವದಿತ್ತು. ಏನು ಮಾಡೋಣ? ಪಾಪ! ಹೋದ ವರುಷ ಅವಳ ಹೋಮ ಮಾಡಿದೆ, ಈಗ ಏಕಾಂಗಿಯಾಗಿ ನಿಶ್ಚಿಂತನಾಗಿದ್ದೇನೆ.”

ಭಾಗೀರಥಿ—“ಅಹಾ, ತೀರಿಹೋದಳೇನು? ಎಂಥಾ ಸುಲಕ್ಷಣ ಹೆಂಗಸು! ಎಷ್ಟು ಗುಣವಂತ! ಪಾಪವೇ!”

ಭೀಮಾಚಾರ್ಯ—“ಹೋದ ಜೀವ ಬರುವದೇನು? ಪಶ್ಚಾತ್ತಾಪ ಪಟ್ಟು ಪ್ರಯೋಜನವಿದೆಯೇ? ನಿಮ್ಮನ್ನೆಲ್ಲಾ ನೋಡಿ ಸಂತೋಷವಾಯಿತಮ್ಮ ನಾಳೆ ಊರಿಗೆ ಹೋಗುವದಕ್ಕೆ ಸನ್ನದ್ಧನಾಗಿದ್ದೇನೆ. ಇಲ್ಲಿಗೆ ಬಂದು ಬಹುದಿವಸವಾಯಿತು.”

ವಾಗ್ದೇವಿ—“ಅಯ್ಯೋ! ವೇದವ್ಯಾಸ ಉಪಾಧ್ಯಗೆ ದಾರಿಯಲ್ಲಿ ಹಾಕಿ ಬಿಡುವಿರೇ!”

ಭೀಮಾ—“ಮತ್ತೇನು ಮಾಡಲಿ? ಅವನನ್ನು ನನ್ನ ಕುತ್ತಿಗೆಗೆ ಕಟ್ಟಿ ಕೊಳ್ಳಲೇ?”

ವಾಗ್ದೇವಿ—“ಹಾಗೆ ಹೇಳಬಹುದೇನು? ಒಬ್ಬನ ಪಕ್ಷ ಹಿಡಿದ ಮೇಲೆ ಅವನನ್ನು ಬಿಟ್ಟು ಹಾಕಿದರೆ ಅಪಖ್ಯಾತಿಗೆ ಕಾರಣವಲ್ಲವೇ?”

ಭೀಮಾ—“ವಾಹ್ವಾ, ನೀನು ಸಣ್ಣ ಮೂರ್ತಿಯಲ್ಲ, ನಾನು ವೇದ ವ್ಯಾಸ ಉಪಾಧ್ಯನ ಪಕ್ಷ ಹಿಡಿದೆನೆಂದು ನಿನಗೆ ಯಾರು ಹೇಳಿದರಮ್ಮಾ!”

ವಾಗ್ದೇವಿ—“ಹೌದಾದ ಮಾತು ಯಾರು ಹೇಳಿದರೇನು?”

ಭೀಮಾ—“ಭಾಗೀರಥಿ! ನಿನ್ನ ಮಗಳು ಸಾಮಾನ್ಯ ಹೆಂಗಸೆಂದು ತಿಳಿಯಬೇಡ. ಅವಳಿಗೆ ದೇವರು ಒಳ್ಳೇದು ಮಾಡಲಿ.”

ಭಾಗೀರಥಿ—“ವಿಪ್ರವಾಕ್ಯೋ ಜನಾರ್ಧನ ಎಂಬ ವಚನವಿದೆ. ಆದರೆ ಪ್ರಕೃತದ ಅಪಾಯ ನೋಡಿದರೆ ನಮಗೆ ಪರಿಣಾಮವಾಗುವ ಹಾಗಿಲ್ಲ.

ಅನ್ನಕ್ಕೆ ತತ್ವಾರ ಆಗುವ ಕಾಲ ಬಂದ್ದೊದಗಿಯದೆ, ಪರಾಕೆ!"

ಭೀಮಾ—"ಎಂಥಾ ಅಪಾಯಿ?"

ವಾಗ್ದೇವಿ—"ತಮ್ಮ ಆಪ್ತ ವೇದವ್ಯಾಸನ ಅಪಾಯಿ. ಅದರಲ್ಲಿ ತಾವು ಸುಧಾರಿಸಿಕೊಂಡ ಮೇಲಷ್ಟೆ ದೇವರು ಒಳ್ಳೇದು ಮಾಡಬೇಕಾದ್ದು. ತನ್ಮಧ್ಯ ಆಶೀರ್ವಾದ ಕೊಟ್ಟ ತಾವೇ ನಮ್ಮ ಮೇಲೆ ಹೂಡಿದ ಬ್ರಹ್ಮಾಸ್ತ್ರ ಉಂಟಷ್ಟೆ?

ಭೀಮಾ—"ನನಗೆ ಹಾಗ್ಯಾಕೆ ದೂರುವಿ. ನಾನು ನಿನಗೆ ಸರ್ವಥಾ ದೋಷಕಾರಿಯಾಗೆನು. ದೇವರು ನಿನಗೆ ಒಳ್ಳೇದು ಮಾಡಲಿ ಎಂಬ ನನ್ನ ಆಶೀರ್ವಾದ ದೇವರೇ ನಿಜವಾಗಿ ನಡಿಸದೆ ಇರಲಾರನು. ನಾನು ಪುನಃ ಪೂರ್ತಿಯಾಗಿ ಹೇಳಿದ ವಚನವಲ್ಲವೇ? ಅದು ಎಂದೂ ಹುಸಿಯಾಗದು."

ವಾಗ್ದೇವಿ—"ಹಾಗಾದರೆ ತಾವು ಈ ಹೊತ್ತಿನಿಂದ ವೇದವ್ಯಾಸನ ಪಕ್ಷಬಿಟ್ಟು ನಮ್ಮ ಪಕ್ಷಕ್ಕೆ ಬಂದದ್ದು ನಿಜವಷ್ಟೆ? ತಾವೇ ನಮ್ಮ ಗುರು ಹಿರಿಯರು, ತೀರ್ಥರೂಪ ಸಮಾನರು. ಪುನಃ ತಮ್ಮ ಕಾಲಿಗೆ ಬಿದ್ದಿದ್ದೇನೆ. ಅನಾಥೆಯಾದ ನನ್ನನ್ನು ರಕ್ಷಿಸುವದಾಗಿ ವಾಗ್ದತ್ತ ಕೊಟ್ಟನಕ ಏಳೆ."

ಭೀಮಾ—"ನಾರಾಯಣ, ನಿನ್ನನ್ನು ಎಂದೂ ಬಿಟ್ಟು ಹಾಕಲಾರೆ, ಎದ್ದೇಳು."

ಭಾಗೀರಥಿ — "ಆಚಾರ್ಯರ ಮಾತು ಪೂರ್ಣವಾಗಿ ನಂಬಿಕೊ. ಅವರ ಅಪ್ಪಣೆ ಮಿಾರಜೇಡ. ವೇದವ್ಯಾಸ ಉಪಾಧ್ಯ ಹುಚ್ಚುಮುಂಡೆಗಂಡ. ಅವನ ಮುಖ ಇನ್ನು ಆಚಾರ್ಯರು ನೋಡರು. ನನಗೆ ಅವರ ನಂಬಿಕೆ ಚಂದಾಗಿ ಅದೆ."

ಭೀಮಾ— "ವೇದವ್ಯಾಸ ಉಪಾಧ್ಯನು ಶ್ರೀಪಾದಂಗಳ ಮೇಲೆ ಪಿನವಿ ಮಾಡಿದ ಕಾರಣ ಅದರ ಸತ್ಯತ್ವ ಶೋಧನೆ ಮಾಡುವದಕ್ಕೆ ಇತರ ಮಠಾಧಿಪತಿಗಳು ಪ್ರತಿನಿಧಿಗಳನ್ನು ನೇಮಿಸಿರುವರು. ಈ ಪ್ರಕರಣದಿಂದ ನಿನಗಾಗಲಿ ನಿನ್ನ ಮಗಳಿಗಾಗಲಿ ಬಾಧಕ ಯಾವದೂ ನನಗೆ ತಿಳಿಯದು. ಆದಕಾರಣ ವೇದವ್ಯಾಸನ ಪಕ್ಷ ನಾನು ಬಿಡಬೇಕೆಂಬ ಅಗತ್ಯವಿಲ್ಲವಷ್ಟೇ."

ವಾಗ್ದೇವಿ—"ಸರಿ, ಸರಿ, ಶ್ರೀಪಾದಂಗಳವರ ಮೇಲೆ ಆದ ಮನವಿ ಯಲ್ಲಿ ನನಗೇನು ಸಂಬಂಧವಿಲ್ಲವೆಂತ ಅನ್ನುವಿರಾ? ನನ್ನನ್ನು ಶ್ರೀಪಾದಂಗ ಳವರು ಇಟ್ಟುಕೊಂಡಿದ್ದರೆಂಬುದು ಅವನ ಸಾಧನೆಯಾಗಿರುತ್ತದೆ. ತಾವು ಹೀಗೆ ಹೇಳುವದು ಅತಿ ಆಶ್ಚರ್ಯವೇ ಸರಿ"

ಭೀಮಾ—“ಅವನ ಸಾಧನೆ ಹಾಗಿರಲಿ. ಸತ್ಯತ್ವ ಹ್ಯಾಗೆ? ನಿನಗೂ ಯತಿಗಳಿಗೂ ಸ್ನೇಹ ಉಂಟೇನು?”

ವಾಗ್ದೇವಿ—“ಅಲ್ಲವೆಂದರೆ ತಾವು ನಂಬುವಿರೋ? ಆ ಮಾತು ಸುಡಿ. ತಮ್ಮ ಮರೆ ಹೊಕ್ಕಿದ್ದೇನೆ. ನನ್ನನ್ನು ಇನ್ನು ರಕ್ಷಿಸುವ ಬಹುಭಾರ ತಮಗೆ ಕೂಡಿಯದೆ. ಹೆಚ್ಚು ಪ್ರಶ್ನೆಗಳಿಂದ ನನ್ನ ಸ್ವರೂಪನಾಶನಪಡಿಸಬೇಡಿ. ತಮ್ಮ ಮೇಲೆ ಪಿತೃಭಾವ ಇಟ್ಟಿದ್ದೇನೆ.”

ಭೀಮಾ—“ ಹಾಗಾದರೆ ವೇದವ್ಯಾಸನ ಸಾಧನೆಯು ಸುಳ್ಳಲ್ಲ. ಅವನ ಪಕ್ಷವನ್ನು ನಾನು ಬಿಡುವುದು ನ್ಯಾಯವೇ?”

ವಾಗ್ದೇವಿ—“ನನಗೂ ಶ್ರೀಪಾದಂಗಳವರಿಗೂ ಸ್ನೇಹವಿದ್ದರೆ ವೇದ ವ್ಯಾಸನ ಅಪ್ಪನ ಗಂಟು ಮುಗದ್ದೇನು?”

ಭೀಮಾ—“ಹಾಗಲ್ಲ, ಅವನ ಉದ್ಯೋಗವನ್ನು ಸ್ವಾಮಿಗಳು ತೆಗೆದರಲ್ಲ?”

ವಾಗ್ದೇವಿ—“ನಾನು ಹೇಳಿ ತೆಗಿಸಿದೆನೇ? ನಾನು ಇಲ್ಲಿಗೆ ಬರುವ ಮೊದಲೇ ನಡೆದ ಕರ್ಮಕ್ಕೆ ನಾನು ಹೊಣೆಯೇನು?”

ಭೀಮಾ—“ಈಗಲಾದರೂ ನೀನು ಸ್ವಾಮಿಗಳಿಗೆ ಹೇಳಿ ಅವನ ಉದ್ಯೋಗವನ್ನು ಅವನಿಗೆ ತಿರುಗಿ ಕೊಡಿಸಿದರೆ ಮುಂದೆ ಯಾವುದೊಂದು ರಗಳೆಯಿರಲಿಕ್ಕಿಲ್ಲವಷ್ಟೇ?”

ವಾಗ್ದೇವಿ—“ಚಲೋ ಮಾತು, ತಮ್ಮ ಅಪೇಕ್ಷೆಯಂತೆ ಶ್ರೀಪಾದಂಗಳವರು ನಡೆಸಿದರೆ ಅವರ ಮರ್ಯಾದೆಯನ್ನು ಅವರೇ ಕಳಕೊಂಡ ಹಾಗಾಗಲಿಕ್ಕಿಲ್ಲವೇ? ಅವನು ಯಾವ ದೊಡ್ಡ ಮನುಷ್ಯನೆಂತ ಹೆದರಬೇಕೋ ತಿಳಿಯದು.”

ಭೀಮಾ—“ಅವನು ಎಷ್ಟು ಸಣ್ಣ ಮನುಷ್ಯನಾದರೂ ಈಗ ಎದುರು ನಿಂತು ದ್ವೇಷ ಸಾಧಿಸುತ್ತಾನಲ್ಲ?”

ವಾಗ್ದೇವಿ—“ಅವನು ತಮ್ಮ ಬಲದಿಂದ ಹಾರಾಡುತ್ತಾನೆ. ತಮ್ಮ ಸಹಾಯ ತಪ್ಪಿದರೆ ಅವನನ್ನು ಒಂದು ಹಳೆ ನಾಯಿಯಾದರೂ ಕಣ್ಣೆತ್ತಿ ನೋಡದು”

ಈ ಪ್ರಮೇಯದ ಪೂರ್ವಾಪರವನ್ನು ಸ್ವಲ್ಪವಾದರೂ ವಿಚಾರಿಸಿ ತಿಳುಕೊಳ್ಳದೆ ಗಪ್ಪನೆ ತಾನಿದ್ದೇನೆ ಹೆದರ ಬೇಡವೆಂದು ವೇದವ್ಯಾಸ ಉಪಾ

ಧ್ಯಗೆ ಮಾತುಕೊಟ್ಟ ತನ್ನ ಹೆಡ್ಡತನಕ್ಕೆ ಭೀಮಾಚಾರ್ಯನು ಪಶ್ಚಾತ್ತಾಪ ಪಟ್ಟನು. ಈ ವೇಸೆಯಿಂದ ಅವನು ವಾಗ್ದೇವಿಯ ವಾದಕ್ಕೆ ಪ್ರತ್ಯುತ್ತರಕೊಡದೆ ಉಭಯ ಸಂಕಟದಲ್ಲಿ ಬಿದ್ದವನಂತೆ ಅವನ ಮುಖಚ್ಛಾಯೆಯಿಂದ ತಿಳಿದು ವಾಗ್ದೇವಿಯು ಇದೇ ಕಾಲೋಚಿತವೆಂದು ಮಿತಿಯಿಲ್ಲದೆ ಕಣ್ಣೀರಿಡುತ್ತಾ ಆಚಾರ್ಯನ ಕಾಲಿಗೆ ಅಡ್ಡಬಿದ್ದು ಗದ್ಗದ ಕಂಠದಿಂದ ಮಾಡುವ ಪ್ರಲಾಪ ವನ್ನು ನೋಡಿ ಅವನ ಮನಸ್ಸು ಕರಗಿತು. ಆಹಾ! ಈ ಮೂಢ ವೇದವ್ಯಾ ಸನ ಪಕ್ಷವನ್ನು ಹಿಡುಕೊಂಡು ದೊಡ್ಡ ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದೆನೆಂಬ ಚಿಂತೆ ಯಿಂದ ಕೊಂಚಸಮಯ ಅನುತ್ತರನಾಗಿದ್ದರೂ ವಾಗ್ದೇವಿಯ ದುಃಖವನ್ನು ಕಂಡು, ಅವನಿಗೆ ಬಹಳ ಅನುತಾಪವಾಯಿತು. ಮುಂದರಿಸಿ ಹೋದ ಕೆಲ ಸಕ್ಕೆ ಈಗ ನಿವೃತ್ತಿಯಿಲ್ಲ. ಇನ್ನು ನಡಿಯಲಿಕ್ಕಿರುವ ವಿಚಾರಣೆಯು ಪ್ರಧಾನ ವಾದದ್ದು. ಅವರಲ್ಲಿ ವೇದವ್ಯಾಸನ ಕೈಕಾಲು ಮುರಿಯುವ ಉಪಾಯ ಮಾಡಿದರೆ ವಾಗ್ದೇವಿಯ ಪಕ್ಷವೇ ಗೆಲ್ಲುವದೆಂದು ಅವಳನ್ನು ಆಚಾರ್ಯನು ಸಂತವಿಸುತ್ತಿರುವಾಗ ಭಾಗೀರಥಿಯು ಮನೆಯ ಒಳಗಿಂದ ಬೆಳ್ಳಿಯ ಹರಿವಾ ಣದಲ್ಲಿ ಅಪೂರ್ವವಾದ ತಿಂಡಿ, ಬೆಳ್ಳಿಯ ಚಂಬಿನಲ್ಲಿ ಬಿಸಿ ಬಿಸಿ ಚಾ ನೀರು, ಬೆಳ್ಳಿಯ ಪಂಚಪಾತ್ರೆ ಸಮೇತ ಕೈಯಲ್ಲಿ ಹಿಡುಕೊಂಡು ಆಚಾರ್ಯನ ಮುಂದೆ ಮಡಗಿ ದೂರ ಕೂತುಕೊಂಡಳು. ವಾಗ್ದೇವಿಯು ಚಾ ನೀರನ್ನು ಪಂಚಪಾತ್ರೆಯಲ್ಲಿ ಬೇಕಾದ ಹಾಗೆ ಹೊಯಿದುಕೊಟ್ಟು, ಅವನ ತೃಷೆಯನ್ನು ನಿವಾರಣೆಮಾಡಿದಳು. ಹರಿವಾಣದಲ್ಲಿದ್ದ ತಿಂಡಿಯನ್ನು ನಾವಕಾಶವಿಲ್ಲದೆ ಆಚಾರ್ಯನು ವಿನಿಯೋಗಿಸಿದನು. ದ್ವಿಜಗೆ ತೃಪ್ತಿಯಾಯಿತು. ಸುಡು ಮೋರೆಯ ವೇದವ್ಯಾಸನ ಪಕ್ಷಕ್ಕೆ ಸೇರಿ, ದೂರಿಸಿ ಕೊಳ್ಳುವದಕ್ಕಿಂತ ಸಹಾಯಹೀನಳಾದ ವಾಗ್ದೇವಿಗೊಂದು ಉಪಕಾರ ಮಾಡಿದರೆ ಅವಳು ಜನ್ಮ ಜನ್ಮಾಂತರಕ್ಕೂ ಮರೆಯಳೆಂದು ಭಾವಿಸಿ, ಅಂದಿನಿಂದ ಅವಳ ಹಿತ ಚಿಂತಕ ನಾಗಲಿಕ್ಕೆ ಸಮ್ಮತಿಸಿ, ಅವಳಿಗೆ ನಂಬಿಗೆಯನ್ನು ಕೊಟ್ಟು, ಮರುದಿವಸ ಬರುವದಾಗಿ ಹೇಳಿ ಹೊರಟನು.

## ಇಪ್ಪತ್ತ ಎರಡು

ವೇದವ್ಯಾಸ ಉಪಾಧ್ಯನ ಪ್ರಾಣಸಖನನ್ನು ತನ್ನ ಪಕ್ಷಕ್ಕೆ ತಿರುಗಿಸಿ ಕೊಂಡ ಹಾಗಾಯಿತು. ಬಾಲಮುಕುಂದಾಚಾರ್ಯನನ್ನು ಕೈವಶಮಾಡಿಕೊ

ಳ್ಳದೆ, ಜಯದೊರೆಯುವದು ಪ್ರಯಾಸ ಹೀಗೆ ಯೋಚನೆಯಲ್ಲಿ ಮಗಳೂ ತಾಯಿಯೂ ಒಟ್ಟಿನಲ್ಲಿ ಶಾನೆ ಹೊತ್ತು ಕಳೆದರು. ಚಿಂತೆಯಾಕೆ? ಈ ಕಾರ್ಯ ವನ್ನು ತಾನೇ ಸುಧಾರಿಸುವದಾಗಿ ತಾಯಿಯು ಒಪ್ಪಿಕೊಂಡು, ಗಂಡನನ್ನು ಕರೆದು, ಅವನ ಕಿವಿಯಲ್ಲಿ ಮೆಲ್ಲಗೆ ಏನೋ ಮಾತಾಡಿದಳು ಅದ್ಯಾವ ದೊಡ್ಡ ಕೆಲಸವೆಂದು ನಗುತ್ತಾ, ಅವನು ಅಂಜನೇಯಾಲಯಕ್ಕೆ ಹೋಗಿ ಬಾಲಮು ಕುಂದಾಚಾರ್ಯನ ಸಮಯ ಹಾರೈಸುತ್ತಾ, ಅತ್ತಿತ್ತ ನೋಡಿಕೊಂಡು, ತಾನು ಬೇರೆ ಏನೋ ಕೆಲಸದ ಮೇಲೆ ಬಂದವನಂತೆ ಆ ದೇವಾಲಯದ ಅರ್ಚಕನ ಕೂಡೆ ಸಂಭಾಷಣೆಮಾಡುತ್ತಾ, ಒಂದು ಮೂಲೆಯಲ್ಲಿ ಕೂತು ಕೊಂಡನು.

ಬಾಲ ಮುಕುಂದನು ಒಬ್ಬನೇ ಕೂತುಕೊಂಡಿರುವ ಒಳ್ಳೇ ಸಮಯ ವನ್ನು ನೋಡಿ, ತಮ್ಮಣ್ಣಭಟ್ಟನು ದೂರದಿಂದ ಬಗ್ಗಿ, ದೊಡ್ಡ ನಮಸ್ಕಾರ ಮಾಡಿದನು. ಬಾಲಮುಕುಂದನು ಆ ಬ್ರಾಹ್ಮಣನನ್ನು ಸಮೀಪ ಕೂರಿಸಿ ಕೊಂಡು, ಅವನ ಗುರ್ತು ಮಾಡಿಕೊಂಡ ಮೇಲೆ ಬಂದ ಕಾರ್ಯವೇನೆಂದು ಮೆಲ್ಲಗೆ ಕೇಳಿದಾಗ ತಮ್ಮಣ್ಣ ಭಟ್ಟನು ಅವನ ಕಿವಿಯಲ್ಲಿ ವಾಗ್ದೇವಿಯು ತಮ್ಮ ದರುಶನಾಭಿಲಾಷಿಯಾಗಿರುವಳೆಂದು ಹೇಳಿದನು. ತಾನು ಚಿಂತನೆ ಮಾಡಿಕೊಂಡಿರುವ ಕಾರ್ಯವು ಕೈಗೂಡುವ ಸಂದರ್ಭ ಸುಲಭವಾಗಿ ಸಿಕ್ಕಿ ದ್ದಕ್ಕಾಗಿ ಉಲ್ಲಾಸಪಟ್ಟು, ಅವನು ತಮ್ಮಣ್ಣಭಟ್ಟನನ್ನು ಒಂದು ಗೋಪ್ಯ ಸ್ಥಳಕ್ಕೆ ಕರಕೊಂಡು, ಅಲ್ಲಿ ರವಷ್ಟು ಅಂತರಂಗ ಮಾತಾಡಿದನು. ತಮ್ಮಣ್ಣ ಭಟ್ಟನು ಶೀಘ್ರ ಹೆಂಡತಿಯ ಬಳಿಗೆ ಬಂದು, ಗುಟ್ಟಿನಲ್ಲಿ ಏನೋ ಹೇಳಿದನು. 'ಸ್ತ್ರೈ ಇನ್ನು ಚಿಂತೆ ಬಿಡಿ' ಎಂದು ಸಂತೋಷದಿಂದ ಅವಳು ಮಗಳನ್ನು ಕಂಡು, ಅವಳಿಗೆ ಗುಪ್ತ ಅನುಜ್ಞೆಗಳನ್ನು ಕೊಟ್ಟಳು.

ವಾಗ್ದೇವಿಯ ಮುಖಚಂದ್ರಗೆ ಪೂರ್ಣಿಮಿಯ ದಿನದಂತೆ ಪೂರ್ಣಕಲೆ ಗಳೇರಿದವು. ಅವಳು ಸಮಯ ಹಾಳುಮಾಡದೆ, ಏನೋ ದೊಡ್ಡ ಕೆಲಸದಲ್ಲಿ ಪ್ರವರ್ತಿಸುತ್ತಿರುವ ಹಾಗೆ ಕಾಣುತ್ತಿತ್ತು. ಬಗೆಬಗೆ ಹೂವು, ಪನ್ನೀರು, ಗಂಧ, ಊದುಬತ್ತಿ ಇತ್ಯಾದಿ ಸುಗಂಧ ವಸ್ತುಗಳ ಪರಿಮಳವು ದಾರಿಗರ ಘ್ರಾಣೇಂದ್ರಿ ಯದಲ್ಲಿ ತುಂಬಿತು. ತಮ್ಮಣ್ಣಭಟ್ಟನು ಬೇಗ ಒಂದಿಷ್ಟು ಉಂಡುಬಿಟ್ಟು, ಮುಸುಕು ಹಾಕಿಕೊಂಡು, ಮಠದ ಎದುರು ಮುಚ್ಚಿರುವ ಅಂಗಡಿಯ ಬಾಜಾರಿ ಹಲಿಗೆಯ ಮೇಲೆ ಘಳಿಗೆಗೊಮ್ಮೆ ತಲೆಯೆತ್ತಿ ನೋಡುತ್ತಾ, ನಿದ್ರಾ ವಸ್ಥೆಯನ್ನು ತಾಳಿ, ಬಿದ್ದು ಕೊಂಡನು. ಬೀದಿಯಲ್ಲಿ ಜನರ ಸಂಚಾರ ಕಡಿಮೆ

ಯಾಗುವ ವೇಳೆಯಲ್ಲಿ ಒಬ್ಬ ಯೌವನಸ್ಥನು ಮುಸಲ್ಮಾನರಂತೆ ಅರಬಿ ಅಂಗಿಯನ್ನು ಆಪಾದ ಮಸ್ತಕ ಪರಿಯಂತರ ಹೊದ್ದು ಕೊಂಡು, ಕೈಯಲ್ಲಿ ಬೆತ್ತವನ್ನು ಹಿಡುಕೊಂಡು ಬರುವದಕ್ಕೂ ತಮ್ಮಣ್ಣ ಭಟ್ಟನು ತಲೆಯೆತ್ತಿ ನೋಡುವದಕ್ಕೂ ಸಮಯವಾಯಿತು. ತಮ್ಮಣ್ಣ ಭಟ್ಟನು ಬೀದಿಗೆ ಇಳಿದು ಆ ಯೌವನಸ್ಥನನ್ನು ತನ್ನ ಮನೆಯ ಒಳಗೆ ಕರಕೊಂಡು ಬಾಗಲು ಹಾಕಿ ಬಿಟ್ಟನು. ಶಾನೆ ಸಮಯ ಕಳೆದ ಮೇಲೆ ಅವನು ಬಾಗಲು ತೆರದು ಬೀದಿಗೆ ಇಳಿದನು ತಮ್ಮಣ್ಣಭಟ್ಟನು ಅವನ ಹಿಂದುಗಡೆಯಿಂದ ಹತ್ತಿಪ್ಪತ್ತು ಮಾರು ದೂರಹೋಗಿ ಅಪ್ಪಣೆ ಪಡಕೊಂಡು ಹಿಂತಿರುಗಿ ತನ್ನ ಮನೆಯ ಒಳಹೊಕ್ಕು ಶಯನಹಾಕಿದನು. ಭಾಗೀರಥಿಯು ಗಂಡನನ್ನು ಕುರಿತು— "ಹೌದೇನು! ಬಾಲಮುಕುಂದಾಚಾರ್ಯನು ನಮ್ಮ ಕೈವಶವಾದ ಹಾಗಾಯಿತು. ನಿಮ್ಮ ಸಾಹಸಕ್ಕೆ ಮೆಚ್ಚಿದೆ. ನಾರಾಯಣಾಚಾರ್ಯನನ್ನು ಮೊದಲೇ ಬಗ್ಲಿಗೆ ಹಾಕಿ ಆಯಿತು. ಇನ್ನು ಆ ಗ್ರಾಮಸಿಂಹ ವೇದವ್ಯಾಸನು ಬಗುಳುತ್ತಿರಲಿ ಎಂದು ಹರುಷವನ್ನು ತಡೆಯಲಾರದೆ ಬಾಯಿತುಂಬಾ ನೆಗಾಡಿಬಿಟ್ಟಳು. ಈ ಸಂಭಾಷಣೆಯನ್ನು ಕೇಳುತ್ತಿದ್ದ ವಾಗ್ದೇವಿಯು ಹಾಗೆಯೇ ನಕ್ಕಳು.

ಬಾಲಮುಕುಂದಾಚಾರ್ಯನು ಅಂಜನೇಯಾಲಯದ ಸಮೀಪವಾಗುವಾಗ ತಾನು ಹೊದ್ದುಕೊಂಡಿದ್ದ ಅರಬಿ ಅಂಗಿಯನ್ನು ತೆಗೆದು ಸುರುಳಿಮಾಡಿ ಕಂಕುಳಲ್ಲಿಟ್ಟುಕೊಂಡು, ತೀವ್ರವಾಗಿ ನಡಿಯುತ್ತಿದ್ದನು. ಹಿಂದಿನಿಂದ ಯಾರೋ ಬಂದಂತೆ ತೋರಿ ನೋಡೋಣ, ದೊಣ್ಣೆಯನ್ನು ಹಿಡುಕೊಂಡು ಕಂಬಳಿಮುಸುಕು ಹಾಕಿ ಕೊಂಡು ಹಿಂಬಾಲಿಸಿ ಬರುವ ಭೀಮಾಚಾರ್ಯನನ್ನು ಕಂಡು, ಅಲ್ಲಿಯೇ ಸ್ತಬ್ಧನಾದನು. ಅವನು— "ಆಚಾರ್ಯರೇ! ತಾವು ಒಬ್ಬರೇ ಅಂಗರಕ್ಷಣೆಗೆ ಯಾರಿಗೂ ಸಂಗಡ ತಕ್ಕೊಳ್ಳದೆ ಮರಳಿ ಬರುವದು ನೋಡಿ ಭದ್ರತೆಯ ಚಿಂತನೆಯಿಂದ ತಮ್ಮ ಬೆನ್ನು ಬಿಡದೆ ಬಂದೆ" ಎಂದು ವಿನೋದಪೂರ್ವಕವಾಗಿ ಹೇಳಿ ನಕ್ಕನು. ಬಾಲಮುಕುಂದಾಚಾರ್ಯಗೆ ಚೇಳು ಕಚ್ಚಿದಂತಾಯಿತು. ತನಗೆ ಗುಟ್ಟು ತಿಳಿದ ದೆಸೆಯಿಂದ ಏನೂ ಬಾಧಕವಿಲ್ಲ. ಮನಸ್ಸಿನಲ್ಲಿ ರವಷ್ಟಾದರೂ ಸಂದೇಹವಿರಬಾರದೆಂದು ಭೀಮಾಚಾರ್ಯನು ಬಾಲಮುಕುಂದನ ಕೈಹಿಡುಕೊಂಡು, ಇಬ್ಬರೂ ಬಿಡಾರ ಪ್ರವೇಶವಾದರು. ಸಾಯಂಕಾಲ ಸಮಯ ತಮ್ಮಣ್ಣ ಭಟ್ಟನೂ ಬಾಲಮುಕುಂದನೂ ಅಂತರಂಗ ಮಾತಾಡುವ ಸಮಯದಲ್ಲಿ ಬೀಮಾಚಾರ್ಯನು ಬಂದು; ಕಿಟಕಿ

ಯಿಂದ ನೋಡಿ ಅವರಲ್ಲಿ ಏನೋ ವಿಶೇಷವದೆ ಎಂಬ ಅನುಮಾನದಿಂದ ರಾತ್ರೆಕಾಲ ನಿದ್ರೆಹೋಗದೆ ಕಾದುಕೊಂಡಿದ್ದನು. ಬಾಲಮುಕುಂದನು ವೇಷ ಮರಸಿ ಹೊರಡುವದು ಅವನ ಕಣ್ಣಿಗೆ ಬಿದ್ದಿತು. ಒಂದು ಫರ್ಲಾಂಗಿನಷ್ಟು ದೂರದಿಂದ ಮೆಲ್ಲಗೆ ಅವನು ಹಿಂಬಾಲಿಸಿ ಬಂದು, ಕುರುದಾರಿಯಿಂದ ಚಂಚಲನೇತ್ರರ ಮಠದ ಬಾಗಿಲಲ್ಲಿರುವ ದೊಡ್ಡ ಅಶ್ವತ್ಥಮರದ ಕಟ್ಟೆಯಲ್ಲಿ ಅಡಗಿಸಿಂತು, ತಮ್ಮಣ್ಣ ಭಟ್ಟನು ಬಾಲಮುಕುಂದನನ್ನು ತನ್ನ ಬಿಡಾರದ ಒಳಗೆ ಹೊಗಿಸಿಬಿಟ್ಟ ಚಮತ್ಕಾರವನ್ನು ನೋಡುತಿದ್ದನು.

ಮರದಿನ ಬೆಳಗ್ಗೆ ಭೀಮಾಚಾರ್ಯನ ಸವಾರಿಯು ವಾಗ್ದೇವಿಯ ಬಿಡಾರಕ್ಕೆ ಹೋಯಿತು ಅವಳು ತಾಯಿತಂದೆಗಳ ಸಮೇತ ಅವನಿಗೆ ದೇವರಂತೆ ವಿನಮಿಸಿ, ಆಸನಕೊಟ್ಟು ಕಾಲುಮುಟ್ಟಿ ನಮಸ್ಕಾರ ಮಾಡಿದಳು ಆಚಾರ್ಯನ ರಸನಾ ಶಕ್ತಿಯನ್ನು ಸೋಲಿಸುವಹಾಗಿನ ರುಚಿಕರವಾದ ಪದಾರ್ಥಗಳುಳ್ಳ ಫಲಾಹಾರ ಸಹಿತ ಚಲೋ ಕಾಫಿಯನ್ನು ಉಣ್ಣಿಸುವುದ ರಿಂದ ಅವರು ಇವನನ್ನು ದಣಿಸಿದರು. ಜರಿ ಅಂಚಿನದೊಂದು ಬನಾರಸಿ ಪಟ್ಟೆ ಮಡಿಯನ್ನೂ ಹೊಳೆಯುವ ಕೆಂಪಿನ ಕಿಡಿಗಳನ್ನು ಕುಂದ್ರಿಸಿರುವ ಒಂದು ಚಿನ್ನದ ಉಂಗುರವನ್ನೂ ವಾಗ್ದೇವಿಯು ಭೀಮಾಚಾರ್ಯಗೆ ಕೊಟ್ಟು, ಸ್ವೀಕರಿಸಬೇಕೆಂದು ಅಪೇಕ್ಷಿಸಿದಳು. ಗುಣವಂತೆಯಾದ ಈ ವಿಲಾಸಿನಿ ಸ್ತ್ರೀಯ ಕೈಯಿಂದ ತನಗೆ ಸಿಕ್ಕಿದ ಉಚಿತವನ್ನು ಪ್ರೇಮದಿಂದ ಅಂಗೀಕರಿಸಿ "ನಿನಗೆ ಸದಾ ಶ್ರೀಹರಿಯು ಪೂರ್ಣ ಅನುಗ್ರಹವಿಟ್ಟು ನಡೆಸಲಿ" ಎಂದು ಸಂಪೂರ್ಣಾಶೀರ್ವಾದ ಮಾಡಿ, ತಾಂಬೂಲವನ್ನು ತಕ್ಕೊಂಡು, ಮಧ್ಯಾಹ್ನಕ್ಕೆ ಮರಳಿ ಬರುವೆನೆಂದು ಹೊರಟು ಹೋದನು. ಬಾಲಮುಕುಂದಾಚಾರ್ಯನು ತನ್ನ ಗುಟ್ಟು ಹೊರಗೆ ಬಿತ್ತೆಂಬ ಚಿಂತೆಯನ್ನು ತೋರಿಸಿಕೊಳ್ಳದೆ, ಹಾಸ್ಯವದನ ಮಾಡಿಕೊಂಡರೂ ಭೀಮಾಚಾರ್ಯನನ್ನು ನೋಡಿದೊಡನೆ ಕೊಂಚ ನಾಚಿಕೆಯಿಂದ ತಲೆಯನ್ನು ಎತ್ತಲಾರದೆ ಕುಳಿತುಕೊಂಡಿರುವುದನ್ನು ನೋಡಿ, ಭೀಮಾಚಾರ್ಯನು ಅವನನ್ನು ಏಕಾಂತ ಸ್ಥಳಕ್ಕೆ ಕರಕೊಂಡು, ಅಲ್ಲಿ ಸ್ವಲ್ಪ ಸಮಯ ಅವನ ಕೂಡೆ ಸಂಭಾಷಣೆ ಮಾಡಿದನು. "ನನ್ನ ಮತ್ತು ನಿನ್ನ ಮೇಲೆ ಪೂರ್ಣವಿಶ್ವಾಸವಿಟ್ಟಿರುವ ಅಬಲೆಯನ್ನೂ ದಂಡಧಾರಿಯಾದ ಚಂಚಲನೇತ್ರ ಸನ್ಯಾಸಿಯನ್ನೂ ಶುಂಠನಾದ ವೇದವ್ಯಾಸನ ಹೊಟ್ಟೆಕಿಚ್ಚಿಗೆ ಬಲ ಅರ್ಪಿಸದೆ, ಕ್ಷಿಪ್ರ ಅವರನ್ನು ವಿಮೋಚಿಸುವ

ಆಲೋಚನೆ ಮಾಡುವುದೇ ಲೇಸು" ಎಂದು ಭೀಮಾಚಾರ್ಯನು ಹೇಳಲು ಬಾಲಮುಕುಂದನು ಆ ಮಾತು ಒಪ್ಪಿಕೊಂಡನು ಮಧ್ಯಾಹ್ನಕ್ಕೆ ಭೀಮಾಚಾರ್ಯನು ಮರೆಯದೆ ವಾಗ್ದೇವಿಯ ಬಿಡಾರಕ್ಕೆ ಹೋಗಿ ಬೇಕಾದ ಉಪಚಾರಗಳನ್ನು ಕೈಕೊಂಡು, ತನ್ನನ್ನು ತೀರ್ಥರೂಪರಂತೆ ನಂಬಿಕೊಂಡಿರುವ ವಾಗ್ದೇವಿಗೆ ಪೂರ್ಣ ಭರವಸೆಯನ್ನು ಹೇಳಿ, ಹೊರಟು ಬಂದನು.

## ಇಪ್ಪತ್ತಮೂರು

ವೇದವ್ಯಾಸ ಉಪಾಧ್ಯನ ಮನವಿಯನ್ನು ಇತ್ಯರ್ಥಿಸಲಿಕ್ಕೆ ನೇಮಿಸೋಣಾದ ದಿವಸವು ಬಂದಿತು. ಚಂಚಲನೇತ್ರರ ಕಡೆಯಿಂದ ಪಾರುಪತ್ಯಗಾರ ವೆಂಕಟಪತಿ ಆಚಾರ್ಯನು ಸಕಾಲದಲ್ಲಿ ಬಂದು ಸಭೆಯ ಮುಂದೆ ಕೂತುಕೊಂಡನು. ಬಾಲಮುಕುಂದಾಚಾರ್ಯನು ಅಗ್ರಸ್ಥಾನದಲ್ಲಿ ಕುಳಿತನು. ವೇದವ್ಯಾಸ ಉಪಾಧ್ಯನು ಬಂದ ಬಳಿಕ ಅವನನ್ನು ಕುರಿತು–"ನಿನ್ನ ಮನವಿಯಲ್ಲಿ ವಿವರಿಸಲ್ಪಟ್ಟ ವಿಷಯಗಳನ್ನು ಸಿದ್ಧಾಂತಪಡಿಸುವುದಕ್ಕೋಸ್ಕರ ಸಾಕ್ಷ ವೇನಿದೆ?" ಎಂದು ಬಾಲಮುಕುಂದನು ಪ್ರಶ್ನೆಮಾಡಿದನು. "ನನ್ನ ಹೇಳಿಕೆಗಳೆಲ್ಲ ವಾಸ್ತವ್ಯವೆಂಬುದಕ್ಕೆ ಚಂಚಲನೇತ್ರರನ್ನೂ ವಾಗ್ದೇವಿಯನ್ನೂ ಕರೆಸಿ ವಿಚಾರಣೆ ಮಾಡಿದರೆ ಸಾಕು. ಅವರ ಒಪ್ಪಿಗೆಗಳಿಂದಲೇ ಅನೇಕ ಪ್ರಮೇಯಗಳು ವ್ಯಕ್ತವಾಗುವುವು" ಎಂದು ಉತ್ತರಕೊಟ್ಟನು. ಬಾಲಮುಕುಂದಾಚಾರ್ಯನು ಖೋ ಎಂದು ನಕ್ಕನು. ಅಂತೆಯೇ ಎಲ್ಲರೂ ನಗಲಿಕ್ಕೆ ತೊಡಗಿದರು. ವೇದವ್ಯಾಸ ಉಪಾಧ್ಯಗೆ ಸಿಟ್ಟು ಬಂತು. ಕುತ್ಸಿತ ಮಾತುಗಳನ್ನು ಆಡುವುದಕ್ಕೆ ಸಗಿದನು. ಈ ದೆಸೆಯಿಂದ ಸಭಾನಾಯಕಗೂ ಸಭಾಜನರಿಗೂ ವಿಪರೀತ ಸಿಟ್ಟು ಬಂದು, ಈ ಮೂರ್ಖಗೆ ಬಹಿಷ್ಕಾರ ಪತ್ರ ಕೊಡುವುದೇ ಲೇಸೆಂದು ತೋರಿತು. ಇದೇ ತನ್ನ ವೈನ ನಡೆಯಲಿಕ್ಕೆ ಸರಿಯಾದ ಸಮಯವೆಂದು ಭೀಮಾಚಾರ್ಯನು ಮುಕುಳಿತ ಹಸ್ತನಾಗಿ ಸಭೆಯವರ ಸಮ್ಮುಖದಲ್ಲಿ ನಿಂತು, ಸಣ್ಣದೊಂದು ಭಾಷಣವನ್ನು ಮಾಡಿದನು.

"ವಸಂತನಗರದ ಮಠಾಧಿಪತಿಗಳ ಆಜ್ಞೆಯನ್ನನುಸರಿಸಿ, ಅವರ ಪ್ರತಿನಿಧಿಗಳು ಸಭೆ ಮಾಡಿ, ಚಂಚಲನೇತ್ರಸನ್ಯಾಸಿಗಳ ಶೀಲವನ್ನು ಕುರಿತು ಪರಿಶೋಧನೆ ಮಾಡುವದಕ್ಕಾಗಿ ಅಗತ್ಯವಾದ ಸಾಕ್ಷಿಯನ್ನು ಕೊಡೆಂದು ವಾದಿಯ ಕೂಡೆ ಕೇಳಿದಾಗ ನ್ಯಾಯವಾದ ಪ್ರತಿವಾಕ್ಯಕೊಡದೆ ಹುಡುಗಾಟಿ

ಕೆಯ ಮಾತುಗಳನ್ನು ಆಡುವ ಮೂರ್ಖನನ್ನು ಸಭಾ ಜನರು ಈಗಲೇ ಶಿಕ್ಷಿಸುವುದು ಅನ್ಯಾಯವೆನ್ನಕೂಡದು. ಪರಂತು ಅವನು ಏನೂ ತಿಳಿಯದ ಮೂಢನೆಂಬ ಹಾಗೆ ಅವನ ಮಾತುಗಳ ಸ್ವಭಾವದಿಂದಲೇ ತಿಳಿಯಲಿಕ್ಕೆ ಅನುಕೂಲವಿರುವುದು ನಾನು ಹೆಚ್ಚೇನು ಅರಿಕೆ ಮಾಡಲಿ? ಮುಖ್ಯ ಅವನ ಸಹಸ್ರ ಅಪರಾಧಗಳಿದ್ದರೂ ಅವನ ಬುದ್ಧಿವೈಕಲ್ಯವನ್ನು ಆಲೋಚನೆಗೆ ತಕ್ಕೊಂಡು ಅವನ ಅಪರಾಧಗಳನ್ನೆಲ್ಲಾ ಕ್ಷಮಿಸಬೇಕೆಂದು ವಿನಯದಿಂದ ನಾನು ಸಭಾಪತಿಗಳನ್ನೂ ಸಭಾಜನರನ್ನೂ ಬೇಡಿಕೊಳ್ಳುತ್ತೇನೆ. ಭೂಲೋಕದಲ್ಲಿ ಅನೇಕ ಮಠಾಧಿಪತಿಗಳು ಪೂರ್ವಾಶ್ರಮದ ನೆಂಟರಿಷ್ಟರಿಗೆ ಸಹಾಯ ಮಾಡುವ ಇಚ್ಛೆಯಿಂದ ದ್ರವ್ಯವನ್ನಾಗಲೀ ಉಳಕೊಳ್ಳಲಿಕ್ಕೆ ಬಿಡಾರವನ್ನೂ ಕೊಡುವ ವಾಡಿಕೆಯು ಅನಾದಿಯಿಂದ ನಡೆದು ಬರುತ್ತದೆ. ವಾಗ್ದೇವಿಯನ್ನು ಅವಳ ಗಂಡನ ಮತ್ತು ತಂದೆ ತಾಯಿಗಳ ಸಮೇತ ಮಠದಲ್ಲಿ ಉಳಕೊಳ್ಳುವದಕ್ಕೆ ಜಾಗಕೊಟ್ಟ ಮಾತ್ರದಿಂದ ಯತಿಗಳ ಪರಿಶುದ್ಧತೆಗೆ ಕುಂದುಬರಲಿಕ್ಕೆ ಕಾರಣವಿಲ್ಲವು. ಇದನ್ನೆಲ್ಲಾ ಆಲೋಚಿಸದೆ, ದೀಪದ ಮೇಲೆ ಬಿದ್ದ ಪತಂಗದಂತೆ ಬಡಿದಾಡಿಕೊಳ್ಳುವ ವೇದವ್ಯಾಸನ ಹುಚ್ಚಾಟಕ್ಕೆ ಯಾರಿಗೆ ಸಿಟ್ಟು ಬಾರದು? ಅವನು ಮನವಿಯಲ್ಲಿ ಹೇಳುವ ದೂರುಗಳನ್ನು ಸ್ಥಾಪಿಸುವುದಕ್ಕೆ ಸಾಕ್ಷಿಯನ್ನು ತರುವುದೇ ಅಸಾಧ್ಯ. ಒಟ್ಟಿನ ಮೇಲೆ ಅವರವರು ಮಾಡಿದ ಪಾಪಕ್ಕೆ ಅವರವರೇ ಹೊಣೆಯಾಗಿರುವರು. 'ಮಾಡಿದವನ ಪಾಪ ಆಡಿದವನ ತಲೆ ಮೇಲೆ' ಎಂಬ ಗಾದೆಯಂತೆ ವೇದವ್ಯಾಸನ ಗತಿಯಾಗುವದಾಯಿತು. ಇದು ಅವನ ಗ್ರಹಗತಿಯೇ ಸರಿ. ಈಗ ಅವನು ಮಾಡಿದ ಅಪ್ರಬದ್ಧತೆಯನ್ನು ಸಭೆಯವರು ಸಂಪೂರ್ಣವಾಗಿ ಕ್ಷಮಿಸಿಬಿಟ್ಟು, ಇಷ್ಟು ದಿವಸ ಈ ಪುರದಲ್ಲಿ ಉಳುಕೊಂಡು, ಪಡಕೊಂಡ ಸಮಾಚಾರದ ಮೇಲೆ ತಮ್ಮ ಚಿತ್ತಕ್ಕೆ ಯುಕ್ತತೋರುವಂತೆ ಒಂದು ಬಿನ್ನವತ್ತಳೆಯನ್ನು ಶ್ರೀಪಾದಂಗಳವರಿಗೆಲ್ಲರಿಗೂ ಬರೆದುಕೊಳ್ಳಬೇಕಾಗಿ ನಾನು ಬಡ ವೇದವ್ಯಾಸನ ಕಡೆಯಿಂದ ಮಾಡುವ ಈ ಕಡೇ ಅರಿಕೆಯನ್ನು ನಡಿಸಿಕೊಡಬೇಕೆಂದು ಕಡ್ಡಿಮುರಿದು ಹೇಳಿಕೊಳ್ಳುತ್ತೇನೆ."

ಹೀಗೆ ಮಾತಾಡಿದ ತರುವಾಯ ಭೀಮಾಚಾರ್ಯನು ವೇದವ್ಯಾಸನಿಗೆ ಹಸ್ತ ಸಂಕೇತದಿಂದ ತಿಳಿಸಿದ ಬುದ್ಧಿಮಾರ್ಗವನ್ನನುಸರಿಸಿ, ಅವನು ತನ್ನ ಅಪರಾಧಗಳನ್ನು ಕ್ಷಮಿಸಬೇಕೆಂದು ಸಭೆಯ ಮುಂದೆ ಅಡ್ಡಬಿದ್ದು

ಹೇಳಿಕೊಂಡನು. ಆಗ ಬಾಲಮುಕುಂದಾಚಾರ್ಯನು ಹೇಳಿದ್ದೇನೆಂದರೆ:—

"ವೇದವ್ಯಾಸ ಉಪಾಧ್ಯನ ಕುಯುಕ್ತಿಗಳು ಸಾಮಾನ್ಯವಾದುವುಗಳಲ್ಲ. ತಾರ್ಕಣೆ ಮಾಡಕೂಡದ ಅಸಹ್ಯಕರವಾದ ದೋಷಾರೋಪಣೆಯನ್ನು ಒಬ್ಬ ಯತಿಯ ಮೇಲೆ ಮಾಡಿಬಿಟ್ಟು, ರಾಜದ್ವಾರದ ವರೆಗೂ ಮಠಾಧಿಪತಿಗಳನ್ನು ದೂರಿ, ನಮ್ಮನ್ನೆಲ್ಲಾ ವ್ಯರ್ಥವಾಗಿ ದಣಿಸಿದ್ದಕ್ಕಾಗಿ ನಾವು ಶಾನೆ ಪಶ್ಚಾತ್ತಾಪ ಪಡುವದಾಯಿತು. ತನ್ನಿಂದಾಗದ ಕಾರ್ಯದಲ್ಲಿ ಪ್ರವರ್ತಿಸಿದ ಈ ಬಣಗು ಮನುಷ್ಯನ ಮೇಲೆ ಮಠಾಧಿಪತಿಗಳು ವೈಮನಸ್ಸು ತಾಳುವುದು ಏನು ಆಶ್ಚರ್ಯ? ಗಂಡನಾಜ್ಞೆಯೊಳಗಿರುವ ಹೆಂಡತಿಯೊಬ್ಬಳು ತಂದೆತಾಯಿಗಳ ಸಮೇತ ಪೂರ್ವಾಶ್ರಮದಲ್ಲಿ ಸಂಬಂಧವಿರುವ ಯತಿಯ ಮಠದಲ್ಲಿ ವಾಸ ಮಾಡಿಕೊಂಡಿದ್ದರೆ ಅವಳ ಪಾತಿವ್ರತ್ಯಕ್ಕೆ ಲಾಂಛನ ತಗಲದು. ಅವಳು ದುಶ್ಶೀಲಳಾದರೆ ಗಂಡನು ಸುಮ್ಮಗಿರನು; ಯತಿಯು ನಿರ್ದೋಷಿಯಲ್ಲದಿದ್ದರೆ ಶಿಷ್ಯಮಂಡಲಿಯು ಮೌನಧಾರಣೆ ಮಾಡಿಕೊಂಡಿರುವುದೇ? ವೇದವ್ಯಾಸ ಉಪಾಧ್ಯನೊಬ್ಬನೇ ಆ ಬಡ ಸ್ತ್ರೀಯನ್ನೂ ಪವಿತ್ರರಾದ ಚಂಚಲನೇತ್ರ ಶ್ರೀಪಾದಂಗಳವರನ್ನೂ ದಣಿಸಬೇಕೆಂಬ ಆತುರದಿಂದ ಒದ್ದಾಡುವುದು ಒಂದು ಲೋಕೋಪಕಾರ ಕೃತ್ಯವನ್ನು ಮಾಡುವದಕ್ಕಲ್ಲ. ದ್ವೇಷವನ್ನು ಪೂರೈಸಿಕೊಳ್ಳುವದಕ್ಕಾಗಿರಬೇಕು. ಅವನು ಹೇಳುವ ದೂರು ವಿಹಿತವಾದರೆ ಒಬ್ಬನಾದರೂ ಸಾಕ್ಷಿ ಕೊಡಲಿಕ್ಕೆ ಮುಂದೆ ಬಾರದಿರನು. ಆದಕಾರಣ ಚಂಚಲನೇತ್ರರಾಗಲೀ ವಾಗ್ದೇವಿಯಾಗಲೀ ಕಲ್ಮಷರಹಿತರೆಂದೇ ಸಭೆಯವರೂ ಅಭಿಪ್ರಾಯ ಪಡಬೇಕಾಗಿರುತ್ತದೆ. ಸಭಾಸದರಲ್ಲಿ ಯಾರಾದರೂ ಇದಕ್ಕೆ ವಿರೋಧವಾದ ಭಾವನೆಯುಳ್ಳವರಾದರೆ ಈಗಲೇ ತಿಳಿದರೆ ಉತ್ತಮವಿತ್ತು. ನಾನು ಹೆಚ್ಚಿಗೆ ಹೇಳತಕ್ಕದ್ದಿಲ್ಲ."

ಬಾಲಮುಕುಂದಾಚಾರ್ಯನು ಪಡುವ ಅಭಿಪ್ರಾಯಕ್ಕೆ ತಾವು ಸರ್ವರೂ ಒಡಂಬಡುತ್ತೇವೆಂದು ಉಳಿದ ನಾಲ್ಕು ಆಚಾರ್ಯರೂ ಹೇಳಿದರು ತಮ್ಮ ಐಕಮತ್ಯವಾದ ಇತ್ಯರ್ಥವನ್ನು ಮಠಾಧಿಪತಿಗಳ ಪರಾಂಬರಿಕೆಗೆ ತರುವುದು ಮಾತ್ರ ಉಳಿದಿದೆ. ಸಭೆಯ ಕೆಲಸವೆಲ್ಲಾ ಮುಗಿಯಿತೆಂದು ಸಭಾಪತಿಯು ತಿಳಿಸಿದನು. ಮನಸ್ಸಿದ್ದರೆ ವೇದವ್ಯಾಸಉಪಾಧ್ಯನು ಮಠಾಧಿಪತಿಗಳ ಸಭೆಯ ಮುಂದೆ ಬರಬಹುದಾಗಿ ಅವನಿಗೂ ತಿಳಿಸೋಣಾಯಿತು. ಅವನು ಕೃಷ್ಣವದನನಾಗಿ ಹೊರವಂಟನು.

ಭೀಮಾಚಾರ್ಯನೂ ವೆಂಕಟಪತಿ ಆಚಾರ್ಯನೂ ಒಟ್ಟಿನಲ್ಲಿ ಚಂಚಲನೇತ್ರರ ಮಠಕ್ಕೆ ಹೋದರು. ಸಭೆಯ ತೀರ್ಮಾನವನ್ನು ವೆಂಕಟ ಪತಿ ಆಚಾರ್ಯನಿಂದ ತಿಳಿದು ಚಂಚಲನೇತ್ರರು ಸಂತೋಷಪಟ್ಟರು. ಭೀಮಾಚಾರ್ಯನು ಊರಿಗೆ ಹೋಗಲಿಕ್ಕೆ ಅಪ್ಪಣೆಯನ್ನು ಅಪೇಕ್ಷಿಸಿದನು. ಶ್ರೀಪಾದಂಗಳವರು ಅವನಿಗೆ ನೂರು ರೂಪಾಯಿ ಸಂಯುಕ್ತವಾದ ಫಲ ಮಂತ್ರಾಕ್ಷತೆಯನ್ನು ಕೊಟ್ಟು, ಮಠದ ಮೇಲೆ ಅಭಿಮಾನವಿಟ್ಟು ನಡೆದು ಕೊಳ್ಳಬೇಕಾಗಿ ಅಪ್ಪಣೆ ಕೊಟ್ಟರು. "ಕಿಂಕರನು ಆಜ್ಞಾಧಾರಕನೇ" ಎಂದು ಅಡ್ಡಬಿದ್ದು ಭೀಮಾಚಾರ್ಯನು ಮಠದಿಂದ ಹೊರಟು, ವಾಗ್ದೇವಿಯನ್ನು ಕಂಡನು. ಸಭೆಯಲ್ಲಿ ಆದ ಇತ್ಯರ್ಥದ ಸಮಾಚಾರವೆಲ್ಲಾ ಅವಳಿಗೆ ಮೊದಲೆ ತಿಳಿದಿತ್ತು. ಅವಳು ಆಚಾರ್ಯನ ಕಾಲಿಗೆ ಬಿದ್ದು, —"ತಮ್ಮ ಅನುಗ್ರಹ ದಿಂದ ಮರ್ಯಾದೆ ಉಳಿದರೂ ಇನ್ನು ಮುಂದೆ ಈ ಶತ್ರುಗಳ ಬಾಧೆಯು ತಪ್ಪಲಾರದಾದ್ದರಿಂದ ನನ್ನನ್ನು ಬಿಟ್ಟುಹಾಕಬಾರದು" ಎಂದು ಬೇಡಿ ಕೊಂಡಲ್ಲಿ ಭೀಮಾಚಾರ್ಯನು ಅವಳಿಗೆ ಖಂಡಿತವಾದ ಅಭಯಕೊಟ್ಟು, ಅವಳಿಂದ ಸತ್ಕರಿಸಲ್ಪಟ್ಟವನಾಗಿ ಇನ್ನು ಕೆಲವು ತಿಂಗಳಲ್ಲಿ ಬರುವೆನೆಂದು ವಾಗ್ದತ್ತಮಾಡಿ ಹೊರಟನು.

## ಇಪ್ಪತ್ತನಾಲ್ಕು

ಆಚಾರ್ಯರೆಲ್ಲರೂ ಅವರವರ ಊರಿಗೆ ಹೋಗಲಿಕ್ಕೆ ಅನುವಾದರೂ ಬಾಲಮುಕುಂದನು ತಾಮಸ ಮಾಡುತ್ತಿದ್ದನು. ಯಾಕಂದರೆ ತಮ್ಮಣ್ಣ ಭಟ್ಟನು ಪ್ರತಿಸಾಯಂಕಾಲ ಅವನನ್ನು ಕಂಡು ಅವನ ಭೇಟಿಯು ವಾಗ್ದೇವಿಗೆ ದೊರಕುವ ಉಪಾಯವನ್ನು ಸಫಲವಾಗಿ ನಡೆಸುತ್ತಾ ಬಂದನು. ಇವರಿಬ್ಬರ ಅನ್ಯೋನ್ಯ ಮಿತ್ರತ್ವವು ದಿನೇ ದಿನೇ ವೃದ್ಧಿಯಾಗುತ್ತಾ ಬಂದುದರಿಂದ ಅವರ ಅಗಲುವಿಕೆಯು ಶಾನೆ ಸಂಕಟಕರವಾಯಿತು. ಕೊನೆಗೆ ನಿರ್ವಾಹವಿಲ್ಲದೆ ಬಾಲಮುಕುಂದನು ಮನಸ್ಸನ್ನು ಗಟ್ಟಿ ಮಾಡಿ ಹೊರಟನು. "ಅನಾಥೆ ಯಾದ ನನ್ನನ್ನು ಸದಾ ರಕ್ಷಿಸು" ಎಂದು ವಾಗ್ದೇವಿಯು ಕಂಬನಿ ತುಂಬಿದ ಕಣ್ಣುಗಳಿಂದ ತನ್ನ ಪೂರ್ಣ ಮೋಹನ ಶಕ್ತಿಯನ್ನು ಅವನ ಮೇಲೆ ಪಸರಿದ ವೇಳೆಯಲ್ಲಿ ಬಾಲಮುಕುಂದನ ಹೃದಯವು ಬೆಣ್ಣೆಯಂತೆ ಕರಗಿತು. "ಒಡಲಲ್ಲಿ ಜೀವವಿರುವ ವರೆಗೆ ನೀನು ಮುಡಿದ ಹೂವು ಬಾಡದು, ಧೈರ್ಯವಾಗಿರು"

ಎಂದು ಅವಳನ್ನು ಸಂಪೂರ್ಣ ಮಮತೆಯಿಂದ ಸಂತೈಸಿ, ಅರೆ ಮನಸ್ಸಿನಿಂದ ಅವಳನ್ನು ಅಗಲಿ, ಕುಮುದಪುರದಿಂದ ತನ್ನ ಸಂಗಡಿಗರೊಡನೆ ಭೀಮಾಚಾರ್ಯನನ್ನು ಕರಕೊಂಡು ಮರಳಿದನು.

ವೇದವ್ಯಾಸ ಉಪಾಧ್ಯನು ಕಂಗೆಟ್ಟು ನರಳುತ್ತ ತನ್ನ ಅಪಜಯದ ವದಂತಿಯನ್ನು ಪತ್ನಿಗೆ ತಿಳಿಸಿದನು. ಆ ಪತಿವ್ರತೆಯ ಸಂತಾಪವು ಹೆಚ್ಚಿತು. "ಸಮರ್ಥರ ಮೇಲೆ ಸೊಂಟ ಕಟ್ಟಿದರೆ ಬಡವರಿಗೆ ಎಂದಾದರೂ ಜಯ ಸಿಕ್ಕುವದುಂಟೇ? ಈ ಗ್ರಹಿಕೆಯು ಮೊದಲೇ ಇಲ್ಲದೆ, ಶೂನ್ಯ ಬುದ್ಧಿಯಿಂದ ನಡೆದ ಕಾರ್ಯವು ಶೂನ್ಯವೇ ಆಯಿತು. ಆದರೂ ಪರಮಾತ್ಮನು ಕರುಣಾಳು; ಅವನನ್ನು ನೆಚ್ಚಿದವರನ್ನು ಬಿಡುವವನಲ್ಲ." ಇಂಥಾ ಜ್ಞಾನೋಕ್ತಿಗಳಿಂದ ಅವಳು ಗಂಡನನ್ನು ಸಮಾಧಾನ ಪಡಿಸಿದಳು. ಮಠಾಧಿಪತಿಗಳ ಸಭೆಯು ಹ್ಯಾಗೂ ಕೂಡಲಿಕ್ಕುಂಟು. ಆಗ ಇದರ ಅವಸಾನ ಹ್ಯಾಗಾಗುತ್ತೋ ನೋಡಬೇಕೆಂಬ ಆಶೆಯಿಂದ ವೇದವ್ಯಾಸ ಉಪಾಧ್ಯನು ಹೆಂಡತಿಯ ಅನುಮತಿಯಿಂದ ಹೊರಟನು.

ಆಚಾರ್ಯರೆಲ್ಲರೂ ಸ್ವಲ್ಪ ಮುಂದಾಗಿ ಹೊರಟರು. ವೇದವ್ಯಾಸ ಉಪಾಧ್ಯನು ಅವರ ಬೆನ್ನು ಹಿಡಿದನು. ಭೀಮಾಚಾರ್ಯಗೂ ಈತಗೂ ಸಂಭಾಷಣೆ ನಡಿಯಿತು.

ವೇದವ್ಯಾಸ—"ಆಚಾರ್ಯರೇ! ನನ್ನ ಮೇಲೆ ತಮಗೂ ವೈಮನಸ್ಸು ಉಂಟಾದ ಹಾಗೆ ತೋರುತ್ತೆ."

ಭೀಮಾಚಾರ್ಯ—"ಆಚಾರ್ಯರ ಸಭೆಯ ಮುಂದೆ ನಿನಗೆ ಬಂದ ಸಂಕಷ್ಟದಿಂದ ತಪ್ಪಿಸಿದ ಉಪಕಾರಕ್ಕೆ ಪ್ರತಿಯಾಗಿ ದೂರುತ್ತಿಯಾ? ಷೇ! ಕೃತಘ್ನನೇ, ಇಷ್ಟು ಕೊಳಕು ಮನಸ್ಸಿನವನಾದ ನಿನಗೆ ಜಯ ಹ್ಯಾಗೆ ದೊರಕುವದು?"

ವೇದವ್ಯಾಸ—"ನಾನು ತಮ್ಮನ್ನು ದೂರಿದೆನೇ? ತಾವು ನನ್ನ ಮೇಲೆ ಮುಂಚೆ ಇಟ್ಟ ಪ್ರೀತಿಯು ಈಗ ಕೊಂಚ ಕಡಿಮೆಯಾಯಿತೋ ಎಂಬ ಸಂದೇಹ ಹುಟ್ಟಿದ ಪ್ರಯುಕ್ತ ಹಾಗಂದೆ; ಸಿಟ್ಟು ಮಾಡಿಕೋಬ್ಯಾಡಿ."

ಭೀಮಾಚಾರ್ಯ—"ವೈಯುರಿಯುವ ಮಾತಿಗೆ ಸಿಟ್ಟು ಉಂಟೇ? ದೇವರು ಅವರವರ ಮನಸ್ಸಿನ ಸ್ಥಿತಿ ಪರೀಕ್ಷಿಸಿ ಅದಕ್ಕೆ ತಕ್ಕದಾಗಿ ಲಕ್ಷ್ಯವಿಡುತ್ತಾನೆ."

ವೇದವ್ಯಾಸ—"ಸೋತುಹೋದವನಿಗೆ ಎಲ್ಲವರೂ ಹೀನಿಸುವದು ಲೋಕರೂಢಿಯಷ್ಟೇ."

ಭೀಮಾಚಾರ್ಯ—"ನಿನ್ನೊಬ್ಬನ ಮಾತೇ ಪ್ರಮಾಣವೆಂದು ಸಭೆಯವರು ಚಂಚಲನೇತ್ರರನ್ನು ಅಪರಾಧಿಗಳಾಗಿ ನಿರ್ಣಯಿಸಬೇಕಿತ್ತೇನು?"

ವೇದವ್ಯಾಸ—"ಹಾಗೆ ಹೇಳ ಒಲ್ಲೆ. ಸಾಕ್ಷ ನುಡಿಯಲಿಕ್ಕೆ ನನ್ನ ಕಡೆಯಿಂದ ಯಾರು ಬರುವರು? ನಾನು ಕೇವಲ ಬಡವನು. ವೆಂಕಟಪತಿ ಆಚಾರ್ಯನೂ ತಿಪ್ಪಾಶಾಸ್ತ್ರಿಯೂ ಒಂದೇ ರಥದಲ್ಲಿ ಕೂತರೆಂಬಂತೆ ನನ್ನ ಕಡೆ ಸಾಕ್ಷಿಗಾರರಿಗೆಲ್ಲಾ ಹೆದರಿಸಿಯೋ ಲಂಚಕೊಟ್ಟೋ ವಿವಿಧ ರೀತಿಯಿಂದ ತಿರುಗಿಸಿಬಿಟ್ಟರು. ಮತ್ತೆ ನಾನೇನು ಬಡಕೊಳ್ಳಲೇ!"

ಭೀಮಾಚಾರ್ಯ—"ಒಡೆಯನ ಮರ್ಯಾದೆ ಕಾಯುವದು ಚಾಕರರ ಧರ್ಮವಲ್ಲವೇನು?"

ವೇದವ್ಯಾಸ—"ಹೌದಪ್ಪಾ; ಒಡೆಯನಿಗಿಂತಲೂ ಒಡತಿಯ ದಾಕ್ಷಿಣ್ಯ ಮುರಿಯುವ ಮಗನ್ಯಾರು? ನನ್ನ ಆಯುಷ್ಯ ತೀರುವ ತನಕ ನಾನು ಹೇಳಿಕೊಂಡರೂ ನನ್ನ ಮಾತಿಗೆ ಕಿವಿಗೊಡುವವರಿಲ್ಲ? ಅವಳಾದರೋ ಒಮ್ಮೆ ಕಡೆಗಣ್ಣಿನ ನೋಟದಿಂದ ನೋಡಿಬಿಟ್ಟರೂ ಸರಿ. ಅತ್ತು ಹೇಳಿಕೊಂಡರೂ ಸರಿ. ಅವಳ ಪಕ್ಷವನ್ನು ಹಿಡಿಯಲಿಕ್ಕೆ ತಾಮಸಮಾಡುವವನ್ಯಾರು? ಮುಖ್ಯ ಅವಳ ಸುಪ್ರಸನ್ನತೆಯನ್ನು ಗಳಿಸಿಕೊಂಡವನು ತ್ರಿಭುವನದಲ್ಲಿಯೂ ಧನ್ಯನೇ. ಸಾವಿರ ಮಾತ್ಯಾಕೆ?"

ಈ ಸಂಭಾಷಣೆಯು ಮುಂದುವರಿಯಲಿಕ್ಕೆ ಭೀಮಾಚಾರ್ಯನು ಬಿಡಲಿಲ್ಲ. ಯಾಕಂದರೆ ವೇದವ್ಯಾಸ ಉಪಾಧ್ಯನ ಮಾತಿನಲ್ಲಿ ದ್ವಯಾರ್ಥ ವಿದ್ದ ಹಾಗೆ ಅವನ ಮನಸ್ಸಿಗೆ ತೋಚಿತು. ತನ್ನ ಮೇಲೆ ಬಹುಶ ಈತಗೇನೋ ಅನುಮಾನ ಉಂಟಾಗಿಯದೆಂದು ಭೀಮಾಚಾರ್ಯನು ತಿಳುಕೊಂಡನು. ಇವರಿಬ್ಬರ ಸಂವಾದವನ್ನು ಕೇಳುತ್ತಿದ್ದ ಬಾಲಮುಕುಂದಾಚಾರ್ಯನು ತನ್ನ ಮೇಲೆ ವೇದವ್ಯಾಸಗೆ ಸಂಶಯ ಹುಟ್ಟಿಯದೆಂಬ ಹಾಗೆ ಗ್ರಹಿಸಿದನು. ಕಳ್ಳನ ಮನಸು ಕಳ್ಳಗೆ ನೋಯುವದೇನು ಆಶ್ಚರ್ಯ! ಹಾಗೂ ಹೀಗೂ ಐವರಾಚಾರ್ಯರೂ ಅವರ ಪರಿವಾರ ಜನರೂ ವೇದವ್ಯಾಸ ಉಪಾಧ್ಯನೂ ನೃಸಿಂಹಪುರಕ್ಕೆ ತಲಪಿದರು. ಆ ಮಠಾಧಿಪತಿಗಳಿಗೆ ಆಚಾರ್ಯರು ತಮ್ಮ ವಿಚಾರಣೆಯ ಫಲವನ್ನು ನಿವೇದಿಸಿದರು. ವೇದವ್ಯಾಸನು

ಸೋತ ಸಮಾಚಾರವು ಅವರ ಕಿವಿಗೆ ರಮ್ಯವಾಯಿತು. ಬೇರೆ ಮೂರು ಮಠಾಧಿಪರು ತಮ್ಮ ಮಠದಲ್ಲಿ ಒಟ್ಟುಕೂಡಿ ಆಲೋಚನೆಯಾದ ಮೇಲೆ ರಾಜದ್ವಾರದ ಪರವಾನೆಗೆ ಉತ್ತರ ಬರೆದುಕೊಳ್ಳುವದು ನ್ಯಾಯವಾದ ಕ್ರಮ ವೆಂಬ ಅಭಿಪ್ರಾಯವನ್ನು ಅವರಿಗೆ ಆವಾವ ಪಾರುಪತ್ಯಗಾರರ ಪರಿಮುಖ ತಿಳಿಸಿದಾಗ ಅವರು ಅದಕ್ಕೆ ಸಮ್ಮತಿಸಿ ನೃಸಿಂಹಪುರಕ್ಕೆ ತೆರಳಿದರು.

ನಾಲ್ಕು ಮಠದವರು ವೇದವ್ಯಾಸ ಉಪಾಧ್ಯನನ್ನು ಕರೆಸಿ, ತಮ್ಮ ಮುಂದೆ ನಿಲ್ಲಿಸಿಕೊಂಡು, ಬಾಲಮುಕುಂದಾಚಾರ್ಯನು ವಿವರಿಸಿದ ವೃತ್ತಾಂತ ವನ್ನೆಲ್ಲಾ ಸ್ವಸ್ಥ ಚಿತ್ತದಿಂದ ಅವಧರಿಸಿ, ಚಂಚಲನೇತ್ರರು ನಿರ್ದೋಷಿ ಗಳೆಂದೂ ವಾಗ್ದೇವಿಯ ಪಾತಿವ್ರತ್ಯ ನಿರಾನುಮಾನಕರವಾದ್ದೆಂದೂ ಇತ್ಯರ್ಥ ಮಾಡಿದರು. ಹಾಗೆಯೇ ನಯ ನುಡಿಯಿಂದ ಉತ್ತರವನ್ನು ಬರಸಿ ಮಠದ ಪದ್ಧತಿಗನುಸರಣೆಯಿಂದ ರಾಜನಿಗೆ ಆಶೀರ್ವಾದ ಸಹಿತ ಶ್ರೀಮುಡಿ ಗಂಧ ಪ್ರಸಾದ ಉತ್ಕೃಷ್ಟವಾದ ಉಚಿತಗಳೊಡನೆ ಮರ್ಯಾದೆಪೂರ್ವಕವಾಗಿ ಕಳುಹಿಸಿಕೊಟ್ಟರು. ರಾಜನು ಅವರ ತೀರ್ಮಾನವಲ್ಲಿ ಏಕೀಭವಿಸಿದನು.

ವೇದವ್ಯಾಸ ಉಪಾಧ್ಯನು ಮಾಡಿದ ಮನವಿಯು ಸ್ವತೇವ ಸುಳ್ಳೆಂದು ಕಂಡ ಮೇಲೆ ಅವನನ್ನು ಜಾತಿಯಿಂದ ತ್ಯಜಿಸಬೇಕೆಂದು ಕೆಲವು ಆಚಾ ರ್ಯರು ಆಲೋಚನೆ ಕೊಟ್ಟರು. ಆದರೆ ಅಂಥಾ ಕಠಿಣವಾದ ಶಿಕ್ಷೆಯನ್ನು ಕೊಡುವುದು ಉಚಿತವಲ್ಲ. ಅವನಿಗಾದ ಅಪಜಯವೇ ಅವನ ಹಾರಾಟ ವನ್ನು ನಿಲ್ಲಿಸಲಿಕ್ಕೆ ಸಾಕೆಂದು ಬಾಲಮುಕುಂದಾಚಾರ್ಯನು ಪಟ್ಟ ಅಭಿ ಪ್ರಾಯವು ಮಠಾಧಿಪತಿಗಳಿಗೆ ಸರಿಯಾಗಿ ಕಂಡುಬಂತು. ವೇದವ್ಯಾಸ ಉಪಾ ಧ್ಯನು ಮಾತ್ರ ಸುಮ್ಮಗಿರಲಿಲ್ಲ. ಅವನು ಅರಸುಗಳ ಒಡ್ಡೋಲಗಕ್ಕೆ ಪುನಃ ಇನ್ನೊಂದು ಮನವಿಯನ್ನು ಮಾಡಿದನು. ಇವನ ತಳ್ಳಿ ಇನ್ನು ಒಳ್ಳೇದಲ್ಲ ವೆಂದು ಮುಂಚಿನ ಸ್ನೇಹಿತರೂ ವಕೀಲರೂ ದೂರವಾದರು. ಸರಕಾರವಲ್ಲಿ ನಡೆದುಬರುವ ಕ್ರಮಕ್ಕನುಗುಣವಾಗಿ ಆ ಮನವಿಯು ವಿಮರ್ಶೆಗೆ ಇಡ ಲ್ಪಟ್ಟ ದಿನವನ್ನು ಕಾಣಿಸಿ ಮನವಿದಾರಗೆ ನಿರೂಪ ಕೊಡೋಣಾಯಿತು. ಅವನು ತೀರಾ ಸಹಾಯ ಹೀನನಾದ ದೆಸೆಯಿಂದ ಅಂದು ರಾಜದ್ವಾರಕ್ಕೆ ಹೋಗಲೇ ಇಲ್ಲ. ಮನವಿಯು ತಿರಸ್ಕರಿಸಲ್ಪಟ್ಟಿತು. ಮುಖ್ಯ ತಾತ್ಪರ್ಯ— ವೇದವ್ಯಾಸ ಉಪಾಧ್ಯಗೆ ಇತಿಶ್ರೀಯಾಯಿತು. ಇದನ್ನು ಅವನ ಪ್ರಾಣ ಸಖ ಭೀಮಾಚಾರ್ಯನು ಕೇಳಿ, ಮಲಿನ ಚಿತ್ತವುಳ್ಳ ಪುರುಷಗೆ ಇಂಥಾ

ಸೋಲು ಬರುವುದು ಚೋದ್ಯವಲ್ಲವೆಂದನು.

## ಇಪ್ಪತ್ತೈದು

ವೇದವ್ಯಾಸ ಉಪಾಧ್ಯನು ವೃಥಾ ಸರ್ಕಾರದ ವರೆಗೆ ಹೋಗಿ ಕಷ್ಟ ಪಟ್ಟೆನೆಂಬ ವಿಷಾದದಲ್ಲಿರುವಾಗ ಬಾಲಮುಕುಂದಾಚಾರ್ಯನು ಅವನನ್ನು ಕರೆಸಿ ಶಾಂತಿಪುರ ಮಠದಿಂದ ಸ್ಥಾಪಿಸೋಣಾದ ಸಂಸ್ಕೃತ ಪಾಠಶಾಲೆಯಲ್ಲಿ ಉಪಾಧ್ಯಾಯನಾಗಿ ನೇಮಿಸಿ ಪತ್ನಿ ಸಮೇತ ಅಲ್ಲಿಯೇ ವಾಸಿಸಿಕೊಂಡಿರಲಿಕ್ಕೆ ಅನುಕೂಲ ಮಾಡಿಕೊಟ್ಟನು. ಭೀಮಾಚಾರ್ಯನನ್ನು ಬಾಲಮುಕುಂದನು ಕೆಲವು ದಿವಸಗಳ ಪರಿಯಂತರ ತನ್ನಲ್ಲಿ ನಿಲ್ಲಿಸಿಕೊಂಡು ಔತಣಾದಿಗಳಿಂದ ತೃಪ್ತಿಪಡಿಸಿ ಊರಿಗೆ ಕಳುಹಿಸಿಕೊಟ್ಟನು. ಇವರೊಳಗಿನ ಸ್ನೇಹವು ಹೆಚ್ಚುತ್ತಾ ಬಂದುದರಿಂದ ಭೀಮಾಚಾರ್ಯನು ಆಗಾಗ್ಯೆ ಶಾಂತಿಪುರಕ್ಕೆ ಬರುವದೂ ಅವರಿಬ್ಬರೂ ಅಪರೂಪವಾಗಿ ಕುಮುದಪುರಕ್ಕೆ ಹೋಗಿ ಭೀಮಾ ಚಾರ್ಯನು ಬಹಿರಂಗವಾಗಿಯೂ ಬಾಲಮುಕುಂದನು ಗುಪ್ತವಾಗಿಯೂ ವಾಗ್ದೇವಿಯನ್ನು ಕಂಡು ಅವಳು ಅವರವರ ಮೇಲೆ ಇಟ್ಟ ಭಾವಕ್ಕನುಗುಣ ವಾಗಿ ಅವಳಿಂದ ಸತ್ಕಾರ ಪಡೆಯುವ ರೂಢಿಬಿತ್ತು. ಭೀಮಾಚಾರ್ಯನು ಚಂಚಲನೇತ್ರರ ಕೂಡೆ ಹೆಚ್ಚು ಬಳಿಕೆ ಮಾಡಿಕೊಂಡು ಅವರ ವಿಶ್ವಾಸಿಯಾ ದನು. ವೇದವ್ಯಾಸ ಉಪಾಧ್ಯನು ಮಾಡಿದ ಮನವಿಯ ಪ್ರಕರಣದಲ್ಲಿ ತಾವು ಜಯಿಸಿದೆವೆಂಬ ಸಂತೋಷದಿಂದ ಚಂಚಲನೇತ್ರರೂ ವಾಗ್ದೇವಿಯೂ ನಿತ್ಯವೂ ಪುಷ್ಟಿಯಾಗುತ್ತಾ ಬಂದರು.

ಆಬಾಚಾರ್ಯನಿಗೆ ಕೂಳಿನ ಪ್ರಸಂಗವಲ್ಲದೆ ಇನ್ನೊಂದು ಮನಸ್ಸಿಗೆ ಹತ್ತುವಹಾಗಿಲ್ಲ. ತಮ್ಮಣ್ಣ ಭಟ್ಟನೂ ಭಾಗೀರಥಿಯೂ ಮಗಳ ಪುಣ್ಯದಿಂದ ಸುಖವಲ್ಲಿದ್ದರು. ವೆಂಕಟಪತಿ ಆಚಾರ್ಯನು ತನ್ನ ಯಜಮಾನನಮೇಲೆ ಬಂದು ನಿವಾರಣೆಯಾದ ಸಂಕಷ್ಟ ಬಹು ಸಣ್ಣದು. ಇನ್ನು ಮುಂದೆ ಏನೇನ ನಾಂತಗ ಬರುವದೋ ಎಂಬ ದೀರ್ಘಾಲೋಚನೆಯಲ್ಲಿ ಕಾಲದ ಸಂಜ್ಞೆಗ ಳನ್ನು ನಿರೀಕ್ಷಿಸುತ್ತಾ ಇದ್ದನು. ವೇದವ್ಯಾಸ ಉಪಾಧ್ಯನ ಹೆಂಡತಿಯ ಚಿಂತೆಯು ರವಷ್ಟೂ ಕಡಿಮೆಯಾಗಲಿಲ್ಲಾ. ಶಾಂತಿಪುರ ಮಠದಲ್ಲಿ ಪತಿಗೆ ಜೀವನೋಪಾಯ ದೊರಕಿದ ಆನಂದವು ಅವನಿಗೆ ಬಂದ ಅನ್ಯಾಯವಾದ ಅಪಜಯದಿಂದ ಹುಟ್ಟಿದ ವ್ಯಾಕುಲದಿಂದ ಭಗ್ನವಾಯಿತು. ಬಹಿಷ್ಕಾರ

ದಲ್ಲಿದ್ದ ಶಿಷ್ಯರು ಚಂಚಲನೇತ್ರರಿಗೆ ಪಾದಾಕ್ರಾಂತರಾಗಿ ಅಪರಾಧವನ್ನು ಕೊಟ್ಟು ಶುದ್ಧಪತ್ರಿಕೆ ಪಡಕೊಂಡರು. ವಾಗ್ದೇವಿಯ ಮೇಲೆ ಕವನ ಕಟ್ಟಿದ ಕೆಲವು ದುರ್ಜನರು ಬಹು ಪ್ರಯಾಸದಿಂದ ಪ್ರಸೀತರಾದರು. ಆ ಮೇಲೆ ಅವರು ವಾಗ್ದೇವಿಯ ಮುಖವನ್ನು ಕಣ್ಣೆತ್ತಿ ನೋಡಲರಿಯದೆ ಲಜ್ಜಾಭಂಡ ರೆನ್ನಿಸಿಕೊಂಡರು. ತಿಪ್ಪಾಶಾಸ್ತ್ರಿಯು ವೆಂಕಟಪತಿ ಆಚಾರ್ಯನ ದೊಡ್ಡಮಿತ್ರ ನಾಗಿಯೂ ವಾಗ್ದೇವಿಯ ಮೆಚ್ಚಿನ ಜೋಯಿಸನಾಗಿಯೂ ಸುಖದಿಂದ ಕಾಲ ಕ್ಷೇಪ ಮಾಡಿಕೊಂಡಿದ್ದನು. ವೇದವ್ಯಾಸನು ಮಾಡಿದ ಗಡಿಬಿಡಿಯು ನಿರ ರ್ಥಕವಾದ ವರ್ತಮಾನ ಸಿಕ್ಕಿದಾಕ್ಷಣ ತಿಪ್ಪಾಶಾಸ್ತ್ರಿಯು ವಾಗ್ದೇವಿಯನ್ನು ಕಂಡು, ಏನೇ ವಾಗೀ! ನನ್ನ ಪ್ರವಾದ ನೆರವೇರಿತಷ್ಟೇ, ಎಂದಾಗ ನಿಮ್ಮ ಜೋತಿಷ್ಯ ಎಂದಾದರೂ ಸಟೆಯಾಗುವದುಂಟೇ, ಎಂದು ಅವಳು ಅವನನ್ನು ಹೊಗಳಿ ಕಾಫಿನೀರನ್ನೂ ರೊಟ್ಟಿಯನ್ನೂ ಯಥೇಚ್ಛಕೊಟ್ಟು ತನ್ನ ಕತಜ್ಞತೆ ಯನ್ನು ಸಮರ್ಪಿಸಿದಳು.

ಸಂತೋಷವೇ ಯೌವನ. ಯೌವನ ಕಾಲದಲ್ಲಿ ಸಂತೋಷವು ಪ್ರಾಪ್ತ ವಾದರೆ ಮತ್ತೆ ಹೇಳಲೇಕೆ? ಯೌವನವೂ ಸಂತೋಷವು ಒಗುಮಿಗೆಯಾಗಿ ವಾಗ್ದೇವಿಯಲ್ಲಿ ಪ್ರವರ್ಧಮಾನವಾಗಿ ಅವಳ ಮುಖ ಕಾಂತಿಯೂ ಅಂಗೋ ಪಾಂಗಗಳ ಪ್ರಫುಲ್ಲತೆಯೂ ಕೇವಲ ಜರೆ ಬಂದೊದಗಿದ ನರನ ಮನಸ್ಸಿಗೂ ಚಾಂಚಲ್ಯ ಉಂಟುಮಾಡುವವುಗಳಾದುವು. ನಿತ್ಯವೂ ಇವಳ ಮೈಸೊಬಗು ಆಬಾಲವೃದ್ಧರ ಕಣ್ಣಿಗೂ ರಂಜಿತವಾಗುತ್ತಾ ಬಂತು. "ಏನಪ್ಪಾ! ಇವಳನ್ನು ನೋಡಿಬಿಟ್ಟರೆ ರೋಮಾಂಚವಾಗುತ್ತದೆ." ಎಂದು ಕೆಲವರು ಹೇಳತೊಡಗಿ ದರು. "ಇವಳಿಗೆಲ್ಯಾರದೂ ದೃಷ್ಟಿ ತಗಲಿ ಒಂದಕ್ಕೊಂದು ಆಗಲಿಕ್ಕಿಲ್ಲವಷ್ಟೇ" ಎಂದು ಇನ್ನೂ ಕೆಲವರು ಹೇಳಿದರು. ಆದರೆ ಅನುಭವವುಳ್ಳ ಸ್ತ್ರೀಯರು ವಾಗಿಗೆ ಗರ್ಭೋತ್ಪತ್ತಿಯಾಗಿದೆ ಎಂದು ತೋರುತ್ತೆ. ಆಗಲಿ ಅಪ್ಪಾ, ಆಗಲೀ. ಚಿನ್ನದ ಹಾಗಿರುವ ಹುಡುಗಿ, ಬಲು ಮೋಹನಾಂಗಿ ಅವಳಲ್ಲಿ ಪುತ್ರೋತ್ಸವ ವಾಗಲಿ" ಎಂದು ಹೇಳಿದರು. ಭಾಗೀರಥಿಗೆ ಈ ಮರ್ಮವು ಮೊದಲೇ ಗೊತ್ತಾಗಿತ್ತು. ವಾಗ್ದೇವಿ ಅನಕ ತಾನು ಗರ್ಭಿಣಿಯಾದ ಹರುಷವನ್ನು ಅನು ಭವಿಸುವುದರಲ್ಲೇ ಬಿದ್ದಳು.

ಕೆಲವು ದಿನಗಳ ಪರಿಯಂತರ ನೆರೆಕೆರೆಯ ಸ್ತ್ರೀಯರು ಭಾಗೀರಥಿಯ ಬಿಡಾರಕ್ಕೆ ಬಂದು ವಾಗ್ದೇವಿಯನ್ನು ಕಂಡು ಊಟಪಾಠಗಳಲ್ಲಿ ಇಡಬೇಕಾದ

ಜಾಗ್ರತೆಯನ್ನು ತಿಳಿಸಿ ಅವಳನ್ನು ಹರಸಿದರು. ಭಾಗೀರಥಿಗೆ ವೀಳ್ಯದೆಲೆಯ ಖರ್ಚು ಸ್ವಲ್ಪ ಹೆಚ್ಚಾದರೂ ಸಮಯ ಕಳೆಯಲಿಕ್ಕೆ ಅನುಕೂಲವಾಯಿತು. ವಾಗ್ದೇವಿಯ ಇಷ್ಟಮಿತ್ರರೆಲ್ಲರೂ ಆವಳಿಗೆ ಗರ್ಭವಾದುದಕ್ಕಾಗಿ ಸಂತೋಷ ಪಟ್ಟರು. ಹೊಟ್ಟೆಕಿಚ್ಚಿನ ಹೆಂಗಸರು ಚಿಟುಕು ಮುರಿದರು. ವೆಂಕಟಪತಿ ಆಚಾರ್ಯನು ಈ ವಿದ್ಯಮಾನವನ್ನು ಹೆಂಡತಿಯ ಪರಿಮುಖ ತಿಳಿದು ತಲೆ ದೂಗಿದನು. ಮುಂದೆ ಅನರ್ಥಕ್ಕೆ ಹೇತು ಹುಟ್ಟುವ ಕಾಲವು ತಾನು ನಿರೀಕ್ಷಿ ಸಿದಂತೆಯೇ ಒಂತೆಂದು ಚಿಂತೆ ತಾಳಿದನು. ಚಂಚಲನೇತ್ರರು ಅದನ್ನು ಕೇಳಿ ದಾಗಲೇ ಭಯದಿಂದ ನಡುಗಿದರು. ಆದಿಯಲ್ಲಿ ವೆಂಕಟಪತಿ ಆಚಾರ್ಯನು ಹೇಳಿದ ಬುದ್ಧಿ ಮಾತುಗಳನ್ನು ತಿರಸ್ಕರಿಸಿದ್ದಲ್ಲವಾದರೆ ಮುಂದೆ ಅಪಖ್ಯಾತಿ ಬರುವ ಹಾಗಿತ್ತೇನು? ಈಗ ಪಶ್ಚಾತ್ತಾಪ ಪಡುವದು ಬರೇ ವ್ಯರ್ಥವೇ. ಹೀಗೆಂದು ಸ್ತಬ್ಧರಾದರು.

ಬಯಕೆ ಕೂಳಿನ ಗೌಜು ಹತ್ತಿತು. ಪ್ರಥಮತ ಗಂಡನ ಕಡೆಯಿಂದ ಸೀಮಂತಪ್ರಸ್ತವಾಗಬೇಕಷ್ಟೆ. ಅದಕ್ಕೆಬೇಕಾದ ಸನ್ನಾಹಗಳೆಲ್ಲ ವೆಂಕಟಪತಿ ಆಚಾರ್ಯನು ಮಾಡಿಕೊಟ್ಟನು. ಮುಹೂರ್ತವಿಟ್ಟ ದಿವಸ ಆಬಾಚಾರ್ಯನು ಜರಿ ಅಂಚಿನ ದೊಡ್ಡ ಧೋತ್ರ ಉಟ್ಟು ಗುಲಾಬಿ ಬಣ್ಣದ ರೇಷ್ಮೆ ಪಾಗು ಸುತ್ತಿಕೊಂಡು ಹೂವಿನ ಶಾಲು ಹೊದ್ದುಕೊಂಡು ಕೈಗೆ ತೋಳುಸರಿಗೆ ಬಾಜಿ ಬಂದ ಸೊಂಟಕ್ಕೆ ಚಿನ್ನದ ನೇವಳ ಕಿವಿಗೆ ಫಳಫಳನೆ ಹೊಳೆಯುವ ಗಾಳಿ ವಂಟಿ ಹತ್ತು ಬೆರಳುಗಳಿಗೂ ಉಂಗುರಗಳನ್ನು ಸೇರಿಸಿ ಇಷ್ಟಮಿತ್ರರ ಗಡಣ ದಲ್ಲಿ ಚೀನಿ ವಾದ್ಯ, ಊರು ವಾದ್ಯ, ಬ್ಯಾಂಡ್ ಇತ್ಯಾದಿ ಕರ್ಣರಂಜಕ ವಾದ್ಯ ಘೋಷದಿಂದ ದಿಬ್ಬಣಮಾಡಿಕೊಂಡು ಪ್ರಸ್ತದ ಚಪ್ಪರಕ್ಕೆ ಬಂದನು. ಅಲ್ಲಿ ಹೆಂಗಸರು ಗುಂಪು ಕೂಡಿರುತ್ತಿದ್ದರು. ಮುಹೂರ್ತವು ತಪ್ಪಿ ಹೋಗ ದಂತೆ ನೇಮಿಸಲ್ಪಟ್ಟಗಳಿಗೆಯಲ್ಲಿ ಮದವಳತಿಯ ಶಿರದಲ್ಲಿ ಪುಷ್ಪವನ್ನು ಇಟ್ಟು ಕಟ್ಟು ಕಟ್ಟಳೆ ಲೋಪವಿಲ್ಲದೆ ನಡೆಸಿದರು. ಗಂಡ ಹೆಂಡರಿಗೆ ಆರತಿ ಎತ್ತಿ ದರು. ಈ ಸಂಭ್ರಮವನ್ನು ನೋಡಲಿಕ್ಕೆ ಬಂದ ಅನೇಕರು "ಆಬಾಚಾರ್ಯನು ಒಂದು ಲೆಕ್ಕದಲ್ಲಿ ಪುಣ್ಯವಂತನೇ ಸರಿ" ಎಂದರು. ಇಷ್ಟು ಒಳ್ಳೆಯ ಗಂಡನು ಸಿಕ್ಕಬೇಕಾದರೆ ಹೆಂಡತಿಯು ಹದಿನಾಲ್ಕು ವರುಷ ತಪಸ್ಸು ಮಾಡಬೇಕಾ ಗುವದೆಂದು ಮತ್ತೆ ಕೆಲವರೆಂದರು. ಅವರವರಿಗೆ ಬೇಕಾದ ಹಾಗೆ ಹಲವರು ಆಡಿಕೊಂಡರು. ಊಟಕ್ಕೆ ಎಲೆಹಾಕಿತು. ಷಡ್ರಸಾನ್ನ ಭೋಜನ ಬಗೆಬಗೆಯ

ಕಜ್ಜಾಯಗಳನ್ನೂ ಸಕ್ಕ್ರೆ ಭಕ್ಷ್ಯಗಳನ್ನೂ ಯಥೇಷ್ಟವಾಗಿ ಬಳಸಿದರು. ಉಂಡವರೆಲ್ಲಾ ಸಂಪೂರ್ಣ ತೃಪ್ತಿಹೊಂದಿ ಗರ್ಭಿಣಿಯು ಸುಖಮುಖಿಯಾಗಿ ಗಂಡು ಬಾಲನನ್ನು ಹೆರಲೆಂದು ಆಶೀರ್ವದಿಸಿ ಹೊರಟರು. ಅಬಾಚಾರ್ಯನ ಸ್ನೇಹಿತರಲ್ಲಿ ಗುಪ್ತ ಕುಚೋದ್ಯಗಾರ ಶ್ರೀನಿವಾಸನೆಂಬ ಹುಡುಗನು— "ಆಚಾರ್ಯರೇ, ತಮ್ಮ ಪುಣ್ಯ ಬೇಗನೇ ಮಗನನ್ನು ಹೆಗಲ ಮೇಲೇರಿಸಿಕೊಂಡು ಕುಣಿದಾಡುವ ಸುಖವು ತಮಗೆ ಸಿಕ್ಕುವುದು." ಎಂದು ಹಲ್ಲುಕಿರಿದನು. ಅದೇನು ಅದ್ಭುತವೇ? ಪ್ರಪಂಚದಲ್ಲಿ ನಡಿಯುವವಾಡಿಕೆಯಲ್ಲವೇ? ಎಂದು ಅಬಾಚಾರ್ಯನು ಹಾಸ್ಯವದನ ಮಾಡಿದನು. ಈ ವಿನೋದಕರವಾದ ಹಗಲು ಗಂಡನ ಅಂದಿನ ಶೃಂಗಾರವನ್ನು ನೋಡಿ ಅನೇಕ ಹೆಂಗಸರೂ ಗಂಡಸರೂ ಮನಸ್ಸಿನಲ್ಲಿಯೇ ನಕ್ಕು ಹಾಸ್ಯಮಾಡಿದರು.

ಗಂಡನ ಲೆಕ್ಕದ ಸೀಮಂತವಾದ ಮೇಲೆ ತಂದೆ ತಾಯಿಗಳು ಮಗಳಿಗೆ ಆದಷ್ಟು ಆಡಂಬರದಿಂದ ದಿವ್ಯವಾದ ಬಯಕೆಯ ಕೂಳು ಹಾಕಿದರು. ಬಳಿಕ ನೆಂಟರಿಷ್ಟರು ನೆರೆಕೆರೆಯವರು ವಾಗ್ದೇವಿಯ ಗೌರವಕ್ಕೆ ಯೋಗ್ಯವಾದ ಔತಣಕೊಟ್ಟು, ಶೀರೆ ಕುಪ್ಪಸ ಉಡುಗೊರೆ ಮಾಡಿ ಅವಳ ಪ್ರೀತಿಯನ್ನು ಗಳಿಸಿಕೊಂಡರು. ವೆಂಕಟಪತಿ ಆಚಾರ್ಯನು ತನ್ನ ಒಡತಿಯನ್ನು ಪತ್ನಿಯ ಪರಿಮುಖ ಮನೆಗೆ ಕರೆಸಿ, ನೂರಾರು ರೂಪಾಯಿ ವೆಚ್ಚಮುಟ್ಟಿಸಿ, ದಿವ್ಯ ಔತಣದಿಂದ ಸಂತೃಪ್ತಿಪಡಿಸಿ, ಊಚುತರದ ವಸ್ತ್ರಾಲಂಕಾರವನ್ನು ಉಚಿತವಾಗಿಕೊಟ್ಟು, ತಕ್ಕೈಸಿದನು. ಮಠದ ಹಂಗೀಕರೆಲ್ಲರೂ ಅವಳನ್ನು ಯಥಾನುಶಕ್ತಿ ಉಪಚಾರಗಳಿಂದ ಮಾನಿಸಿದರು. ತಿಪ್ಪಾಶಾಸ್ತ್ರಿಯು ಇಪ್ಪತ್ತು ಬಗೆಯ ಪಲ್ಯ, ಎರಡು ಬಗೆ ಹುಳಿ, ಎರಡು ಬಗೆ ತೊವೆ. ನಾಲ್ಕು ಬಗೆ ಸಾರು, ಲೆಕ್ಕ ಮಿತಿ ಇಲ್ಲದ ಸಕ್ಕ್ರೆ ಭಕ್ಷ್ಯ, ಚಿತ್ರಾನ್ನ, ಕೇಸರಿಭಾತ್, ವಿವಿಧ ಕಜ್ಜಾಯ, ಐದು ಬಗೆಯ ಪಾಯಸ, ಯಳಚಿತ ನಣ್ಣಕ್ಕಿ ಅನ್ನ ಇತ್ಯಾದಿ ಸ್ವಾದವುಳ್ಳ ಪಕ್ವಗಳಿಂದ ತನ್ನ ಬಾಲಾಪ್ಯದ ಗೆಳತಿಯನ್ನು ದಣಿಸಿದನು. ಅವನು ಮಾಡಿದ ಉಡುಗೊರೆಯು ಸಾಮಾನ್ಯವಾದುದಲ್ಲ. ಸೀಮಂತ ಪ್ರಸ್ತವಾದಂದಿನಿಂದ ಪ್ರಸೂತವಾಗುವ ದಿನದ ಪರಿಯಂತ ಅವಳಿಗೆ ಔತಣಕ್ಕೆ ಕರೆಬರುವ ಚಂದ ನೋಡಿ ನಾಕಾಯಿತು. ಗರ್ಭವತಿಯ ಔತಣದ ಹೇತುವಿನಿಂದ ಅನೇಕ ಸ್ತ್ರೀಯರು ಅವಳ ಸಂಗಡ ಹೊಟ್ಟೆ ತುಂಬಾ ಉಂಡು ದಣಿದರು. ಶ್ರೀಪಾದಂಗಳವರು ದಿನೇ ದಿನೇ ವಾಗ್ದೇವಿಯ ಗರ್ಭಧಾರಣೆಯ

ಕುರಿತು ಚಿಂತಾಕ್ರಾಂತರಾದರೂ ಕೊನೆಗೆ ವ್ಯಸನಪಡುವುದು ಹುಚ್ಚುತನ ವೆಂದು ನೆನೆಸಿ, ಅವಳ ಮನಸಾಭೀಷ್ಟವನ್ನು ದೇವರು ಪೂರೈಸಲೆಂದು ಶುದ್ಧ ಮನಸ್ಸಿನಿಂದ ದೇವರನ್ನು ಬೇಡಿಕೊಂಡರು.

## ಇಪ್ಪತ್ತಾರು

ಗರ್ಭಿಣಿಗೆ ಊಟ ಉಪಚಾರ ಮಾಡಬೇಕೆಂಬ ಅರ್ತಿಯುಳ್ಳವರೆಲ್ಲರ ಲ್ಲಿಯೂ ಔತಣಕ್ಕೆ ಸಂದರ್ಭವಾಗಲಿಲ್ಲ. ಪ್ರಸೂತಕಾಲವು ಬಂದೊದಗಿತು. ಪ್ರಥಮ ಗರ್ಭವಾದ್ದರಿಂದ ಹೆಚ್ಚು ಜಾಗ್ರತೆ ತಕ್ಕೊಳ್ಳುವ ಅವಶ್ಯವಾಯಿತು. ಹೆಸರು ಹೋದ ಸೂಲಗಿತ್ತಿ ಸುಬ್ಬು, ತಿಮ್ಮು, ಅಕ್ಕುಮುಂಡಿ ಇವರನ್ನು ಮುಂದಾಗಿ ಕರೆಸಿಕೊಂಡು, ಭಾಗೀರಥಿಯು ಲವಮಾತ್ರ ಸಾವಕಾಶವಿಲ್ಲದೆ ಬಾಣಂತಿಗೆ ಅವಶ್ಯವಾಗುವ ವಿಶಿಷ್ಟ ಔಷಧಗಳನ್ನೂ ಬೇರೆ ಸನ್ನಾಹಗಳನ್ನೂ ಒದಗಿಸಿಟ್ಟುಕೊಂಡಳು. ಹನ್ನೆರಡು ಗಂಟೆ ತೋಪಿಗೆ ಸರಿಯಾಗಿ ಸಮಯ ವನ್ನು ತಿದ್ದಿಟ್ಟ ಗಡಿಯಾರವನ್ನು ಒಂದು ಕೈಯಲ್ಲಿ ಹಿಡಿದುಕೊಂಡು ನೋಡುತ್ತಾ, ಇನ್ನೊಂದು ಕೈಯಿಂದ ಹುರಿಗಡ್ಲೆಕಾಳು ಒಂದೊಂದೇ ಬಾಯಿ ಯೊಳಗೆ ಹಾಕಿಕೊಳ್ಳುತ್ತಾ ಆಬಾಚಾರ್ಯನು ಹೊರಗೆ ಕೂತುಕೊಂಡನು. ಶಿರೋದಯವಾಯಿತೆಂದು ಒಳಗೆ ಬಟ್ಲು ಬಡೆದ ಶಬ್ದದಿಂದ ತಿಳಿದಾಕ್ಷಣ ಅವನು ಗಡಿಯಾರದ ಸಮಯವನ್ನು ಒಂದು ಕಾಗದದ ಚೂರಿನಲ್ಲಿ ಬರೆ ದಿಟ್ಟುಕೊಂಡು, ಮರೆಯದೆ ಅದನ್ನು ತಿಪ್ಪಾಶಾಸ್ತ್ರಿಯ ಕೈಯಲ್ಲಿ ಕೊಟ್ಟನು ಕೂಸು ಗಂಡೋ ಹೆಣ್ಣೋ ಎಂದು ತಿಳಿಯುವದಕ್ಕೋಸ್ಕರ ಆಬಾಚಾ ರ್ಯನು ಸೂತಿಕಾ ಗ್ರಹದ ಬಾಗಿಲಲ್ಲಿ ನಿಂತು, ಪ್ರಧಾನ ಸೂಲಗಿತ್ತಿ ಸುಬ್ಬು ವನ್ನು ವಿಚಾರಿಸಿದನು. ಮಗುವು ಅಳುವ ಸ್ವರಪರೀಕ್ಷೆಯಿಂದ ತಿಳಿಯುವಷ್ಟು ಬುದ್ಧಿ ತಮಗಿಲ್ಲವೇನೆಂದು ಅಡ್ಡ ಪ್ರಶ್ನೆಮಾಡಿದಾಗ ಅಚಾರ್ಯಗೆ ಸ್ವಲ್ಪ ನಾಚಿಗೆಯಾಗಿ ಅದೆಲ್ಲ ನಾನು ಚೆನ್ನಾಗಿ ಬಲ್ಲೆ ಎಂದು ಸುಮ್ಮಗೆ ಹೊರಗೆ ಹೋದನು. ಎರಡು ಮೂರು ದಿನಗಳಮೇಲೆ ಮಗುವಿಗೆ ಮೀಸುವ ಸಮ ಯದಲ್ಲಿ ಗಂಡು ಕೂಸನ್ನು ನೋಡಿ ಹೆಣ್ಣು ಹುಟ್ಟಿರಬೇಕೆಂದು ತಾನು ಮೊದಲು ಭಾವಿಸಿದ್ದು ತಪ್ಪೆಂದು ಅವನಿಗೆ ಗೊತ್ತಾಯಿತು.

ವೃದ್ಧಿಸೂತಕ ನಿವಾರಣೆಯಾಗಿ ಹನ್ನೆರಡನೇ ದಿನ ಶಿಶುವಿಗೆ ಕಿವಿ ಚುಚ್ಚಿ ತೊಟ್ಟಿಲಲ್ಲಿ ಹಾಕಿ ಜಾತಕ ಕರ್ಮವನ್ನು ತೀರಿಸಿದರು. ಭಾನುವಾರ

ಹುಟ್ಟಿದ ಹುಡುಗನಾದ ಕಾರಣ ಸೂರ್ಯನಾರಾಯಣನೆಂಬ ಹೆಸರಿಟ್ಟರು. ಮಗುವಿನ ಸೌಂದರ್ಯ ನೋಡಿದವರೆಲ್ಲರೂ ಉಲ್ಲಾಸಪಟ್ಟರು. ವಾಗ್ದೇವಿಗೂ ಭಾಗೀರಥಿಗೂ ತಮ್ಮಣ್ಣಭಟ್ಟಗೂ ಆ ಕೂಸು ಅಂಗೈ ಮೇಲಿನ ಲಿಂಗವೆಂಬಂತಾಯಿತು. ಅರೆ ಗಳಿಗೆಯಾದರೂ ಅದನ್ನು ಕೆಳಗೆ ಇಳಿಸಿದವರಿಲ್ಲ. ಆಬಾಚಾರ್ಯನು ಅದನ್ನು ಮರೆಯದೆ ಪ್ರತಿ ನಿತ್ಯವೂ ಸ್ವಲ್ಪ ಹೊತ್ತು ಆಡಿಸುವದಿತ್ತು. ಆ ಮನಮೋಹನ ಪಿಂಡವನ್ನು ನೋಡಿ ಚಂಚಲನೇತ್ರರ ಹೃದಯದಲ್ಲಿ ಪ್ರೇಮರಸ ಉತ್ಪನ್ನವಾಯಿತು. ದೇವರಿಂದ ಆಯುಷ್ಯ ಪಡೆದು ಜನ್ಮಕ್ಕೆ ಬಂದ ಹುಡುಗನಾದರೆ ಅವನು ತನ್ನ ಉತ್ತರಾಧಿಕಾರಿಯಾಗಲಿಕ್ಕೆ ಯೋಗ್ಯನೇ ಎಂದು ಅವರು ಬಾಯಿಬಿಟ್ಟು ವಾಗ್ದೇವಿಗೆ ಹೇಳಿದರು. ಮಗುವಿನ ಪರಾಂಬರಿಕೆಯನ್ನು ವಾಗ್ದೇವಿಯು ಜತನದಿಂದ ತಕ್ಕೊಂಡದ್ದರಿಂದ ಅದು ಬೇಗನೆ ದೇಹಪುಷ್ಟಿಹೊಂದಿ ಪೂರ್ಣಿಮಿ ಚಂದ್ರನಂತೆ ವಿರಾಜಿಸಿತು. ಅದಕ್ಕೆ ಆ ಪಾದ ಮಸ್ತಕ ಪರಿಯಂತರ ಚಿನ್ನಾಭರಣಗಳಿಂದ ತುಂಬಿದರು. ದೃಷ್ಟಿ ತಾಗದ ಹಾಗೆ ಅದರ ಎರಡು ಗಲ್ಲಗಳಿಗೂ ಹಣೆಗೂ ಕಜ್ಜಲದ ಬೊಟ್ಟುಗಳನ್ನು ಇಟ್ಟರೆ ಅದರ ಸೌಂದರ್ಯವು ಮತ್ತಷ್ಟು ಅರಳುವದು. ಬಾಲಲೀಲೆಯಿಂದ ಸರ್ವರಿಗೂ ಅದು ಮಂಜುಲವಾಯಿತು. ಅದನ್ನು ಎತ್ತಿಕೊಂಡು ತಿರುಗಲಿಕ್ಕೆ ಒಬ್ಬನಾದರೂ ಹೇಸನು. ಅದರ ಸರ್ವಾಂಗಗಳು ಅಷ್ಟು ನಿರ್ಮಲವಾಗಿದ್ದವು!

ವಾಗ್ದೇವಿಗೆ ಪುತ್ರೋತ್ಪತ್ತಿಯಾದ ಒಸಗೆ ವೇದವ್ಯಾಸ ಉಪಾಧ್ಯಗೆ ಸಿಕ್ಕಿತು. ಚಂಚಲನೇತ್ರರನ್ನು ಪೀಡಿಸಲಿಕ್ಕೆ ಇನ್ನು ಹೆಚ್ಚು ಪ್ರಯಾಸವಿರದೆಂದು ಅವನಿಗೆ ಕೊಂಚ ಧೈರ್ಯಬಂತು. ಬಾಲಮುಕುಂದಾಚಾರ್ಯನು ಜನನದ ಸುವಾರ್ತೆಯನ್ನು ಕೇಳಿ, ಪುಳಕಿತನಾಗಿ ಭೀಮಾಚಾರ್ಯನ ಒಟ್ಟಿನಲ್ಲಿ ಕುಮುದಪುರಕ್ಕೆ ಹೋಗಿ ವಾಗ್ದೇವಿ ಪುತ್ರನ ದರ್ಶನ ಮಾಡಿ ಮಗುವಿಗೆ ಅಮೂಲ್ಯವಾದ ಪದಕ ಉಳ್ಳ ಸರವನ್ನು ಕೊಟ್ಟನು ಭೀಮಾಚಾರ್ಯನು ವಾಗ್ದೇವಿಯನ್ನು ನೋಡಿ ತುಂಬಾ ಸಂತೋಷಪಟ್ಟು ನಕ್ಕನು. "ಸುಪುತ್ರನೊಬ್ಬನೇ ನಾಕು." "ಏಕೋಪಿ ಗುಣವಾನ್ ಪುತ್ರೋ ನಿರ್ಗುಣೇನ ಶತೈರಪಿ ಏಕಚಂದ್ರ ಜಗಜ್ಜ್ಯೋತಿ ನಕ್ಷತ್ರಂ ಕಿಂ ಪ್ರಯೋಜನಂ." ಈ ವಚನವನ್ನು ಕೇಳರಿಯೆಯಾ? ಎಂದು ವಾಗ್ದೇವಿಗೆ ಕೇಳೋಣ ತಮ್ಮ ಆಶೀರ್ವಾದ ಕಟಾಕ್ಷದಿಂದ ಹಸುಳೆ ಪೂರ್ಣಾಯುವಾಗಲೆಂದಳು. ಅನುಮಾನ ಪಡಬೇಡ

ಶ್ರೀಪಾದಂಗಳವರ ಪ್ರಭಾವದಿಂದ ಈ ಹುಡುಗನು ಪ್ರತಾಪಿ ಪುರುಷನಾಗುವನು. ಅವನ ಪರಾಂಬರಿಕೆಯನ್ನು ಚೆನ್ನಾಗಿ ಮಾಡೆಂದು ಬುದ್ಧಿಹೇಳಿ ಭೀಮಾಚಾರ್ಯನು ವಾಗ್ದೇವಿಯ ಮುಖವನ್ನೇ ನೋಡಲು ಅವಳು ಗಹಗಹಿಸಿ ನಕ್ಕಳು. ಅಷ್ಟರಲ್ಲಿ ನಾಲಗಾರರ ತಗಾದೆ ಜೋರಾಗಿಯದೆ ಎಂದು ಮಗ ನಾಗನಾಥನ ಕಾಗದಗಳು ಟಾಕೋಟಾಕ್ ಬಂದು ತಲ್ಪಿದ್ದರಿಂದ ಹೆಚ್ಚು ದಿವಸ ತಾಮಸ ಮಾಡಲಿಕ್ಕಾಗದೆ ಆಚಾರ್ಯನು ಊರಿಗೆ ಮರಳಿದನು. ಹೋಗುವ ಸಮಯ ಅವನು ಚಂಚಲನೇತ್ರರನ್ನು ಕಂಡನು. ಅವರು ಸಂತೋಷಪಟ್ಟು ಸ್ವಲ್ಪ ಹಣವನ್ನು ದಕ್ಷಿಣೆರೂಪವಾಗಿ ಕೊಟ್ಟು ಮನ್ನಣೆ ಮಾಡಿದರು. ಏವಂಚ ವಾಗ್ದೇವಿಯ ಬಾಲನನ್ನು ನೋಡಲಿಕ್ಕೆ ಬಂದುದರಿಂದ ಭೀಮಾಚಾರ್ಯಗೆ ಕೊಂಚ ಲಾಭವೇ ಸಿಕ್ಕಿತು. ಹುಡುಗನು ಲಕ್ಷಣವಂತನೆಂದು ಅವನ ಮನಸ್ಸಿಗೆ ಹೋಯಿತು.

ಕ್ಲಪ್ತವಿರುವ ಕಾಲಾಂತರದಲ್ಲಿ ಮಗುವಿಗೆ ಅನ್ನಪ್ರಾಶನ ಪ್ರಸ್ತವನ್ನು ಮಾಡಿದರು. ಶಾನೆ ಮಂದಿಗೆ ಚಲೋ ಭೋಜನ ದೊರಕಿತು. ಚಂಚಲನೇತ್ರರ ಭಂಡಾರದಲ್ಲಿ ಏನು ಕಡಿಮೆ? ಸಾವಿರಾರು ಜನರಿಗೆ ಅನ್ನಶಾಂತಿಯಾಗುತ್ತಲೇ ವಾಗ್ದೇವಿಯ ಪುತ್ರನು ದೀರ್ಘಾಯು ಆಗಲೆಂದು ಮನಃಪೂರ್ತಿಯಾಗಿ ಆಶೀರ್ವಾದ ಮಾಡಿ ಬ್ರಾಹ್ಮಣರು ಅವನ ಗುಣಗಳನ್ನು ವರ್ಣಿಸುತ್ತಾ ತಮ್ಮ ಮನೆಗಳಿಗೆ ತೆರಳಿದರು. ವಾಗ್ದೇವಿಯು ಭಾಗೀರಥಿಯೂ ಮಾಡಿದ ಪರಾಮರ್ಶದಿಂದ ಸೂರ್ಯನಾರಾಯಣನು ಬೇಗ ಬೆಳೆದನು. ಸರಿಯಾದ ಪ್ರಾಯದಲ್ಲಿ ಕೇಶ ಛೇದನ ವಿಧಿಯು ಆಯಿತು. ಆ ಕಾಲದಲ್ಲಿ ಇಷ್ಟಮಿತ್ರ ಭಾಂಧವರು ಬೇಕಾದ ಉಡುಗೊರೆಗಳನ್ನು ಹುಡುಗಗೆ ಕಳುಹಿಸಿ ಕೊಟ್ಟರು. ತರುವಾಯ ವಿದ್ಯಾಭ್ಯಾಸಕ್ಕೆ ಮುಹೂರ್ತ ಮಾಡಿತು. ವಿದ್ಯೆಯು ಅವನಿಗೆ ಬಹು ಬೇಗ ಹತ್ತುವದಾಯಿತು. ಆಲಸ್ಯವಿಲ್ಲದೆ ಶಾಲೆಗೆ ಹೋಗುವದೂ ತನ್ನ ಪಾಠಗಳನ್ನು ಚೆನ್ನಾಗಿ ಕಲಿಯುವದೂ ಉಪಾಧ್ಯಾಯರಿಗೂ ಹೆತ್ತವರಿಗೂ ವಿಧೇಯನಾಗಿ ನಡಕೊಳ್ಳುವದೂ ಅವನ ಪ್ರಮುಖ ಲಕ್ಷಣಗಳಾಗಿದ್ದುವು. ಸತ್ಯಶೀಲನೂ ಧೈರ್ಯಶಾಲಿಯೂ ಸ್ನೇಹಾಭಿಮಾನಿಯೂ ಆಗಿರುವ ದೆಸೆಯಿಂದ ಅವನನ್ನು ಮೆಚ್ಚದವರು ಬಹು ಕಡಿಮೆ. ಅವನ ಸದ್ಗುಣಗಳೆಲ್ಲ ಅನುದಿನ ವೃದ್ಧಿಯಾಗಿ ಪೂರ್ಣತ್ವ ಹೊಂದಿ ಪುರಜನರ ಮನಸ್ಸನ್ನು ಅವನ ಕಡೆಗೆ ಆಕರ್ಷಣಮಾಡಿಕೊಂಡವು. ಇವನೇ ದ್ವಿತೀಯ ಸೂರ್ಯನೆಂದು

ಹಲವರು ಅವನಿಗೆ ಹೊಗಳುವರು. ಒಂಬತ್ತನೇ ವರುಷದಲ್ಲಿ ಅವನಿಗೆ ಬ್ರಹ್ಮ ಪ್ರತಿಷ್ಠೆಗೆ ಮುಹೂರ್ತ ನೋಡಿತು. ಆಚಾರ್ಯನು ಈ ಶುಭಕಾರ್ಯಕ್ಕೆ ಅಭಿಮಂತ್ರಣ ಪತ್ರಗಳನ್ನು ಬರೆದು ಊರೂರಿಗೆ ಕಳುಹಿಸಿದನು. ಒಂದು ಪತ್ರಿಕೆ ವೇದವ್ಯಾಸ ಉಪಾಧ್ಯಗೂ ಇತ್ತು.

ವೇದವ್ಯಾಸ ಉಪಾಧ್ಯನು ಅಭಿಮಂತ್ರಣ ಪತ್ರಿಕೆಯನ್ನು ಹಿಡಕೊಂಡು ಒಬ್ಬರ ಕೂಡೆಯೂ ಆಲೋಚನೆ ಕೇಳದೆ ರಾಜನ ದರ್ಬಾರಿಗೆ ಹೋಗಿ, ಮತ್ತೊಂದು ಮನವಿಯನ್ನು ಕೊಟ್ಟನು. ಅದನ್ನು ಕಿರೀದಿವಾನರು ನೋಡಿ ಮಠಾಧಿಪತಿಗಳಿಂದ ನಿವೃತ್ತಿ ಪಡಕೊಳ್ಳಬೇಕೆಂದು ತಿರುಗಿ ಕೊಟ್ಟರು. ಅದನ್ನು ಹಿಡಕೊಂಡು ಪ್ರಥಮತಃ ತಾನು ನಡಕೊಂಡ ರೀತಿಯಲ್ಲಿ ನೃಸಿಂಹ ಪುರ ಮೊದಲುಗೊಂಡು ಶಾಂತಿಪುರ ಮಠದ ಪರಿಯಂತರ ನಡೆದಾಡಿ ಆಯಾ ಸನ್ಯಾಸಿಗಳಿಗೆ ತೋರಿಸಿದನು. ಅವರು ಅದನ್ನು ಮನ್ನಿಸಲಿಲ್ಲ. ಇಂಥ ಹಟವನ್ನು ಸಾಧಿಸುವದರಿಂದ ಕ್ಷೇಮ ಸಿಕ್ಕದು ಸುಮ್ಮನಿರೆಂದು ಬಾಲಮುಕುಂದಾಚಾರ್ಯನು ಬಹುತರದಲ್ಲಿ ಬೋಧಿಸಿದನು. ವೇದವ್ಯಾಸ ಉಪಾಧ್ಯನು ಕೇಳದೆ ಹೋದನು. 'ಪ್ರಾಣತ್ಯಾಗವಾದರೂ ಮಾಡುವೆನು; ಛಲ ಪೂರೈಸದಿರಲಾರೆನು' ಎಂದು ಖಂಡಿತವಾಗಿ ಪ್ರತಿವಚನ ಕೊಟ್ಟ ಸಂಬಂಧ ಬಾಲಮುಕುಂದಾಚಾರ್ಯಗೆ ರೇಗಿತು. ಒಡನೆ ಅವನು ಹರಿಪದಾಂಬುಜತೀರ್ಥರಿಗೆ ಈ ಸಿದ್ಧಮಾನವನ್ನು ತಿಳಿಸಿದನು. ಅವರಿಗೂ ಸಿಟ್ಟು ಬಂದು ಇನ್ನೊಮ್ಮೆ ಅವನನ್ನು ಎಚ್ಚರಿಸುವದಕ್ಕೆ ಪಾರುಪತ್ಯಗಾರಗೆ ಅಪ್ಪಣೆ ಮಾಡಿದರು. ಹಾಗೆ ಅವನು ಎರಡುಸಲ ವೇದವ್ಯಾಸಗೆ ಸ್ವಾಮಿಗಳ ಆಜ್ಞೆಯ ತಾತ್ಪರ್ಯವನ್ನು ತಿಳಿಸಿದನು. ಆದರೂ ವೇದವ್ಯಾಸನ ಮನಸ್ಸಿಗೆ ಸ್ವಾಮಿಗಳ ಅಪ್ಪಣೆಯು ಹತ್ತಲಿಲ್ಲ. ಅವರು ಆ ಮೂರ್ಖನನ್ನು ಕ್ಷಣ ತಾಮಸ ಮಾಡದೆ ಉದ್ಯೋಗದಿಂದ ತಪ್ಪಿಸಿ ಮಠದಿಂದ ಹೊರಗೆ ಮಾಡುವುದಕ್ಕೆ ಬಾಲಮುಕುಂದಾಚಾರ್ಯಗೆ ನಿರೂಪಿಸಿದರು. ಅವನು ಹಾಗೆಯೇ ಪ್ರವರ್ತಿಸಬೇಕಾಯಿತು. ವೇದವ್ಯಾಸನ ಅನ್ನಸ್ಥಿತಿಯು ಅವನ ಸ್ವಬುದ್ಧಿಯಿಂದಲೇ ತಪ್ಪಿಹೋಯಿತು. ಅದರಿಂದ ಅವನಿಗೆ ಸಿಟ್ಟೇರಿತು. ಹಣ ಕೊಟ್ಟು ವಕೀಲರನ್ನು ಕಟ್ಟಿಕೊಳ್ಳುವದಕ್ಕೆ ಕೈಯಲ್ಲಿ ಕಾಸಿಲ್ಲ. ಯಾರಿಂದಾದರೂ ಹೇಳಿಸಿ ಧರ್ಮಕ್ಕೆ ವಕಾಲತ್ತು ತೆಗೆದು ಕೊಳ್ಳುವಂತೆ ಮಾಡಲಿಕ್ಕೆ ಭೀಮಾಚಾರ್ಯನ ಹಾಗಿನ ಸಹಾಯಕನು ಅವನಿಗೆ ದೊರಕದೆ ಅವನ ಗತಿಯು ಬಹು ತುಚ್ಛವಾಯಿತು. ಆದರೂ ಅವನು ಕಂಗೆ

ಡಲಿಲ್ಲ. ಹೆಂಡತಿಯು ಮನೋಭಾವ ತಿಳಿಯಲಿಕ್ಕೆ ಪ್ರಸ್ತಾಪಿಸಿದಾಗ ಗಂಡನ ಹಟವು ಅವಳ ಮನಸ್ಸಿಗೂ ಒಪ್ಪದೆ–"ಈ ಹಾಳು ವ್ಯಾಪಾರ ತಮಗೇಕೆ? ಸ್ವದೇಶಕ್ಕೆ ಹೋಗಿ ಯಾಚಕ ವೃತ್ತಿಯಿಂದ ಜೀವನ ನಡಿಸುವದು ಉತ್ತಮ" ಎಂದಳು. ಅವಳ ಮಾತು ಅವನಿಗೆ ಹಿತವಾಗಲಿಲ್ಲ.

ಮುಂದೆ ಅನುಸರಿಸಬೇಕಾದ ಕ್ರಮವನ್ನು ಯೋಚಿಸುವದಕ್ಕೋಸ್ಕರ ತನ್ನ ಊರಲ್ಲಿರುವ ಸ್ನೇಹಿತರನ್ನು ಕೇಳಿ ನೋಡುವ ಆಸೆಯಿಂದ ಅವನು ಪತ್ನಿಯ ಸಹಿತ ಕುಮುದಪುರಕ್ಕೆ ಬಂದು ಅಲ್ಲಿ ಇರುವ ಪಿತ್ರಾರ್ಜಿತ ಮನೆಯಲ್ಲಿ ಉಳಕೊಂಡನು. ಜೀವನಕ್ಕೆ ವೃತ್ತಿ ಯಾವದೂ ಇಲ್ಲದೆ ನಿತ್ಯ ನೈವೇದ್ಯಕ್ಕೆ ತತ್ಪಾರ ಉಂಟಾಗದ ಹಾಗೆ ವೈನಮಾಡುವ ಅಗತ್ಯಬಿತ್ತು. ಎಲ್ಲೆಲ್ಲಿ ತಿರುಗಿದರೂ ಅವನ ಪ್ರಯತ್ನವು ಸಫಲವಾಗಲಿಲ್ಲ. ಗೀರ್ವಾಣದಲ್ಲಿ ಚೆನ್ನಾಗಿ ಪರಿಚಿತಿ ಇದ್ದವನೊಬ್ಬಗೆ ಅನ್ನಸ್ಥಿತಿದೊರಕುವದಿಲ್ಲವೆಂಬ ಪಶ್ಚಾತ್ತಾಪವು ಬಹಳ ದೊಡ್ಡದೇ ಸರಿ. ಒಂದಾನೊಂದು ದಿನ ಸ್ನೇಹಿತರ ಕೂಟದಲ್ಲಿ ತನ್ನ ಸಂಕಷ್ಟಗಳನ್ನು ಅವನು ವಿವರಿಸಿ ಹೇಳಿದಾಗ ಅವರೆಲ್ಲರೂ ಅನುತಾಪ ಪಟ್ಟು ತಮ್ಮಿಂದಾಗುವ ಸಹಾಯವನ್ನು ಅವನಿಗೆ ಮಾಡಬೇಕೆಂಬ ಶುದ್ಧ ಮನಸ್ಸಿನಿಂದ ಕುಮುದಪುರದ ಪ್ರಮುಖ ಬ್ರಾಹ್ಮಣರ ಒಂದು ಸಣ್ಣ ಸಭೆಯನ್ನು ಮಾಡಿ ಈ ವಿಷಯದಲ್ಲಿ ಚರ್ಚೆ ನಡೆಸಿದರು. ಅವರೆಲ್ಲರೂ ಐಕಮತ್ಯವಾಗಿ ಒಂದು ಸಂಸ್ಕೃತಶಾಲೆಯನ್ನು ಕೂಡಲೇ ಸ್ಥಾಪಿಸಿ ಅದರಲ್ಲಿ ವೇದವ್ಯಾಸ ಉಪಾಧ್ಯನನ್ನು ಪ್ರಧಾನ ಉಪಾಧ್ಯಾಯನಾಗಿ ನೇಮಿಸುವದಕ್ಕೆ ನಿರ್ಣಯ ಮಾಡಿದರು. ಆ ನಿರ್ಣಯವು ನೆರವೇರುವದಕ್ಕೆ ತಾಮಸವಾಗಲಿಲ್ಲ. ಸುದಿನದಲ್ಲಿ ಶಾಲೆಯು ಸ್ಥಾಪಿಸಿ ಸಾಕಷ್ಟು ವಿದ್ಯಾರ್ಥಿಗಳನ್ನು ಒಟ್ಟುಗೂಡಿಸಿ ವೇದವ್ಯಾಸನ ದಾರಿದ್ರ್ಯ ನಿವಾರಣೆಯ ಉಪಾಯ ವರ್ತಿಸಲಾಯಿತು. ವೇದವ್ಯಾಸ ಉಪಾಧ್ಯನ ಹಿರೇ ಮಗ ವೇಣುಗೋಪಾಲ ಉಪಾಧ್ಯನು ತಂದೆಯಷ್ಟೇ ಅಭಿಜ್ಞತೆಯುಳ್ಳ ಪಂಡಿತನು. ವೇದವ್ಯಾಸನ ಪರೋಕ್ಷದಲ್ಲಿ ಅವನಿಂದ ಶಾಲೆಯ ಉದ್ಯೋಗವನ್ನು ನಡಿಸುವದಕ್ಕೆ ಅನುಕೂಲವಾಯಿತು. ಚಂಚಲನೇತ್ರರನ್ನು ಸೋಲಿಸಿ ಕೀರ್ತಿ ಹೊಂದಬೇಕೆಂಬ ದೊಡ್ಡ ಆತುರವುಳ್ಳ ಈ ಹಟವಾದಿ ಭೂಸುರನು ಶಾಲೆಯ ವಹಿವಾಟು ಮಗನಿಗೆ ವಹಿಸಿಕೊಟ್ಟು ಭೀಮಾಚಾರ್ಯನಷ್ಟೆ ಯುಕ್ತಿವಂತನಾದ ಒಬ್ಬ ಸ್ನೇಹಿತನು ದೊರಕುವುದಿಲ್ಲವೆಂಬ ವ್ಯಥೆಯಲ್ಲಿರುವ ಕಾಲದಲ್ಲಿ ನಿರುದ್ಯೋಗಿಯಾಗಿ ತಿರುಗಾಡಿ

ಕೊಂಡು ಸಮಯ ಕಳೆಯುವ ಪ್ರೋಕರಿಗಳ ಗರುವಾಗಲಿಕ್ಕೆ ಯೋಗ್ಯನಾದ ಅಪರಾಜಿತ ಸೆಟ್ಟಿ ಎಂಬ ಜೈನನು ಅವನಿಗೆ ಗಂಟುಬಿದ್ದನು.

ಸೆಟ್ಟಿಯ ಡೊಳ್ಳು ಮಾತಿಗೆ ಹಾರುವನು ಮರುಳಾಗಿ ತನ್ನ ಈ ನವ ಸ್ನೇಹಿತನಿಂದ ಅಗಾಧಕಾರ್ಯಗಳನ್ನು ಚಮತ್ಕಾರದಿಂದ ಮಾಡಿಸಿಕೊಂಡು ಬಿಡಲಿಕ್ಕೆ ದೇವರು ಪೂರ್ಣ ದಯವಿಟ್ಟರೆಂದು ಹಿಗ್ಗಾಳಪಟ್ಟನು. ತನ್ನ ವಾದದ ಸ್ವಭಾವವನ್ನು ವೇದವ್ಯಾಸನು ಆದ್ಯಂತ ವಿವರಿಸಿದನು. ಅಪರಾಜಿತ ಸೆಟ್ಟಿ ಅದನ್ನು ಲಾಲಿಸಿ ಕೇಳಿ ಕಣ್ಣಾಲಿಗಳನ್ನು ತಿರುಗಿಸುತ್ತ ತುಟಿಗಳನ್ನು ಮುದುರಿಸಿಕೊಂಡು ತರ್ಜನಿ ಬೆರಳನ್ನು ಬಾಣಾಕಾರವಾಗಿ ಮೂಗಿನ ಮೇಲೆ ನಿಲ್ಲಿಸಿ ಊರ್ಧ್ವದೃಷ್ಟಿಯಿಂದ ಕೊಂಚ ಸಮಯಾಲೋಚನೆ ಗೈಯ್ಯುವಂತೆ ಕಾಣಿಸಿಕೊಂಡು ತಟ್ಟನೆ—"ಉಪಾಧ್ಯರೇ! ಪ್ರಥಮದಲ್ಲಿಯೇ ತಾವು ಮಾರ್ಗ ತಪ್ಪಿದ್ದೀರಷ್ಟೇ. ನನ್ನ ಪರಿಚರ್ಯ ತಮಗೆ ಆದಿಯಲ್ಲಿಯೇ ಉಂಟಾಗುತ್ತಿದ್ದರೆ ನಾನು ನಡಿಸತಕ್ಕ ವೈಸವೇ ಬೇರೆ ಇತ್ತು. ಈಗ ಏನು ಮಾಡಲಿ" ಎಂದು ನಿಟ್ಟುಸಿರುಬಿಟ್ಟನು ಅಹಾ! ಇಂಥಾ ವೀರನ ಭೇಟಿಯು ತನಗೆ ಪೂರ್ವದಲ್ಲಿಯೇ ಸಿಕ್ಕುತ್ತಿದ್ದರೆ ಆಶಾಭಂಗವಾಗುತ್ತಿದ್ದಿಲ್ಲ. ತನ್ನ ದುರದೃಷ್ಟದಿಂದಲೇ ಜಯಸ್ತ್ರೀಯು ತೊಲಗಿದ್ದಾಳೆಂದು ಕೈಯಿಂದ ಹಣೆತಟ್ಟಿಕೊಂಡನು ಹಾಗಾದರೆ ಇನ್ನು ಮುಂದೆ ತನ್ನ ಸಾಧನೆಯು ನಿಷ್ಪ್ರಯೋಜಕವೆಂಬ ಭಯದಿಂದ ಮುಖ ಸಣ್ಣದು ಮಾಡಿಕೊಂಡ ಬ್ರಾಹ್ಮಣನನ್ನು ನೋಡಿ ಅಪರಾಜಿತ ಸೆಟ್ಟಿಯು ಮುಗುಳು ನಗೆಯಿಂದ—"ಉಪಾಧ್ಯರೇ! ಹೆದರಬೇಡಿ. ಭಗೀರಥ ಪ್ರಯತ್ನ ಮಾಡಿ ನಿಮಗೆ ಜಯ ಉಂಟಾಗುವ ಹಾಗೆ ನೋಡದೆ ಸುಮ್ಮಗಿರ ರಾರೆ"ನೆಂದು ಭಾಷೆತೊಟ್ಟುಕೊಂಡನು. ಉಪಾಧ್ಯನು ಧನ್ಯನಾದೆನೆಂದನು. "ಬರಿ ಕೈಯಿಂದ ಮೊಳಹಾಕಿದರೆ ಪುರುಷಾರ್ಥವೇನಿದೆ?" ಎಂಬ ಅಪರಾಜಿತನ ಪ್ರಶ್ನೆಗೆ "ಆ ಮಾತೊಂದೂ ಹೇಳಬೇಡಿ. ಒಂದು ಚಿಕ್ಕಾಸೂ ನನ್ನ ಹತ್ತಿರ ಇಲ್ಲ. ನಿಮ್ಮ ಸಹಾಯವೂ ಬೇಡ. ಬಂದ ದಾರಿಯಿಂದಲೇ ಹೊರಟು ಬಿಡುತ್ತೇನೆ. ಪ್ರೀತಿ ಇರಲಿ" ಎಂದು ವೇದವ್ಯಾಸನು ತನ್ನ ಪ್ರಾಣಸಖನ ತಳ್ಳಿಯನ್ನು ಬಿಡಲಿಕ್ಕೆ ಸಿದ್ಧನಾದನು. ಓಹೋ! ಈ ಅಲ್ಪಮತಿಯನ್ನು ಹೋಗಬಿಟ್ಟರೆ ತನ್ನ ಪಾಯವೇ ತಪ್ಪಿಹೋಗುವುದೆಂಬ ಹೆದರಿಕೆಯಿಂದ ಸೆಟ್ಟಿಯು "ನಾನು ಚೇಷ್ಟೆಗೆ ಹೇಳಿದ ಮಾತು ವಿಪರೀತವಾಯಿತೇ? ಉಪಾಧ್ಯರೇ, ನೀವು ಒಂದು ಕಾಸೂ ಕೊಡಬೇಡಿ. ಖರ್ಚು ಅತಿ ಅಗತ್ಯಬಿದ್ದರೆ

ನನ್ನ ಕೈಯಿಂದ ಹಣ ಹಾಕುವೆನು. ನಾನೇನು ಭಿಕಾರಿಯಲ್ಲ. ನಿಮ್ಮಿಂದಲೂ ಹೆಚ್ಚು ಛಲಹಿಡಿದು ನಿಮ್ಮ ಪತ್ರಗಳನ್ನು ನಡೆ ಬಿಡಿಯದೆ ಇದ್ದರೆ ನನ್ನ ಈ ಸಿಾನೆಯಾಕೆ?" ಎಂದು ಕೊನೆ ಮಾನಗಳನ್ನು ಎಳೆಯುತ್ತಾ ಉಪಾಧ್ಯನ ಜೇನ್ನು ತಟ್ಟಿದನು. ವೇದವ್ಯಾಸನು ತನಗೆ ಇಂಥಾ ಹಿತಚಿಂತಕನು ಏಳೇಳು ಜನ್ಮದಲ್ಲಿಯೂ ಸಿಕ್ಕುವುದು ದುರ್ಲಭವೆಂದೆಣಿಸಿ ಕೃತಾರ್ಥನಾಗಿ ತನ್ನ ಗೆಳೆಯನನ್ನು ತಬ್ಬಿಕೊಂಡನು ಪರಸ್ಪರಾಲಿಂಗನದಿಂದ ಮಿತ್ರರಿಬ್ಬರೂ ಸ್ನೇಹ ಬದ್ಧರಾದರು.

## ಇಪ್ಪತ್ತೇಳು

ಗೆಳೆಯರೀರ್ವರೂ ಗಂಡಭೇರುಂಡ ಪಕ್ಷಿಗಳಂತೆ ಹಗಲು ರಾತ್ರೆ ಒಟ್ಟಿನಲ್ಲಿ ಇದ್ದು ವಿವಿಧ ಪ್ರಸ್ತಾವಗಳನ್ನು ಮಾಡುತ್ತಾ ಸಮಯ ಕಳೆದರು. ಅವರು ರಾಜನ ಕುಲಗುರುವಾದ ಸ್ವಯಂಜ್ಯೋತಿ ಗುರುಗಳ ಮಠಕ್ಕೆ ಹೋಗಿ, ಆ ಸನ್ಯಾಸಿಯನ್ನು ಕಂಡರು. ಅಪರಾಜಿತನು ವೇದವ್ಯಾಸ ಉಪಾಧ್ಯನ ಗುರ್ತು ಸನ್ಯಾಸಿಗೆ ಹೇಳಿದನು. ಅವರು ಹಿಂದೆ ಅವನನ್ನು ರಾಜನ ದರ್ಬಾರಿನಲ್ಲಿ ನೋಡಿದ ನೆನಪು ಒಂದು ಸಂತೋಷಪಟ್ಟರು. ತಮ್ಮ ಮಠದ ಮೇಲೆ ಅಭಿಮಾನವಿಟ್ಟು ಇಲ್ಲಿವರೇಗೆ ಬಂದ ಗೀರ್ವಾಣಭಾಷಾಗ್ರಗಣ್ಯಗೆ ಸಾಭಿಮಾನ ಮಾಡಿ, ಬಿಡಾರ ಸಾಹಿತ್ಯಗಳನ್ನು ಒದಗಿಸಿಕೊಟ್ಟು ಚಂದವಾಗಿ ಪರಾಮರ್ಶಿಸೆಂದು ಮಠದ ಕಾರ್ಯಸ್ಥ ಶಿವರಾಮ ಸೆಟ್ಟಿಗೆ ಆಜ್ಞಾಪಿಸಿದರು. ಕಾರ್ಯಸ್ಥನು ಗುರುವಿನ ಅಪ್ಪಣೆಯನ್ನು ನಡೆಸಿದನು. ವಿಪ್ರಗೆ ಭೋಜನಾದಿ ಸತ್ಕಾರಗಳು ಅವನ ನಿರೀಕ್ಷಣೆಯನ್ನು ಮಿಗುವ ರೀತಿಯಲ್ಲಿ ಆದವು ಸ್ವಯಂಜ್ಯೋತಿ ಪರಮಹಂಸರು ಸಂಸ್ಕೃತದಲ್ಲಿ ಕಡಿಮೆ ಪಾಂಡಿತ್ಯವುಳ್ಳವರಲ್ಲ. ವೇದವ್ಯಾಸ ಉಪಾಧ್ಯನು ಅವರ ಒಟ್ಟಿನಲ್ಲಿ ಎರಡು ಮೂರು ದಿವಸ ತರ್ಕಮಾಡಿ ನೋಡಿದಾಗ ತನ್ನಷ್ಟು ದೊಡ್ಡ ಸಂಸ್ಕೃತ ಪಂಡಿತನಿಲ್ಲವೆಂಬಂತ ತಾಳಿಕೊಂಡ ಗರ್ವವು ವ್ಯರ್ಥವಾಗಿತೋರಿ ಸನ್ಯಾಸಿಯ ಪ್ರಾಜ್ಞತೆಗೆ ಮೆಚ್ಚಿದನು. ಉಪಾಧ್ಯನ ಪಾಂಡಿತ್ಯವು ಸಾಮಾನ್ಯವಾದುದಲ್ಲವೆಂದು ಸ್ವಯಂಜ್ಯೋತಿ ಗುರುವರ್ಯರು ನಿಶ್ಚೈಸಿ ಒಳ್ಳೇ ವಸ್ತ್ರಾಲಂಕಾರಗಳನ್ನು ಅವನಿಗೆ ಉಚಿತವಾಗಿ ಕೊಟ್ಟು, ಸನ್ಮಾನಿಸಿದರು. "ವಿಶೇಷವೇನಾದರೂ ಅರಿಕೆ ಮಾಡಲಿಕ್ಕಿದೆಯೋ" ಎಂದು ವಿಚಾರಿಸಿದಾಗ ಅಪರಾಜಿತ ಸೆಟ್ಟಿಯು ಪ್ರಣಾಮಮಾಡಿ, ಈ ಬ್ರಾಹ್ಮ

ಣಾನು ಸನ್ನಿಧಾನದ ಭೇಟಿಗೆ ಬಂದ ಉದ್ದೇಶವನ್ನು ಸಂಪೂರ್ಣವಾಗಿ ವಿವರಿಸಿದನು.

"ಲೌಕಿಕ ವಿಚಾರವನ್ನೇ ಬಿಟ್ಟು ನಿರ್ವಾಣವನ್ನು ಹೊಂದಲಪೇಕ್ಷಿತನಾದ ಪರಮಹಂಸನೊಬ್ಬನು ಇಂಥಾ ವಾಛಾಟದಲ್ಲಿ ಮಾಡತಕ್ಕದ್ದೇನೂ ಇಲ್ಲವು. ಆದರೆ ಈ ರಾಜ್ಯದಲ್ಲಿ ಒಡ್ಡೋಲಗದ ಕ್ರಮಕ್ಕನುಸರಿಸಿ ಮತ ಸಂಬಂಧವಾದ ವಿವಾದಗಳಲ್ಲಿ ರಾಜದ್ವಾರದಲ್ಲಿ ಅರಸನು ತನ್ನ ಕುಲಗುರುವನ್ನು ಮಂತ್ರಾಲೋಚಕನಾಗಿ ತನ್ನ ಅರ್ಧಾಸನದಲ್ಲಿ ಕುಳ್ಳಿರಿಸುವ ಪದ್ಧತಿಯು ಪರಂಪರೆಯಾಗಿ ನಡೆದು ಬರುತ್ತದೆ. ಅವನ ಅಭಿಪ್ರಾಯವನ್ನು ಸ್ವೀಕರಿಸುವುದಕ್ಕೆ ಅರಸು ಸರ್ವಥಾ ಒಪ್ಪನಲ್ಲ. ನೃಪಾಲನು ತನಗೆ ಯುಕ್ತವೆಂತ ಕಾಣುವ ವಿಧಿಯನ್ನು ಕೊಡುತ್ತಾನೆ. ಅವನ ಸ್ವಾತಂತ್ರ್ಯಕ್ಕೆ ಯಾವನೊಬ್ಬ ಮಂತ್ರಾಲೋಚಕನ ತಡೆಯೂ ಇರುವುದಿಲ್ಲ." ಹೀಗೆ ಸನ್ಯಾಸಿಯು ಹೇಳಿದುದರಿಂದ ವೇದವ್ಯಾಸನು ಕಂಗೆಟ್ಟನು. ಅಪರಾಜಿತ ಸೆಟ್ಟಿಯು ಪುನಃ ಪ್ರಣಾಮಮಾಡಿ ಶರಣಾಗತನಾದ ಹಾರುವಗೆ ಅಭಯವಾಗಬೇಕೆಂದು ಸಗಗು ಒಡ್ಡಿ ಬೇಡಿಕೊಂಡನು. "ಜಿನಧರ್ಮ ಪಾಲಿಸು" ಎಂದು ಅಪರಾಜಿತಗೆ ಆಜ್ಞೆಯಾಯಿತು. ಒಳಿಕ ಅವರು ತನ್ನ ನೌಕರನೊಬ್ಬನನ್ನು ಕಳುಹಿಸಿ ಅರಮನೆಯ ಭಕ್ಷಿ ಆದಿರಾಜನನ್ನು ಕರೆಸಿ ಅವನ ಕೂಡೆ ಅಂತರಂಗದಲ್ಲಿ ಏನೋ ಮಾತಾಡಿ ವೇದವ್ಯಾಸ ಉಪಾಧ್ಯನನ್ನು ಅವನ ಸಂಗಡ ಕಳುಹಿಸಿದರು.

ಅಪರಾಜಿತನು ಅವರಿಬ್ಬರ ಹಿಂದೆಯೇ ಹೋದನು. ಆದಿರಾಜನು ಆ ಬ್ರಾಹ್ಮಣನನ್ನೂ ಅವನ ಸಂಗಡಿಗನನ್ನೂ ಮನೆಗೆ ಕರಕೊಂಡು ಹೋಗಿ ದಿವಾನ ಕಚೇರಿಯ ಒಬ್ಬ ಕಾರ್ಕೂನನನ್ನು ಕರಕರಿಸಿ ಅವನ ಕೂಡೆ ಸ್ನೇಹಭಾವದಿಂದ ಸಂಭಾಷಣೆಮಾಡಿ ವೇದವ್ಯಾಸ ಉಪಾಧ್ಯನ ಛಲನಡೆಯಲಿಕ್ಕೆ ಉಪಾಯ ನಡೆಸಬೇಕೆಂದು ಅಪೇಕ್ಷಿಸಿದನು ಅರಸನ ಒಡ್ಡೋಲಗದಲ್ಲಿ ಪೇಚಾಡುವ ಕಾಲವು ಇನ್ನೂ ಒದಗಲಿಲ್ಲ. ಆಯಾ ಊರಿನವರು ಒಗ್ಗಟ್ಟಾಗಿ ಮತ ವಿರುದ್ಧವಾದ ಕಾರ್ಯವನ್ನು ನಡೆಸಕೂಡದೆಂದು ಕಟ್ಟು ಮಾಡಲಿಕ್ಕೆ ಸ್ವತಂತ್ರಿಕರಾಗಿರುತ್ತಾರೆ. ಅವರ ಕಟ್ಟು ಮುರಿಯುವುದು ಅನ್ಯರಿಗೆ ಅಸಾಧ್ಯ. ಒಂದುವೇಳೆ ಅಂಥಾ ಕಟ್ಟಿನಿಂದ ತಡೆಯಲ್ಪಟ್ಟವನು ದ್ರವ್ಯ ಬಲದಿಂದ ಕಲಹ ಹೊಡೆದಾಟ ಮುಂತಾದ ಉಪದ್ರವ ಕೊಡಲಿಕ್ಕೆ ನೋಡು

ವುದಾದರೆ ಸ್ಥಳೀಕ ಕಾರ್ಬಾರಿ ಕೊತ್ವಾಲರು ತಮ್ಮ ಅಧಿಕಾರವನ್ನು ನಡೆಸವೆ ಇರಲಿಕ್ಕಿಲ್ಲ. "ಜಗಲಿ ಹಾರದ ಬಡ್ಡಿ ಗಗನ ಹಾರ್‍ಯಾಳೆ" ಎಂಬಂತೆ ಇಷ್ಟು ಸಣ್ಣ ವ್ಯವಸ್ಥೆ ಮಾಡಲಿಕ್ಕೆ ಬುದ್ಧಿ ಚಾತುರ್ಯವಿಲ್ಲದವನು ರಾಜನ ಒಡ್ಡೋಲಗಕ್ಕೆ ಬಂದು, ಏನು ಮಾಡುವ ಹಾಗಿದೆ? ಕಾರ್ಕೂನನ ಈ ಪ್ರತಿವಾಕ್ಯವನ್ನು ಅಪರಾಜಿತ ಸೆಟ್ಟಿಯು ವೇದವ್ಯಾಸ ಉಪಾಧ್ಯಗೆ ವಿವರಿಸಿ ಹೇಳಿ ತನ್ನ ಸಂಗಡ ಬಂದರೆ ಮುಂದಿನ ಉಪಾಯ ಸುಲಭವಾಗಿದೆಯೆಂದು ಅವನಿಗೆ ಧೈರ್ಯ ಕೊಟ್ಟನು. ಆದಿರಾಜಗೆ ಅವರಿಬ್ಬರೂ ನಮಸ್ಕಾರ ಮಾಡಿ, ಅಲ್ಲಿಂದ ಹೊರಟು ಕ್ಷಿಪ್ರ ಕುಮುದಪುರಕ್ಕೆ ಬಂದರು.

## ಇಪ್ಪತ್ತೆಂಟು

ಭೋಜನವಾದ ಮೇಲೆ ಅಪರಾಜಿತನು ವೇದವ್ಯಾಸನನ್ನು ಕಟ್ಟಿಕೊಂಡು ಬೀದಿ ಬೀದಿಯಲ್ಲಿ ಕಾಣಸಿಕ್ಕಿದವರ ಕೂಡೆ—"ಇಗೋ ಚಂಚಲನೇತ್ರರ ಛಟ ಹಾರಿಸಿ ಬಿಡುತ್ತೇನೆ. ಬ್ರಹ್ಮಸಭೆ ಕೂಡಿಸಿ ಉಪನಯನವಾಗದಂತೆ ಕಟ್ಟು ಮಾಡಿಸಿಬಿಡುತ್ತೇನೆ. ಫಸಾದ ಮಾಡಲಿಕ್ಕೆ ನೋಡುವವರನ್ನು ಕೊತ್ವಾಲರಿಂದ ಕೋಳ ಹಾಕಿಸಿ ಬಿಡುತ್ತೇನೆ. ಸ್ವಯಂಜ್ಯೋತಿ ಗುರುಗಳ ಅಪ್ಪಣೆಗನುಸರಿಸಿ ವೇದವ್ಯಾಸನ ಸಹಾಯಕ್ಕೆ ಬಂದ ಅಪರಾಜಿತ ಸೆಟ್ಟಿ ಎಂದರೆ ನಾನೇ" ಎಂದು ಮೀಸೆಯನ್ನು ಎಳೆಯಲಿಕ್ಕೆ ಪ್ರಾರಂಭಿಸಿದನು. ಒಂದೆರಡು ತಾಸಿನಲ್ಲಿ ಈ ವರದಿ ಊರಲ್ಲೆಲ್ಲಾ ಹಬ್ಬಿತು. ಅದು ಚಂಚಲನೇತ್ರರ ಕಿವಿಗೂ ಬಿತ್ತು. ವಾಗ್ದೇವಿಗೂ ಅದು ತಿಳಿಯಿತು. ಉಪನಯನಕ್ಕೆ ಇನ್ನು ಒಂದೇ ವಾರ ಉಳಿಯಿತು. ದುಸ್ಮಾನರು ತಮ್ಮ ಗುಂಡಾಂತರ ಮಾಡಲಿಕ್ಕೆ ನೋಡುವರೆಂದು ಅವರಿಬ್ಬರೂ ಬಹಳ ವಿಲಾಪ ಮಾಡಿದರು. ಶ್ರೀಪಾದಂಗಳು ವೆಂಕಟಪತಿ ಆಚಾರ್ಯನನ್ನು ಕರೇ ಕಳುಹಿದರು. ಪಾರುಪತ್ಯಗಾರನು ಅಂದು ಅಪರಾಜಿತನು ಹುಟ್ಟಿಸಿದ ಗಾಬರಿ ಕೇಳಿ, ಮಠದ ಕಡೆಗೆ ಬರುವವನಾಗಿದ್ದನು. ಶುಭ ಕೆಲಸಕ್ಕೆ ವಿಘ್ನಬರುವ ಸಂಭವವಿದೆ ಎಂಬ ಚಿಂತೆಯಲ್ಲಿರುವ ಧನಿಯ ಮುಖವನ್ನು ನೋಡಿ ವೆಂಕಟಪತಿಯು ಅವರಿಗೆ ಚೆನ್ನಾಗಿ ಧೈರ್ಯಹೇಳಿದನು. "ವೇದವ್ಯಾಸನನ್ನೆತ್ತಿ ಕೊಂಡ ಈ ಹೊಸ ವೀರನ್ಯಾರಪ್ಪಾ, ವೆಂಕಟಪತಿ ಸ್ವಲ್ಪ ಹೇಳು" ಎಂದು ಚಂಚಲನೇತ್ರರು ಕೇಳಿದಾಗ "ಪರಾಕೆ, ಅವನು ಬಿಳೀ ಕಾಗೆಯಲ್ಲ. ಶುದ್ಧ ಡಬ್ಬುಗಾರ; ವೇದ

ವ್ಯಾಸನ ಮೇಲೆ ಪ್ರೀತಿಯುಳ್ಳವನಲ್ಲ. ಅವನಿಗೆ ಸಹಾಯ ಮಾಡುವ ನೆವನ ದಿಂದ ಕೈಗೆ ದುಡ್ಡು ಹತ್ತುವ ಉಪಾಯ ಮಾಡಲಿಕ್ಕೆ ಬಂದವನಾಗಿರಬೇಕು" ಎಂದು ವೆಂಕಟಪತಿಯು ಉತ್ತರಕೊಟ್ಟನು. ಆದಾಗ್ಯೂ ಚಂಚಲನೇತ್ರರಿಗೆ ಹತ್ತಿದ ದಿಗಿಲು ಪೂರ್ಣವಾಗಿ ನಿವಾರಣೆಯಾಗದೆ, ಪಾರುಪತ್ಯಗಾರನನ್ನು ಹತ್ತಿರ ಕರೆದು "ದುಡ್ಡು ವೆಚ್ಚವಾದರೂ ಪರ್ವಾಯಿಲ್ಲ. ಈ ಡಾಂಭಿಕ ಸೆಟ್ಟಿ ಯನ್ನು ಒಲಿಸು. ಜಾಪ್ಯ ಮಾಡಲಾಗದು" ಒಂದು ಅಪ್ಪಣೆ ಕೊಟ್ಟರು. ವೆಂಕಟಪತಿಯು ಹೊರಟು ಕುಮುದಪುರದ ಸೆಟ್ಟಿಗಳ ಪೇಟೆಯಲ್ಲಿ ವ್ಯಾಪಾರ ಮಾಡುವ ದೊಡ್ಡ ಸಾಹುಕಾರ ನೇಮರಾಜ ಸೆಟ್ಟಿಯನ್ನು ಕಂಡು ಅಪರಾಜಿತನನ್ನು ಹೇಗಾದರೂ ತನ್ನ ಕೈವಶಮಾಡಿಕೊಡಬೇಕಾಗಿ ಅಪೇ ಕ್ಷಿಸಿ ಅದಕ್ಕೆ ಬೇಕಾದ ದ್ರವ್ಯಾನುಕೂಲ ಕೊಡಿಸಲಿಕ್ಕೆ ಸಮ್ಮತಿಸಿದನು.

ಅಪರಾಜಿತಸೆಟ್ಟಿಯೂ ವೇದವ್ಯಾಸನೂ ಕೈ ಕೈ ಹಿಡುಕೊಂಡು, ಪಟ್ಟಣ ವಾಸಿಗಳಾದ ಪ್ರಮುಖ ಬ್ರಾಹ್ಮಣರನ್ನು ಕಂಡು ಸೂರ್ಯನಾರಾಯಣನ ಉಪನಯನವು ತಡೆಯುವಂತೆ ಕಟ್ಟುಮಾಡುವ ವಿಷಯದಲ್ಲಿ ಅವರಿಗೆ ಹಲವು ತರದಲ್ಲಿ ದುರ್ಬೋಧನೆ ಕೊಟ್ಟರು. ಕೆಲವರು ತಮಗ್ಯಾಕೆಂದು ತಲೆಹಂದಿ ಸಿದರು. ಕೆಲವರ ಕಿವಿಗಳಿಗೆ ಸೆಟ್ಟಿಯ ಮಾತು ರಮ್ಯವಾಯಿತು. ಹ್ಯಾಗೂ ಮರುದಿವಸ ಅಂಜನೇಯಾಲಯದಲ್ಲಿ ಬ್ರಹ್ಮಸಭೆ ಕೂಡುವದಕ್ಕೆ ನಿಶ್ಚಯ ಮಾಡಿ, ಬ್ರಾಹ್ಮಣರ ಮನೆಗಳಿಗೆಲ್ಲ ಹೇಳಿಕೆಯಾಯಿತು. ವೇದವ್ಯಾಸನು ತನ್ನ ಆಶೆಯು ತೀರುವ ಕಾಲ ಬಂತೆಂದು ಹಾಸ್ಯವದನನಾಗಿ ತನ್ನ ಸ್ನೇಹಿ ತನ್ನ ಪರಾಕ್ರಮುವನ್ನು ಹೆಂಡತಿಯ ಮುಂದೆ ವರ್ಣಿಸಲಿಕ್ಕೆ ತೊಡಗಿದನು. ಅವಳು ಪತಿಯ ಬುದ್ಧಿಗೆ ಮೆಚ್ಚದೆ, ಅವನು ಕೈಕೊಂಡ ಕಾರ್ಯವು ಯಶಸ್ಕರ ವಾದದ್ದಲ್ಲವೆಂದು ದುಮ್ಮಾನ ತಾಳಿದಳು. ಮತ್ತು ಬಾಯಿಬಿಟ್ಟು ಗಂಡಗೆ ಹಾಗೆಯೇ ಹೇಳಿದಳು. ಅವನು ಅವಳ ಮಾತು ಗಣ್ಯಮಾಡಲಿಲ್ಲ. ಹೆಚ್ಚು ಮಾತಾಡಿದರೆಪತಿಯು ಸಿಟ್ಟುತಾಳುವನೆಂಬ ಭಯದಿಂದ ಅವಳು ಚಿಂತಾ ತುರಳಾಗಿ ಸುಮ್ಮಗಿದ್ದುಕೊಂಡಳು.

ಸಾಯಂಕಾಲವಾಯಿತು. ಅಪರಾಜಿತಸೆಟ್ಟಿಯು ಬಿಡಾರ ಸೇರುವದಕ್ಕೆ ಹೊರಟಾಗ ದಾರಿಯಲ್ಲಿ ನೇಮರಾಜಸೆಟ್ಟಿಯ ಚಾಕರನೊಬ್ಬನು ಅವನನ್ನು ಕಂಡು ರಾತ್ರಿಭೋಜನಕ್ಕೆ ತನ್ನ ಧನಿಯ ಮನೆಗೆ ದಯಮಾಡಬೇಕೆಂದು ಅವರ ಅಪೇಕ್ಷೆ ಅದೆ ಎಂದನು. ಅಪರಾಜಿತನು ಹೆಕ್ಕಳಿಸಿ, ಅವನ ಸಂಗಡಲೇ

ಆ ಸಾವಕಾರನ ಮನೆಗೆ ಹೋದನು. ನೇಮರಾಜನು ಈ ಪೋಲಿಗಾರಗೆ ಅವನ ಸ್ವರೂಪಕ್ಕೆ ಮಿಕ್ಕಿದ ಸಾಭಿಮಾನದಿಂದ ತರಗು ಎಂಬ ಹೆಸರುಹೋದ ಭಕ್ಷ ಸಹಿತ ದೊಡ್ಡದೊಂದು ಔತಣವನ್ನು ಮಾಡಿಸಿದಾಕ್ಷಣ ತಾನಿರುವ ಠಾವು ಆಕಾಶವೋ ಭೂಮಿಯೋ ಎಂಬುದು ಅವನಿಗೆ ತಿಳಿಯದೆ ಹೋಯಿತು. "ವೇದವ್ಯಾಸ ಉಪಾಧ್ಯಗೆ ಮುಂಗೈಗೆ ಜೆಲ್ಲಕಾಣಿಸಿಬಿಟ್ಟಿದ್ದಿಯಷ್ಟೆ. ಸಾವಿರ ರೂಪಾಯಿ ಗಂಟು ಮಠದಿಂದ ಕೂಡಿಸುವೆನು. ಸೂರ್ಯನಾರಾಯಣನ ಉಪನಯನಕ್ಕೆ ವಿಘ್ನಕಾರಕನಾಗಬೇಡ. ಒಳ್ಳೇ ಮಾತಿನಿಂದ ಕೇಳುತ್ತಿಯಾ? ಬೆನ್ನಿಗೆ ಮುಷ್ಟಿ ಪೂಜೆ ಆಗಬೇಕೋ" ಎಂದು ನೇಮರಾಜನು ಕಟ್ಟುತ್ತರ ಕೊಟ್ಟಾಗಲೇ "ಸ್ವಾಮಿಾ! ತಮ್ಮ ಪಾದದಾಣೆ ತಮ್ಮ ಅಪ್ಪಣೆ ಮಿಾರುವವ ನಲ್ಲ" ಎಂದು ಕೈ ಜೋಡಿಸಿಕೊಂಡು ನಿಂತನು. ಉಪನಯನ ಪ್ರಸ್ತ ಸಾಂಗ ವಾಗಿ ನಡೆಯುವ ವರೆಗೂ ವೇದವ್ಯಾನ ಉಪಾಧ್ಯಗೆ ಅತ್ತಿತ್ತ ಕುಣಿಸಿ ಮತ್ತೆ ತನ್ನನ್ನು ಕಂಡರೆ ವಾಗ್ದತ್ತಮಾಡಿದ ವಿತ್ತವನ್ನೀಯುವದಾಗಿ ಸಾವಕಾರನು ಅಪರಾಜಿತಸೆಟ್ಟಿಗೆ ಮಾತು ಕೊಟ್ಟು ಬಿಡಾರಕ್ಕೆ ಕಳುಹಿಸಿದನು. ತನ್ನ ಬಯಕೆ ಕೈಗೂಡಿಸುವನೆಂಬ ಸಂತೋಷದಿಂದ ಅಪರಾಜಿತಸೆಟ್ಟಿಯು ವಾಯು ವೇಗದಿಂದ ಎಂಬಂತೆ ಲವಕಾಲದಲ್ಲಿ ಬಿಡಾರಕ್ಕೆ ತಲಪಿ, ಸೌಖ್ಯವಾಗಿ ನಿಪ್ರೆ ಗೈದು, ಒಳ್ಳೆ ಒಳ್ಳೆ ಕನಸುಗಳನ್ನು ಕಂಡನು.

ಮರುದಿವಸ ಮುಂಜಾನೆ ಎದ್ದು, ವೇದವ್ಯಾಸ ಉಪಾಧ್ಯನು ದೊಡ್ಡ ದೊಡ್ಡ ಜಮುಖಾನುಗಳು, ಲೋಡು, ತಿವಾಸಿ, ಲೇಪು, ಚಾಪೆ, ಇತ್ಯಾದಿ ಆಸನೋಪಕರಣಗಳನ್ನು ಯಾರ್ಯಾರಿಂದ ಯರವಿಗೆ ತಂದು ಅಂಜನೇಯ ದೇವಸ್ಥಾನದ ಪೌಳಿಯಲ್ಲಿ ನುಣ್ಣಗಾಗಿ ಹಾಸಿ, ಅಲ್ಲಿ ಒಂದು ನುಸಿಯಾದರೂ ಸುಳಿಯದಂತೆ ಜಾಗ್ರತೆ ತೆಗೆದುಕೊಳ್ಳುವದಕ್ಕೋಸ್ಕರ ತಮ್ಮ ರಾಘವೇಂದ್ರ ಉಪಾಧ್ಯನನ್ನು ನಿಲ್ಲಿಸಿಬಿಟ್ಟು, ಮನೆಗೆ ಹೋಗಿ ಸ್ನಾನ ಜಪ ಪೂಜೆ ಭೋಜನ ಸಹಿತ ತೀರಿಸಿ, ಬೇಗಬಂದು ದೇವಸ್ಥಾನದ ಬಳಿಯ ಸಭಾಸದರ ನಿರೀಕ್ಷಣೆ ಮೇಲೆ ಕುಳಿತುಕೊಂಡನು. ಸ್ವಲ್ಪದೂರವಿರುವ ಒಂದು ಅಶ್ವತ್ಥಕಟ್ಟೆಯಲ್ಲಿ ಅಪರಾಜಿತ ಸೆಟ್ಟಿಯು ಅರೆಮನಸ್ಸಿನಿಂದ ಕೂತುಕೊಂಡಿರುವಾಗ ಆಗಿಂದಾಗ್ಗೆ ವೇದವ್ಯಾಸನು ಒಂದು ಸಣ್ಣಸ್ವರದಿಂದ ಕೇಳುವ ಪ್ರಶ್ನೆಗಳಿಗೆ ನಿದ್ರಾವಸ್ಥೆಯ ಲ್ಲಿದ್ದವನಂತೆ ಉತ್ತರಗಳನ್ನು ಕೊಡುತ್ತಿದ್ದನು. ಅಂದಿನ ಸಭೆಯ ಪರಿಣಾಮ ಹ್ಯಾಗಾಗುತ್ತದೊ ನೋಡದನಕ ಮುಂದೆ ಮಾಡತಕ್ಕ ವೈನಗಳನ್ನು ಯೋಚಿ

ಸಲಿಕ್ಕೆ ಸಂದರ್ಭವಿಲ್ಲವೆಂದು ಅವನು ಅತ್ತಿತ್ತ ನೋಡುತ್ತಿರುವಾಗ ಕೆಲವು ಬ್ರಾಹ್ಮಣರು ಬರುವವರಾದರು. ಪ್ರಮುಖರ್‍ಯಾರೂ ಇನ್ನೂ ಬಂದಿಲ್ಲ; ಬಂದು ಕೊಳ್ಳಲಿ. ಆ ಮೇಲೆ ಪಾಳಿಯಲ್ಲಿ ಸೇರಿಕೋಬಹುದೆಂದು ಅವರೆಲ್ಲರೂ ಅಲ್ಲಲ್ಲಿ ಸಣ್ಣ ಸಣ್ಣ ಗುಂಪುಗಳಾಗಿ ನಿಂತು ಕೊಂಡ ಸಮಯವನ್ನು ಸಾಧಿಸಿ ವೆಂಕಟ ಪತಿ ಆಚಾರ್ಯರಿಂದ ಮುಂದಾಗಿ ಬೋಧನೆ ಹೊಂದಿರುತ್ತಿದ್ದ ಅಂಜನೇಯಾ ಲಯದ ಅರ್ಚಕನ ಅತ್ತೆ ಪೂರ್ವಸುಮಂಗಲೆ ಗಂಗಾಬಾಯಿಯು ಬಾಗಲಲ್ಲಿ ನಿಂತು ಆಚೆ ಈಚೆ ಹಣಕಿನೋಡಿ, ಎದುರಿನಲ್ಲಿ ನಿಂತಿರುವ ವೇದವ್ಯಾಸ ಉಪಾಧ್ಯನನ್ನು ಕರೆದು—"ಹೌದೋ ವೇದವ್ಯಾಸ; ಇಂದೇನು ವಿಶೇಷವಪ್ಪಾ? ದ್ವಿಜರ ಸಂವಣಿಯು ಬರುವದು ತೋರುತ್ತದೆ" ಎಂದು ಕೇಳಿದಳು. ವಾಯು ವಿನ ಕೂಡೆಯಾದರೂ ಜಗಳವಾಡಲಿಕ್ಕೆ ಹಿಂಜರಿಯದ ಈ ವಿಧವೆಯು ಎಲ್ಲಿಂದ ಬಂದು ಬಾಗಲಲ್ಲಿ ನಿಂತು ಕೊಂಡಳೆಂದು ಮನಸ್ಸಿನಲ್ಲಿ ಸಂಕೋಚ ತಾಳಿದ ವೇದವ್ಯಾಸನು—"ಅಮ್ಮಾ ವಿಶೇಷವೇನು! ಒಂದು ಸಭೆ ಕೂಡುವ ದಕ್ಕೆ ಸಂಕಲ್ಪಿಸಿಯದೆ. ಆದಪ್ರಯುಕ್ತ ಒಬ್ಬೊಬ್ಬರೇ ಈ ಠಾವಿಗೆ ಬರುತ್ತಲಿ ದ್ದಾರೆ" ಎಂದು ಉತ್ತರಕೊಟ್ಟನು. "ಹಾಗೊ! ನಿನ್ನ ತಾಯಿಯ ಸಪಿಂಡೀ ಕರಣಕ್ಕೆ ಇವರಿಗೆಲ್ಲಾ ಹೇಳಿಕೆ ಮಾಡಿಸಿದ್ದಿಯೋ! ಏನೋ ನೋಡಿಬಿಡುವ ದಕ್ಕೆ ನಾನು ಹೊರಗೆ ಬಂದೆ" ಎಂದು ಆ ಜಗಳಗಂಟಿ ಹೆಂಗಸು ಒದರಿದ್ದು ಕೇಳಿದನು. ವೇದವ್ಯಾಸನು ಸಿಟ್ಟಿನಿಂದಲೂ ಭಯದಿಂದಲೂ ನಡುಗಿ, ಸಿಟ್ಟು ಏನೂ ತಡಿಯಲಾರದೆ—"ಮುದಿಗೂಗೆ! ಬಾಯಿಗೆ ಬಂದಂತೆ ಬೊಗಳು ವಿಯಾ?" ಎಂದು ಅವಳನ್ನು ಗದರಿಸಿದನು. ಸರಿ ಪಟಾರಿಪೆಟ್ಟಿಗೆಗೆ ಒಂದೇ ಸರ್ತಿ ಬೆಂಕಿಕೊಟ್ಟಂತಾಯಿತು. ಗಂಗಾಬಾಯಿಯು ಹೆಚ್ಚುಕಡಿಮೆ ಒಂದು ತಾಸಿನ ವರೆಗೆ ಹೀನವಾದ ಬೈಗಳಿಂದ ಹಿಂದುಮುಂದು ನೋಡದೆ, ವೇದ ವ್ಯಾಸನು ಉಸುರೆತ್ತದ ಹಾಗೆ ಮಾಡಿಬಿಟ್ಟಳು.

ಅಷ್ಟರಲ್ಲಿ ಅಲ್ಲಿ ನೆರೆದಿರುವ ಸಮೂಹವೂ ದಾರಿಗರೂ ಬಾಗಿಲ ಎದುರು ವೇದವ್ಯಾಸನ ಬೆನ್ನುಕಡೆಯಲ್ಲಿ ಗುಂಪು ಕಟ್ಟಿದ್ದರು. ಉಪಾಧ್ಯನ ಹಮ್ಮು ಇಳಿದುಹೋಯಿತು. ಅಲ್ಲಿಂದ ಅವನು ತಪ್ಪಿಸಿಕೊಂಡು, ಪಲಾಯನ ಮಾಡು ವದಕ್ಕೆ ನೋಡುವಷ್ಟರೊಳಗೆ ಅಣ್ಣಗೆ ನಾಮೂಷಿ ಮಾಡಿದ ವಿಧವೆಯ ಮೇಲೆ ರೋಷವನ್ನು ತಾಳಿದ ರಾಘವೇಂದ್ರ ಉಪಾಧ್ಯನು ಔಡುಗಳನ್ನು ಕಚ್ಚಿಕೊಂಡು, ಗುಂಪಿನೊಳಗೆ ನುಗ್ಗಿ, ಗಂಗಾಬಾಯಿಯ ಸಮ್ಮುಖವಲ್ಲಿ

ನಿಂತು—"ಹೇವವಿಲ್ಲದ ದಿಂಡೆ! ನಿನ್ನ ನಾಲಿಗೆಗೆ ಸಲಿಗೆ ಹೆಚ್ಚಾಯಿತು! ಗರಗಸದಿಂದ ಸೀಳಿಬಿಡುತ್ತೇನೆ" ಎಂದು ಆರ್ಭಟಮಾಡಿದನು. ಅವಳಿಗೆ ಮತ್ತಷ್ಟು ರೇಗಿತು. ಅಣ್ಣತಮ್ಮಂದಿರಿಬ್ಬರನ್ನೂ ಕಂಡಾಬಟ್ಟೆ ಬೈಯುತ್ತಾ, ಯಾರಿಗೂ ಕಾಣದಂತ ಕಂಕುಳಲ್ಲಿ ಇಟ್ಟುಕೊಂಡಿದ್ದ ಜಗಳಗಾತಿಯರ ಮುದ್ದು ಆಯುಧವನ್ನು ಬೀರುತ್ತಾ, ಮುಂದು ಮುಂದೆ ಬಂದಳು. ಇಂಥ ಕಟ್ಟು ಮುಟ್ಟಿನಲ್ಲಿ ಗುಂಪುಕೂಡಿ ನಿಂತ ಜನರು ದಿಕ್ಕಾಪಾಲಾಗಿ ಓಡಿದರು ಉಪಾಧ್ಯಾಯರೀರ್ವರೂ ಹ್ಯಾಗೂ ಗುಂಪಿನ ಎಡೆಯಿಂದ ತಪ್ಪಿಸಿಕೊಂಡು, ಉಸುರುಕಟ್ಟಿ ಓಡಿದರು ಅವಳು ತಮಗೆ ಬೆರಸಿಕೊಂಡು ಬರುತ್ತಾಳೊ ಎಂಬ ಭಯದಿಂದ ಅವರು ಹಿಂದೆ ನೋಡುತ್ತಾ ಓಡಿ ಓಡಿ ಬೇಗ ಮನೆಯ ಒಳಗೆ ಹೊಕ್ಕು, ಬಾಗಲು ಮುಚ್ಚಿ ಕೀಲುಹಾಕಿ ಹರಿನಾಮ ಸ್ಮರಣೆಮಾಡಿದರು. ದೂರವಿರುವ ಕಟ್ಟೆಯಲ್ಲಿ ಕೂತುಕೊಂಡಿದ್ದ ಅಪರಾಜಿತಸೆಟ್ಟಿಗೂ ಉಪಾಧ್ಯರ ಸಂತಾಪ ನೋಡಿ ದಿಗಿಲುಹತ್ತಿದರೂ ನೇಮರಾಜಸೆಟ್ಟಿಯು ಸೂಚಿಸಿದ ಮಾರ್ಗವನ್ನು ಅನುಸರಿಸಲಿಕ್ಕೆ ದೈವವಶಾತ್ ಗಂಗಾಬಾಯಿಯು ಅಮಂಗಲ ಆಯುಧವಾಣಿಯಾಗಿ ಸಾರಥ್ಯಮಾಡಿದ ಹಾಗಾಯಿತು. ಇನ್ನು ದೊಡ್ಡದಲ್ಲವೆಂದು ಅತ್ಯಾನಂದಪಟ್ಟನು.

ಸಭೆಕೂಡಲಿಕ್ಕೆ ಹೊರಟ ದೊಡ್ಡ ದೊಡ್ಡವರೂ ಸಾಧಾರಣಮಟ್ಟಿನವರೂ ಭೋಜನ ತೀರಿಸಿಕೊಂಡು, ಮೆಲ್ಲಮೆಲ್ಲನೆ ಬರುತ್ತಾ, ದಾರಿಯಲ್ಲಿ ಗಂಗಾಬಾಯಿಗೂ ಉಪಾಧ್ಯರಿಬ್ಬರಿಗೂ ಆದ ಕಲಹದ ಸಮಾಚಾರವನ್ನು ಕೇಳಿ, ಮರ್ಯಾದೆ ಉಳಿಸಿಕೊಳ್ಳಬೇಕಾದರೆ ತಂತಮ್ಮ ಮನೆಗಳಿಗೆ ಮರಳುವದೇ ಉತ್ತಮ ಉಪಾಯವೆಂದು ಹಿಂತಿರುಗಿ ಚನ್ನಾಗಿ ನಕ್ಕರು. ಈ ಒಸಗೆಯು ಕ್ಷಣದಲ್ಲಿ ಊರಲ್ಲಿ ಸರ್ವತ್ರ ತುಂಬಿ ಕೇಳಿ, ಕೇಳಿದವರಿಗೆ ಬಹು ವಿನೋದಕರವಾಯಿತು. ವರ್ಷಕ್ಕೆ ಒಮ್ಮೆಯಾದರೂ ನಗಲೊಲ್ಲದವರು ಅಂದು ಗಹಗಹಿಸಿದರು. ಮಠಕ್ಕೆ ಅದು ತಿಪ್ಪಾಶಾಸ್ತ್ರಿಯಿಂದ ಗೊತ್ತಾಯಿತು. ಚಂಚಲನೇತ್ರರು ಅವರ ಜೀವಕಾಲದಲ್ಲಿ ಅಂದಿನಷ್ಟು ನಗಲಿಲ್ಲ. ವಾಗ್ದೇವಿಯ ಉಲ್ಲಾಸಕ್ಕೆ ಪರಿಮಿತಿಯೇ ಇಲ್ಲ. ಅವಳ ತಂದೆತಾಯಿಗಳೂ ಗಂಡನೂ ರಾತ್ರೆ ನಿದ್ರೆಬೀಳುವವರೆಗೂ ನಕ್ಕರು. ವೆಂಕಟಪತಿ ಆಚಾರ್ಯನ ಸಾಮರ್ಥ್ಯಕ್ಕೆ ಶ್ರೀಪಾದಂಗಳವರು ಪೂರ್ಣವಾಗಿ ಮೆಚ್ಚಿದರು. ಅಂದಿನ ಸಾಯಂಕಾಲ ತನಕ ಅವನು ಮಠದಲ್ಲಿ ಕಾಲಿಡಲಿಲ್ಲ. ರಾತ್ರೆ ಪೂಜೆಕಾಲದಲ್ಲಿ ನಸುನಗುತ್ತಾ,

ಧಸಿಗಳ ಸಮ್ಮುಖಕ್ಕೆ ಬಂದು ಪ್ರಣಾಮಮಾಡಿದನು. ಅವನ ಮುಖವನ್ನು ನೋಡಿ ಚಂಚಲನೇತ್ರರು ಸಂತುಷ್ಟರಾದರು. ಗಂಗಾಬಾಯಿ ಹೆಸರು ಹೋದಳು. ಮಠದ ವೈರಿಗಳು ವೃತಪ್ರಾಯವಾದರು.

ಅಪರಾಜಿತ ಸೆಟ್ಟಿಯು ಸಾಯಂಕಾಲದಲ್ಲಿ ವೇದವ್ಯಾಸನ ಮನೆಗೆ ಬಂದು ಅವನಿಗೆ ಸಂಭವಿಸಿದ ಮಾನಭಂಗವನ್ನು ಕುರಿತು ನೊಂದವನಂತೆ ತೋರಿಸಿಕೊಂಡನು. ತನ್ನ ಪ್ರಾಣವು ಆಗಲೇ ಹೊರಟು ಹೋದರೆ ಅತಿ ಉತ್ತಮವಾಗುತ್ತಿತ್ತೆಂದು ವೇದವ್ಯಾಸನು ಆ ಪರಮಸ್ನೇಹಿತನ ಕೂಡೆ ಹೇಳಿ, ಬಹಳವಾಗಿ ಕಣ್ಣೀರು ಸುರಿಸಿದನು. ಜೆಂಬಲಕ್ಕೆ ತಾನಿರುವ ಪರಿಯಂತ ಹೆದರಬೇಡವೆಂದು ಅಪರಾಜಿತನು ಧೈರ್ಯಹೇಳಿ, ಅವನ ತಮ್ಮನನ್ನು ಕರೆದು—“ಇಗೋ ನಾಚಬೇಡ, ಆ ಮುದುಕಿಯೂ ಅವಳ ಅಳಿಯನೂ ನಿಮ್ಮಿಬ್ಬರ ಮೇಲೆ ನಡೆಸಿದ ಅನ್ಯಾಯವನ್ನು ಕುರಿತು ಒಂದು ಫಿರ್ಯಾದು ಬರೆಸಿಕೊಡುತ್ತೇನೆ. ಅದನ್ನು ಕೊತ್ವಾಲರ ಮುಂದೆ ದಾಖಲ್ ಮಾಡಿಬಿಡು. ಆ ಮೇಲೆ ತಮಾಷೆ ನೋಡಬಹುದಷ್ಟೆ?” ಅಂದಾಗ ವೇದವ್ಯಾಸನಿಗೆ ಆಲೋಚನೆ ಉಚಿತವಾಗಿ ತೋರಿ “ಶಹಭಾಷ್! ಶಹಭಾಷ್!” ಎಂದು ಪ್ರಿಯ ಮಿತ್ರನನ್ನು ಬಿಗಿದಪ್ಪಿದನು. ಮರುದಿನ ಪ್ರಾತಃಕಾಲದಲ್ಲಿ ಸೆಟ್ಟಿಯು ರಾಘವೇಂದ್ರಾಚಾರ್ಯನಿಗೆ ತಾನೇ ಒಕ್ಕಣೆ ಹೇಳಿ, ಒಂದು ದೊಡ್ಡ ಆಪಾದನೆ ಪತ್ರ ಬರಸಿ ಪೇಷ್ಕಾರ ತಿಮ್ಮಯ್ಯನ ಮುಂದೆ ದಾಖಲ್ ಮಾಡಿಸಿದನು ಅದರಿಂದ ಕಾಣುವ ಅಪರಾಧ ನಡೆಸಲಿಕ್ಕೆ ಚಂಚಲನೇತ್ರರು ಮದ್ದತ್ತು ಮಾಡಿದವರೆಂದು ಬರೆದಿತ್ತು. ಈ ಪ್ರಕರಣದ ವಿಮರ್ಶೆಯನ್ನು ತಾನು ಮರು ದಿವಸವೇ ಮಾಡುವೆನೆಂದು ಪೇಷ್ಕಾರನು ಪ್ರತಿವಾದಿಗಳಿಗೆ ನಿರೂಪಗಳನ್ನು ಕ್ಷಿಪ್ರ ಬರೆಸಿ, ಸಹಿಮಾಡಿ, ದಫೇದಾರ ಗಣಪನ ಪರಿಮುಖ ತಲಪಿಸಿವನು. ಮುನ್ನಿನ ದಿನ ಆದ ಅವಮರ್ಯಾದೆಯನ್ನು ಮರೆತುಬಿಟ್ಟ ವೇದವ್ಯಾಸ ಉಪಾಧ್ಯನು ಪೂರ್ವವತ್ ಧೈರ್ಯತಾಳಿದನು. ಪಟ್ಟಣದಲ್ಲಿ ಗಲಗಲ ಹುಟ್ಟಿತು.

## ಇಪ್ಪತ್ತೊಂಬತ್ತು

ಚಂಚಲನೇತ್ರರಿಗೆ ಕಚೇರಿಯಿಂದ ನಿರೂಪ ಬಂದಾಗ—ಇದೆಂಥಾ ಕಾಟ! ಈ ವೈರಿಯ ದೆಸೆಯಿಂದ ಅರೆಘಳಿಗೆಯಾದರೂ ಕರಕರೆ ತಪ್ಪುವುದಿಲ್ಲ

ವೆಂದು ವ್ಯಥೆ ಪಡುವುದನ್ನು ನೋಡಿ--ವೆಂಕಟಪತಿಯು, ಪರ್ವಾ ಇಲ್ಲ. ತಾನು ಅದರ ವ್ಯವಸ್ಥೆ ಮಾಡುವುದಾಗಿ ಧೈರ್ಯಹೇಳಿ, ಆಂಜನೇಯಾಲಯಕ್ಕೆ ತೆರಳಿದನು. ಗಂಗಾಬಾಯಿಯೂ ಅವಳ ಅಳಿಯನೂ ತಮಗೆ ಬಂದ ನಿರೂಪಗಳನ್ನು ಆಚಾರ್ಯರಿಗೆ ತೋರಿಸಿ, ಕಚೇರಿಬಾಗಿಲು ಕಾಯುವ ಸಂಕಷ್ಟ ಬಂದೊದಗಿತೆಂದರು. ಭಯಪಡಬೇಡಿರೆಂದು ಅವರಿಗೆ ಸಮಾಧಾನ ಹೇಳಿ, ಪೇಷ್ಕಾರನ ಮನೆಗೆ ಬಂದನು. ಉಪ್ಪರಿಗೆಯ ಮೇಲೆ ಇಬ್ಬರೂ ಅಂತರಂಗ ಮಾತಾಡಲಿಕ್ಕೆ ಕೂತರು.

ಪೇಷ್ಕಾರ--"ಆಚಾರ್ಯರೇ! ಯಾಕೆ ದಯಮಾಡಿಸೋಣಾಯಿತೋ ತಿಳಿಯದು."

ವೆಂಕಟಪತಿ---"ಶ್ರೀಪಾದಂಗಳವರಿಗೆ ಒಂದು ನಿರೂಪ ಬಂದಿದೆ."

ಪೇಷ್ಕಾರ—"ಏನು ಮಾಡಲಿ? ಕಾಯಿದೆ ತಪ್ಪಿ ನಡೆಯಬಹುದೇ?"

ವೆಂಕಟಪತಿ—"ಮುಖ್ಯ ಸತ್ಯಾಸತ್ಯ ವಿಚಾರಮಾಡಬೇಕು, ಮಠದ ಮೇಲೆ ಅಭಿಮಾನವಿಡಬೇಕು. ಪೋಕರಿಗಳ ಪಂಥ ಮೇಲಾದರೆ ಸಾಧುಸಜ್ಜನರು ರಾಜ್ಯದಲ್ಲಿ ಬದುಕಿಕೊಂಡಿರುವುದು ಪ್ರಯಾಸವೇ. ಹೆಚ್ಚಿಗೆ ಅರಿಕೆ ಮಾಡಿಕೊಳ್ಳಲಿಕ್ಕೆ ಶಕ್ತನಲ್ಲ."

ಪೇಷ್ಕಾರ—ನನ್ನಿಂದ ತಮಗೇನಾಗಬೇಕು?"

ವೆಂಕಟಪತಿ—"ಶ್ರೀಪಾದಂಗಳವರಾಗಲೀ ಆ ಹೆಂಗಸಾಗಲೀ ಕಚೇರಿಗೆ ಬರಬೇಕೆಂಬ ಒತ್ತಾಯವಿರಬಾರದು."

ಪೇಷ್ಕಾರ—"ನಾನು ವಕೀಲಿ ಮಾಡಿದೆನೆಂಬ ಅಪವಾದ ಬಂದರೋ?"

ವೆಂಕಟಪತಿ—"ಹೆಂಡತಿಗೆ ಹೊಡೆಯುವುದಕ್ಕೆ ನೆವನ ಹುಡುಕುವವನಿಗೆ ಮೊಸರಲ್ಲಿ ಕಲ್ಲು ಬಂತೆಂಬ ಗಾದೆಯುಂಟು."

ಪೇಷ್ಕಾರ—"ನಾನು ಒಂದುವೇಳೆ ನಿಮ್ಮ ಅಪೇಕ್ಷೆಯಂತೆ ನಡಕೊಂಡರೆ ಕಾರಭಾರಿಗಳು ನನ್ನ ಮೇಲೆ ಜರಿದುಬಿದ್ದರೋ?"

ವೆಂಕಟಪತಿ—"ಭೋಟಾ ಕಿತಾಬಿನ ಪ್ರಕರಣಗಳಷ್ಟೇ. ತಮ್ಮ ಅಧಿಕಾರದೊಳಗಿರೋದು ಕಾರ್ಬಾರಿ. ತಮ್ಮ ಸ್ವತಂತ್ರದ ಸಣ್ಣ ಸಣ್ಣದಾವೆಗಳಲ್ಲಿ ಪ್ರವೇಶಿಸುವದುಂಟೇ? ಸುಮ್ಮಗೆ ಬರೀ ನೆವನಗಳನ್ನು ತಾವು ಹೇಳುವುದಾದರೆ ನಾನು ವ್ಯರ್ಥ ತಮ್ಮ ಸಮಯ ಹಾಳುಮಾಡುವದ್ಯಾಕೆ? ಅಪ್ಪಣೆಯಾಗಲಿ ಹೋಗುತ್ತೇನೆ. ಪ್ರೀತಿ ಇರಲಿ. ದೇವರು ಮಾಡಿದ್ದು ಆಗುತ್ತದೆ."

ಪೇಷ್ಕಾರ—“ಹಾಗೆ ಸಿಟ್ಟು ಮಾಡಬಾರದು; ಈಗಿನ ದರಬಾರೂ ಈಗಿನ ಕಾನೂನು ಬಹು ನಾಜೂಕಾಗಿವೆ. ಎಷ್ಟು ಜಾಗ್ರತೆಮಾಡಿದರೂ ಸಾಕಾಗುವದಿಲ್ಲ. ರಾಜರ ಅವಕರಣಕ್ಕೆ ಒಳಗಾದರೆ ಅನ್ನಕ್ಕೆ ಮೋಸ ಬಾರದೇ?”

ವೆಂಕಟಪತಿ—“ಇಷ್ಟು ಸಣ್ಣ ವಿಷಯದಲ್ಲಿ ಅಷ್ಟು ದೊಡ್ಡ ಯೋಚನೆ ಅಗತ್ಯವೇನು? ತಮಗೆ ಒಂದು ಮಾತಿನವಾಶಿ ಬರುವ ಹಾಗಿನ ಕೃತ್ಯ ನಮ್ಮ ಉದ್ದಿಶ್ಯಮಾಡುವುದು ಯೋಗ್ಯವಲ್ಲ. ನಾಳೆಗೆ ನಿಶ್ಚಯಿಸಿದ ಪ್ರಕರಣವನ್ನು ಸ್ವಲ್ಪ ಮುಂದರಿಸಿ ಇಡಲಿಕ್ಕೆ ಅಪ್ಪಣೆಮಾಡಿಟ್ಟರೆ ನಾವು ರಾಜಾಸ್ಥಾನಕ್ಕೆ ಹೋಗಿ ಕಿರೀ ದಿವಾನರಿಂದ ನಮ್ಮ ಅಪೇಕ್ಷೆಯನ್ನು ಪೂರೈಸಿಕೊಳ್ಳುವ ಪ್ರಯತ್ನ ನಡಿಸುತ್ತೇನೆ.

ಇಷ್ಟರಲ್ಲಿ ತನ್ನ ಸಂಭಾಷಣೆಯನ್ನು ನಿಲ್ಲಿಸಿಬಿಟ್ಟು, ವೆಂಕಟಪತಿಆಚಾರ್ಯನು ಎದ್ದು, ಬಲಕೈಯ ಎರಡು ಬೆರಳುಗಳನ್ನು ಎತ್ತಿ ಸಂಜ್ಞೆತೋರಿಸಿದ್ದಲ್ಲಿ ಪೇಷ್ಕಾರನು ತುಟಿಗಳನ್ನು ಅಮರಿಸಿ, ತಲೆಯನ್ನು ಅಲುಗಾಡಿಸುವುದರ ದ್ವಾರ ಸಾಲದೆಂಬ ಭಾವವನ್ನು ತೋರಿಸಿದನು. ಮತ್ತೆಷ್ಟುಬೇಕೆಂದು ತಿಳಿಯುವದಕ್ಕೋಸ್ಕರ ಆಚಾರ್ಯನು ಕೈಮುಷ್ಟಿ ಆಡಿಸುವುದನ್ನು ನೋಡಿ, ಪೇಷ್ಕಾರನು ತನ್ನ ಐದು ಬೆರಳುಗಳನ್ನು ಬಿಡಿಸಿತೋರಿಸಿದನು. ಆಗ ಆಚಾರ್ಯನು ಮೂರು ಬೆರಳುಗಳನ್ನು ಎತ್ತಿತೋರಿಸಿ–“ಇಷ್ಟವಿದ್ದರೆ ಹೇಳಿ, ಇಲ್ಲವಾದರೆ ನಡೆಯುತ್ತೇನೆ” ಎಂದನು. ಪೇಷ್ಕಾರಗೆ ಆಶೆ ಬಿಡವಲ್ಲದು. ಮೂರು ಬೆರಳುಗಳನ್ನೆತ್ತಿ ನಾಲ್ಕನೇ ಬೆರಳಿನ ನಡುವಿಗೆ ಇನ್ನೊಂದು ಕೈಯ ತರ್ಜನಿ ಬೆರಳನ್ನು ಅಡ್ಡಹಿಡಿದು ಮೂರುವರೆ ಎಂಬ ಸಂಕೇತವನ್ನು ತೋರಿಸಿದನು. ಆಗ್ಯೆ ಒಪ್ಪಿಗೆ ಸಿಕ್ಕಿತು. “ಮುನ್ನೂರ ಐವತ್ತು, ಮತ್ತೆ ಮೂರು ಸಾವಿರದ ಐನೂರೆಂದು ಜಗಳ ಮಾಡುವ ಹಾಗಾಗಬಾರದು; ತಿಳಿದಿರಬೇಕು ಎಂದು ವೆಂಕಟಪತಿ ಆಚಾರ್ಯನು ಸಣ್ಣ ಸ್ವರದಿಂದ ಪೇಷ್ಕಾರನ ಕಿವಿಯಲ್ಲಿ ಹೇಳಿ, ಹೊರಟನು. ಚಂಚಲನೇತ್ರರು ತನ್ನ ಪಾರುಪತ್ಯಗಾರನ ಚಾತುರ್ಯಕ್ಕೆ ಮರುಳಾದರು.

ಮರುದಿನ ಮಧ್ಯಾಹ್ನ ರಾಘವೇಂದ್ರಉಪಾಧ್ಯನು ಪೇಷ್ಕಾರನ ಮುಂದೆ ನಿಂತಾಗ ಅವನ ವಾಜ್ಮೂಲವನ್ನು ಗುಮಾಸ್ತನು ಬರಕೊಂಡನು. ಅವನ ಹೇಳಿಕೆಯಿಂದ ಗಂಗಾಬಾಯಿಯ ಅಳಿಯನ ಮೇಲೆ ಯಾವುದೊಂದು ಅಪ

ರಾಧ ಸ್ಥಾಪನೆಯಾಗುವ ಸಂಭವ ತೋರಿಬಾರದೆ, ಅವನನ್ನು ವಿಮೋಚನೆ ಮಾಡೋಣಾಯಿತು. ಗಂಗಾಬಾಯಿಗೆ ಕಚೇರಿಗೆ ಬರಲಿಕ್ಕೆ ಒತ್ತಾಯಪಡಿಸ ಬೇಕಾದರೆ ಅವಳು ಅಪರಾಧಿ ನಿಜವೆಂಬುದರ ತಾರ್ಕಣೆಗಾಗಿ ಸಾಕ್ಷವನ್ನು ಮುಂದಾಗಿ ತರಬೇಕಾದ್ದಲ್ಲದೆ, ಚಂಚಲನೇತ್ರರು ಮಠದಿಂದ ಆ ದಿವಸ ಹೊರಗೆ ಹೊಡಲಿಲ್ಲವಾಗಿ ವಾದಿಯೇ ಒಪ್ಪುವುದರಿಂದ ಅವರನ್ನು ಕುರಿತು ಸಾಕ್ಷ ಮುಂದಾಗಿ ಕೊಟ್ಟ ವಿನಾ ಅವರ ಮೇಲೆ ಯಾವದೊಂದು ದೋಷಾ ರೋಪಣೆಗೆ ಸಂದರ್ಭವಾಗದೆಂದು ಪೇಷ್ಕಾರನು ವಿಧಿಸಿದನು. ವಾದಿಯು ಸಾಕ್ಷಿಗಾರರನ್ನು ತರುವುದಕ್ಕೆ ಒಂದು ದಿವಸದ ವ್ಯವಧಾನ ಪಡಕೊಂಡು ಕಛೇರಿಯಿಂದ ಹೊರಟು ಬರುವಾಗ ದಾರಿಯಲ್ಲಿ ಕಾದಿರುವ ಅಪರಾಜಿತ ಸೆಟ್ಟಿಯು ಕಚೇರಿಯಲ್ಲಿ ಅಂದು ನಡೆದ ವೃತ್ತಾಂತವನ್ನು ವಾದಿಯ ಮುಖೇನ ತಿಳಿದು, ವಾದಿಯ ವಾಗ್ಮೂಲ ಅಷ್ಟು ಪರಿಷ್ಕಾರವಾಗಿಲ್ಲವೆಂದು ದುಮ್ಮಾನ ಪಡುವವನಂತೆ ಮುಖವಿಕಾರ ಮಾಡಿದನು. “ಆದ್ದಾಯಿತಲ್ಲಾ, ಸಾಕ್ಷಿ ಗಾರರನ್ನು ಎಲ್ಲಿಂದ ತರೋಣ? ನಮ್ಮ ಮಾತು ಯಾರು ಕೇಳುವ ಹಾಗಿದೆ?” ಎಂದು ವೇದವ್ಯಾಸನು ನಿಟ್ಟುಸಿರುಬಿಟ್ಟನು. ಕೈಸನ್ನೆಯಿಂದ ಅವನನ್ನು ಮನೆಗೆ ಹೋಗಹೇಳಿ, ಅಪರಾಜಿತನು ಥಟ್ಟನೆ ನೇಮುರಾಜನನ್ನು ಕಂಡು ಅಂತರಂಗದಲ್ಲಿ ಅವನ ಕೂಡೆ ಮಾತಾಡಿ, ತಿರುಗಿ ಬಂದು, ವೇದವ್ಯಾಸಗೆ ಸಾಕ್ಷಿಗಾರರನ್ನು ಒದಗಿಸಿಕೊಳ್ಳಲಿಕ್ಕೆ ತಾನು ಮಾಡಿ ಬಂದ ಪ್ರಯತ್ನವನ್ನು ವರ್ಣಿಸಿದನು. ವೇದವ್ಯಾಸಗೆ ತಲೆಯೇರಿತು. ಇಷ್ಟು ಪ್ರಿಯಕರವಾದ ಮಿತ್ರನು ತನಗೆ ಶ್ರೀವ್ಯಾಸರಘುಪತಿಯ ದಯದಿಂದ ದೊರಕಿದನೆಂದು ತನ್ನ ಅನುಜಗೆ ಹೇಳಿದನು. ಸತ್ಯವೆಂದು ರಾಘವೇಂದ್ರ ಉಪಾಧ್ಯನು ಚಿಟ್ಟೆಲಿ ಯಂತೆ ಮುಖವನ್ನು ಮುದುರಿಸಿಕೊಂಡು ಆನೆಯಂತೆ ತಲೆದೂಗಿದನು.

ಮೂರನೆ ದಿನ ಕಚೇರಿಗೆ ಹಾಜರಾಗುವುದಕ್ಕೆ ಒಂದು ತಾಸಿನಷ್ಟು ವ್ಯವಧಾನ ಇರುವಾಗ್ಗೆ ಅಪರಾಜಿತನು ವೇದವ್ಯಾಸನನ್ನು ನೇಮುರಾಜನಲ್ಲಿಗೆ ಕಳುಹಿಸಿದನು. ನೇಮುರಾಜನು ತನ್ನ ಚಾಕರರಲ್ಲಿ ನಾಲ್ವರನ್ನು ಕರೆದು, ಹಾರುವನ ಸಂಗಡ ಹೋಗಲಾಜ್ಞಾಪಿಸಿದನು. ಅವರನ್ನು ಕರಕೊಂಡು, ಅವರ ಸಂಗಡ ಒಂದು ಮಾತಾದರೂ ಆಡದೆ, ವೇದವ್ಯಾಸನು ಕಚೇರಿಗೆ ತಲಪಿದನು. ಸಾಕ್ಷಿಗಾರರನ್ನು ನೋಡುವದಕ್ಕೆ ಪೇಷ್ಕಾರನು ಅಪೇಕ್ಷಿಸು ತ್ತಲೇ, ಆ ನಾಲ್ವರನ್ನು ಅವನ ಮುಂದೆ ನಿಲ್ಲಿಸೋಣಾಯಿತು. ಅವರಲ್ಲಿ

ಒಬ್ಬನನ್ನು ತನ್ನ ಸಮುಕ್ಷಮದಲ್ಲಿ ನಿಲ್ಲಿಸಿ ಜೇರೆ ಮೂವರನ್ನು ಸಾಕ್ಷಿಗಾರರನ್ನು ಕೂಡ್ರಿಸುವ ಕೋಣೆಗೆ ಒಯ್ಯುವದಕ್ಕೆ ಪೇಷ್ಕಾರನ ಅಪ್ಪಣೆಯಾದಂತೆ ದಫೇದಾರನು ನಡಕೊಂಡನು.

ಈ ಫಿರ್ಯಾದು ಕುರಿತು ನೀನು ಏನು ಬಲ್ಲಿ? ಎಂಬ ಪ್ರಶ್ನೆಗೆ ಮೊದಲನೇ ಸಾಕ್ಷಿಗಾರನು—"ನಾನೇನೂ ಅರಿಯೆ, ಬುದ್ಧಿ; ನಾಲ್ಕು ರೂಪಾಯಿ ಈಸುಕೊಂಡು, ಬಂದು ಸುಳ್ಳು ಸಾಕ್ಷಿ ಹೇಳೆಂದು ವೇದವ್ಯಾಸ ಉಪಾಧ್ಯನು ದುರ್ಬೋಧನೆ ಕೊಡುತ್ತಾ, ನನಗೆ ಇಲ್ಲಿ ವರೆಗೆ ಎಳಕೊಂಡು ಬಂದದ್ದೊಂದು ಸಂಗತಿ ಅಲ್ಲದೆ ಇನ್ನೇನೂ ನಾನು ತಿಳಿದವನಲ್ಲ" ಎಂದು ಅವನು ಪ್ರತ್ಯುತ್ತರ ಕೊಟ್ಟನು. ಪೇಷ್ಕಾರನು ನೆಗಾಡಿ, ಆ ಸಾಕ್ಷಿಗಾರನಿಗೆ ಹೋಗಬಿಟ್ಟನು. ಉಳಿದ ಮೂವರಲ್ಲಿ ಒಬ್ಬೊಬ್ಬನನ್ನೇ ಕೇಳಿದಾಗ ಅವರು ಹಾಗೆಯೇ ಹೇಳಿದರು. ವಿಮರ್ಶೆ ಅಂತ್ಯವಾಯಿತು. ಮಾರನೇ ದಿವಸ ತೀರ್ಪು ಕೇಳುವುದಕ್ಕೆ ಬರಬೇಕೆಂದಾಜ್ಞೆಯಾಯಿತು. ಉಪಾಧ್ಯರಿಬ್ಬರು ಕಪ್ಪು ಮೋರೆಗಳನ್ನು ಯಾರು ಕಾಣದ ಹಾಗೆ ಬೀದಿಗೆ ಇಳಿದರು. ಅಪರಾಜಿತನನ್ನು ನೋಡಿ—"ಎಂಥಾ ಸಾಕ್ಷಿಗಾರರನ್ನು ಮಾಡಿಕೊಟ್ಟೆರಿ, ಪ್ರಿಯರೇ?" ಎಂದು ವೇದವ್ಯಾಸನು ಹೀಯಾಳಿಸಿದನು. "ಕಾಸು ಬಿಚ್ಚಲಿಕ್ಕೆ ಆಶೆಯಾಗುವ ನಿನ್ನಂಥಾ ಕೃಪಣಗೆ ಪಂಥವ್ಯಾಕೆ? ನಿನ್ನ ಸಹಾಯಕ್ಕೆ ಬಂದ ದೆಸೆಯಿಂದ ನನಗೂ ಅವಮಾನವಾಯಿತು. ನೀನು ಹೊಳೆಗೆ ಹಾರು" ಎಂದು ಸೆಟ್ಟಿಯು ನಡೆದುಬಿಟ್ಟನು. ಮತ್ತು ಶೀಘ್ರ ನೇಮರಾಜನನ್ನು ಕಂಡು—"ವೇದವ್ಯಾಸಗೆ ಮಂಗಳಪದವಾಯಿತು. ವಾಗ್ದತ್ತಮಾಡಿದ ಹಣ ಈಗಲೇ ಕೊಡು; ತೀರ್ಪು ನಾಳೆ ಕೊಡಲ್ಪಡುವದು" ಎಂದು ಹೇಳಿಕೊಂಡನು. ನೇಮರಾಜನು ಪ್ರಕರಣ ಪೂರ್ಣವಾಗಿ ತೀರಿದ ಬಳಿಕ ಹಣ ಕೊಡುವದಕ್ಕೆ ಅಡ್ಡಿ ಇಲ್ಲವೆಂದನು. ಆದಕ್ಕೆ ಅಪರಾಜಿತನು ಒಪ್ಪದೆ, ಕೂಡಲೇ ವಾಗ್ದಾನ ಪೂರೈಸದಿದ್ದರೆ ಹೆಣಕಟ್ಟಿದ ಪ್ರಕರಣಕ್ಕೆ ಪುನರ್ಜೀವ ಮಾಡುವ ಯುಕ್ತಿ ಹುಡುಕುವೆನೆಂದು ಖತಿಗೊಂಡನು. "ಒಳ್ಳೇದು, ಸೀದಾ ಊರಿಗೆ ನಡಿ. ಇನ್ನೇನೂ ಕಿತಾಪತಿ ಮಾಡಿದರೆ ಯಲುವಿನ ಚಕಣಾಚೂರು ಮಾಡಿಸುವೆನು" ಎಂದು ಗದರಿಸಿ, ನೇಮರಾಜನು ವಾಗ್ದತ್ತಮಾಡಿದಷ್ಟು ದ್ರವ್ಯವನ್ನು ಕೊಟ್ಟು, ಅಪರಾಜಿತನನ್ನು ಅಟ್ಟಿದನು. ಮುಂದಿನ ಸ್ಥಿತಿ ಹ್ಯಾಗಾದೀತೆಂಬ ಹೆದರಿಕೆಯಿಂದ ಉಪಾಧ್ಯಾಯರಿರ್ವರ ಎದೆ ಹಾರಲಿಕ್ಕೆ ತೊಡಗಿತು.

ಅವರಿಗೆ ಆ ರಾತ್ರೆ ಕಣ್ಣಿಗೆ ನಿದ್ರೆ ಹತ್ತಲಿಲ್ಲ.

ಅದೇ ರಾತ್ರಿಯಲ್ಲಿ ವೆಂಕಟಪತಿ ಆಚಾರ್ಯನು ಪೇಷ್ಕಾರನ ಮನೆಗೆ ಹೋಗಿ ಅವನ ಭೇಟಿ ಮಾಡಿದನು. ಅವರಲ್ಲಿ ಸಂಭಾಷಣೆ ಆರಂಭವಾಯಿತು.

ಪೇಷ್ಕಾರ—"ಆಚಾರ್ಯರೇ! ತಮಗೆ ಕೊಟ್ಟ ಭಾಷೆ ಸಲ್ಲಿಸಿನೆನಲ್ಲಾ. ತಂದಿದ್ದೀರೋ."

ವೆಂಕಟಪತಿ—"ಕೊಡದಿದ್ರೆ ನಾಳೆ ನೀವು ತೀರ್ಪು ಕೊಡೋಣಾಗಲಿಕ್ಕಿಲ್ಲವಷ್ಟೇ. ಮತ್ತೊಂದು ಸಣ್ಣ ಪ್ರಸ್ತಾಪವಿದೆ."

ಪೇಷ್ಕಾರ—"ಅದು ಯಾವದಪ್ಪಾ?"

ವೆಂಕಟಪತಿ—"ಲಂಚದ ಆಶೆ ತೋರಿಸಿ ಸುಳ್ಳು ಸಾಕ್ಷಿ ಕೊಡಲಿಕ್ಕೆ ಪ್ರಯತ್ನಮಾಡಿದ ತಪ್ಪು ವೇದವ್ಯಾಸನ ಮೇಲೆ ಆರೋಪಣೆ ಮಾಡುವುದಕ್ಕೆ ಅವನ ತಮ್ಮನ ಕಡೆ ಸಾಕ್ಷಿಗಾರರಿಂದಲೇ ಇಂಬುಸಿಕ್ಕಿದ ಹಾಗಾಯಿತು. ಆ ದೋಷಕ್ಕೆ ವಾದಿಯು ಸಹಕಾರಿಯಾಗುತ್ತಾನಷ್ಟೆ. ಆತಾಪಿವಾತಾಪಿಗಳಂತಿರುವ ಇವರಿಬ್ಬರು ದುರುಳರನ್ನು ಕೊಂಚಕಾಲಕ್ಕಾದರೂ ಜ್ಞಾನಮಂಟಪದಲ್ಲಿ ಕೂಡ್ರಿಸಿದರೆ ತಮ್ಮ ಉಪಕಾರ ಶ್ರೀಪಾದಂಗಳವರು ಮರೆಯರು."

ಪೇಷ್ಕಾರ—"ಒಂದೇ ಚಪ್ರದಲ್ಲಿ ಏಕಕಾಲದಲ್ಲಿ ಎರಡು ಮದುವೆಗಳನ್ನು ಮಾಡಿಬಿಟ್ಟರೆ ಊಟದ ಖರ್ಚು ಅರೆವಾಸಿ ಉಳಿದ ಹಾಗೆ ಆಗುತ್ತದೆ. ತಮ್ಮ ಆಲೋಚನೆ ಚಲೋದು."

ವೆಂಕಟಪತಿ—"ಎರಡು ಮದುವೆಗಳನ್ನು ಒಬ್ಬನೇ ಪುರೋಹಿತನು ಮಾಡಿಸುವುದಾದರೆ ಒಂದೇ ಸೌವ್ಯ ಕೊಡಕೂಡದು, ಹೆಚ್ಚು ಕೊಡಬೇಕು. ನಾನು ಚೆನ್ನಾಗಿ ಬಲ್ಲೆ. ಇಕ್ಕೊಳ್ಳಿ."

ಹೀಗೆಂದು ವೆಂಕಟಪತಿ ಆಚಾರ್ಯನು ಒಂದು ಥೈಲಿ ತುಂಬಾ ರೂಪ್ಯಾಗಳನ್ನು ಪೇಷ್ಕಾರನ ಕಣ್ಣುಗಳ ಮುಂದೆ ಮಡಗಿದೊಡನೆ ಐನೂರು ರುಪ್ಯಾ ಬುಟ್ಟಿಗೆ ಉಂಟೆಂಬ ಸಂತೋಷದಿಂದ ಅವನು ಹಾಸ್ಯವದನಯುಕ್ತನಾಗಿ ಹಣದಚೀಲ ಮನೆಯೊಳಗೆ ಇಟ್ಟುಬಿಟ್ಟು-"ಯಾರೆಲೆ ಜವಾನ! ಬೆಳ್ಳಿಯ ದೊಡ್ಡ ಹರಿವಾಣದಲ್ಲಿ ತಾಂಬೂಲ ತೆಗೆದುಕೊಂಡು ಬಾ" ಎಂದು ಕೂಗಿದನು. ಪೇದೆ ಶಿವಾಚಾರದ ಬಸವಪ್ಪನು ಸಣ್ಣ ಹರಿವಾಣದಲ್ಲಿ ವೀಳ್ಯದೆಲೆಯನ್ನಿಟ್ಟು —"ಮತ್ತೆ ದೊಡ್ಡ ಶಿವಾಣ ಕಾಣದೆ ಹೋಯಿತು. ಸಣ್ಣ ಶಿವಾಣದಿಂದ

ಸುಧಾರಿಸಿಬಿಟ್ಟಿ ಶರಣು” ಅಂದನು. ವೆಂಕಟಪತಿ ಆಚಾರ್ಯರಿಗೆ ಇರುವೆ ಕಚ್ಚಿದಂತಾಯಿತು. —“ಆಹಾ! ಹರಿವಾಣವೆಂಬ ಸರಸಪದ ನಾಲಿಗೆಗೆ ಬಾರದ ಇಂಥಾ ಪಾಷಾಂಡಿಯು ತಮ್ಮ ನೌಕರಿಯಲ್ಲಿ ಹ್ಯಾಗೆ ಸೇರಿಬಿಟ್ಟನೋ! ತಿಳಿಯದು” ಎಂದು ಪೇಷ್ಕಾರಗೆ ವಾಗ್ದಂಡನೆ ರೂಪವಾಗಿ ಹೇಸಿಸಿದ ಆಚಾರ್ಯರಿಗೆ ತಾನು ಹರಿಹರಪರಾಯಣನೆಂದು ಪೇಷ್ಕಾರನು ಉತ್ತರಕೊಟ್ಟನು.

ಮುಂಜಾನೆ ಉಪಾಧ್ಯರಿಬ್ಬರೂ ಎದ್ದು ಹರಿಸ್ಮರಣೆ ಮಾಡುತ್ತಾ ಇದ್ದು ನಿತ್ಯಾಹ್ನಿಕವನ್ನು ತೀರಿಸಿ ಊಟದ ಸಮಯಕ್ಕೆ ಹ್ಯಾಗೂ ಎಲೆಯ ಮೇಲೆ ಕೂತೆದ್ದು ಕಚೇರಿ ಬಾಗಲು ಕಾಯುವದಕ್ಕೋಸ್ಕರ ಹೊರಟರು. ದಾರಿಯಲ್ಲಿ ದಫೆದಾರ ಗಣಪನು ಸಿಕ್ಕಿದನು—“ಅಯ್ಯಾ! ಗಣಪ ದಫೆದಾರ! ನಮ್ಮ ಅವಸ್ಥೆ ಇಂದ್ಹ್ಯಾಗಾಗುತ್ತೆ ಹೇಳು, ಮಹಾರಾಯ!” ಎಂದು ವೇದವ್ಯಾಸನು ಕೇಳಿದನು. —“ಸ್ವಾಮೀ! ನಾಂ ಹ್ಯಾಂಗೆಳೋದು! ನಿಮ್ಮ ಕೈಯಲ್ಲಿ ಹಣ ಕಾಸಿಲ್ಲಾ! ನಿಮ್ಮ ದೊಡ್ಡ ದೊಡ್ಡ ನಾಮಕ್ಕೆ ಯಾರು ಬಿಸಾತುಮಾಡುತ್ತಾರೆ? ಇರ್ವರಿಗೆ ಕಬ್ಬಿಣದ ಕೆಲ್ಸ ಯಾಕೆ? ನಮ್ಮ ಸ್ವರೂಪತಕ್ಕ ನಾವಿರಬೇಕು. ಸುಮ್ಮಗೆ ಹಾರಿದರೆ ಸೊಂಟಾನೂ ಕಾಲೂನೂ ಮುರ್ಕೊಳ್ಳಿಕೆ ಆದೀತು. ಜಪೆದಾರ್ರೆ ಜಪೆದಾರ್ರೆ ಅಂದಿಯಾರು ನನಗೆ ಕರದಿ? ಇದು ಹ್ಯಾಂಗಾದೀತು? ಅದು ಹ್ಯಾಂಗಾದೀತು? ಅಂದು ಕಾಟಕೇಳೊದುಂಟು. ನನ್ನ ಮಾತು ಈಗ ಯಾರು ಕೇಳುತ್ತಾರೆ? ಆದರೂನೂ ಹಾಂಗೇ ಹೇಳಿಬಿಟ್ಟರೆ ನಮ್ಮ ಆಬ್ರುವೇ ಹೋದಿತಲ್ಲಾ! ಅದಕ್ಕಾಗಿ ನಾನಿದ್ದೇನೆ ಹೆದ್ರಬೇಡಾ ಅಂದು ಕಾಟಿ ನಾನು ಧೈರ್ಯ ಹೇಳೋದುಂಟು. ಹಾಂಗೆ ಹೇಳಿದ್ರೆ ಎಲೆ ಅಡಿಕೆ ತಿಂನಂತೆ ಆದರೂ ಬಗೆ ಆಗ್ತೆತೆ. ಹಾಗಂದಿ ನಿಮಗೆ ಬಿರಾಮರಿಗೂ ಠಕ್ಕು ಹಾಕಕ್ಕೆ ನನ್ನಿಂದೆಡೀದು” ಎಂದು ದಫೇದಾರನ ಪ್ರತ್ಯುತ್ತರವಾಯಿತು. ವೇದವ್ಯಾಸ ಉಪಾಧ್ಯನು ಹಣೆಯನ್ನು ಕೈಯಿಂದ ಬಡಕೊಂಡು ಪತಿವ್ರತೆಯಾದ ತನ್ನ ಹೆಂಡ್ತಿಯ ಮಾತು ಕೇಳಿರುತ್ತಿದ್ದ ಪಕ್ಷದಲ್ಲಿ ಇಂಥಾ ದುರವಸ್ಥೆ ಪ್ರಾಪ್ತಿಯಾಗುತ್ತಿದ್ದಿಲ್ಲವೆಂದು ಈಗ ಅವನ ಮನಸಿಗೆ ಖಚಿತವಾಯಿತು. “ವಿಪ್ರಾಃ ಪಶ್ಚಿಮ ಬುದ್ಧಯಃ”

ಎಂದಿನಂತೆ ಪೇಷ್ಕಾರನ ಸವಾರಿಯು ಬಂತು. ದಫೇದಾರನು ಕಕ್ಷಿಗಾರರಿಗೆ ಕರೆದು ಎದುರು ನಿಲ್ಲಿಸಿದನು. ತೀರ್ಪು ನುಡಿಯಲಿಕ್ಕೆ ಪ್ರಾರಂಭವಾಯಿತು. “ಪ್ರತಿವಾದಿ ಮೇಲೆ ನಿರ್ನಿಮಿತ್ತರಾಗಿ ದೋಷಾರೋಪಣೆ

ಮಾಡೋಣಾದ್ದು ವಾದಿಯ ದ್ವೇಷಸಾಧನೆಯು ಉಪಾಯವೆಂದು ಕಾಣು ವದು. ವಾದಿಯ ಅಣ್ಣ ವೇದವ್ಯಾಸನ ನಡತೆಯು ಅತಿ ನೀಚತರದ್ದು; ಲಭ್ಯದ ಆಶೆಯನ್ನು ತೋರಿಸಿ ಸತ್ಯವಾದಿಗಳಾದ ಸಾಕ್ಷಿಗಾರರಿಂದ ಸುಳ್ಳು ಹೇಳಿಸ ಲಿಕ್ಕೆ ಪ್ರಯತ್ನಿಸಿದ ವಿದ್ಯಮಾನ ನೋಡಿದರೆ ಅವನು ದೊಡ್ಡ ದ್ರೋಹಿಯೆಂದು ತಿಳಿಯಬೇಕು. ಸೂರ್ಯನಾರಾಯಣನ ಬ್ರಹ್ಮ ಪ್ರತಿಷ್ಠೆಗೆ ವಿಘ್ನ ತರ ಬೇಕೆಂಬ ದುರಾಲೋಚನೆಯಿಂದ ಅಣ್ಣ ತಮ್ಮಂದಿರಿಬ್ಬರೂ ನಿರಪರಾಧಿಗಳ ಮೇಲೆ ಸುಳ್ಳು ಫಿರ್ಯಾದು ಮಾಡಿದ ವಿದ್ಯಮಾನವು ಅವರ ನಡತೆಯಿಂದಲೇ ಸ್ಪಷ್ಟವಾಗುವದರಿಂದ ಅವರ ಕೃತ್ಯಕ್ಕೆ ಸರಿಯಾದ ಶಿಕ್ಷೆಯನ್ನು ಕೊಡದೆ ಹೋದರೆ ಇನ್ನು ಮುಂದೆ ಅವರು ಸೊಕ್ಕಿ ಇಲ್ಲದ ಅನಾಹುತ ಮಾಡುವರು. ಆದ ಪ್ರಯುಕ್ತ ಅವರು ೧೦ ರೂಪಾಯಿ ಅಪರಾಧ ಕೊಡಬೇಕು. ಮತ್ತು ಮೂರು ತಿಂಗಳ ವರೇಗೆ ತಂಟೆ ತರಾರತ್ ಮಾಡಲಾರೆವೆಂದು ಜಾಮೀನು ಕೊಡಬೇಕು. ಹಾಗೆ ಕೊಡದೆ ಹೋದರೆ ಸೆರೆಮನೆಯಲ್ಲಿರಬೇಕಾಗುವುದು ” ಈ ವಕ್ಕಣೆಯುಳ್ಳ ತೀರ್ಪನ್ನು ಪೇಷ್ಕಾರನು ಓದಿ ಹೇದಾಕ್ಷಣ ಉಪಾಧ್ಯರ ಮುಖಗಳು ನಿಸ್ತೇಜವಾದವು. ಸಾಲ ಕಡಮಾಡಿ ಅಪರಾಧದ ಹಣವನ್ನು ಸತ್ವರ ತೆತ್ತರು. ಜಾಮೀನು ನಿಲ್ಲಲಿಕ್ಕೆ ಯಾರೂ ಸಮ್ಮತಿಸಲಿಲ್ಲ. ಅವರು ಮೂರು ದಿವಸಗಳಷ್ಟು ವ್ಯವಧಾನಕ್ಕೆ ಅಪ್ಪಣೆಯಾಗಲಪೇಕ್ಷಿಸಲು ಅದುವ ರೆಗೆ ನಜರು ಬಂದಿಯಲ್ಲಿರಬೇಕೇ ಹೊರ್ತು ಬೇರೇನೂ ಉಪಾಯವಿಲ್ಲವೆಂಬ ಪ್ಪಣೆಯಾಯಿತು. ಅಂದು ಉಭಯತರು ನಜರ ಬಂದಿಯಲ್ಲಿ ಕಾಲ ಕಳೆದರು. ಮರುದಿವಸವೂ ಹಾಗೆಯೇ ಇರಬೇಕಾಯಿತು. ಮೂರನೇ ದಿವಸ ಪರವೂರ ಲ್ಲಿರುವ ಅವರ ಸೋದರಮಾವ ನರಸಿಂಹಭಟ್ಟನು ಜಾಮೀನು ನಿಂತು ಅಳಿಯಂದಿರನ್ನು ವಿಮೋಚನೆ ಪಡಿಸಿ ಇನ್ನು ಮುಂದೆ ಆದರೂ ದೊಡ್ಡವರ ಕೂಡೆ ದ್ವೇಷ ಕಟ್ಟಿಕೊಳ್ಳದಿದ್ದರೆ ಸೆರೆಮನೆಗೆ ಹೋಗದೆ ಸುಖವಾಗಿರಬಹು ದೆಂದನು.

ಉಪಾಧ್ಯರಿಬ್ಬರೂ ನಜರಬಂದಿಯಲ್ಲಿರುವ ಕಾಲದಲ್ಲಿ ಸೂರ್ಯನಾರಾ ಯಣನ ಉಪನಯನಕ್ಕೆ ಇಟ್ಟ ಮುಹೂರ್ತದಲ್ಲಿ ದೊಡ್ಡ ಸಂಭ್ರಮದಿಂದ ಆ ಶುಭಕಾರ್ಯವು ನಿರ್ವಹಿಸಲ್ಪಟ್ಟಿತು. ಸಾವಿರಾರು ದ್ವಿಜರು ಮೃಷ್ಟಾಂನ ಉಂಡು ದಣಿದ್ದರು. ಕೈ ತುಂಬಾ ದಕ್ಷಿಣೆಯು ಅವರಿಗೆ ಸಿಕ್ಕಿತು. ಆಬಾಚಾ ರ್ಯನ ಆಹ್ಲಾದವು ಮೇರೆವರೆಯಿತು. ವಾಗ್ದೇವಿಯ ಹರುಷ ಭರ್ತದ

ನೀರಿನೋಪಾದಿಯಲ್ಲಿ ಉಕ್ಕೇರಿತು. ಚಂಚಲನೇತ್ರರ ಮಂದಸ್ಮಿತವದನ ಆನಂದ ಭಾಷ್ಪಗಳಿಂದ ತೋದು ಹೋಯಿತು. ವಾಗ್ದೇವಿಯ ತಂದೆತಾಯಿಗಳು ಆ ಕಾಲವಲ್ಲಿ ಕೊಂಚ ಜಾಡ್ಯದಲ್ಲಿರುವ ದೆಸೆಯಿಂದ ಒದುರು ಬರಲಿಕ್ಕೆ ಉಚಿತವಲ್ಲದ ಸ್ಥಿತಿಯಲ್ಲಿದ್ದರೂ ಮೊಮ್ಮಗನ ಉಪನಯನವು ನಿರ್ವಿಘ್ನವಾಗಿ ಆಯಿತೆಂಬ ಸಂತೋಷಸುಖವನ್ನು ಅನುಭವಿಸಿದರು. ಪುರವಾಸಿಗಳಾಗಲೀ ಪರಊರಿನವರಾಗಲೀ ಅಂದಿದ ಪ್ರಸ್ತವು ಬೇಗನೆ ಮರವೆಗೆ ಬಾರದ ಹಾಗೆ ಉಂಡುತಿಂದು ಸುಖಿಯಾಗಿ ಸೂರ್ಯನಾರಾಯಣನು ದೀರ್ಘಾಯುವಾಗಿಯೂ ತಂದೆ ತಾಯಿಗಳಿಗೆ ಸುಪ್ರೀತನಾಗಿಯೂ ಸದಾಚಾರಪ್ರಿಯನಾಗಿಯೂ ಸುಜನಪ್ರೇಮಿಯಾಗಿಯೂ ಅನನ್ಯಭಾವದಿಂದ ಭಗವಂತನನ್ನು ಧ್ಯಾನಿಸಿ ಅವನ ಅನುಗ್ರಹಕ್ಕೆ ಯೋಗ್ಯನಾದ ಸುಪುತ್ರನಾಗಿಯೂ ತೋಭಿಸಲೆಂದು ಆಶೀರ್ವದಿಸಿದರು.

ಪೇಷ್ಕಾರನಿಗೂ ಅವನ ಕಚೇರಿಯ ಒಳ ಉದ್ಯೋಗಸ್ಥರಿಗೂ ವೆಂಕಟಪತಿ ಆಚಾರ್ಯನು ಮರೆಯಲಿಲ್ಲ. ಅವರಿಗೆಲ್ಲಾ ತಾರತಮ್ಯಾನುಸಾರವಾದ ಉಡುಗೊರೆಗಳನ್ನು ಕೊಟ್ಟು ಮನ್ನಿಸುವುದರಲ್ಲಿ ಏನೂ ವ್ಯತ್ಯಾಸ ಬರಲಿಲ್ಲ. ಈ ಉಪನಯನದ ಕಾಲವು ಕುಮುದಪುರ ವಾಸಿಗಳಲ್ಲಿ ಉಪಾಧ್ಯಾಯರಿಬ್ಬರ ಹೊರತು ಮಿಕ್ಕ ಸರ್ವರಿಗೂ ಇಷ್ಟತರವಾಯಿತು. ಸ್ವಜಾತಿ ಪರಜಾತಿಯವರು. ಯಥೋಚಿತ ಉಪಚಾರಗಳಿಂದ ಸಂತುಷ್ಟರಾಗಿ ವಟುವಿನ ಅಭ್ಯುದಯವನ್ನು ಬಯಸುವವರಾದರು. ಮಠದ ಮೇಲೆ ವೈರಭಾವ ತಾಳಿದ ಅಪರಾಜಿತಸೆಟ್ಟಿಯೂ ಅಸಂತುಷ್ಟನಾಗಲಿಲ್ಲವಷ್ಟೆ. ಬುಟ್ಟಿಗೆ ಒಂದು ಸಾವಿರ ರುಪಾಯಿಗಳನ್ನು ಪ್ರಯಾಸವಿಲ್ಲದೆ ಸಂಪಾದಿಸಿದ ದೆಸೆಯಿಂದ ಅವನ ಮನಸ್ಸೂ ಮಠದ ಕಡೆಗೆ ಆಕರ್ಷಿಸಲ್ಪಟ್ಟಿತು. ವೇದವ್ಯಾಸ ಉಪಾಧ್ಯಗೂ ರಾಘವೇಂದ್ರ ಉಪಾಧ್ಯಗೂ ಮಾತ್ರಶೋಕಾಸ್ಪದವಾಯಿತು. ಗಂಗಾಬಾಯಿಯಿಂದ ಮಾನಭಂಗವಾದ್ದು ಬೇರೆ, ಅವಳ ಮೇಲೆ ಮಾಡಿದ ದಾವೆಯಲ್ಲಿ ನಜರಬಂದಿಯಲ್ಲಿದ್ದುದು ಬೇರೆ. ಇವೆರಡು ಕಾರಣಗಳಿಂದ ಮನಸ್ಸಿಗೆ ಹತ್ತಿದ ವ್ಯಾಕುಲ ಸ್ಮರಿಸಕೂಡದೆಯೂ, ಕಾಕಪೋಕರು ಅವರನ್ನು ಬಹಿರಂಗವಾಗಿ ಗೇಲಿ ಮಾಡುವುದಕ್ಕೆ ತೊಡಗಿದ್ದಲ್ಲದೆ ಸಂಭಾವಿತರೂ ಅವರ ನೆಂಟರಿಷ್ಟರೂ ಅವರ ತಿಷ್ಟತಿಯೇ ಬಿಟ್ಟು ಬಿಟ್ಟ ದೆಸೆಯಿಂದ ತಮ್ಮಷ್ಟು ಪಾಪಿಗಳು ಇನ್ನಾರಿಲ್ಲವೆಂಬ ವೈರಾಗ್ಯತಾಳಿ ಸಹೋದರರಿಬ್ಬರೂ ಮಡದಿಯರನ್ನು ಕರೆದು

ಕೊಂಡು ಮಹಾ ಯಾತ್ರೆಗೆ ಹೋದರು. ಈ ವಾರ್ತೆಯು ಚಂಚಲನೇತ್ರರ ಕಿವಿಗೆ ಬೀಳುತ್ತಲೇ ತನ್ನ ಮನಸ್ತಾಪದಿಂದ ಅವರಿಗೆ ಉಛಾಟನವಾಯಿತೆಂಬ ಹಮ್ಮು ತಲೆಗಡರಿತು.

ವಾಗ್ದೇವಿಯು ಪ್ರತಿನಿತ್ಯ ತನ್ನ ಮೋಹ ನಡತೆಯಿಂದ ಚಂಚಲನೇತ್ರರನ್ನು ಮಂಕುಗೊಳಿಸಿ ಅವರಲ್ಲಿ ವ್ಯಾಮೋಹವನ್ನು ಹೆಚ್ಚಿಸಿ ತನ್ನ ಕೈಲಾಗುವಷ್ಟರ ಮಟ್ಟಿಗೆ ಸನ್ಯಾಸಿಯ ದ್ರವ್ಯವನ್ನು ವ್ಯಯಮಾಡಿಸುವದರಲ್ಲಿ ಲೇಶವಾದರೂ ಅಂಜಲಿಲ್ಲ ಇನ್ನೆಂಥಾ ದುರ್ದಶೆಯು ಆ ಯತಿಗೆ ಹಿಡಿಯಿತೋ ದೇವರೇ ಬಲ್ಲ! ಹಾವಾಡಿಗನಿಂದ ತಡೆ ಕಟ್ಟಲ್ಪಟ್ಟ ಸರ್ಪವು ವೈಮುರತು ಕೊಂಡಿರುವಂತೆ ಯತಿಯ ವೈಚರ್ಮವನ್ನೇ ವಾಗ್ದೇವಿಯು ಸುಲಿದರೂ ಆ ಪ್ರಾಣಿಗೆ ನೋಯದೆ ಹೋಯಿತು. ಹಾಗೂ ಪ್ರಾಯವು ಹೆಚ್ಚಾಗಿ ದೌರ್ಬಲವು ಏರುತ್ತಾ ಬರುವ ಸಂಧಿಯಲ್ಲಿ ವೆಂಕಟಪತಿ ಆಚಾರ್ಯನು ಎಷ್ಟು ಬುದ್ಧಿವಂತಿಗೆ ನಡಿಸಿದರೂ ವಾಗ್ದೇವಿಯ ಮಾತೇ ಭಗವದ್ವಾಕ್ಯವಾಗಿ ಚಂಚಲನೇತ್ರರ ಮನಸ್ಸಿಗೆ ತೋರುವದಾಯಿತು. ಅವಳ ಅನುಮತಿ ಇಲ್ಲದೆ ಪಾರುಪತ್ಯಗಾರನಿಂದ ಒಂದು ಕಡ್ಡಿಯನ್ನಾದರೂ ಇಲ್ಲಿಂದ ಎತ್ತಿ ಅಲ್ಲಿ ಇಡುವದಕ್ಕೆ ಆಗದೆ ಹೋಯಿತು. "ಇದೇನಪ್ಪಾ! ಕಾಲದ ಮಹಿಮೆ" ಯೆಂದು ವೆಂಕಟಪತಿ ಆಚಾರ್ಯನು ಬೆರಗಾದರೂ ತನಗೆ ಉಪ್ಪನ್ನು ಕೊಟ್ಟು ಸಾಕುವ ಯತಿಯನ್ನು ಪ್ರಾಣದಾಶೆಯಾದರೂ ಬಿಟ್ಟು ಸೇವನೆ ಮಾಡದಿರಕೂಡದೆಂದು ದೃಢಭಾವದಿಂದ ಯಜಮಾನನನ್ನು ಕೊಂಚವಾದರೂ ಬಿಟ್ಟು ಹಾಕಲಿಲ್ಲ.

## ಮೂವತ್ತು

ವಾಗ್ದೇವಿಯ ಮಗನು ದೇಹಪುಷ್ಟಿ ಹೊಂದಿ ವಿದ್ಯಾಭ್ಯಾಸದಲ್ಲಿ ಕೊಂಚವಾದರೂ ವೈಗಳ್ಳತನ ಮಾಡದೆ ಶಾಲಾ ಉಪಾಧ್ಯಾಯನ ಸಿಟ್ಟಿಗೆ ಒಳಗಾಗದೆ ಸುಬುದ್ಧಿಯಿಂದ ನಡಕೊಳ್ಳುವದರಿಂದ ತನ್ನ ಭಾಗ್ಯಕ್ಕೆ ಕಡಿಮೆ ಇಲ್ಲವೆಂದು ಅವಳು ಸುಖಿಯಾಗಿರುವಾಗ ಅವಳ ತಂದೆತಾಯಿಗಳಿಗುಂಟಾದ ಆಪತ್ತಿನ ದೆಸೆಯಿಂದ ಅವಳು ಹೆಚ್ಚು ದಣಿಯಬೇಕಾಯಿತು. ಯತಿಯ ದಯದಿಂದ ದ್ರವ್ಯಾನುಕೂಲ ಯಥೇಚ್ಛ ಇರುವ ವೇಳೆ ಅವರಿಗುಂಟಾದ ಅಸ್ವಸ್ಥ ನಿವಾರಣೆಗೋಸ್ಕರ ದೊಡ್ಡ ದೊಡ್ಡ ಪಂಡಿತರಿಂದ ಚಿಕಿತ್ಸೆ ಮಾಡಿಸುವದರಲ್ಲಿ ಏನೂ ಸಾವಕಾಶವಾಗಲಿಲ್ಲ ಪರಂತು ವೈದ್ಯರು ಎಷ್ಟು

ಶ್ರಮಪಟ್ಟರೂ ಅವರ ಪ್ರಯತ್ನಗಳು ಸಫಲವಾಗುವ ಹೋಲ್ಪೆತೋರದೆ ವಾಗ್ದೇವಿಯು ಚಿಂತೆ ತಾಳುವದಾಯಿತು. ಬಹುಕಾಲ ಬಡತನದ ಕಡು ಕಷ್ಟಗಳನ್ನನುಭವಿಸಿದರೂ ದೈವವಶಾತ್ ಚಂಚಲನೇತ್ರರ ಪೂರ್ಣಕೃಪೆಯು ಅವಳ ಮೇಲೆ ಉದಯವಾದಂದಿನಿಂದ ಸುಖಸಂತೋಷ ಪ್ರಾಪ್ತವಾಯಿತು. ಅದನ್ನು ಯಥೇಷ್ಟ ಅನುಭವಿಸಲಿಕ್ಕೆ ಅವಳ ಹೆತ್ತವರಿಗೆ ಪುಣ್ಯವಿಲ್ಲ. ಅವರು ದೀರ್ಘಕಾಲ ಬದುಕಿರುವ ಪರಿತೋಷವನ್ನು ಪಡಿಯುವ ರುಣವು ಅವಳಿಗಿಲ್ಲ ವೆಂಬಂತಾಯಿತು. ಯಾಕಂದರೆ ದಿನಹೋಗುತ್ತಾ ಅವಳ ಮಾತಾಪಿತೃಗಳ ದೇಹಸ್ಥಿತಿಯು ಭಯಂಕರವಾಯಿತು.

ಯಾರಾದರೂ ಅಸ್ವಸ್ಥ ತೊಡಗಿದರೆ ದೈವ ದೇವರ ಉಪಹತಿ ಅಥವಾ ಛಿದ್ರದೋಷ ಇತ್ಯಾದಿ ಬಾಧೆಗಳವೆಯೋ ಎಂದು ನಿಷ್ಕರ್ಷ ಮಾಡುವದಕ್ಕೆ ಜೋಯಿಸನನ್ನು ಕರದು ಪ್ರಶ್ನೆ ನೋಡುವ ಪದ್ಧತಿಯು ಹೆಡ್ಡರಲ್ಲಿ ಬಹಿರಂಗ ವಾಗಿಯೂ ಬುದ್ಧಿವಂತರಲ್ಲಿ ಗುಪ್ತವಾಗಿಯೂ ನಡಿಯುವದುಂಟು. ವಾಗ್ದೇವಿ ಗನಕಾ ದ್ವಿತೀಯ ವರಾಹಮಿಹಿರಾಚಾರ್ಯನೆಂಬಂತೆ ತೋರಿಸಿಕೊಳ್ಳುವ ತಿಪ್ಪಾಶಾಸ್ತ್ರಿಯ ಸಾಮಿಪ್ಯವೇ ದೊರಕಿರುವಾಗ್ಗೆ ಇನ್ನೊಬ್ಬ ಜೋಯಿಸಗೆ ಹುಡುಕಬೇಕೇ? ತಿಪ್ಪಾಶಾಸ್ತ್ರಿಯು ರಾಶಿ ಇಟ್ಟು ಸೂಕ್ಷ್ಮವಾಗಿ ನೋಡಿ,– "ವೇದವ್ಯಾಸ ಉಪಾಧ್ಯನು ಮಾಟಮಾಡಿಸಿದ ದೆಸೆಯಿಂದ ಇಂಥಾ ಕಷ್ಟ ಬರಲಿಕ್ಕೆ ಕಾರಣವಾಯಿತು. ಅದರ ಬಿಸಾತೇನು! ಒಂದು ಬಲಿ ತೆಗೆದು ಬಿಟ್ಟರೆ ಆ ಮಾಟಗೀಟ ಎಲ್ಲದೆ? ನೋಡು" ಎಂದು ಪೌರುಷ ಮಾತಾಡಿದನು. ಪಂಚಾಂಗದ ಹಾಳೆಗಳನ್ನು ಆಚೆಗೀಚೆಗೆ ಮಗಚಿ ರೋಗಿಗಳ ಚಂದ್ರತಾರಾ ಬಲ ನೋಡಿದನು. ಮರುದಿನ ರಾತ್ರೆ ಬಲಿತೆಗೆಯುವದಕ್ಕೆ ಕಾಲನಿಶ್ಚಯಿಸಿ ಮಾಟದೇವತೆಯ ಉಚ್ಚಾಟಣೆಯ ಉದ್ದಿಶ್ಯ ಒಂದು ಸಣ್ಣ ಹೋಮವಿಧಿಯನ್ನು ಸಹ ಸಾಂಗವಾಗಿ ನಡಿಸುವ ಅವಶ್ಯತೋರಿದ ಕಾರಣ ಅದಕ್ಕೆ ಬೇಕಾಗುವ ಸಾಮುಗ್ರಿಗಳನ್ನು ಸಿದ್ಧಪಡಿಸಿಡುವದಕ್ಕೆ ಸುಮಾರು ನೂರು ರುಪಾಯಿ ವರೆಗೆ ವೆಚ್ಚ ತಗಲುವ ಹಾಗಿನ ಒಂದು ಪಟ್ಟಿಯನ್ನು ಬರಸಿಕೊಟ್ಟನು. ನೇಮಿಸಿದ ರಾತ್ರೆ ಭಾರಿ ಅಟ್ಟಹಾಸದಿಂದ ಹೋಮವನ್ನು ಮಾಡಿ ಬಲಿತೆಗೆದನು. ಅವನು ತೊಡಗಿದ ವಿಧಿಯು ಅಂತ್ಯವಾಗಬೇಕಾದರೆ ಭಾಗೀರಥಿಗೆ ಪ್ರಾಣಾಂತಿಕವಾಯಿತು. ಅವಳ ಬಾಯಿಗೆ ವಾಗ್ದೇವಿಯು ಬೇಗನೇ ಇಷ್ಟು ನೀರು ಬಿಟ್ಟಳು. ಆಗ್ಗನೇ ರೋಗಿಯೊಬ್ಬಳು ಫೈಸಲಾದಳು. ಮಾತೃವಿಯೋಗದ

ಸಂತಾಪವೂ ತಿಪ್ಪಾಶಾಸ್ತ್ರಿಯ ವ್ಯಾಜ್ಯವೂ ವಾಗ್ದೇವಿಯ ಸಹನಶಕ್ತಿಗೆ ಮೀರಿದವು. ಇವೆರಡನ್ನು ಅಂದು ಕಂಡವರ ಹೃದಯವು ನಿಜವಾಗಿ ಕರಗಿತು. ತಿಪ್ಪಾಶಾಸ್ತ್ರಿಯ ಮುಖವನ್ನು ನೋಡಲಿಕ್ಕೆ ಅವಳಿಗೆ ಮನಸು ಬರಲಿಲ್ಲ. ಅವನಿಗೂ ಕೊಂಚ ನಾಚಿಕೆ ಆದಿಯಲ್ಲಾದರೂ ಕೊನೆಗೆ ಧೈರ್ಯ ಬಂದು ಅನ್ನ ಹೋಗಿ ಗಂಜಿಯಾದ ಮೇಲೆ ತನ್ನನ್ನು ಕರೆದರೆ ಯತ್ನವ್ಯಾವದೂ ನಡೆಯುವ ಹಾಗಿಲ್ಲವಾದರೂ ಕೈಲಾಗುವ ಪ್ರಯತ್ನ ಮಾಡಿದೆನೆಂದು ಡಬ್ಬು ಹಾರಿಸಿಬಿಟ್ಟು ರೋದನ ಮಾಡುವ ವಾಗ್ದೇವಿಯ ಕಣ್ಣೆದುರಿನಿಂದ ಹ್ಯಾಗೂ ತಪ್ಪಿಸಿಕೊಂಡನು.

ಸಾವಿನ ಮನೆಯಲ್ಲಿ ಅಳಾಟ ಕಟ್ಲೆಪ್ರಕಾರ ಇತ್ತು. ನೆರೆಕರೆಯವರನೇಕರು ವಾಗ್ದೇವಿಗೆ ಬಂದ ಕಷ್ಟ ನೋಡಿ ಬಹು ಪಶ್ಚಾತ್ತಾಪ ಪಟ್ಟು ಅವಳಿಗೆ ಹಲವು ತರದಲ್ಲಿ ಸಮಾಧಾನ ಪಡಿಸಿ "ಪ್ರಪಂಚದಲ್ಲಿ ಯಮಬಾಧೆ ಯಾರಿಗೂ ಬಿಡವಲ್ಲದು. ಶೋಕ ಮಾಡಿ ದೇಹದಂಡಿಸಬೇಡ" ಎಂದು ಕೆಲವು ವೃದ್ಧ ಸ್ತ್ರೀಪುರುಷರು ದುಃಖಶಾಂತಿ ಯತ್ನಿಸಿದರು. ಕಡೆಗೆ ಚಂಚಲನೇತ್ರರಿಂದ ಕಳುಹಿಸಲ್ಪಟ್ಟ ವೆಂಕಟಪತಿ ಆಚಾರ್ಯನು ವಾಗ್ದೇವಿಗೆ ಅತಿ ನಯನುಡಿಯಿಂದ ಸಂಕ್ಷೇಪವಾಗಿ ಜ್ಞಾನವನ್ನು ಹೇಳಿ ಅವಳಲ್ಲಿ ವಿವೇಕ ಹುಟ್ಟುವಂತೆ ಪ್ರಯತ್ನ ಮಾಡಿ ಜಯಿಸಿದನು. ಪತ್ನಿಯ ಮರಣವು ಕಠಿಣ ಅಸ್ವಸ್ಥದಲ್ಲಿರುವ ತಮ್ಮಣ್ಣಭಟ್ಟಗೂ ಕಣ್ಣುಕತ್ತಲೆ ಬರಮಾಡಿತು. ಆ ಮುದುಕನು ಮರುಗುವದು ನೋಡಿದರೆ ಎಂಥವನ ಎದೆಯು ಉರಿಯದಿರದು! ವೆಂಕಟಪತಿ ಆಚಾರ್ಯನೂ ಮಾನುಷಕ ದೇಹದ ಕ್ಷಣಿಕ ಅವಧಿಯ ಕುರಿತು ಚುಟುಕಾದ ಉಪನ್ಯಾಸದ ದ್ವಾರಾ ಅವನಿಗೂ ಅವನ ಪರಿಮುಖ ವಾಗ್ದೇವಿಗೂ ಸಮಾಧಾನವಾಗುವಂತೆ ವರ್ತಿಸಿದನು. ಹೆಚ್ಚು ರಾತ್ರೆಯಾಗಗೊಡದೆ ಭಾಗೀರಥಿಯ ದೇಹವನ್ನು ಸ್ಮಶಾನಕ್ಕೆ ವೈದು ಅಗ್ನಿಗೆ ಒಪ್ಪಿಸಿ ತೀರಿದ ಮೇಲೆ ಉತ್ತರಕ್ರಿಯೆಗಳನ್ನು ಉತ್ತರಾಧಿಕಾರಿಗಳು ನಡಿಸಿದರು. ಹನ್ನೆರಡನೇ ದಿನದ ಪ್ರಸ್ತದೂಟವಾಗುವ ಸಮಯದಲ್ಲಿ ಬೀದಿಯಲ್ಲಿ ವಾದ್ಯಘೋಷದಿಂದ ಸಣ್ಣದೊಂದು ಗುಂಪು ಹೋಗುವದು ಕಂಡು ಅದೇನೆಂದು ಯಾರೋ ವಿಚಾರಿಸಿದರು. ವಾರಣಾಸಿಗೆ ಹೋದ ವೇದವ್ಯಾಸ ಉಪಾಧ್ಯನು ಯಾತ್ರೆಯನ್ನು ತೀರಿಸಿಕೊಂಡು ಮರಳಿ ಬರುವನೆಂದು ತಿಳದು ಬಂತು. ಈ ವಾರ್ತೆಯು ವಾಗ್ದೇವಿಯ ಕಿವಿಗೆ ಕಠೋರವಾಗಿ ಕೇಳಿತು. ಅಲ್ಲಿಯೇ ಅವನಿಗೆ ಮುಕ್ತಿ ದೊರಕ

ಲಿಲ್ಲವೇ ಎಂದು ಆಬಾಚಾರ್ಯನು ಹೇಳಿದ ಮಾತು ಅಲ್ಲಿ ಊಟಕ್ಕೆ ಕೂತವರಲ್ಲಿ ಒಬ್ಬನ ಕಿವಿಗೆ ಬಿದ್ದು ಕ್ರಮೇಣ ಅದು ವೇದವ್ಯಾಸ ಉಪಾಧ್ಯನ ಕಿವಿಗೆ ಮುಟ್ಟಿತು. ತಾಯಿಗೆ ಹ್ಯಾಗೂ ಮುಕ್ತಿ ಕೊಟ್ಟಿಳಲ್ಲಾ. ತಂದೆಯೊಬ್ಬನು ಶೀಘ್ರಪ್ರಯಾಣಕ್ಕೆ ಅನುವಾಗಿರುವನು. ಗಂಡನೊಬ್ಬನಲ್ಲವೇ ಉಳಿದವನು? ಅವನು ಬೇಗನೇ ವೈಕುಂಠಯಾತ್ರೆಗೆ ಹೋದರೆ ಕುಂಕುಮದ ಖರ್ಚೆ ಉಳದೀತು. ಆದರೂದೇಹಾಲಂಕಾರಕ್ಕೆ ತುಸಾ ಅಂತರಾಯ ಬಂದೋದೀತು. ಅದೊಂದು ದೊಡ್ಡ ಕೊರತೆಯನ್ನ ಕೂಡದು. ಹೀಗೆಂದು ವೇದವ್ಯಾಸ ಉಪಾಧ್ಯನ ಬಾಯಿಯಿಂದ ಹೊರಟ ದುರುಕ್ತಿಗಳನ್ನು ಕೇಳಿದ ಇನ್ನೊಬ್ಬನು ಆ ಪೂರ್ವೋತ್ತರವನ್ನು ವಿಳಂಬ ಮಾಡದೆ ಆಬಾಚಾರ್ಯಗೆ ತಿಳಿಸಿದನು. ಅವನು ತಂತಿಟಪ್ಪಾಲಿನಕಿಂತಲೂ ಹೆಚ್ಚು ವೇಗದಿಂದ ಅದನ್ನು ಪತ್ನಿಯ ಕಿವಿಗೆ ಹಾಕಿಬಿಟ್ಟನು.

ಬಹಳ ದಿವಸಗಳು ಹೋಗಲಿಲ್ಲ. ವೇದವ್ಯಾಸನಾಡಿದ ಮಾತುಗಳು ಚಂಚಲನೇತ್ರರಿಗೆ ಶ್ರುತವಾದವು. "ಇದೇನು ವಿಚಿತ್ರ? ಆ ದುರುಳನು ಸಾರಮೇಯನಂತೆ ಬಗಳುವಾಗ ಅವನ ಹಲ್ಲು ಮುರಿಯುವವರ‍್ಯಾರಿಲ್ಲದೆ ಹೋಯಿತೇ? ಕಲಿಯುಗ ಮಿೂರಿತು" ಎಂದು ಕ್ರೋಧದಿಂದ ಅವರು ಆಡಿದ ನುಡಿಯನ್ನು ಸಮಿೂಪವಿರುತ್ತಿದ್ದ ವೆಂಕಟಪತಿ ಆಚಾರ್ಯನು ಕೇಳಿ, "ಪರಾಕೆ! ನಾಯಿ ನಮ್ಮ ಕಾಲಿಗೆ ಕಚ್ಚಿದರೆ ನಾಯಿಯ ಕಾಲಿಗೆ ನಾವು ಕಚ್ಚಬಹುದೇ? ಆ ಮರುಳನಿಗೆ ಬುದ್ಧಿಯು ತನ್ನಷ್ಟಕ್ಕೆ ಬಾರದೆ ಹೋಗದು. ಹಿಂದೆ ಕಲಿತ ಬುದ್ಧಿಯು ಈಗ ಮರವೆಗೆ ಬಂದಿದೆ. ಮುಂದೆ ಹ್ಯಾಗಾಗುತ್ತದೊ ನೋಡಲಿಕ್ಕುಂಟು" ಎಂದು ಸಮಜಾಯಿಸಿ ಹೇಳಿದನು. ಚಂಚಲನೇತ್ರರಿಗೆ ಆ ಪ್ರತಿವಚನವು ಸಮ್ಮತವಾಯಿತು. ಆದರೂ ವೇದವ್ಯಾಸನ ಮೇಲಿನ ದ್ವೇಷವು ಮತ್ತಷ್ಟು ಹೆಚ್ಚಿತು. ಮತ್ತು ಮುಯ್ಯಿಗೆ ಮುಯ್ಯಿ ತೀರಿಸುವ ಸಂದರ್ಭ ಬೇಗ ಒದಗಿದರೆ ಆಗಬಹುದೆಂಬ ಆಶೆಯು ಅವರಲ್ಲಿ ಹುಟ್ಟಿತು.

ಒಂದಾನೊಂದು ದಿನ ವಾಗ್ದೇವಿಯು ಅಂಜನೇಯಾಲಯದ ಸಮಿೂಪವಿರುವ ಕೆರೆಯ ಬಳಿಗೆ ಹೋದಳು. ಅಲ್ಲಿ ವೇದವ್ಯಾಸ ಉಪಾಧ್ಯನ ಹೆಂಡತಿ ಸುಶೀಲಾಬಾಯಿಯು ಬಂದಿದ್ದಳು. ಅವಳು ಸ್ನಾನ ಮಾಡಿಕೊಂಡು ಒಂದು ಕಡೆಯಲ್ಲಿ ನಿಂತಿರುವಾಗ ವಾಗ್ದೇವಿಯು ಸ್ನಾನಕ್ಕೆ ಕೆರೆಗೆ ಇಳಿದಳು. ಆಕಸ್ಮಾತ್ತಾಗಿ ಸುಶೀಲಾಬಾಯಿಯ ಮೈಮೇಲೆ ನೀರು ಸಿಡೀತು. ಅವಳಿಗೆ ಕೊಂಚ

ಸಿಟ್ಟು ಬಂದರೂ ಅವಳು ಅದನ್ನು ನುಂಗಿ ಬಿಟ್ಟು ಪುನಃ ಕೆರೆಗೆ ಇಳಿದು ಸ್ನಾನಮಾಡುವದನ್ನು ನೋಡಿ ವಾಗ್ದೇವಿಯು ರೋಷವನ್ನು ತಾಳಿ, "ಓಹೋ! ಇವಳ ಶುದ್ಧ ಮುದ್ರಿಕೆ ಭಾರಿ. ಮೈಮೇಲೆ ರವಷ್ಟು ನೀರು ಸಿಡದರೆ ಇಷ್ಟು ಡಂಭಾಚಾರ ಮಾಡಬೇಕೇ"ಎಂದು ಜರೆದಳು. ಮತ್ತೇನು! ಅವರಲ್ಲಿ ಸಂವಾದಕ್ಕೆ ಆಸ್ಪದವಾಯಿತು.

ಸುಶೀಲಾಬಾಯಿ—"ಅವ್ವಾ! ಸಿಟ್ಟು ಮಾಡಿಕೋಬ್ಯಾಡ. ನನ್ನ ಶುದ್ಧ ಮುದ್ರಿಕೆ ಹಾಗಿರಲಿ. ನಾನು ಎಷ್ಟಾವರ್ತಿ ಸ್ನಾನ ಮಾಡಿದಾಗ್ಯೂ ನಿನಗೆ ಬಂದ ಕಷ್ಟವೇನು? ನನ್ನ ಡಂಭಾಚಾರದಿಂದ ನಿನಗೇನು ನಷ್ಟ?"

ವಾಗ್ದೇವಿ—"ಸಾಕು ಸಾಕು! ನಿನ್ನ ಸ್ವರೂಪವೆಲ್ಲ ಗೊತ್ತಿದ್ದದ್ದೇ, ಬಹಳ ಹಾರ್‍ಯಾಡ ಬೇಡ."

ಸುಶೀಲಾಬಾಯಿ—"ನನ್ನ ಸ್ವರೂಪವೊ ನಿನ್ನ ಸ್ವರೂಪವೂ ಎಲ್ಲರಿಗೆ ಗೊತ್ತಿದೆ. ಹಾರ್‍ಯಾಡುವುದು ನಾನೋ ನೀನೊ? ಗ್ರಹಿಸದೆ ಮಾತಾಡಬೇಡ."

ವಾಗ್ದೇವಿ–"ಸೆರೆಮನೆಯಲ್ಲಿ ಕೂತ ಗಂಡನ ಹೆಂಡತಿ ನೀನೇ ಅಲ್ಲವೋ! ಬಹಳ ದೊಡ್ಡವಳು."

ಸುಶೀಲಾಬಾಯಿ—"ಅವ್ವಾ ನಾನು ನಿನ್ನಷ್ಟು ದೊಡ್ಡವಳಾದರೆ ನನ್ನ ಗಂಡ ಕಾರಾಗೃಹದಲ್ಲಿ ಕೂತುಕೊಳ್ಳುತಿದ್ದನೇ? ನಿನ್ನ ಪ್ರತಾಪ ಮೆರೆಯುವಾಗ ನನ್ನ ಗಂಡನ ಪಾಡೇನು? ದೊಡ್ಡ ಪ್ರಭುವಾದರೂ ಸೆರೆಮನೆಯಲ್ಲಿ ಕೊಳೆಯಬೇಕು."

ವಾಗ್ದೇವಿ—"ಅಧಿಕಾರಸ್ತರಿಗೆ ನೀನು ಕಂಡು ಹೇಳಿಕೊಂಡಿದ್ದರೆ ನಿನ್ನ ಗಂಡನ ಬಿಡುಗಡೆಯಾಗುತಿತ್ತು."

ಸುಶೀಲಾಬಾಯಿ—"ನೀನು ಮುಂದಾಗಿ ಕಂಡು ಹೇಳಿಕೊಂಡ ಅಧಿಕಾರಸ್ಥರು ನನ್ನ ಗಣ್ಯಮಾಡುವರೇನು? ಅವ್ವಾ! ಯಾಕೆ ಇಂಥಾ ಕುತ್ಸಿತ ಮಾತುಗಳನ್ನಾಡಿ ನರಕಕ್ಕೆ ಭಾಜನಳಾಗುತ್ತಿ. ನಾನು ಪತಿವ್ರತೆ; ಪರಪುರುಷನನ್ನು ಇದುವರೆಗೆ ಕಣ್ಣೆತ್ತಿ ನೋಡಿದವಳಲ್ಲ."

ವಾಗ್ದೇವಿ—"ನಾನು ಮುಂದಾಗಿ ಅಧಿಕಾರಸ್ಥರನ್ನು ಹೋಗಿ ಕಂಡದ್ದು ನೀನ್ಯಾವಾಗ ನೋಡಿದೆ? ಬಾಯಿಗೆ ಬಂದ ಹಾಗೆ ಬಗಳಿದರೆ ನಿನಗ್ಯಾರು ಕೇಳುವವರಿಲ್ಲವೆಂದು ತಿಳಿದುಕೊಂಡೆಯಾ? ನೀನು ದೊಡ್ಡ ಪತಿವ್ರತೆ!"

ಸುಶೀಲಾಬಾಯಿ—"ನೀನು ಮುಂದಾಗಿ ಅಧಿಕಾರಸ್ಥರನ್ನು ಕಂಡಿಲ್ಲ

ವಾದರೆ ಅವರನ್ನು ನಾನು ಕಂಡರೆ ನನ್ನ ಗಂಡಗೆ ಬಿಡುಗಡೆಯಾಗುತ್ತಿತ್ತೆಂದು ಹೇಗೆ ಬಗುಳಿದಿ? ನನಗೆ ಕೇಳುವವರು ನನ್ನ ಪತಿಗಳೇ! ನಿನ್ನಂಥಾ ನಾಯಿ ನನಗೆ ಕೇಳುವದುಂಟೇ? ನಾನು ದೊಡ್ಡ ಪತಿವ್ರತೆಯೆಂದು ಇನ್ನೊಮ್ಮೆ ಹೇಳು. ನಿನ್ನಂತೆ ಹಗಲು ಗಂಡನ ಹೆಂಡತಿಯೆಂದು ತಿಳಕೊಂಡಿಯಾ?"

ವಾಗ್ದೇವಿ—"ನಿನ್ನ ನಾಲಿಗೆ ಬಹಳ ಮುಂದರಿಸುತ್ತೆ? ಅವರದೊಂದು ತುಂಡು ತೋರಿಸದಿದ್ದರೆ ನಿನ್ನ ಮಾತುಗಳು ಗಗನಕ್ಕೆ ಹತ್ತುವುವು."

ಸುಶೀಲಾಬಾಯಿ— "ನನ್ನ ನಾಲಿಗೆಯ ತುಂಡು ತೆಗೆಯುವುದಕ್ಕಿಂತಲೂ ನಿನ್ನ ನಾಲಿಗೆ ಶೀಳದರೆ ಅತಿ ಉತ್ತಮವಿತ್ತು."

ವಾಗ್ದೇವಿ—"ನೀನೊಬ್ಬ ಹಗಲು ಗಂಡನ ಮಾಡಿಕೊಳ್ಳಬಾರದೇ? ನನ್ನ ಮೇಲೆ ಯಾಕೆ ಹೊಟ್ಟೆಕಿಚ್ಚು ಪಡುತ್ತೀ."

ಸುಶೀಲಾಬಾಯಿ—"ನನಗೆ ಹಗಲು ಗಂಡ ಬೇಕೇ! ಯತಿದ್ರವ್ಯದ ಮೇಲೆ ಆಶೆ ಉಳ್ಳವರಿಗೆ ಬೇಕು."

ವಾಗ್ದೇವಿ—"ನಿನಗೆ ಯತಿದ್ರವ್ಯ ಸಿಕ್ಕುವುದಿದ್ದರೆ ನೀನು ಏನೇನು ಕಾರ್ಬಾರು ಮಾಡುತಿದ್ದಿ. ನಿನಗೆ ಅದು ಸಿಕ್ಕುವುದುಂಟೇ?"

ಸುಶೀಲಾಬಾಯಿ—"ಅವ್ವಾ! ಆ ದ್ರವ್ಯ ನಿನಗೇ ಇರಲಿ. ನನ್ನ ನಾಯಿಗೂ ಅಂಥಾ ದ್ರವ್ಯಬೇಡಾ."

ವಾಗ್ದೇವಿ—"ಲಜ್ಜಾಭಂಡಳಾದ ನಿನ್ನ ಕೂಡೆ ಮಾತಾಡುವುದರಿಂದ ಏನು ಪುರುಷಾರ್ಥ? ಹೊಟ್ಟೆಗೆ ಪೂರ್ತಿ ಅನ್ನ ಬೀಳದಿದ್ದರೂ ನಿನ್ನ ಅಟ್ಟಹಾಸಕ್ಕೆ ಏನು ಕಡಿಮೆಯಿಲ್ಲ."

ಸುಶೀಲಾಬಾಯಿ—"ನಾನೇನೆ ಲಜ್ಜಾ ಭಂಡಳು! ದಾರಿಗ ಹುಡುಗರು ನಿನ್ನ ಗಂಡನ ಎದುರು ಕವನ ಕಟ್ಟಿ ನಿನ್ನನ್ನು ಜರದು ಹಾಡುವಾಗ್ಯೆ ಸುಟ್ಟ ಮುಖವನ್ನು ತಕ್ಕೊಂಡು ಹಿಂದಿರುಗಿ ಮನೆಗೆ ಓಡಿವವಳು ನೀನಲ್ಲವೇ ಲಜ್ಜಾಭಂಡಳು! ನಾನೇ? ನನಗೆ ಹೊಟ್ಟೆಗೆ ಅನ್ನಬೀಳದಿದ್ದರೆ ನಾನು ನಿನ್ನ ಮನೆಗೆ ಎಂದಾದರೂ ಬೇಡಲಿಕ್ಕೆ ಬಂದಿರುವೆನೇನು? ತಾನೊಂದು ದೊಡ್ಡ ನಾಮದಾರ್ತಿಯಾಗಿದ್ದೇನೆಂದು ಹಿಗ್ಗುವಿಯಾ? ಸುಡು ನಿನ್ನ ಬಾಳುವೆ! ವೇಶ್ಯಾ ಸ್ತ್ರೀಯರಲ್ಲಿಯೂ ನಿನ್ನಷ್ಟು ಕೀಳು ಹೆಂಗಸು ಸಿಕ್ಕಲಿಕ್ಕಿಲ್ಲ. ಥೂ! ನಿನ್ನ ಮುಖಕ್ಕೆ."

ಸುಶೀಲಾಬಾಯಿಯು ಜರದು ಆಡಿದ ಮಾತುಗಳ ಕಾಠಿಣ್ಯವನ್ನು

ತಡೆದುಕೊಳ್ಳಲಿಕ್ಕಾಗದೆ ವಾಗ್ದೇವಿಗೆ ಸಿಟ್ಟು ಬಂತು. ಅವಳು ಸುಶೀಲಾಬಾಯಿಗೆ ಹೊಡೆಯಲಿಕ್ಕೆ ಕೈಯೆತ್ತಿ ಮುಂದೆ ಹೋಗುವಷ್ಟರಲ್ಲಿ ಕೆರೆಯ ಆಚೆ ಘಡದಲ್ಲಿ ಇದ್ದ ಗಂಗಾಬಾಯಿಯು ತ್ವರೆಯಾಗಿ ಬಂದು ಅವರಲ್ಲಿ ಹೊಡೆದಾಟ ನಡೆಯದ ಹಾಗೆ ಮಧ್ಯಸ್ತಿಕೆ ಮಾಡಿದಳು. ಸುಶೀಲಾಬಾಯಿಗೂ ಸಾಧಾರಣ ಸಿಟ್ಟು ಬಂದಿರಲಿಲ್ಲ. ನಿನ್ನ ಅಹಂಕಾರವನ್ನು ದೇವರು ಬೇಗ ಮುರಿಯುವನೆಂದು ಶಪಿಸಿ ಕೋಪದಿಂದ ನಡುಗುತ್ತಾ ಅವಳು ಮನೆಗೆ ಹೋಗಿ ಕೆರೆ ಘಡದಲ್ಲಿ ನಡೆದ ವಿಧ್ಯಮಾನವನ್ನೆಲ್ಲಾ ಗಂಡಗೆ ತಿಳಿಸಿದಳು. ವೇದವ್ಯಾಸ ಉಪಾಧ್ಯನು ವ್ಯಸನ ಪಟ್ಟನು. ಅವನಿಗೆ ದೊಡ್ಡ ಕೋಪ ಬಂದರೂ ಅದನ್ನು ಅವನು ನುಂಗಿಕೊಳ್ಳಬೇಕಾಯಿತು. ಯಾಕೆಂದರೆ ಬಡವರ ಸಿಟ್ಟು ದವಡೆಗೆ ಕೇಡೆಂಬ ಸಾಮತಿಯು ಅವನ ನೆನಪಿಗೆ ಬಂತು. ಅದಲ್ಲದೆ ಅಪರಾಜಿತ ಸೆಟ್ಟಿಯು ಮಾಡಿದ ಮೋಸದಲ್ಲಿ ಸಿಕ್ಕಿಬಿದ್ದು ಪೇಷ್ಕಾರನಿಂದ ಅಪಮಾನ ಹೊಂದಿದ್ದು ಸಹ ಅವನಿಗೆ ಮರೆತಿರಲಿಲ್ಲ. “ಅಗಲವಾದ್ದು ಹರಿಯುವುದು, ಉದ್ದವಾದ್ದು ಮುರಿಯುವುದು” ಎಂಬ ಅನುಭವಸಿದ್ಧವಾದ ವಚನವಿದೆ. ನಿರ್ನಿಮಿತ್ತವಾಗಿ ತನ್ನ ಹೆಂಡತಿಯನ್ನು ಕೆಣಕಿದ ವಾಗ್ದೇವಿಯು ಒಂದಲ್ಲ ಒಂದು ದಿನ ಅವಳ ಕರ್ಮದ ಫಲವನ್ನುಣ್ಣದೆ ಇರಲಾರಳೆಂದು ಸುಮ್ಮಗಾದನು.

## ಮೂವತ್ತೊಂದು

ವಾಗ್ದೇವಿಯು ಮಠಕ್ಕೆ ಬಂದು ತನಗೂ ಸುಶೀಲೆಗೂ ನಡೆದ ಝಟಾಪಟಿಯ ಚರಿತ್ರೆಯನ್ನು ಚಂಚಲನೇತ್ರರಿಗೆ ಅರುಹಿದಳು. ಅವರು ಅವಳ ಮುಖದಾಕ್ಷಿಣ್ಯಕ್ಕಾಗಿ ಸಿಟ್ಟು ಬಂದವರಂತೆ ಮುಖಛಾಯೆ ಬದಲಾಯಿಸಿಕೊಂಡಾಗ್ಯೂ ಸುಶೀಲಾಬಾಯಿಯ ತಪ್ಪೇನೂ ಅವರಿಗೆ ಕಂಡು ಬಾರದೆ ವಾಗ್ದೇವಿಗೆ ದುರಹಂಕಾರ ಬಂತೆಂದು ಪಶ್ಚಾತ್ತಾಪ ಪಟ್ಟರು. ಈ ಜಗಳದ ವಾರ್ತೆಯೂ ಊರಲ್ಲಿ ಸರ್ವತ್ರ ತುಂಬಿತು. ಅದರ ಪೂರ್ವಾಪರವನ್ನು ಕೇಳಿದವರೆಲ್ಲರೂ ವಾಗ್ದೇವಿಯೇ ತಪ್ಪುಗಾರಳೆಂದು ನಿಶ್ಚಯಿಸಿದರು. ಮಗನ ಉಪನಯನವಾದಂದಿನಿಂದ ವಾಗ್ದೇವಿಯ ಚರ್ಯೆಗಳೆಲ್ಲಾ ವಿಪರೀತವಾಗಿ ವೆಂಕಟಪತಿ ಆಚಾರ್ಯನ ಮನಸ್ಸಿಗೂ ತೋರಿದವು. ಆದರೆ ಅವಳ ಕೂಡೆ ಆ ಕುರಿತು ಪ್ರಸ್ತಾಪಮಾಡಿದರೆ ಏನೂ ಪ್ರಯೋಜನ

ವಿಲ್ಲವೆಂದು ಮೌನವಾದನು. ಮಠದಲ್ಲಿರುವ ಸರ್ವರಿಗೂ ವಾಗ್ದೇವಿಯ ಈಗಿನ ಗುಣಗಳು ನಿಷ್ಠುರವಾಗಿ ತೋರಿದವು. ಅಸ್ವಸ್ಥದಲ್ಲಿದ್ದು ಚಾಪೆ ಯಿಂದ ಏಳಕೂಡದೆ ತಮ್ಮಣ್ಣ ಭಟ್ಟನು ತನ್ನ ಮಗಳ ದುರ್ಗುಣಗಳು ಹೆಚ್ಚುವದು ನೋಡಿ ವ್ಯಾಕುಲಪಟ್ಟನು. ಈ ಕಾಲದಲ್ಲಿ ತಾನು ಬುದ್ಧಿ ಹೇಳಿದರೆ ಅವಳಿಗೆ ಅದು ನಾಟದೆಂಬ ಸಂದೇಹದಿಂದ ಏನೂ ತಿಯದವನಂತೆ ಇದ್ದುಕೊಳ್ಳುವದೇ ಅವನಿಗೆ ಲೇಸಾಗಿ ತೋಚಿತು.

ಆಚಾಚಾರ್ಯನು ಹೊಟ್ಟೆಬಾಕನಾದ ದೆಸೆಯಿಂದ ಅನ್ನದ ಒಂದು ಗೊಡವೆಯಲ್ಲದೆ. ಬೇರೆ ಯಾವ ಚಿಂತೆಯಾಗಲೀ ವಿಚಾರವಾಗಲೀ ಅವನ ಮನಸ್ಸಿಗೆ ಹೋಗುತ್ತಿದ್ದಿಲ್ಲ. ಭಾಗೀರಥಿಯು ತೀರಿಹೋದ ತರುವಾಯ ಇವನು ಗ್ರಹಕೃತ್ಯದಲ್ಲಿ ನಡಿಯಬೇಕಾದ ಅದಾಯವೆಚ್ಚಗಳಿಗೆ ಕೊಂಚ ತಾತ್ಪರ್ಯ ಕೊಡುವ ಉದ್ಯೋಗವನ್ನು ಪತ್ನಿಯಿಂದ ಪಡೆದಿದ್ದನು. ಮನೆಯ ವೈವಾಟು ಸಣ್ಣದೆನ್ನಕೂಡದು. ಇತ್ತಲಾಗೆ ತಮ್ಮಣ್ಣ ಭಟ್ಟಗೂ ಜರೆಯೂ ರುಜೆಯೂ ಕೂಡಿಬಂದುದರಿಂದ ಮನೆಯ ಯಜಮಾನಿಕೆ ಪೂರ್ಣವಾಗಿ ಆಚಾಚಾರ್ಯಗೆ ಸಿಕ್ಕಿದಂತಾಯಿತು. ವಾಗ್ದೇವಿಯು ಅವನನ್ನು ಮುಂಚಿನಷ್ಟು ಲಕ್ಷ್ಯಮಾಡುತ್ತಿದ್ದಿಲ್ಲವಾದರೂ ತನ್ನ ಅಭಿಮಾನಕ್ಕೆ ತಂತು ಮಾತ್ರ ಕುಂದು ಇರುವದಾಗಿ ಅವನು ತಿಳಿಯಲೇ ಇಲ್ಲ. ಒಳ್ಳೆ ಒಳ್ಳೆ ವೈದ್ಯ ರನ್ನು ಕರೆಸಿ, ಚಂಚಲನೇತ್ರರು ತಮ್ಮಣ್ಣಭಟ್ಟಗೆ ಚಿಕಿತ್ಸೆ ಮಾಡಿಸುವುದರಲ್ಲಿ ತಾತ್ಸಾರ ಮಾಡಲಿಲ್ಲ. ಆದರೆ ವೈದ್ಯರ ಔಷಧ ಪ್ರಯೋಗ ಸಫಲವಾಗಲಿಲ್ಲ. ಭಾಗೀರಥಿಯು ಕಾಲವಾದ ಒಂದೇ ವರ್ಷದಲ್ಲಿ ಒಂದು ದಿನ ಫಕ್ಕನೆ ಅವನಿಗೆ ಕಫವೇರಿ ಪ್ರಾಣಹೋಯಿತು. ವೇದವ್ಯಾಸಉಪಾಧ್ಯನ ಕೃತಿಮದ ದೆಸೆ ಯಿಂದ ಹೀಗಾಯಿತೆಂದು ತಿಪ್ಪಾಶಾಸ್ತ್ರಿಯು ಹೆಣದ ಪರೀಕ್ಷೆಯ ಮೇಲೆ ಹೇಳಿ ಬಿಟ್ಟನು. ವಾಗ್ದೇವಿಯು ಆ ಮಾತು ಕಿವಿಗೆ ಹಾಕಿಕೊಳ್ಳಲೇ ಇಲ್ಲ. ತಕ್ಕ ಕಾಲದಲ್ಲಿ ಕೃತ್ರಿಮ ನಿವಾರಣೆಯ ಉಪಾಯ ಮಾಡದೆಹೋದರೆ ಮುಂದೆ ಇತರರಿಗೂ ಪೇಚಾಟವಿರಲಿಕ್ಕೆ ಸಾಕೆಂದು ಜೋಯಿಸನು ಮೊದಲು ಒಂದೆ ರಡು ಸರ್ತಿ ಹೇಳಿದಾಗ್ಗೆ —"ನಿನ್ನ ಜೋತಿಷ್ಯಕ್ಕೆ ತುದಿಬುಡವಿಲ್ಲ" ಎಂದು ವಾಗ್ದೇವಿಯು ಅವನಿಗೆ ಹೇಳಿರುತಿದ್ದಳು. ಪರಂತು ಅವನು ಸಿಟ್ಟುಮಾಡಿ ಕೊಳ್ಳದೆ ಯಾವಾಗಲೂ ಆ ಪ್ರಸ್ತಾಪ ಕೊಂಚ ಕೊಂಚ ಮಾಡುವದಿತ್ತು. ಏನು ಮಾಡೋಣ! ಅವನ ಮಾತು ಎಡೆಯಲ್ಲಿ ಹೋಯಿತು. ತಮ್ಮಣ್ಣ

ಭಟ್ಟನ ಉತ್ತರಕ್ರಿಯಾದಿಗಳು ಸರಿಯಾಗಿ ನಡೆದುವು. ಹೆತ್ತವರು ಒಂದು ವರ್ಷದೊಳಗಾಗಿ ಸತ್ತುಹೋದರೆಂಬ ವ್ಯಥೆಯಿಂದ ವಾಗ್ದೇವಿಯು ಬಚ್ಚಿ ಬಂದಳು. ಕ್ರಮೇಣ ಆ ದುಃಖವನ್ನು ಮರೆತು ದೇಹದಲ್ಲಿ ಮತ್ತಷ್ಟು ತೋರವಾಗಿ ಒಬ್ಬನ ಲಕ್ಷ್ಯವಿಲ್ಲದೆ ಚಂಚಲನೇತ್ರರ ಖಜಾನೆಯ ಬೀಗದ ಕೈಗಳನ್ನು ಕೈವಶಮಾಡಿಕೊಂಡು ಅಹಂಕಾರ ಭರಿತಳಾದಳು.

ವೆಂಕಟಪತಿಆಚಾರ್ಯನು ವಾಗ್ದೇವಿಯ ಪ್ರತಾಪವನ್ನು ನೋಡಿ ಇನ್ನು ಮುಂದೆ ತಾನು ಕೊಂಚ ದೂರವಿರುವುದು ಒಳ್ಳೇದೆಂದು ಮಠಕ್ಕೆ ಅಪರೂಪವಾಗಿ ಬರಲಾರಂಭಿಸಿದನು. ಚಂಚಲನೇತ್ರರಿಗೆ ಅದು ಹಿತವಾಗದಿದ್ದರೂ ವಾಗ್ದೇವಿಯ ದೆಸೆಯಿಂದ ಹಾಗಾಗುವದು ಸೋಜಿಗವಾಗಿ ತೋರಲಿಲ್ಲ. ತಾನು ಮಾಡಿದ ಹುಚ್ಚುತನಗ ಫಲವನ್ನು ಎರಡು ಕೈಗಳಿಂದಲೂ ತಿನ್ನುವದಾಯಿತೆಂದು ಅವರು ಒಂದು ದಿನ ಅಂತರಂಗದಲ್ಲಿ ವೆಂಕಟಪತಿ ಆಚಾರ್ಯನ ಕೂಡೆ ಹೇಳಿ ಕಣ್ಣೀರಿಟ್ಟರು. ಬುದ್ದಿ ಶೂನ್ಯತೆಯಿಂದ ತಪೋಬಲವನ್ನೂ ಆಶ್ರಮದ ಘನತೆಯನ್ನೂ ಹಾಳುಮಾಡಿಕೊಂಡ ತನ್ನ ಧನಿಯ ದುಸ್ಥಿತಿಯನ್ನು ನೋಡಿ ವೆಂಕಟಪತಿಗೆ ಬಹಳ ದುಃಖವಾಯಿತು. ತಾನು ಬಹುತರ ಮೊದಲು ಹೇಳಿದ ಬುದ್ಧಿ ಮಾತುಗಳನ್ನು ತಿರಸ್ಕರಿಸಿ ಈಗ ವ್ಯಾಕುಲಪಡುವದಾಯಿತು. ಸಾಂಪ್ರತ ಅದಕ್ಕೆ ಏನೂ ನಿವೃತ್ತಿ ಇಲ್ಲವಷ್ಟೇ. ವಾಗ್ದೇವಿಯನ್ನು ಬಿಡಲಿಕ್ಕೆ ಸರ್ವಥಾ ಸಂದರ್ಭವಾಗಲಾರದು. ಅವಳಿಗೆ ಕೊಟ್ಟ ಭಾಷೆಯನ್ನು ಸಲ್ಲಿಸಲೇಬೇಕೆಂದು ವೆಂಕಟಪತಿಯು ಕೊಟ್ಟ ಉತ್ತರವು ಯತಿಯ ಶೋಕವನ್ನು ಮತ್ತಷ್ಟು ಹೆಚ್ಚಿಸಿಬಿಟ್ಟಿತು. ಚಂಚಲನೇತ್ರರ ಆರೋಗ್ಯಸ್ಥಿತಿಯು ದಿನವಹಿ ಕೆಡುತ್ತಾ ಬಂದು ಮೈಯಲ್ಲಿ ಶಕ್ತಿಯು ಕುಂದಿತು. ಒಮ್ಮಿಂದೊಮ್ಮೆ ಅವರ ಖಜಾನೆಯಿಂದ ಸಣ್ಣ ಸಣ್ಣ ಕಳವುಗಳು ಆಗುವುದಕ್ಕೆ ತೊಡಗಿದವು. ತಸ್ಕರನ್ಯಾರೆಂದು ತಿಳಿಯದೆಹೋಯಿತು. ಒಳಗಿನ ಕಳ್ಳನಲ್ಲದೆ ಹೊರಗಿನವನಲ್ಲವೆಂದು ಅವರ ಮನಸ್ಸಿಗೆ ತೋಚಿತು. ಮಠದ ಸೇವಕರನೇಕರ ಮೇಲೆ ಅನುಮಾನ ಉಂಟಾದರೂ ಬೇರೆ ಬೇರೆ ಕಾರಣಗಳಿಂದ ಅದು ನಿವೃತ್ತಿಯಾಯಿತು. ಕೊನೆಗೆ ಕೆಪ್ಪಮಾಣಿಯ ಮೇಲೆ ಸಂಶಯುಬಿತ್ತು. ಕ್ರಮೇಣ ಕಳ್ಳ ಸಿಕ್ಕಿಬೀಳದೆ ಇರಲಾರನೆಂದು ಯತಿಗಳಿಗೆ ಗೊತ್ತಿತ್ತು.

ಕೆಪ್ಪಮಾಣಿಯು ವಾಗ್ದೇವಿಯ ವಿಶ್ವಾಸಿಯಾಗಿರುವುದರಿಂದ ಅವಳಿಗೆ ಮಾತ್ರ ಅವನ ಮೇಲೆ ಸಂದೇಹವಿರಲಿಲ್ಲ. ಶ್ರೀಪಾದಂಗಳು ಅವನ ಮೇಲೆ

ಸಂಶಯುಪಟ್ಟು ಅವನನ್ನು ದೂರಪಡಿಸುವ ಆಲೋಚನೆಯಲ್ಲಿದ್ದರು. ಆದರೆ ನಿಷ್ಕಾರಣವಾಗಿ ಬಡವನೊಬ್ಬನ ಅನ್ನವನ್ನು ತೆಗೆಯುವುದು ಅನ್ಯಾಯ. ಚೆನ್ನಾಗಿ ಪರೀಕ್ಷೆಮಾಡಿ ನೋಡುವ ಮುಂಚೆ ಗಡಿಬಿಡಿ ಮಾಡಬಾರದೆಂದು ವಾಗ್ದೇವಿಯು ಪಟ್ಟ ಅಭಿಪ್ರಾಯವನ್ನು ಅವರು ಸಹಾ ಒಪ್ಪಬೇಕಾಯಿತು. ಕಳವುಗಳು ನಿಲ್ಲಲಿಲ್ಲ. ಒಂದಾದರೂ ತುಬ್ಬು ಆಗಲಿಲ್ಲ. ತಿಪ್ಪಾಶಾಸ್ತ್ರಿಯ ಕೂಡೆ ಪ್ರಶ್ನೆ ಕೇಳಿದಾಗ ಅವನು ಕವಡೆಗಳನ್ನು ಅತ್ತಿತ್ತ ಹೊರಳಿಸಿ ವೇದ ವ್ಯಾಸ ಉಪಾಧ್ಯನು ಒಂದು ಮಂತ್ರದೇವತೆಯನ್ನು ಮಠಕ್ಕೆ ಕಳುಹಿಸಿರು ವುದರಿಂದ ದಿಗ್ಬಂಧನೆಯಾದಂತಾಗಿ ಕಳವುಗಳು ನಡಿಯುವ ಹಾಗಿನ ದೊಂದು ಭ್ರಮೆಯು ತಲೆದೋರಿಯದಲ್ಲದೆ, ನಿಜವಾಗಿ ಸ್ವತ್ತುಗಳ್ಯಾವದೂ ಚೋರರ ಕೈವಶವಾಗಲಲ್ಲವೆಂದು ಹೇಳಿದನು. ಚಂಚಲನೇತ್ರರು ಅರನಗೆ ನಕ್ಕು ಮಾತಾಡದೆಹೋದರು. ವಾಗ್ದೇವಿಯು ಅವನ ಪ್ರಶ್ನೆ ಹಾಳಾಗಲೆಂದು ಬೆನ್ನುಹಾಕಿ ನಡೆದಳು. ತಾಯಿಯ ಪ್ರಾಣೋತ್ಕ್ರಮಣ ಕಾಲದಲ್ಲಿ ಅವನು ಯೆಂಗಿ ಹಾಕಿ ತನಗೆ ನಷ್ಟ ಮಾಡಿದನೆಂಬ ಸಿಟ್ಟನ್ನು ವಾಗ್ದೇವಿಯು ಬಿಟ್ಟಿರ ಲಿಲ್ಲ. ಹಳೆಗೆಳೆಯನಾದ ಅವನನ್ನು ಅಟ್ಟುವದಾಗಲೀ ಜರಿಯುವದಾಗಲೀ ಸಲ್ಲನೆಂದು ಬಾಯಿ ಮುಚ್ಚಿಕೊಂಡಿರಬೇಕಾಯಿತು. ವಾಗ್ದೇವಿಯ ಬಿಡಾರ ದಲ್ಲಿಯೂ ಅಪರೂಪವಾಗಿ ಕಳವುಗಳು ನಡೆದವು. ಆವಾಗ ಅವಳಿಗೂ ಕೊಂಚ ಆಶ್ಚರ್ಯವೂ ರವಷ್ಟು ಹೆದರಿಕೆಯೂ ಆಗಿ ಏನೂ ನಿವೃತ್ತಿಮಾರ್ಗ ಕಾಣದೆ ತರಹರಿಸಿದಳು. ಒಂದು ದಿನ ಬೆಳಿಗ್ಗೆ ನೋಡುವಾಗ್ಗೆ ವಾಗ್ದೇವಿಯ ಕೋಣೆಯಲ್ಲಿದ್ದ ಪೆಟ್ಟಿಗೆಯ ಬೀಗವನ್ನು ಮುರಿದು ಅದರ ಒಳಗಿರುವ ಚಿನ್ನದ ಆಭರಣಗಳನ್ನು ಎತ್ತಿಹಾಕಿದುದು ಕಂಡುಬಂತು. ಅವಳು ಆಗ ಪಟ್ಟ ವ್ಯಥೆಯು ಹೇಳತುದಿಯಿಲ್ಲ. ಅದರ ಮೂರನೆ ದಿನ ಚಂಚಲನೇತ್ರರ ಖಜಾನೆಯಿಂದ ಹೆಚ್ಚು ಮೌಲ್ಯದ ನಾಣ್ಯಗಳ ಸರಗಳೆರಡು ಮೂರು ಕಾಣದೆ ಹೋದುವು. ಹಣದ ಚೀಲಗಳು ಕೆಲವು ಇಟ್ಟಲ್ಲಿ ಇರಲಿಲ್ಲ. ಇನ್ನು ಮೌನ ತಾಳಿದರೆ ಸರ್ವಸ್ವವೂ ಅತಂತ್ರವಾಗುವುದೆಂಬ ಭಯದಿಂದ ಚಂಚಲನೇತ್ರರು ಕೊತ್ವಾಲ ಚಾವಡಿಗೆ ವರ್ತಮಾನ ಕೊಟ್ಟರು.

ಕೊತ್ವಾಲ ಭೀಮಾಜಿಯು ದಫೆದಾರ ಯಾಗಪ್ಪನ ಒಟ್ಟಿನಲ್ಲಿ ತಡ ಮಾಡದೆ ಮಠಕ್ಕೆ ಬಂದು ಸನ್ಯಾಸಿಗಳ ದರ್ಶನವನ್ನು ಮಾಡಿ ಅವರ ಮತ್ತು ವಾಗ್ದೇವಿಯ ಹೇಳಿಕೆಗಳನ್ನು ಬರಕೊಂಡನು. ಮಠದ ಸೇವಕರನ್ನೆಲ್ಲಾ

ಕರೆಸಿ ಕೆಲವರಿಗೆ ಹೊಡೆದು ಕೆಲವರಿಗೆ ಬಡೆದು ವಿಶಿಷ್ಟ ಜನರಿಗೆ ಕಂಡಾ ಪಟ್ಟಿ ಬಯ್ಯುತ್ತಾ ಕೋಳಗಳನ್ನು ತರಿಸಿ ಹಲವು ಬಡ ಚಾಕರರಿಗೆ ಹಾಕಿಸಿ ಅಬ್ಬರಿಸಿದರೂ ಪತ್ತೆದೊರೆಯದೆ ಹೋಯಿತು. ವಾಗ್ದೇವಿಯ ವ್ಯಸನ ನೋಡ ಲಾರದೆ ಭೀಮಾಜಿಯು—"ಅವ್ವಾ! ನನ್ನ ಜೀವವೊಂದಿದ್ದರೆ ನಿಮ್ಮ ಮ್ಹಾಲು ವಿಶಿಷ್ಟ ತರಿಸಿಕೊಡುವೆನು. ಹೆದರಬೇಡಿರಿ" ಎಂದು ಅವನು ಧೈರ್ಯ ಹೇಳಿ ದಾಗ ಲಾವಣ್ಯ ಪುರುಷನಾದ ಆ ನಡುಪ್ರಾಯದ ಕೊತ್ವಾಲನ ಮೇಲೆ ಅವಳಿಗೆ ಬಹು ಪ್ರೀತಿಯಾಯಿತು. ಅವನನ್ನು ಗಪ್ಪನೆ ಹೋಗಬಿಡದೆ ಪರಿ ಷ್ಕಾರವಾದ ಫಲಾಹಾರವನ್ನೂ ಬಿಸಿ ಬಿಸಿ ಬೂನಿನ ನೀರನ್ನೂ ಕೊಟ್ಟು ಸಂತೃಪ್ತಿ ಪಡಿಸಿದ ಬಳಿಕ ಕೊಂಚ ಸಮಯ ತನ್ನ ಸುಖ ದುಃಖಗಳನ್ನೂ ವೇದವ್ಯಾಸನು ತನಗೆ ಕೊಡುವ ಉಪಟಳೆಯ ಬಗೆಯನ್ನೂ ವಿವರಿಸಿ ಅವನ ಮನಸ್ಸನ್ನು ತನ್ನ ಕಡೆಗೆ ತಿರುಗಿಸಿಕೊಂಡಳು. "ಇಗೋ! ಮಠದಲ್ಲಿ ಏನೂ ಕಡಿಮೆ ಇಲ್ಲಾ. ಸಹಾಯಹೀನರಾದ ನಮ್ಮನ್ನು ಬಿಟ್ಟುಹಾಕದೆ ನಡಿಸಿದರೆ ನಿಮ್ಮ ಮನಸ್ಸಿಗೆ ಸರಿಯಾಗಿ ನಾವು ನಡೆದುಕೊಳ್ಳುವುದೇ ಸರಿ" ಎಂದು ಮಧುರೋಕ್ತಿಗಳಿಂದ ಕೊತ್ವಾಲನನ್ನು ಪೂರ್ಣವಾಗಿ ಕೈವಶ ಮಾಡಿ ಕೊಂಡಳು. ವಾಗ್ದೇವಿಯ ಪ್ರಸನ್ನತೆಯನ್ನು ಹೊಂದದೆ ಬದುಕಿ ಪುರುಷಾರ್ಥ ವಿಲ್ಲವೆಂದೆಣಿಸಿದ ಭೀಮಾಜಿಯು ದಫೇದಾರನನ್ನು ಕರೆದು ತನ್ನ ಜವಾನರೊ ಳಗೆ ಕಳ್ಳನನ್ನು ಹಿಡಿಯುವ ಸಮರ್ಥನ್ಯಾರೆಂದು ಕೇಳಿದನು.

ಯಾಗಪ್ಪಾ—"ಬುದ್ಧಿ! ಬುದ್ಧಿ! ಬುದ್ಧಿ! ಯಾಕುಬಖಾನ ಒಬ್ಬನೇ ಸೈ; ಬಾಕಿ ಎಲ್ಲಾ ನನ್ನ ಮಕ್ಕಳು ಉಂಬೋಕೆ ಆದಾವು. ನಾನು ದಿನಾಲು ತಲೆ ಬಡಕೊಂಡಿ ಮಾಡಿಕೊಂಡಿ ಆ ತುರ್ಕರ ಪೋರನಿಗೆ ಹುಸಾರಮಾಡಿಯೇನೆ? ಅವಾಂ ಹಡ್ಕೆಬುದ್ಧಿಗಿನ್ನೂ ಇಳೀಲಿಲ್ಲ. ಲುಚ್ಚಾಗಿರಿ ಮಾಡಿದರೆ ಕೊಂದು ಬಿಟ್ಟೆನಂದಿ. ಅವನಿಗೆ ಚಂದಾಗಿ ಬುದ್ಧಿ ಹೇಳಿಯೇನಪ್ಪಾ. ಇನ್ನುಮೇಗೆ ಅವನ ಕಾರ್ಬಾರು ಎರ್ತೆತೊ ಏನೋ ಸದಾಸಿವ ಬಲ್ಲಾ."

ಭೀಮಾಜಿ—"ನಿನ್ನ ಅಧಿಕಪ್ರಸಂಗ ಹಾಗಿರಲಿ; ಹರತರದೂದಮಾಡಿ ಮಾಲು ತಲಾಸ ಮಾಡಿದರೆ ಅವನಿಗೆ ದಫೇದಾರಿ ಕೊಡಿಸಿಬಿಡುತ್ತೇನೆ. ಅವ ನಿಗೆ ಇತ್ತ ಬೇಗ ಕಳುಹಿಸು."

ಯಾಗಪ್ಪಾ—"ಸಮ ಆಯಿತು, ಅವನ ಶಿಫಾರತಿಗೆ ಹೋಗಿ ನನ್ನ ಅನ್ನದ ಮಡ್ಕೆ ಅಟ್ಟಕ್ಕೆ ಹತ್ತಿಕೆ ಆಯಿತು. ಬುದ್ಧಿ! ಅವನಿಗೆ ಜಪೆದಾರಿ

ಕೊಟ್ಟರೆ ನಾನು ಯಾರ ಕಾಲು ಗುದ್ದಿಕೆ ಹೋಗಲೀ! ನನ್ನ ದೊರೆ ಆ ಪೋರನ ಹೆಸರು ನಾನ್ಯಾಕೆ ಹೇಳಬೇಕಾಯಿತು? ನಂಗೆ ಹಿಡಿದ ಗಿರಬದಾರಿ ಅಂತೇನೆ."

ಭೀಮಾಜಿ--"ಎಷ್ಟು ಉದ್ದ ಮಾತಾಡ್ತಿ. ನಿನ್ನ ಕೆಲಸ ಯಾರು ತೆಗೆಯುತ್ತಾರೆ? ನಿನಗೆ ನಾರ್ನಪರ್ವರ್ಶಿಆದ ಮೇಲೆ ನಿನ್ನ ಕೆಲಸ ಅವನಿಗೆ ಕೊಡುವಾ. ಈಗಲೇ ಕೊಡಲಿಕ್ಕೆ ಯಾರಿಗಾದರೂ ಹುಚ್ಚದೆಯೇ? ಹೆದರಬೇಡ."

ಯಾಗಪ್ಪಾ—"ಬುದ್ಧಿ, ತಮ್ಮ ಪಾದವೇ ಗತಿ. ಖಾವಂದರು ಈವರೇಗೆ ನನ್ನ ಮೇಗೆ ದಯ ಇಟ್ಟು ಕಾಟ ನಡೆಸಿಕೊಂಡಿರಿ. ಇನ್ನುವಾ ಏನು ಬಾಳಾ ವರ್ಸ ಬದಕೆಕಿಲ್ಲ. ಮುಕ್ಸ ಮಕ್ಕಳುಮರಿಯಿದ್ದವ ಬಿಟ್ಟು ಹಾಕೆಕಾಗದು ಅಂದಿ. ಪಾದಕ್ಕೆ ಬಿದ್ದುಕೊಂಬ್ತೇನೆ. ನನ್ನ ಧನಿ ರಾಮುಧನಿ."

ಕಚೇರಿಗೆ ಹೋಗಿ ಯಾಕುಬಖಾನನಿಗೆ ಅನುಜ್ಞೆಗಳನ್ನು ಕೊಡುವದು ವಾಡಿಕೆಯಾದ ನಡವಳ್ತಿಯ ಕ್ರಮವಾಗಿದ್ದರೂ ವಾಗ್ದೇವಿಯ ಸಾಮಿಪ್ಯವು ಬಿಟ್ಟು ಹೋಗುವುದೆಂಬ ಹೆದರಿಕೆಯಿಂದ ಅವನನ್ನು ಮಠಕ್ಕೆ ಕಳುಹಿಸಿಕೊಡೆಂದು ಕೊತ್ವಾಲನು ದಫೇದಾರಗೆ ಅಪ್ಪಣೆಕೊಟ್ಟನು. ಯಾಗಪ್ಪನು ಬೇಗ ಯಾಕುಬಖಾನನನ್ನು ಕರಕೊಂಡು ಮಠಕ್ಕೆ ಬಂದನು. ಕೊತ್ವಾಲನು ಆ ಯಾಕುಬಖಾನನನ್ನು ಸಮೀಪಕ್ಕೆ ಕರೆದು, ಅವನು ಮಾಡತಕ್ಕ ಕೆಲಸದ ಸ್ಥಿತಿಯನ್ನು ಅಂತರಂಗವಲ್ಲಿ ತಿಳಿಸಿದನು. —"ಕೋನಸಿ ಬಡಿಬಾತಹೈ. ಖಾವಿಂದಕಿ ಹುಕುಂ ಹುವೇತೊ ಇಸಘಡಿ ಜಾಕೆ ಕಾಮುಸಬ್ ಫತಾಕರ್ಕೆ ಆಕೆ ಸಾಹೇಬಕಿ ಖದ್ಮಾಕು ಅರಜಕರ್‌ಲೇವುಂಗಾ." ಯಾವ ದೊಡ್ಡ ಮಾತು. ಖಾವಂದರಲ್ಲಪ್ಪಣೆಯಾದರೆ ಈ ಕ್ಷಣ ಹೋಗಿ ಕೆಲಸವೆಲ್ಲಾ ಜಯಿಸಿಕೊಂಡು ಬಂದು ಸಾಹೇಬರ ಪಾದಗಳಿಗೆ ಅರಿಕೆ ಮಾಡಿಕೊಳ್ಳುವೆನು ಎಂದು ಅವನು ಅದಬ್ಬಿನಿಂದ ಸಲಾಂಮಾಡಿ, ನಿಂತುಕೊಂಡನು. ಸಾವಕಾಶ ಮಾಡದೆ ನಡಿ ಎಂದು ಭೀಮಾಜಿಯು ಯಾಕುಬಖಾನನನ್ನು ಕಳುಹಿಸಿ ಒಣಹರಟೆ ಮಾತಾಡುವ ಯಾಗಪ್ಪಗೆ ಏನೋ ಬಿಟ್ಟಿಹೇಳಿ ಅಟ್ಟಿದನು. ಒಂದೆರಡು ಘಳಿಗೆ ವಾಗ್ದೇವಿಯ ಕೂಡ ಸಂಭಾಷಣೆ ಮಾಡುತ್ತಾ ಊಟದ ಸಮಯವಾಯಿತೆಂದು ಮನೆಗೆ ಹೋಗ ಹೊರಟಾಗ ಅವಳು—"ತಮ್ಮ ಮರುಭೇಟಿ ನನಗೆ ಇನ್ನಾವಾಗ ಸಿಕ್ಕುವದೆಂದು ಅಪ್ಪಣೆಯಾಗಲಿ" ಎಂದಳು.

'ರೋಗಿ ಬಯಸಿದ್ದು ಹಾಲೋಗರ ವೈದ್ಯ ಹೇಳಿದ್ದು ಹಾಲೋಗರ' ಎಂಬಂತಾಯಿತು. ವಾಗ್ದೇವಿಯು ನಿರಾಯಾಸವಾಗಿ ಭೀಮಾಜಿಗೆ ಸುಪ್ರಸನ್ನಳಾಗುವ ಶುಭ ಸೂಚಕವಾತು ಅವಳ ಬಾಯಿಯಿಂದಲೇ ಹೊರಟ ಮೇಲೆ ಅವನು ಪುಣ್ಯವಂತನೆನ್ನಬೇಕು. ಅವನೂ ಹಾಗೆಯೇ ತಿಳಕೊಂಡನು. ಕಳವಿನ ಪ್ರಕರಣ ಮುಗಿಯುವ ತನಕ ಆಗಾಗ್ಗೆ ಬರುವೆನೆಂನು ಅವನು ಮಾತು ಕೊಟ್ಟನು, ಆ ವಿಚಾರ ಹಾಗಿರಲಿ — "ನಾನು ಕಾರ್ಯಜಾಣೆಯಲ್ಲ. ತಮ್ಮಂಥಾ ಪ್ರಭುಗಳ ಸಂದರ್ಶನವು ಇಷ್ಟು ಸುಲಭವಾಗಿ ಇಂದು ದೊರಕಿದ್ದು ನನ್ನ ಪೂರ್ವ ಪುಣ್ಯ; ಇನ್ನು ಮುಂದೆಯೂ ಅನಾಥೆಯಾದ ನಾನು ತಮ್ಮ ಆಶ್ರಿತಳೆಂಬ ಅಭಿಮಾನವಿಟ್ಟು ನನನ್ನು ನಡೆಸಿಕೊಂಡು ಹೋಗಬೇಕಾಗಿ ನನ್ನ ವಿನಂತಿ. ಸಮಯೋಚಿತ ನೋಡಿ ನನ್ನನ್ನು ವಿಚಾರಿಸಿಕೊಂಡರೆ ಕೃತಕೃತ್ಯಳಾಗುವೆನು" ಎಂದು ಸವಿಯಾದ ಮಾತುಗಳಿಂದ ಕೊತ್ವಾಲನನ್ನು ವಾಗ್ದೇವಿಯು ಮಂಕುಗೊಳಿಸಿ ಬೆಳ್ಳಿಯದೊಂದು ಹರಿವಾಣ ಉಚಿತಕೊಟ್ಟು ಕಳುಹಿಸಿದಳು. ಭೀಮಾಜಿಯ ಆನಂದಕ್ಕೆ ಹದ ಮೀರಿತು. ತಾನು ನಡೆಯುವುದು ಕಾಲಿನಿಂದಲೋ ತಲೆಯಿಂದಲೋ ಎಂಬದು ತಿಳಿಯದೆ ವಾಗ್ದೇವಿಯ ಸುಂದರ ಪ್ರತಿಮೆಯನ್ನು ತನ್ನ ಹೃದಯದಲ್ಲಿ ನೆಲೆಗೊಳಿಸಿ ನಷ್ಟದ್ರವ್ಯವನ್ನು ಅವಳಿಗೆ ಸಿಕ್ಕುವಂತೆ ಪ್ರಯತ್ನಮಾಡಿ ಅವಳ ಕೃತಜ್ಞತೆಯನ್ನು ಪಡೆಯಬೇಕೆಂಬ ಆತುರದಿಂದ ಹಲವು ಮನೋಜಯ ಯೋಚನೆಗಳನ್ನು ಮಾಡುತ್ತಾ ಮನೆಗೆ ಬಂದನು.

ಯಾಕೂಬಖಾನನು ಕೊತ್ವಾಲನ ಅಪ್ಪಣೆಗನುಗುಣವಾಗಿ ಮಠದಿಂದ ಹೊರಟ ಮೇಲೆ ಯಾಗಪ್ಪನು ಅವನನ್ನು ದಾರಿಯಲ್ಲಿ ತಡದು—ದೊಡ್ಡ ಹಲಸಿನಕಾಯಿ ಸಿಕ್ಕಿಯದೆ, ತನಗೂ ನಾಲ್ಕು ಸೋಳೆ ಕೊಡೆಂದು ಕೇಳಿದನು. ಯಾಕುಬಖಾನನು ನಕ್ಕು ಆಗಬಹುದೆಂದು ನಡೆದನು. ಯಾಕುಬಖಾನನು ಕೊತ್ವಾಲನ ಜವಾನರಲ್ಲಿ ಒಳ್ಳೇ ಮತಿವಂತನು. ಮತ್ತು ಹೆಚ್ಚು ಮಾತುಗಳಿಂದ ಸಮಯ ಕಳಿಯುವ ಯೌವನಸ್ಥನಲ್ಲ. ಅವನು ಮಠದಲ್ಲಿರುವ ನೌಕರರನ್ನೆಲ್ಲಾ ಪ್ರತ್ಯೇಕವಾಗಿ ಕಂಡು ತನಗೆ ಸಿಕ್ಕಬಹುದಾದ ಅನುಭವವನ್ನು ಅವರಿಂದ ಪಡಕೊಂಡು ಅದನ್ನೆಲ್ಲಾ ಮಥಿಸಿ ನೋಡಿದನು. ಕೆಪ್ಪಮಾಣಿಯ ಮೇಲೆ ಅವನಿಗೂ ಅನುಮಾನವಾಯಿತು. ಆದರೆ ಏಕಾಯೇಕಿ ಮುಂದರಿಸಿದರೆ ಕೆಲಸ ಕೈಗೂಡದೆಂದು ಅನುಮಾನದಿಂದ ನಿಧಾನವಾಗಿ ಆಲೋಚನೆ

ಮಾಡಿದನು. ಆ ದಿನ ಇಡೀ ಅವನು ಸಿಕ್ಕುವಷ್ಟು ವರ್ತಮಾನವನ್ನು ಸಂಗ್ರಹಿಸಿ ರಾತ್ರಿ ಕಾಲದಲ್ಲಿ ಬಾವಾಬುಡಾನಗಿರಿಯಿಂದ ಪದಗಳನ್ನು ಹೇಳುತ್ತಾ ಬೇಡಲಿಕ್ಕೆ ಬರುವ ಫಕೀರನಂತೆ ವೇಷಹಾಕಿ ಚಂಚಲನೇತ್ರರ ಮಠದ ಎದುರು ಭಾಗದಲ್ಲಿರುವ ಅಂಗಡಿಯ ಕೆಳಗೆ ಮಲಗಿಕೊಂಡಿದ್ದನು. ಆದರೆ ನಿದ್ರೆ ಮಾಡಿರಲಿಲ್ಲ.

ಬೀದಿಯಲ್ಲಿ ಜನರ ಸಂಚಾರ ಕಡಿಮೆಯಾಗುತ್ತಲೇ ಕೆಪ್ಪಮಾಣಿಯು ಮಠದಿಂದ ಬೀದಿಗಿಳಿದು ತಲೆಯನ್ನು ಬಗ್ಗಿಸಿಕೊಂಡು ತ್ವರೆಯಾಗಿ ಹೋಗುವದು ಯಾಕುಬಖಾನನ ಕಣ್ಣಿಗೆಬಿತ್ತು. ಹೆಚ್ಚುಕಡಿಮೆ ಹತ್ತುಮಾರು ದೂರದಿಂದ ಅವನು ಕೆಪ್ಪಮಾಣಿಯನ್ನು ಹಿಂಬಾಲಿಸಿದನು. ಮಾಣಿಯು ಹಿಂದೆಮುಂದೆ ನೋಡದೆ ಉಕ್ಕಡದ ಸಮೀಪವಿರುವ ಜಾನಕಿ ಎಂಬ ವೇಶ್ಯಾಸ್ತ್ರೀಯ ಮನೆಯ ಉಪ್ಪರಿಗೆಯನ್ನೇರಿದನು. ಯಾಕುಬಖಾನನು ಅದೇ ಮನೆಯ ಕೆಳಗೆ ಇರುವ ಒಂದು ಸಣ್ಣ ಗುಡಿಸಲಿನಲ್ಲಿ ಅವಿತುಕೊಂಡನು. ಮಧ್ಯರಾತ್ರಿಪರಿಯಂತರ ಜಾನಕಿಯೂ ಕೆಪ್ಪಮಾಣಿಯೂ ಮಾತನಾಡುತ್ತ ನೆಗಾಡುತ್ತಾ ಹಾಡುತ್ತಾ ಇರುವ ಗೌಜಿಯು ಯಾಕುಬಖಾನನ ಕಿವಿಗೆ ಬೀಳುತ್ತಿತ್ತು. ಇವನು ಕೆಪ್ಪನೆಂಬ ಮಾತು ಬರೇಸುಳ್ಳು. ಪಕ್ಕಾಕಳ್ಳನೇ ಸರಿ ಎಂದು ಯಾಕುಬಖಾನನು ಚೆನ್ನಾಗಿ ಕಿವಿಗೊಟ್ಟು ಅವರ ಸಂಭಾಷಣೆಯನ್ನು ಕೇಳುವವರಲ್ಲಿ ಬಿದ್ದನು. ಅವರು ಒಮ್ಮೆ ಘಟ್ಟಿಯಾಗಿಯೂ ಇನ್ನೊಮ್ಮೆ ಮೆಲ್ಲಗೂ ಮಾತನಾಡುತ್ತಿದ್ದರು. ಬೆಳಗಿನ ಜಾವದಲ್ಲಿ ಉಭಯತ್ರರೂ ಕೆಳಗಿಳಿದು ಬೀದಿಗೆ ಇಳಿಯುವ ಮೆಟ್ಟಲುಗಳ ಬಳಿಯೆ ನಿಂತುಕೊಂಡು ಸ್ವಲ್ಪಹೊತ್ತು ಪುನಃ ಮಾತಾಡಿದರು. ನಾಡದು ಬರು ವೆನೆಂದು ಕೆಪ್ಪಮಾಣಿಯು ಬೀದಿಗಿಳಿಯುತ್ತಲೇ—"ನಾಳೆಸವಾರಿ ಹಾಗಾದರೆ ಯಾವಲ್ಲಿಗೆ?" ಎಂದು ಅವಳು ಕೇಳಿದಳು. ಅವಳಿಗೆ ಪ್ರತ್ಯುತ್ತರ ಕೊಡದೆ ಮುಂದರಿಸಿ ಹೋದನು. ಯಾಕುಬಖಾನನು ಮೆಲ್ಲಗೆ ಹೊರಟು ಅವನನ್ನು ದೂರದಿಂದ ಹಿಂಬಾಲಿಸಿದನು. ಕೆಪ್ಪಮಾಣಿಯು ಮಠಕ್ಕೆ ಹೊಕ್ಕನಂತರ ಯಾಕುಬಖಾನನು ತನ್ನ ಮನೆಗೆ ಮರಳಿದನು.

ಮರುದಿನ ರಾತ್ರಿ ಯಾಕುಬಖಾನನು ಅದೇ ವೇಷಮಾಡಿ ಅದೇ ಅಂಗಡಿಯಲ್ಲಿ ಬಿದ್ದುಕೊಂಡಿರುವಾಗ ಮುಂಚಿನ ರಾತ್ರಿಯಂತೆ ಮಠದಿಂದ ಬೀದಿಗಿಳಿದು ಜೋರಾಗಿ ನಡಿಯುವ ಕೆಪ್ಪಮಾಣಿಯನ್ನು ಕಂಡು ಯಾಕುಬನು

ಜಾಗ್ರತೆಯಿಂದ ಅವನ ಹಿಂದೆಯೇ ಹೋದನು. ಕೆಪ್ಪಮಾಣಿಯು ಆ ರಾತ್ರೆ ಪೇಟೆಯ ತುದಿಯಲ್ಲಿ ಸುಂದರಿಯೆಂಬ ವೇಶ್ಯೆಯ ಮನೆಯ ಒಳಹೊಕ್ಕನು. ಯಾಕುಬನು ಹೊರಗೆ ಬೀದಿಯಲ್ಲಿ ನಿಂತುಕೊಳ್ಳದೆ ಆ ಮನೆಯ ಬದಿಯಲ್ಲಿರುವ ತಿಟ್ಟೆಯಲ್ಲಿ ಕೂತುಕೊಂಡನು. ಆ ಸ್ಥಳದಿಂದ ಮನೆಯ ಒಳಗೆ ಕೆಪ್ಪಮಾಣಿಯೂ ಸುಂದರಿಯೂ ಆಡುವ ಮಾತುಗಳು ಖಾನನ ಕಿವಿಗೆ ಸರಿಯಾಗಿ ಕೇಳುತ್ತಿದ್ದುವು. ಉಸುರು ಅತ್ತಿತ್ತ ಹಂದಿಸದೆ ಯಾಕುಬನು ಕೂತನು. "ಊಚು ಆಭರಣಗಳೆಲ್ಲಾ ಜಾನಕಿಗೆ; ನಖಾರೆ ನಗಗಳೆಲ್ಲಾ ನನಗೆ ತಂದು ಕೊಟ್ಟಿದ್ದೀರಿ. ನಾನೇನು ಅಷ್ಟು ಕುರೂಪಿ? ಅವಳು ಬಹುರೂಪವಂತೆಯೋ? ಅವಳಿಗೆ ಒಳ್ಳೆ ಒಳ್ಳೆ ಸರಗಳು ಕೊಟ್ಟಿದ್ದೀರಂತೆ. ನಾನು ಮಾಡಿದ ತಪ್ಪೇನು? ನನ್ನ ಮೇಲೆ ಅಷ್ಟು ಬೇಸರವೇಕೆ?" ಎಂದು ಅವಳು ಜರಿಯುವದು ಯಾಕುಬಖಾನನ ಕಿವಿಗೆ ಬಿತ್ತು. ಗುಟ್ಟು ಈಗ ಸಿಕ್ಕಿತು. ಇನ್ನು ಕಾಲಹರಣಮಾಡಿದರೆ ಕಾರ್ಯಹಾನಿಯಾಗುವದೇ ಸರಿ ಎಂದು ಯಾಕುಬಖಾನನು ಕೂಡಲೇ ಅಲ್ಲಿಂದ ಹೊರಟು ನೆಟ್ಟಗೆ ತನ್ನ ಮನೆಗೆ ಬಂದನು. ಮರುದಿವಸ ಪ್ರಾತಃ ಕಾಲದಲ್ಲಿ ಕೊತ್ವಾಲನನ್ನು ಕಂಡು ಸಲಾಂ ಹೊಡೆದು ಕೈತಟ್ಟಿ ನಿಂತುಕೊಂಡನು. ಕೊತ್ವಾಲನು ಅವನನ್ನು ಏಕಾಂತ ಸ್ಥಳಕ್ಕೆ ಕರದು ಅವನು ಕೊಟ್ಟ ವರ್ತಮಾನವನ್ನೆಲ್ಲಾ ಕೇಳಿ—"ವ್ಹಾವ್ಹಾ, ಬರಾಬರ್, ಶಾಣಾ ಹೈ ಠೇರೊ, ಅಬೀಚ್ ಆತಾಹುಂ" (ವ್ಹಾವ್ಹಾ, ಬರಾಬರಿ ನೀನು ಬದ್ಧಿವಂತನಾಗಿದ್ದಿ. ತಡಿ ಈಗಲೇ ಬರುವೆನು) ಎಂದು ಒಳಗೆ ಹೋಗಿ ವಸ್ತ್ರ ಧರಿಸಿಕೊಂಡು ಬೇರೆ ಕೆಲವು ಜವಾನರನ್ನು ಸಂಗಡ ಕರಕೊಂಡು ಕೆಲವರನ್ನು ಸುಂದರಿಯ ಮನೆಗೆ ಸುತ್ತುಹಾಕಲಿಕ್ಕೆ ಹೇಳಿ ಪ್ರಥಮತಃ ಜಾನಕಿಯ ಮನೆಯನ್ನು ಶೋಧನೆ ಮಾಡಿಸಿ ನೋಡಿದ್ದಲ್ಲಿ ಮಠದಿಂದ ಕಳವಾದ ಹಲವು ಆಭರಣಗಳು ಸಿಕ್ಕಿದವು. ಬಳಿಕ ಸುಂದರಿಯ ಮನೆಯ ಶೋಧವಾಯಿತು. ಅಲ್ಲಿಯೂ ಮಠದ ಒಡವೆಗಳೂ ವಾಗ್ದೇವಿಯ ಆಭರಣಗಳೂ ಸಿಕ್ಕಿದವು. ಅವುಗಳನ್ನೆಲ್ಲಾ ಸ್ವಾಧೀನಮಾಡಿಕೊಂಡು ಕೊತ್ವಾಲನು ಪಟ್ಟೆಬರಕೊಂಡನು.

## ಮೂವತ್ತೆರಡು

ಭೀಮಾಜಿಯ ಸಂತೋಷವು ಸಮುದ್ರದಂತೆ ಉಕ್ಕಿತು. ಅವನು ಚಮತ್ಕಾರದಿಂದ ಸೋವು ಹಿಡಿದು ಪ್ರಕರಣ ತಲಾಸು ಮಾಡಿದ್ದಕ್ಕಾಗಿ ಮೇಲು

ಉದ್ಯೋಗಸ್ಥರ ಶ್ಲಾಘನೆಗೆ ಹ್ಯಾಗೂ ಯೋಗ್ಯನಾದನಷ್ಟೇ ಅಲ್ಲ, ವಾಗ್ದೇವಿಯು ಮತ್ತು ಚಂಚಲನೇತ್ರರ ಕೃತಜ್ಞತೆಗೂ ಭಾಗಿಯಾದನು. ಶೋಧನೆಯಲ್ಲಿ ಸಿಕ್ಕಿದ ಆಭರಣಗಳನ್ನು ಮಠಕ್ಕೆ ತಂದು ಅವುಗಳು ಚಂಚಲನೇತ್ರರದೆಂಬು ದಕ್ಕೆ ಸಾಕ್ಷವನ್ನು ದೊರಕಿಸಿಕೊಂಡು ಮೊಕದ್ದಮೆಯನ್ನು ಅಪರಾಧಿಯ ಸಹಿತ ಫೌಜಿದಾರಿ ಕಾರಭಾರಿಯ ಕಚೇರಿಗೆ ಕಳುಹಿಸಿಕೊಟ್ಟನು. ಅಂದಿನ ಕೆಲಸವೆಲ್ಲಾ ಕ್ಷಿಪ್ರ ತೀರಿಸಿಬಿಟ್ಟು ಸಾಯಂಕಾಲ ಮಠಕ್ಕೆ ಬಂದು ಚಂಚಲ ನೇತ್ರರಿಗೆ ಪ್ರಣಿಪಾತಮಾಡಿದನು. ಯತಿಗಳು ಅವನಿಗೆ ಬೇಕಷ್ಟು ಹೊಗಳಿ ದರು. ಆಗ ಡೊಳ್ಳು ಬೆಳೆಸಿಕೊಂಡು ಸಮೀಪದಲ್ಲಿದ್ದ ಕೆಲವು ಆಚಾರ್ಯರು "ಓಹೋ ಹೋ ಇವರೇ ಸ್ವಾಮಿಾ! ದೊಡ್ಡಪ್ರಾಜ್ಞರು! ಪ್ರಚಂಡ ತಸ್ಕರ ಶಿಕ್ಷಕರು; ಸಜ್ಜನರಕ್ಷಕಶ್ರೇಷ್ಠರು; ಕುಶಾಗ್ರ ಬುದ್ಧಿಯುಳ್ಳವರು. ನಿಷ್ಠಾವಂ ತರು. ಪರಾಪೇಕ್ಷೆ ಇಲ್ಲದವರು. ಸಾಕ್ಷಾತ್ ಯಮನಂತೆ ಅಪರಾಧಿಗಳನ್ನು ದಂಡಿಸುವವರು. ದೈವಬ್ರಾಹ್ಮಣರ ಮೇಲೆ ಪೂರ್ಣ ವಿಶ್ವಾಸ ಉಳ್ಳವರು. ದೈವನಿರ್ಮಿತ ಸಕಲ ಚರಾಚರವಸ್ತುಗಳಲ್ಲಿಯೂ ಅಂತಃಕರಣ ಶುದ್ಧವಾಗಿ ರುವವರು" ಎಂದು ಶುಷ್ಕೋಪಚಾರಮಾಡಿದರು.

ಸ್ವಾಮಿಗಳ ಅಪ್ಪಣೆ ಪಡಕೊಂಡು ಭೀಮಾಜಿಯು ಹೊರಡುವಾಗ ಆಬಾಚಾರ್ಯನು ಅವನನ್ನು ಅಡ್ಡತಡದು ಬಿಡಾರಕ್ಕೆ ಕರಕಂದನು. ಅವನ ಆಗಮನವನ್ನು ಕಾಯುತ್ತಾ ಇದ್ದ ವಾಗ್ದೇವಿಯು ಪ್ರಥಮತಃ ಬೇಕಾದ ಫಲಾಹಾರ ಸಾಹಿತ್ಯಗಳಿಂದ ಅವನ ದಣುವನ್ನು ಪರಿಹರಿಸಿ, ತಾಂಬೂಲಾದಿ ಉಪಚಾರಗಳನ್ನು ಮಾಡಿದ ಮೇಲೆ—"ಕಳ್ಳನನ್ನು ಲವಮಾತ್ರದಲ್ಲಿ ಹಿಡಿದು ಬಿಟ್ಟಿರೇ!" ಎಂದು ಸಾನುರಾಗದಿಂದ ಕೇಳಿದಳು.

ವಾಗ್ದೇವಿ—"ಈ ಪ್ರಕರಣವನ್ನು ತಾವು ತೀರಿಸುವದು ಯಾವಾಗ?"

ಭೀಮಾಜಿ—"ಇನ್ನು ಅದರಲ್ಲಿ ನಾನು ಮಾಡತಕ್ಕದ್ದೇನಿಲ್ಲ. ಅಪರಾಧಿ ಗಳಿಗೆ ಶಿಕ್ಷೆ ಕೊಡುವ ಅಧಿಕಾರಿ ಬೇರೆ."

ವಾಗ್ದೇವಿ—"ಅವರ್ಯ್ಯಾರು ಮತ್ತೆ?"

ಭೀಮಾಜಿ—"ಪೌಜದಾರಿ ಅದಾಲತ್ ಕಾರಭಾರಿ ಶಾಬಯ್ಯನವರು. ಪ್ರಕರಣವು ಬಡಾತಿ ತಾಬಿಗೆ ಸೇರುವದರಿಂದ ಅದನ್ನು ಆ ಉದ್ಯೋಗಸ್ತರ ಕಚೇರಿಗೆ ಕಳುಹಿಸಬೇಕಾಯಿತು."

ವಾಗ್ದೇವಿ—"ರಾಯರೇ! ಆ ಉದ್ಯೋಗಸ್ತರ ಮರ್ಜಿ ಇನ್ನ್ಯಾವ ರೀತಿ

ಅದೆಯೋ?"

ಭೀಮಾಜಿ—"ದೊಡ್ಡ ಉದ್ಯೋಗಸ್ತರಲ್ಲವೇ? ಅವರ ಹುದ್ದೆಗೆ ಸರಿಯಾದ ಭರಂ ಅವರಲ್ಲಿ ಇಲ್ಲದೆಹೋದರೆ ಅವರಿಗೆ ಯಾರು ಗುಮಾನವಾಡ್ಯಾರು? ಮರ್ಜಿ ಸ್ವಲ್ಪಕಠಿಣವಾದರೂ ಮನಸ್ಸು ಒಳ್ಳೇದು. ಸಜ್ಜನರಿಗೆ ಪರಿಪಾಲನೆ ಮಾಡುವವರೇ ಸೈ."

ವಾಗ್ದೇವಿ—"ತಮ್ಮ ಮಾತು ಕೇಳುವಾಗ ಹೆದರಿಕೆಯಾಗುತ್ತೆ. ಸಾಮಾನ್ಯ ಜನರು ಅವರ ಭೇಟಿಮಾಟಿ ಸಂಕಷ್ಟಗಳನ್ನು ಹೇಳಿಕೊಳ್ಳಲಿಕ್ಕೆ ಸಂದರ್ಭವಿಲ್ಲವೇನು?"

ಭೀಮಾಜಿ—"ಎಲ್ಲರಿಗೂ ಅಲ್ಲಿ ಆಶ್ರಯ ಸಿಕ್ಕುವಹಾಗಿಲ್ಲ. ಮನಮಾನೆ ಜನರು ಅವರ ಆಶ್ರಯಪಡಿಯುವದಕ್ಕೆ ಪಾತ್ರರಲ್ಲ."

ವಾಗ್ದೇವಿ—"ತಮಗೂ ಅವರಿಗೂ ಪರಸ್ಪರ ಪ್ರೀತಿಯುಂಟೇನು?"

ಭೀಮಾಜಿ—"ಅವರು ದೊಡ್ಡ ಉದ್ಯೋಗಸ್ತರು. ಆದರೂ ನನ್ನ ಮೇಲೆ ಅವರಿಗೆ ಕೊಂಚ ಪ್ರೀತಿಯೂ ಚಂದಾಗಿ ವಿಶ್ವಾಸವೂ ಅದೆ."

ವಾಗ್ದೇವಿ—"ಹಾಗಾದರೆ ನನಗೇನು ಭಯ? ತಾವು ಹ್ಯಾಗೂ ಅನಾಥೆಯಾದ ನನ್ನನ್ನು ಬಿಟ್ಟುಬಿಡುವವರಲ್ಲವಷ್ಟೇ. ಆ ಕುರಿತು ತಮ್ಮ ವಾಗ್ದಾನ ನನಗೆ ಮೊದಲೇ ಸಿಕ್ಕಿಯದೆ. ಆ ದೊಡ್ಡ ಅಧಿಕಾರಸ್ತರ ದರ್ಶನವು ನನಗೆ ದೊರೆಯುವ ಹಾಗೆ ತಾವು ಮಾಡಬೇಕು."

ಭೀಮಾಜಿ—"ಅಯ್ಯೊ, ಅದೆಲ್ಲಾ ನನ್ನಿಂದ ಸಾಧ್ಯವಾಗುವದೇ? ನಿನ್ನ ಕೆಲಸ ನೋಡಿಕೊಂಡಿರುವದು ಬಿಟ್ಟು ಇಂಥಾ ಹಾಳುಹರಟೆಯಲ್ಲಿ ಪ್ರವೇಶಿಸುತ್ತೀಯಾ? ಎಂದು ಅವರೆಲ್ಲಾದರೂ ಸಿಟ್ಟುಮಾಡಿದರೆ ನನ್ನ ಮುಖಕ್ಕೆ ಮಂಗಳಾರತಿ ಆದಂತಾಗುವದು. ನಾನು ಸ್ವತಃ ಮಾಡತಕ್ಕದ್ದೇನಾದರೂ ಇದ್ದರೆ ನಿಮ್ಮ ವಾತ್ಸಲ್ಯ ಸರ್ವಥಾ ಬಿಡುವವನಲ್ಲ. ಇನ್ನೇನು ಹೇಳಲಿ?"

ವಾಗ್ದೇವಿ—"ತಾವು ನನ್ನಕೂಡೆ ಯಾಕೆ ಠಕ್ಕು ಮಾಡುತ್ತೀರಿ? ತಮ್ಮ ಬುದ್ಧಿವಂತಿಗೆಗೆ ಮೆಚ್ಚಿದೆ. ಹನುಮಂತನ ಆಶ್ರಯಿಸಿದವಗೆ ರಾಮದೇವರ ದರ್ಶನಕ್ಕೆ ಅಡ್ಡಿಯಾಗುವದೇ?

ಭೀಮಾಜಿ—"ಸರಿ ಸರಿ! ನಾನು ಒಬ್ಬ ಹನುಮಂತನೇ? ಒಳ್ಳೇ ಉಪಮೆ!"

ವಾಗ್ದೇವಿ—"ರೂಪಿನಲ್ಲಿ ಹಾಗಲ್ಲವಾದರೂ ಸಾಮರ್ಥ್ಯದಲ್ಲಿ ತಮ್ಮನ್ನ

ಹನುಮಂತಗೆ ನಾನು ಹೋಲಿಸುವದು ಅನ್ಯಾಯವಲ್ಲ. ಪ್ರಧಾನ ಉಪಮೆ ಸರಿಯಾದ್ದೇ."

ಭೀಮಾಜಿ—"ನನ್ನ ರೂಪವೂ ಸಾಮರ್ಥ್ಯವೂ ಹಾಗಿರಲಿ; ನಮ್ಮ ನಮ್ಮ ಮಾರ್ಗಬಿಟ್ಟು ಹೋಗುವದು ನಮ್ಮ ಗೌರವಕ್ಕೆ ಹಾನಿಕರದ್ದು."

ವಾಗ್ದೇವಿ—"ನಿಜವಾಗಿ ತಮಗೆ ನನ್ನ ಮೇಲೆ ವಾತ್ಸಲ್ಯ ಉಂಟಾದರೆ ತಮ್ಮ ಬಾಯಿಯಿಂದ ಇಂಥಾ ಅಪಧೈರ್ಯಪಡಿಸುವ ಮಾತು ಬರುತ್ತಿದ್ದಿಲ್ಲ. ನನ್ನಿಂದ ಬಂದ ಅಪರಾಧವೇನು? ತಮ್ಮ ಮನಸ್ಸಿನಲ್ಲಿ ವಿಕಲ್ಪಹುಟ್ಟಿಯದೆ. ನನ್ನ ಚಾಡಿ ಯಾರಾದರೂ ಹೇಳಿ ನನ್ನ ಮೇಲೆ ತಾವು ವಿಮುಖರಾಗುವಂತೆ ಮಾಡಿರಬೇಕು."

ಭೀಮಾಜಿ—"ಅಪ್ಪಾ! ಹಾಗೆ ಯಾಕೆ ಹೇಳುತ್ತೀರಿ? ನಾನು ನಿಜವಾಗಿ ನಿಮ್ಮ ಹಿತಚಿಂತಕ. ನಿಮ್ಮ ಚಾಡಿ ನನಗೆ ಯಾರೂ ಹೇಳಲಿಲ್ಲ. ನೀವು ನನ್ನ ಮೇಲೆ ವ್ಯರ್ಥ ಅನುಮಾನ ಪಟ್ಟಿರುವಿರಿ. ನನಗೆ ನಿಮ್ಮ ಮೇಲೆ ವಿಕಲ್ಪವೇನೂ ಹುಟ್ಟಲಿಲ್ಲ."

ವಾಗ್ದೇವಿ—"ತಮ್ಮ ಮರೆಹೊಕ್ಕ ನಾನು ಇನ್ನೊಬ್ಬನ ಆಶ್ರಯ ಅಪೇಕ್ಷಿಸಲಾರೆ. ತಾವು ನನ್ನನ್ನು ಕೊಂದರೂ ಸರಿ, ತಮ್ಮ ಸಂಶ್ರಯ ಬಿಟ್ಟಿರಲಾರೆ. ತಮ್ಮ ಸ್ನೇಹಿತರೆಂತ ತಾವೇ ಒಪ್ಪಿಕೊಳ್ಳುವ ಶಾಬಯ್ಯನವರ ಭೇಟಿ ನನಗೆ ದೊರಕುವ ಹಾಗೆ ಇನ್ನಾರು ನನ್ನ ಮೇಲೆ ಅನುಗ್ರಹವಿಡಬೇಕು? ದೇವರಂತೆ ತಮ್ಮನ್ನು ನಂಬಿದ ನನ್ನನ್ನು ನಡುದಾರಿಯಲ್ಲಿ ಕೈಬಿಡುವಿರೇನು?"

ಭೀಮಾಜಿ—"ಈಗಲೇ ಅವರ ಭೇಟಿ ಮಾಡತಕ್ಕ ಅಗತ್ಯವೇನು? ಕಳವಿನ ಸೊತ್ತುಗಳು ಸಿಕ್ಕಿಯವೆ. ಪ್ರಕರಣ ಒಳ್ಳೇ ಘಟ್ಟಿ ಉಂಟು. ಅದು ತೀರುವ ಮೊದಲು ಅವರ ಭೇಟಿಗೆ ಹೋಗಿ ಅವರಿಗೆ ಕೋಪ ಎಬ್ಬಿಸಿದರೆ ಯದ್ವಾತದ್ವ ಆಗಿ ಹೋಗುವದು."

ವಾಗ್ದೇವಿ—"ಇನ್ನೂ ನಿಮ್ಮ ತಸಕು ಬಿಡುವದಿಲ್ಲವಷ್ಟೆ? ಹಾಲೆಂದು ವಿಷವನ್ನು ಕೊಟ್ಟರೂ ಕುಡಿಯುವಷ್ಟು ವಿಶ್ವಾಸ ತಮ್ಮ ಮೇಲೆ ನಾನು ಇಟ್ಟಿರುವೆನು. ಆದರೂ ನನ್ನ ಕಡೆಗೆ ಮನಃಶುದ್ಧಿಯುಳ್ಳವರಾಗಿ ತೋರುವುದಿಲ್ಲ."

ಭೀಮಾಜಿ—"ನಿರಪರಾಧಿಯಾದ ನನ್ನನ್ನು ವ್ಯರ್ಥ ದೂರುವಿರೇ? ನನ್ನ ಗ್ರಹಗತಿಯಿಂದ ನಿಮಗೆ ನನ್ನ ಮೇಲೆ ಸಂದೇಹ ಹುಟ್ಟಿಯದೆ. ಈ ಕುರಿತು ನಾನು ಬಹಳ ಆಶ್ಚರ್ಯವೂ ಪಶ್ಚಾತ್ತಾಪವೂ ಪಡುತ್ತೇನೆ."

ವಾಗ್ದೇವಿ—“ಆ ಪ್ರಸ್ತಾಪ ಬಿಟ್ಟುಬಿಡುವಾ. ನಾನು ಅಭಾಗ್ಯಳು. ಅಲ್ಲದಿದ್ದರೆ ಅಷ್ಟು ದೊಡ್ಡ ಅಧಿಕಾರಸ್ಥರು ತಮ್ಮ ಸ್ನೇಹಿತರಾದಾಗ್ಯೂ, ಅವರ ಭೇಟಿ ತಮ್ಮ ಪರಿಮುಖ ನನಗೆ ದೊರಕುವದು ದುರ್ಲಭವಾಗದು. ತಾವು ಈ ವರೆಗೆ ನನ್ನ ಮೇಲೆ ಇಟ್ಟ ಅನುಗ್ರಹವನ್ನು ನಾನು ದೇಹಾಂತ್ಯದ ಪರಿಯಂತರ ಮರೆಯುವವಳಲ್ಲ. ತಮ್ಮ ಮೇಲೆ ನಾನು ಇಟ್ಟಷ್ಟು ವಿಶ್ವಾಸ ನಾನು ಇನ್ನೊಂದು ಪ್ರಾಣಿಯ ಮೇಲೆ ಇಡುವ ಹಾಗೂ ಇಲ್ಲ. ಸಣ್ಣ ದೊಂದು ಅರಿಕೆಯದೆ, ಅದನ್ನಾದರೂ ಸಲ್ಲಿಸಿದರೆ ಕೃತಕೃತ್ಯಳಾಗುವೆನು.”

ಭೀಮಾಜಿ—ನನ್ನಿಂದಾಗುವ ಯಾವ ಕೆಲಸಕ್ಕೂ ಅಡ್ಡಿ ಹೇಳುವವನಲ್ಲ. ನಿಮ್ಮ ಮೇಲೆ ನನಗೆ ಅಂತರ್ಯಶುದ್ಧವಾಗಿಯೇ ಇದೆ.”

ವಾಗ್ದೇವಿ—“ತಮ್ಮಿಂದ ಆಗದ ಕೆಲಸ ಹೇಳುವಷ್ಟು ಬುದ್ಧಿ ಹೀನತೆ ನನ್ನಲ್ಲಿ ಇಲ್ಲ. ನಾನು ಹೆಣ್ಣು ಹೆಂಗಸು ಖರೆ. ನಾಳೆ ಸಾಯಂಕಾಲ ತಾವು ನನ್ನ ಮೇಲೆ ಪೂರ್ಣ ದಯವಿಟ್ಟು ನನ್ನಲ್ಲಿ ಒಂದು ಸಣ್ಣ ಭೋಜನ ಮಾಡಿ, ನನಗೆ ಪರಮ ಪ್ರೇಮಿಗಳೆಂಬದಕ್ಕೆ ತಾರ್ಕಣೆ ಕೊಡಬೇಕು.”

ಭೀಮಾಜಿ—“ಅವ್ವಾ! ನೀವು ಯಾಕೆ ಅಷ್ಟು ಶ್ರಮ ತಕ್ಕೊಳ್ಳಬೇಕು? ನನಗೆ ಅಂಥಾ ಉಪಚಾರವ್ಯಾಕೆ? ನಾನು ನಿಮ್ಮ ಮೇಲೆ ತುಂಬಾ ಸ್ನೇಹ ಭಾವವುಳ್ಳವನಾಗಿರುತ್ತಾ, ನನಗೆ ಊಟಪಾಠವೆಂಬ ಆಡಂಬರವೇನು ಅಗತ್ಯ?”

ವಾಗ್ದೇವಿ—“ಅದು ದ್ವಯಾರ್ಥದ ಮಾತು. ಮುಖ್ಯ ತಮ್ಮ ಮಾತಿನ ಅನ್ವಯವು ಔತಣಕ್ಕೆ ಬರಲೊಲ್ಲೆನೆಂಬುದೋ? ಖಂಡಿತ ಹೇಳಿಬಿಡಿ.”

ಭೀಮಾಜಿ— “ಅಮ್ಮಾ! ನೀವು ಯಾಕೆ ಅವಸರ ಪಡುತ್ತೀರಿ? ನಾಳೆಯೇ ಔತಣವಾಗಬೇಕೇನು? ಇನ್ನೊಂದು ದಿವಸ ನೋಡಬಹುದು. ಸುಮ್ಮನೆ ಹಠಹಿಡಿಯಬೇಡಿ. ನಾನು ಹೋಗುತ್ತೇನೆ.

ವಾಗ್ದೇವಿಯು ಭೀಮಾಜಿಯ ಮುಖವನ್ನು ನೋಡಿ ಅತ್ತಳು. ಕೊತ್ವಾಲನು ನಿಜವಾಗಿ ತನ್ನ ಮೇಲೆ ಸಿಟ್ಟಿನಲ್ಲಿರುವನೆಂಬ ಭಯವು ಅವಳಿಗೆ ಹಿಡಿಯಿತು. ಅದರ ಕಾರಣವೇನೆಂದು ತಿಳಿಯದೆ ಅವಳಿಗೆ ಮತ್ತಷ್ಟು ಕರಕರೆ ಯಾಯಿತು. ಅತ್ತಲು ಭೀಮಾಜಿಯೂ ಸ್ವಲ್ಪ ಬೆರಗಾದನು. ಔತಣ ಇನ್ನೊಂದು ದಿನವಾಗಬಹುದೆಂದು ಸಹಜವಾಗಿ ಹೇಳಿದ ಮಾತಿಗೆ ಅವಳು ಯಾಕೆ ಶಂಕಿತಳಾಗಲೆಂಬುದು ಗೊತ್ತಾಗಲಿಲ್ಲ. ಅವಳನ್ನು ಸಮಾಧಾನಿಸಿ

ಮಾಡದೆ, ಅಲ್ಲಿಂದ ಹೊರಡುವುದಕ್ಕೆ ಮನಸ್ಸಿಲ್ಲದೆ, —"ಅಮ್ಮಾ! ಯಾಕೆ ಪಶ್ಚಾತ್ತಾಪ ಪಡುತ್ತೀರಿ? ಔತಣಕ್ಕೆ ನಾಳೆಯೇ ಬರಬೇಕೆಂಬ ಛಲ ನಿಮಗಿದ್ದರೆ ನಾನು ಅಗತ್ಯವಾಗಿ ನೀವು ಹೇಳುವಷ್ಟು ಹೊತ್ತಿಗೆ ಬರುವೆನು. ಅನುಮಾನ ಪಡಬೇಡಿ. ನನ್ನ ಮನಸ್ಸಿನ ಸ್ಥಿತಿಯು ನಿಮಗೆ ಚಂದಾಗಿ ಗೊತ್ತಿರುತ್ತಿದ್ದರೆ ನನ್ನ ಅಂತರಂಗ ಶುದ್ಧಿಯನ್ನು ಕುರಿತು ನಿಮಗೆ ಸಂದೇಹ ಹುಟ್ಟುತ್ತಿದ್ದಿಲ್ಲ" ಎಂದು ಭೀಮಾಜಿಯು ವಾಗ್ದೇವಿಯನ್ನು ಒಡಂಬಡಿಸಿ, ಮನೆಗೆ ಹೋಟನು.

## ಮೂವತ್ತ ಮೂರು

ವಾಗ್ದೇವಿಗೆ ಬಹು ಆನಂದವಾಯಿತು. ಮುಂದೆ ಭೀಮಾಜಿಯಿಂದ ಅವಳಿಗೆ ಅನೇಕ ಕಾರ್ಯಗಳು ಕೈಗೂಡುವುದಕ್ಕಿರುವುದರಿಂದ ಅವನನ್ನು ಪೂರ್ಣವಾಗಿ ತನ್ನ ವಶಮಾಡಿಕೊಳ್ಳುವ ಅವಶ್ಯವಿತ್ತು. ಮರುದಿವಸ ಅಪರೂಪ ಪಾಕಗಳಿಂದ ಔತಣ ಸಿದ್ಧವಾಯಿತು. ಸಾಯಂಕಾಲವಾಗಬೇಕಾದರೆ ಆಬಾಚಾರ್ಯನು ಕೊತ್ವಾಲನ ಮನೆಯ ಹೊರಗೆ ಅಲೆದಾಡುತ್ತಾ ಇದ್ದು, ಭೀಮಾಜಿಯು ಮನೆಗೆ ಬಂದ ಕೂಡಲೇ ಅವನನ್ನು ಕರಕೊಂಡು ಬಂದನು. ವಾಗ್ದೇವಿಯ ಹಲವು ಸನ್ಮಾನಗಳಿಂದ ಅವನು ಸೋತುಹೋದನು. ಭೋಜನವಂತೂ ಅತಿ ಚಲೋದಾಯಿತು. ಭೀಮಾಜಿಯು ಆ ಪರಿಯಂತ ಅಂಥಾ ಅಪೂರ್ವ ಊಟ ಉಂಡಿರಲಿಲ್ಲ. ಭೋಜನೋಪರಿ ತಾಂಬೂಲಾದಿ ಸತ್ಕಾರಗಳು ಆದವು ಹಲವು ಮಾತ್ಯಾಕೆ? ಸರ್ವೋಪಚಾರಗಳು ಪರಿಪೂರ್ಣವಾಗಿ ಹೊಂದಿದ ಅವನ ಮನಸ್ಸಿಗೆ ಪರಮೋಲ್ಲಾಸವೂ ಹೊಟ್ಟೆಗೆ ಸಂಪೂರ್ಣವಾದ ತೃಪ್ತಿಯೂ ಹುಟ್ಟಿದವು. ಬಳಿಕ ಅವನು ವಾಗ್ದೇವಿಯ ಹಿತಚಿಂತಕನಾಗುವದೇನು ಆಶ್ಚರ್ಯ! ಅವಳು ಅನುರಕ್ತಿಯಿಂದ ಮಾಡಿಸಿದ ಔತಣವನ್ನು ಭೀಮಾಜಿಯು ಮರೆಯುವ ಸ್ವಭಾವದವನೇ? ಛೇ ಛೇ ಎಂಥಾ ಮಾತು! ಇಂಥಾ ನಾರಿಮಣಿಯ ಒಲುಮೆಯನ್ನು ಎಲ್ಲರೂ ಬಯಸಕೂಡದು. ಪುಣ್ಯವಂತರೇ ಅದನ್ನು ಫಳಿಸಿಕೊಳ್ಳುವದಕ್ಕೆ ಕೋರಬಹುದು. ಈ ಸೌಭಾಗ್ಯವತಿ ತನ್ನ ಮೇಲೆ ಇಟ್ಟ ದೃಢ ವಿಶ್ವಾಸಕ್ಕೆ ದೇಹಾಂತ್ಯದವರೆಗೂ ಘಾತ ಬರಬಾರದು. ಈ ಮೋಹನಾಂಗಿಯ ಸ್ನೇಹವನ್ನು ಬೆಳಸಿದ ನಿಮಿತ್ತ ತನ್ನ ಮೇಲೆ ಎಂಥಾ ಕಷ್ಟಗಳೂ ಅಪವಾದಗಳೂ ಬರಲಿ ಅವುಗಳನ್ನು ಲಕ್ಷ್ಯಕೆ

ತಾರದೆ ಜೀವದಾಶೆಯನ್ನು ತಾನೆ ಬಿಟ್ಟು ಅವಳ ಬಯಕೆಗಳನ್ನು ಪೂರೈಸದೆ ಇರಲಾರೆನೆಂದು ಭೀಮಾಜಿಯು ಪ್ರಮಾಣ ವಾಕ್ಯದಂತೆ ಅವಳಿಗೆ ಭಾಷೆಯನ್ನು ಕೊಟ್ಟು ಸ್ವಗೃಹಾಭಿಮುಖನಾದನು.

ಹೆಚ್ಚಿನ ಪ್ರಸ್ತಾಪ ಆ ದಿನ ರಾತ್ರೆ ಅವನಾಗಲೀ ಅವಳಾಗಲೀ ಮಾಡಲಿಲ್ಲ. ಮರುದಿವಸ ಬರುವೆನೆಂನು ವಾಗ್ದತ್ತಕೊಡುವುದಕ್ಕೆ ಮೊದಲು ಅವನು ಹೊರಡಲಿಲ್ಲ. ಮರುದಿವಸ ಸಾಯಂಕಾಲ ಭೀಮಾಜಿಯು ತನ್ನ ಆಗಮನವನ್ನು ಹಾರೈಸಿಕೊಂಡಿರುವ ವಾಗ್ದೇವಿಯನ್ನು ನೋಡಿ, ಉಭಯತ್ರರೂ ಪರಸ್ಪರ ಮಿತ್ರಭಾವದ ಹರುಷವನ್ನು ತುಂಬಾ ಅನುಭವಿಸಿದರು. ಶಾಬಯನ ಭೇಟಿ ಮಾಡಿಸಬೇಕಾಗಿ ವಾಗ್ದೇವಿಯು ಹೇಳಿಕೊಂಡ ವಿಷಯವು ಇತ್ಯರ್ಥವಾಗದೆ ಉಳಿದಿತ್ತು. ಆ ಪ್ರಸ್ತಾಪ ಅವಳಾಗಿ ಎತ್ತಿದರೆ ಅದರ ವ್ಯವಸ್ಥೆ ಆಗಲೇ ಮಾಡಿಬಿಡುವುದಕ್ಕೆ ಭೀಮಾಜಿಗೆ ಆತುರವಿತ್ತು. ಅವನ ಬಾಯಿಂದಲೇ ಆ ಪ್ರಮೇಯ ಹೊರಡದೆ ತಾನಾಗಿ ಚರ್ಚೆ ಮಾಡಬಾರದೆಂಬ ಹಟದಿಂದ ವಾಗ್ದೇವಿಯು ಸುಮ್ಮನಿದ್ದಳು. ಅನೇಕ ತರದ ಸೋಸುಗಾರಿಕೆಯ ಮಾತು ಮುಗಿದ ಮೇಲೆ ಭೀಮಾಜಿಯು ತಾನಾಗಿಯೇ ಆ ಪ್ರಸ್ತಾಪ ಎತ್ತಿದನು. ಆ ದೊಡ್ಡ ಅಧಿಕಾರಿಯ ದರ್ಶನವನ್ನು ಮಾಡಿದರೆ ಇನ್ನುಮುಂದೆ ಬರಲಿಕ್ಕಿರುವ ಭಯವನ್ನು ನಿವಾರಣೆ ಮಾಡಿಕೊಳ್ಳುವ ಉಪಾಯ ಮುಂಚೆಯೇ ಮಾಡಿದ ಹಾಗೆ ಆಗುವದೆಂದು ಅವಳ ಮನಸ್ಸಿನ ಭಾವವಾಗಿತ್ತು. ಯಾವುದಕ್ಕೂ ಮುಂದಾಗಿ ಅವನನ್ನು ಮಾತಾಡಿಸಿ ನೋಡುವೆನೆಂದು ಕೊತ್ವಾಲನು ವಾಗ್ದೇವಿಯ ಮನೆಯಿಂದ ಮರಳಿದನು.

ಮಾರಣೆ ದಿನ ಭೀಮಾಜಿಯು ಶಾಬಯನನ್ನು ಕಂಡನು. ಇವರಲ್ಲಿ ಅತ್ಯಂತ ಮೈತ್ರ್ಯವಿತ್ತು. ಒಬ್ಬನ ಮಾತು ಇನ್ನೊಬ್ಬನು ತೆಗೆದು ಹಾಕಲಾರನು. ಕೊತ್ವಾಲನು ಭೇಟಿಗೆ ಬಂದಿರುವ ಹದನವನ್ನು ಜವಾನನು ತಿಳಿಸಿದಾಕ್ಷಣ ಶಾಬಯನು ಭೀಮಾಜಿಗೆ ಸಾದರದಿಂದ ದರ್ಶನ ಕೊಟ್ಟು ಶಾನೆ ಹೊತ್ತು ಸಂಭಾಷಣೆ ಮಾಡಿದನು. ವಿವಿಧ ವಿಷಯಗಳಲ್ಲಿ ಮಾತನಾಡಿ ತೀರಿದ ಮೇಲೆ ಭೀಮಾಜಿಯು ಬೇರೆ ಯಾರಿಗೂ ಕೇಳದಂತೆ ಅಂತರಂಗದಲ್ಲಿ ವಾಗ್ದೇವಿಯ ಪ್ರಸ್ತಾಪಮಾಡಿ ಹೊರಟನು. ಅಸ್ತಮಾನಕ್ಕೆ ಭೀಮಾಜಿಯು ತನ್ನ ಪುನರಾಗಮನ ನಿರೀಕ್ಷಣೆಯಲ್ಲಿರುವ ವಾಗ್ದೇವಿಯನ್ನು ಕಂಡು, ಶಾಬಯನ ಭೇಟಿ ದೊರಕುವ ಉಪಾಯ ಮಾಡಿ ಬಂದಿರುವೆನೆಂದು ಹೇಳಿ

ದನು. ವಾಗ್ದೇವಿಗಾದ ಉಲ್ಲಾಸವನ್ನು ವರ್ಣಿಸಲಿಕ್ಕೆ ಕವಿಗೂ ಅಸಾಧ್ಯ. ಭೀಮಾಜಿಗೆ ಅವಳು ಹೊಗಳಿದ ಬಗೆಯು ಸಂಪೂರ್ಣವಾಗಿ ಮನಃಪೂರ್ತಿಯಾದ ಕೃತಜ್ಞತೆಯ ದೃಷ್ಟಾಂತವೆನ್ನಲೇಬೇಕು. ಆಪತ್ಕಾಲಕ್ಕೆ ಪ್ರಾಣವನ್ನು ಉಳಿಸಲಿಕ್ಕೆ ಮತ್ತೊಬ್ಬ ವೀರ ಹುಟ್ಟಲಿಲ್ಲವೆಂದು ವಾಗ್ದೇವಿಯು ಭೀಮಾಜಿಯನ್ನು ಅಡಿಗಡಿಗೆ ಶ್ಲಾಘನೆ ಮಾಡುತ್ತಾ—"ಪರಮ ಪ್ರಿಯನೇ! ನಿನ್ನ ಮುಖದ ಕಾಂತಿಯಿಂದ ಪೌರ್ಣಮಿ ಚಂದ್ರನ ಶೀತಳ ಕಿರಣಗಳು ಸಿಗ್ಗಾಗುತ್ತವೆ. ನಿನ್ನ ಬಡದಾಸಿಯಾದ ವಾಗ್ದೇವಿಯನ್ನು ಬಿಟ್ಟುಹಾಕಬೇಡವೆಂದು ರಮ್ಯವಾದ ನುಡಿಯಿಂದ ಅವನನ್ನು ಬೇಡಿಕೊಳ್ಳುವ ಅಂದವನ್ನೂ ಅವಳ ಉತ್ಕೃಷ್ಟವಾದ ಮೈ ಸೊಬಗನ್ನೂ ನೋಡಿ ಭೀಮಾಜಿಗೆ ರೋಮಾಂಚವಾಯಿತು. ತನ್ನ ಪೂರ್ವಪುಣ್ಯ ದೊಡ್ಡದು ಅಲ್ಲದಿದ್ದರೆ ಇಂಥಾ ಭಾಗ್ಯಲಕ್ಷ್ಮಿಯ ಅಕ್ಕರೆಯು ತನಗೆ ದೊರಕುವದಿತ್ತೇ ಎಂದು ಅವನು ಆನಂದಭಾಷ್ಪಗಳನ್ನು ಸುರಿಸಿದನು.

ಶಾಬಯ್ಯನ ಭೇಟಿ ಮಾಡುವ ರೀತಿ ಯಾವದೆಂದು ವಾಗ್ದೇವಿಯು ಭೀಮಾಜಿಯನ್ನು ಕೇಳಿದಳು. ನವದರ್ಶನವಾಗುವ ಸಮಯ ಕಣ್ಮನಗಳಿಗೆ ಸಂತೃಪ್ತಿಯಾಗುವ ಹಾಗಿನ ಕಾಣಿಕೆಗಳನ್ನು ಆ ದೊಡ್ಡ ಉದ್ಯೋಗಸ್ಥನಿಗೆ ಇತ್ತು, ಅವನ ಅನುಗ್ರಹವನ್ನು ಅಪೇಕ್ಷಿಸುವದು ಕರ್ತವ್ಯವೆಂದು ಭೀಮಾಜಿಯು ಹೇಳಿದ ಮಾತು ವಾಗ್ದೇವಿಯ ಮನಸ್ಸಿಗೆ ಬಂತು. ಕಣ್ಣಿಗೆ ರಂಜಕವಾದ ಹಣ್ಣು ಹಂಪಲುಗಳೂ ಅಪೂರ್ವ ವಸ್ತುಗಳೂ ಚಿತ್ರವಿಚಿತ್ರ ಒಡವೆಗಳೂ ಸಿಕ್ಕುವದು ಪ್ರಯಾಸವಲ್ಲ. ಮನೋರಂಜಕವಾದ ಸಾಮಗ್ರಿಯಾವದೆಂದು ಏನೂ ಅರಿಯದವಳಂತೆ ವಾಗ್ದೇವಿಯು ಕೇಳುತ್ತಲೇ ಭೀಮಾಜಿಯು ಅವಳು ನಿರೀಕ್ಷಿಸಿದ ಉತ್ತರವನ್ನು ಕೊಟ್ಟನು. ಇದ್ಯಾವ ದೊಡ್ಡಿತು? ಸಕಲ ಪದಾರ್ಥಗಳನ್ನು ಯಥೋಚಿತವಾಗಿ ಒದಗಿಸಿಟ್ಟು ಕೊಂಡು ತಮ್ಮ ಆಗಮನವನ್ನು ಹಾರೈಸುತ್ತಾ ಇದ್ದುಕೋಥೇನೆ ಎಂದು ವಾಗ್ದೇವಿಯು ಹೇಳಿದಳು. ಹಾಗಾಗಲಿ ನಾಳೆ ಸಾಯಂಕಾಲಕ್ಕೆ ಬರುವೆನೆಂದು ಭೀಮಾಜಿಯು ನಡೆದನು.

ಭೀಮಾಜಿಯು ಮರುದಿನ ಸಾಯಂಕಾಲಕ್ಕೆ ವಾಗ್ದೇವಿಯನ್ನು ಕಂಡು ಹೊರಡಲಿಕ್ಕೆ ಸನ್ನದ್ಧಳಾಗೆಂದು ಹೇಳಿದನು. ಅರೆಗಳಿಗೆಯಷ್ಟು ಅವಕಾಶದಲ್ಲಿ ವಾಗ್ದೇವಿಯು ಮನೋಹರವಾದ ವಸ್ತ್ರಾಭರಣಗಳನ್ನು ಧರಿಸಿ ಬೇಕಾದ ಒಡವೆ ವಸ್ತುಗಳನ್ನು ಇಡಿಸಿಕೊಂಡು, ಭೀಮಾಜಿಯ ಸಂಗಡ ಶಾಬಯ್ಯನ

ಗೃಹಾಭಿಮುಖವಾದಳು. ಜವಾನನ ಪರಿಮುಖ ಶಾಬಯಗೆ ವರ್ದಿ ಸಿಕ್ಕು ತ್ತಲೇ ಉಪ್ಪರಿಗೆಗೆ ಬರುವದಕ್ಕೆ ಹೇಳಿಕಳುಹಿಸಿದನು. ಮುಂದಿನಿಂದ ಭೀಮಾ ಜಿಯೂ ಹಿಂದಿನಿಂದ ವಾಗ್ದೇವಿಯೂ ಉಪ್ಪರಿಗೆ ಹತ್ತಿದರು. ಕೊತ್ವಾಲಗೆ ಕೂರೆಂದು ಆಸನವನ್ನು ತೋರಿಸಿ, ಶಾಬಯನು ವಾಗ್ದೇವಿಯ ಮುಖ ಪ್ರೇಕ್ಷ ಣದಿಂದಲೇ– ಇವಳೇನು ಅಪ್ಸರಸ್ತ್ರೀಯಂತೆ ಕಣ್ಣಿಗೆ ತೋರುತ್ತಾಳೆ! ಇಂಥಾ ದಿವ್ಯರೂಪವುಳ್ಳ ಸ್ತ್ರೀರತ್ನವೂ ಈ ನಗರದಲ್ಲಿ ಉಂಟೆಂದು ತಾನು ಮೊದಲೇ ತಿಳಿಯಲಿಲ್ಲ ಎಂದು ಬೆರಗಾದನೆನ್ನಬಹುದು ಅವಳ ಉಪಮೆ ರಹಿತವಾದ ಮೈಬಣ್ಣವನ್ನು ಅಂಗೋಪಾಂಗಗಳ ಸೊಬಗನ್ನು ನೋಡಿ, ಅವನು ಸ್ತಂಭೀ ಭೂತನಾದನು. "ಅವ್ವಾ! ಕೂರಿ" ಎಂದು ಆ ದೊಡ್ಡ ಅಧಿಕಾರಿಯು ತನ್ನ ಕೈಯಿಂದ ಆಸನವನ್ನು ಕೊಟ್ಟು ನಿಂತುಕೊಂಡಿರುವಾಗ– "ದೊಡ್ಡರಾಯರೇ! ನಾನು ತಮ್ಮ ಸಮ್ಮುಖದಲ್ಲಿ ಕುಳಿತುಕೊಂಡಿರುವ ಯೋಗ್ಯತೆಯುಳ್ಳವಳಲ್ಲ. ನಿಂತು ಕೊಂಡಿರಲಿಕ್ಕೆ ಅಪ್ಪಣೆಯಾಗಬೇಕು" ಎಂದಳು. ಅವಳು ಕೂತು ಕೊಳ್ಳುವದಿಲ್ಲವಾದರೆ ತಾನೂವೇ ನಿಂತುಕೊಂಡಿರಬೇಕಾಗುವದೆಂದು ಶಾಬ ಯ್ಯನು ಹೇಳಿದರೂ ಅವಳು ಕೇಳದೆ ಹೋದಳು. "ಇನ್ನೇನು ಮಾಡಲಿ! ನಿಮ್ಮ ಕೈ ಹಿಡಿದು ಒತ್ತಾಯದಿಂದ ನಾನೇ ಕೂರಿಸಲೇ" ಎಂದು ಶಾಬಯ್ಯನು ಅರೆ ನಗೆಯಿಂದ ಆವಳ ಮುಖವನ್ನೇ ನೋಡಿದನು. "ತನುಮನಧನಗಳಿಂದಲೂ ತಮ್ಮ ಸನ್ನಿಧಿಯ ಮರೆಹೋದ ನನ್ನನ್ನು ಹ್ಯಾಗೆ ವಿನಿಯೋಗ ಮಾಡಿದರೂ ಹೆಕ್ಕಳಪಡುವೆನು" ಎಂದು ಅವಳು ನಸುನಗೆಯಿಂದ ಉತ್ತರಕೊಟ್ಟಳು. ಶಾಬ ಯ್ಯನು ಅವಳ ಸೂಚನೆಯನ್ನು ಅನುಸರಿಸುವದರಲ್ಲಿ ಧಾನಸ ಮಾಡಲಿಲ್ಲ. ಅವಳ ಎರಡು ಕೈಗಳನ್ನು ತನ್ನ ಉಭಯ ಹಸ್ತಗಳಿಂದ ಹಿಡಿದು ಅವಳನ್ನು ಕೂರಿಸಿ ತಾನೂ ಅವಳ ಮುಂಭಾಗದಲ್ಲಿ ಕೂತುಕೊಂಡು, ಬಂದಕಾರಣವೇ ನೆಂದು ವಿಚಾರಿಸಿದನು.

ವಾಗ್ದೇವಿಯು ತನ್ನ ಸುಖದುಃಖವನ್ನೆಲ್ಲಾ ಸಂಕ್ಷೇಪವಾಗಿ ಅರುಹಿ ದಳು. ವೇದವ್ಯಾಸ ಉಪಾಧ್ಯನು ಕೊಡುವ ಉಪಹತಿಯ ಮತ್ತು ಕೆಪ್ಪ ಮಾಣಿಯು ಮಾಡಿದ ಲೂಟಿಯ ವೃತ್ತಾಂತವನ್ನು ಲೋಪವಿಲ್ಲದೆ ತಿಳಿಸಿದಳು. ಮುಖ್ಯತಃ ತನ್ನನ್ನು ಕಾಪಾಡುವವರು ಬೇರೆ ಯಾರೂ ಇಲ್ಲ. ತನ್ನನ್ನು ಕನಿಕರದಿಂದ ನಡಿಸಿಕೊಂಡು ಹೋಗದಿದ್ದರೆ ತಾನು ಆ ಊರನ್ನೇ ಬಿಟ್ಟು ದೂರಪ್ರಾಂತ್ಯದಲ್ಲಿ ಅಪ್ರಖ್ಯಾತ ರೀತಿಯಲ್ಲಿ ವಾಸಿಸಿಕೊಂಡಿದ್ದು ಶ್ವಾನದಂತೆ

ಪ್ರಾಣಬಿಡುವದಲ್ಲದೆ ಬೇರೊಂದು ಮಾರ್ಗ ತೋಚುವದಿಲ್ಲವೆಂದು ದೀನ ಭಾವದಿಂದ ಹೇಳಿಕೊಂಡಳು. ಶಾಬಯ್ಯಗೆ ಬಹಳ ಪಶ್ಚಾತ್ತಾಪವಾಯಿತು. ತಾನು ಅಧಿಕಾರ ಮಾಡಿಕೊಂಡು ಆ ಊರಲ್ಲಿ ವಾಸವಾಗಿರುವ ಪರಿಯಂತರ ಏನೂ ಭಯಪಡಬಾರದು; ತನ್ನ ಪೂರ್ಣವಾದ ಸಹಾಯವು ಸಾರ್ವದಾ ದೊರಿಯುವದೆಂದು ಅಭಯವನ್ನು ಕೊಟ್ಟು ಚಿನ್ನದ ಹರಿವಾಣದಲ್ಲಿ ತಾಂಬೂಲವನ್ನಿಟ್ಟು, ಅದನ್ನು ಸ್ವೀಕರಿಸಬೇಕೆಂದು ಅಪೇಕ್ಷಿಸಿದನು. ವಾಗ್ದೇವಿಯು ಸಂತೋಷದಿಂದ ತಾಂಬೂಲವನ್ನು ತಕ್ಕೊಂಡು, ಪುನಃ ಅವನ ಸಂದರ್ಶನ ಸುಖ ಎಂದು ತಾನು ಪಡೆಯಲೆಂದು ಪ್ರಶ್ನಮಾಡಿದಳು. ತಾನು ಮನೆಯಲ್ಲಿರುವ ಯಾವ ಸಮಯದಲ್ಲಿಯಾದರೂ ಬಂದು ಕಾಣಬಹುದು; ಆಗಾಗ್ಗೆ ಕಂಡರೆ ತಾನು ತುಂಬಾ ಸಂತೋಷಿತನಾಗುವೆನೆಂದು ಶಾಬಯ್ಯನು ಹೇಳಿ, ಕಣ್ಣೆತ್ತಿ ನೋಡುವ ಸಮಯದಲ್ಲಿ ಭೀಮಾಜಿಯು ಕೆಳಗಿನಿಂದ ಒಬ್ಬ ಜವಾನನ ಸಮೇತ ಬಂದು ವಾಗ್ದೇವಿಯು ತಂದಿಟ್ಟ ನಜರಕಾಣಿಕೆಯನ್ನು ಶಾಬಯ್ಯನ ಅನುಮತಿಯಿಂದ ಮನೆಯ ಒಳಗೆ ಇಡಿಸಿದನು. ಶಾಬಯ್ಯನಿಗೆ ಊಟದ ಹೊತ್ತಾದುದರಿಂದ ಅವನು ಅಡಿಗೆ ಮನೆಗೆ ಹೋದನು. ಭೀಮಾಜಿಯೂ ವಾಗ್ದೇವಿಯೂ ಅನುಮತಿ ಪಡಕೊಂಡು ಬೀದಿಗೆ ಇಳದರು. ವಾಗ್ದೇವಿಯು ಭೀಮಾಜಿಯಿಂದ ತನಗಾದ ಈ ಉಪಕೃತಿ ಎಂದೆಂದಿಗೂ ಮರೆಯೆನೆಂದು ಆ ತನ್ನ ಪ್ರಾಣಸ್ನೇಹಿತನನ್ನು ಬೇಕು ಬೇಕಾದ ಹಾಗೆ ಹೊಗಳಿ, ಮಧುರೋಕ್ತಿಗಳಿಂದ ಉಬ್ಬೇರಿಸಿ ಬೇಗ ಊಟಮಾಡಿ ಮಲಗೆಂದು ವಿನೋದಕರವಾಗಿ ಮಾತಾಡುತ್ತಾ ಅವನನ್ನು ಮನೆಗೆ ಹೋಗಗೊಟ್ಟಳು. ಅಂದಿನಿಂದ ವಾಗ್ದೇವಿಯು ನಿಶ್ಚಿಂತಳಾಗಿ ತನ್ನ ಮುಂದಿನ ಯತ್ನವು ಸಫಲವಾಗುವದೆಂಬ ಕೋರಿಕೆಯನ್ನುಳ್ಳವಳಾದಳು.

## ಮೂವತ್ತನಾಲ್ಕು

ವಾಗ್ದೇವಿಗೆ ಭೀಮಾಜಿಯ ಅನುಗ್ರಹದಿಂದ ಶಾಬಯ್ಯನ ಕಟಾಕ್ಷವು ಪರಿಪೂರ್ಣವಾಗಿ ದೊರಕಿತು. ಅವಳು ಮನಸ್ಸಿನಲ್ಲಿ ಮಾಡಿಕೊಂಡ ಪ್ರಧಾನವಾದ ಸಂಕಲ್ಪಸಿದ್ಧಿಗೆ ಆ ಇಬ್ಬರು ಅಧಿಕಾರಸ್ಥರ ಕೃಪೆಯೇ ಮುಖ್ಯವಾದದ್ದೆಂದು ಮುಂದಿನ ಚರಿತ್ರೆಯಿಂದ ವಾಚಕರಿಗೆ ತಿಳಿಯುವದು. ಕೆಪ್ಪಮಾಣಿಯುಮಾಡಿದ ಹಲವು ಕಳವುಗಳನ್ನು ಕುರಿತು ಅವನ ಮೇಲೆ ಆದ ಪ್ರಕರಣ

ಇತ್ಯರ್ಥವಾಗುವದಕ್ಕೋಸ್ಕರ ವಾಗ್ದೇವಿಗೆ ಯಾರ ಸಹಾಯವೂ ಅವಶ್ಯ ವಿರಲಿಲ್ಲ. ಅದಕ್ಕೋಸ್ಕರ ಆವಳು ಯಾರಿಗೂ ದಮ್ಮಯ್ಯ ಹಾಕಲಿಕ್ಕೆ ಹೋಗಲೂ ಇಲ್ಲ. ಆ ಒಂದು ನೆವದಿಂದ ಅವಳಿಗೆ ಅನಾಯಾಸವಾಗಿ ಪಟ್ಟಣದ ಪ್ರಮುಖ ಅಧಿಕಾರಸ್ಥರ ಪರಿಚಿತಿಯುಂಟಾಯಿತು. ಕೆಪ್ಪಮಾಣಿ ಯನ್ನು ಶಾಬಯ್ಯನ ಮುಂದೆ ಕೊತ್ವಾಲನ ಅಪಾದನೆ ಪತ್ರ ಸಹಿತ ಕಳುಹಿ ಸೋಣಾದಲ್ಲಿ ಅವನು ತಾನು ಕಿವುಡನೆಂಬ ಸಾಧನೆ ಮಾಡುವುದಕ್ಕೆ ಹೊರ ಟನು. ಎಷ್ಟು ಘಟ್ಟಿಯಾಗಿ ಮಾತನಾಡಿದರೂ ಕಿವಿಕೇಳದವನಂತೆ ನಿಂತು ಕೊಂಡನು. ಅವನು ನಿಜವಾಗಿ ಕಿವುಡನಲ್ಲವೆಂಬ ವಿಷಯದಲ್ಲಿ ಜಾನಕಿ ಮತ್ತು ಸುಂದರಿ ಇವರ ಸಾಕ್ಷ್ಯವೂ ಯಾಕೂಬಖಾನನ ಪ್ರಮಾಣವೂ ಎಥೇ ಷ್ಟವಾದರೂ ಬುದ್ಧಿಶಾಲಿಯಾದ ಕಾರಭಾರಿಯು ನಿಜವಾದ ಕಿವುಡನಿಗೆ ಕೇಳ ವಲ್ಲದ ಸಣ್ಣ ಸ್ವರದಿಂದ ಜವಾನನೊಬ್ಬನನ್ನು ಕರೆದು ಅಪರಾಧಿಗೆ ಮೊಟ್ಟ ಮೊದಲು ಹನ್ನೆರಡು ಛಡಿಹೊಡೆ ಎಂದು ಹೇಳಿದನು.

"ದಮ್ಮಯ್ಯಾ ಬುದ್ಧೀ! ಅದೊಂದೂ ಬೇಡ, ನನಗೆ ಕಿವಿ ಚೆನ್ನಾಗಿ ಕೇಳುತ್ತದೆ; ಇದುವರೆಗೆ ನಾನು ಮಾಡಿದ ಕಪಟ ಕ್ಷಮಿಸಬೇಕು" ಎಂದು ಅಪರಾಧಿಯು ಬೇಡಿಕೊಂಡನು. ಶಾಬಯ್ಯನು ತನ್ನ ಪ್ರೈಸವು ಸಫಲವಾಯಿ ತೆಂದು ಹಿಗ್ಗಿದನು. ತರಲ್ಪಟ್ಟ ಸಾಕ್ಷ್ಯವನ್ನೆಲ್ಲಾ ಬರಕೊಂಡಾದ ಮೇಲೆ ಅಪ ರಾಧಿಯು ಒಪ್ಪಿದ ಪ್ರಯುಕ್ತ ಮೊಕದ್ದಮೆಯು ಸುಲಭವಾಗಿ ಫೈಸಲಾಗುವ ಅನುಕೂಲವಾಯಿತೆಂದು ಕಾರಭಾರಿಯು ಸಂತೋಷಪಟ್ಟು, ಅಪರಾಧಿಯ ಮೇಲೆ ಕೊಂಚ ದಯವಿಟ್ಟು ಐನು ಸಂವತ್ಸರಗಳ ಪರಿಯಂತರ ಕೈದು ಶಿಕ್ಷೆ ಯನ್ನು ವಿಧಿಸಿದನು. ಆಭರಣಗಳನ್ನು ಆವಾವ ಮಾಲಿಕರಿಗೆ ತಿರುಗಿ ಕೊಡ ತಕ್ಕದ್ದೆಂದು ಅಪ್ಪಣೆಯಾಯಿತು. ಈ ವಾರ್ತೆಯು ಚಂಚಲನೇತ್ರರ ಮತ್ತು ವಾಗ್ದೇವಿಯ ಕಿವಿಗೆ ಬೀಳುತ್ತಲೇ ಅವರಿಬ್ಬರು ತುಂಬಾ ಹರುಷ ಪಟ್ಟರು. ಜಂಜಲನೇತ್ರರು ಕೊತ್ವಾಲನನ್ನು ಮಠಕ್ಕೆ ಕರೆಸಿ, ಅತಿಶಯವಾದ ಬಹು ಮಾನ ಮಾಡಿದರು. ಕಾರಭಾರಿಗೆ ಕೊತ್ವಾಲನ ಪರಿಮುಖ ಊಚು ಉಡು ಗೊರೆಗಳನ್ನು ಕಳುಹಿಸಿದರು. ಯಾಕುಬಖಾನಗೆ ಒಂದು ಒಳ್ಳೇ ಜರಿಯ ಪಗಡಿಯನ್ನು ಕಟ್ಟಿಸಿ, ಸೊಂಟಕ್ಕೆ ಜೋಡು ಎಳೆ ಬೆಳ್ಳಿಯ ನೇವಳ, ಕೈಗೆ ಚಿನ್ನದ ಬಾಜಿಬಂದ್ ಹಾಕಿಸಿಬಿಟ್ಟು, ನಗದಿಯಿಂದ ನೂರು ರೂಪಾಯಿ ಗಳನ್ನು ಕೊಟ್ಟರು. ಯಾಕುಬಖಾನನು ಚಂಚಲನೇತ್ರರ ಔದಾರ್ಯವನ್ನು

ಹೊಗಳುತ್ತಾ, ಅವರಿಂದ ತನಗೆ ಸಿಕ್ಕಿದ ಇನಾಮನ್ನು ವಾಗ್ದೇವಿಗೆ ತೋರಿಸಿದನು. ಅವಳು ತನ್ನ ಕೈಯಿಂದ ಅವನಿಗೆ ಐವತ್ತು ರೂಪಾಯಿ ಕೊಟ್ಟು ಮನ್ನಿಸಿದಳು. "ಅವ್ವಾ ! ನಿಮ್ಮ ಸೇವೆಯನ್ನು, ಯಾವಾಗ ಅಪ್ಪಣೆಯಾಯಿತೋ ಆವಾಗ ಜೀವದಾಶೆಯನ್ನಾದರೂ ಬಿಟ್ಟು, ಮಾಡುವುದಕ್ಕೆ ಉದ್ಯುಕ್ತನಾಗುವೆನು. ಅವಶ್ಯಕಂಡಾಗ ನನ್ನನ್ನು ಕರೆಸಿ ಆಜ್ಞೆಯಾಗಬೇಕು" ಎಂದು ಯಾಕುಬಖಾನನು ಸವಿಯಾದ ಮಾತುಗಳಿಂದ ತನ್ನ ಕೃತಜ್ಞತೆಯನ್ನು ನಿವೇದಿಸಿದನು.

ದಫೆದಾರ ಯಾಗಪ್ಪನ ನೆನಪು ಯಾರಿಗೂ ಬರಲಿಲ್ಲ. ಶ್ರೀಪಾದಂಗಳಾಗಲೀ ವಾಗ್ದೇವಿಯಾಗಲೀ ತನನ್ನು ಮರಿಯಲಿಕ್ಕಿಲ್ಲವೆಂಬ ಅವನ ನಂಬಿಕೆಯು ವ್ಯರ್ಥವಾಯಿತು. ಅವರು ತನ್ನನ್ನು ಕರಸಿ ಏನಾದರೂ ಕೊಡದಿದ್ದರೇನಾಯಿತು? ತಾನೇ ಹೋಗಿ ಅವರನ್ನು ಕಂಡುಬಿಟ್ಟರೆ ಹ್ಯಾಗಾಗುತ್ತದೆಂದು ನೋಡುವದಕ್ಕೆ ಅವನು ಒಂದು ದಿನ ಚಂಚಲನೇತ್ರರ ಭೇಟಿಯನ್ನು ಮಾಡಿದನು. ಅವರು ಅವನಿಗೆ ಒಂದು ರುಪಾಯಿ ಮೌಲ್ಯದ ಎಲವಸ್ತ್ರವನ್ನು ಕೊಟ್ಟು ಸುದಾರಿಸಿಬಿಟ್ಟರು. "ಶ್ರೀಪಾದಂಗಳು ಎಟ್ಟು ಕೊಟ್ಟರೂ ಬಿರ್ಮಸ್ವಬರ್ಕತ ಆಗೆಕ್ಕಿಲ್ಲ, ಇನೊಂದು ಎಲವಸ್ತ್ರ ಅಂದ್ರೆ ಉಡಗೆರೆ; ಅದು ತಕ್ಕೊಂಬುದು ನ್ಯಾಯ ಅಂದಿ, ಧರ್ಮಸಾಸ್ತ್ರದಾಗೆ ಉಂಟು, ಆದುನರ್ೂ ವಾಗ್ದೇವಿಗೆ ಒಂದು ಗಾಯ ಕಂಡು ಕಾಟಿ ಹೋಗಿಬಿಡುತ್ತೇನೆ." ಹೀಗೆಂದು ಅವನು ಅವಳಿದ್ದಲ್ಲಿಗೆ ಹೋದನು. ಅವಳು ನಗೆಮುಖದಿಂದ ಅವನನ್ನು ಕೂಡ್ರಿಸಿ, ಹೊಟ್ಟೆತುಂಬಾ ಅನ್ನ ಹಾಕಿಸಿ ತಣಿಸಿದ್ದಲ್ಲದೆ, ಕುಪ್ಪಸದ ಕಣಸಹಿತ ಒಂದು ಶೀರೆ, ಒಂದು ಜೋಡು ವೇಷ್ಟಿ, ನಗದಿಯಿಂದ ನಾಲ್ಕು ರೂಪಾಯಿ ಕೈಗೆ ಹಾಕಿದಳು. "ಏ ನನ್ನವ್ವಾ! ನಿಮಗೆ ದೇವರು ವಜ್ರಾಯ್ಸು ಕೊಡ್ಲಿ ನಿಮ್ಮ ಕಾಲಿಗೆ ಬಲಕೊಡ್ಲಿ; ನನ್ನ ಹೆಂಡತಿ ಉಡೋಕೆ ಶೀರೆ ಇಲ್ಲದೆ ದಿನಕೆ ಮೂರು ಗಾಯ ನಿಮ್ಮ ಮುಖ ಸುಡೋಕೆ" ಅಂದಿ ನಂಗೆ ಬೈತಾಳೆ. ಅವಳಿಗೆ ಒಂದು ಶೀರೆಯಾಯಿತು. ಖಣ ಅವಳ ಅಪ್ಪನ ಕಾಲಕ್ಕೆ ನೋಡಿಯಾಳೋ! ಅದೂನೂ ಅವಳ ಎದೆಗೆ ಹಾಕ್ತೇನೆ; ವೇಷ್ಟಿ ನಂಗೆ ಉಡೇಕೆ ಆಯಿತು. ಅವ್ಮಾ! ಇನ್ನು ಹೋಗಿ ಬರ್ತೇನೆ" ಎಂದು ಯಾಗಪ್ಪನು ತೃಪ್ತನಾಗಿ ಹೊರಟನು.

"ಯಾಕುಬಖಾನನ ಹೆಸರು ಹೇಳೀಕೆ ನಾನು; ಇನಾಮು ಹೊಡಕೊಳ್ಳೀಕೆ ಅವಾ. ನನಗೆ ಒಂದು ಕಾಸಾದರೂ ಆ ತುರ್ಕ ಕೊಟ್ಟು ಸಲಾಂ

ಮಾಡಿದನೇ, ಇಲ್ಲ; ಕೊತ್ವಾಲನಾದರೂ ಹೇಳಿ ಕೊಡಿಸಿದನೇ, ಇಲ್ಲ. ಕೊತ್ವಾಲನ ತಲೆ ನಾಕುಟ್ಟ" ಎಂದು ತನ್ನಷ್ಟಕ್ಕೆ ಮಾತಾಡಿಕೊಳ್ಳುತ್ತಾ ಯಾಗಪ್ಪನು ಹೋಗುವ ಕಾಲವಲ್ಲಿ ಎದುರಿನಿಂದ ಬರುವ ಯಾಕುಬಖಾನನು ಸಿಕ್ಕಿ ಕಿಸ್ಕನೆ ನಕ್ಕನು. "ಹೌದೇನೋ ಪೋರಾ, ನಿನ್ನ ಹೆಸರು ಖಾವಂದರಿಗೆ ನಾ ಹೇಳಿದ ಮೇಗಷ್ಟೇ ನೀನು ಇಟ್ಟು ಕಾರಬಾರ ಮಾಡೋಕೆ ಆದಿ; ಇಲ್ಲದೆಹೋಗಿದ್ರೆ ನಿನಗೆ ನಾಯಿನೂ ಮೂಸಕೆ ಇತ್ತೇ? 'ನಾಕು ಮದ್ವೆಗೆ ಸಾಕು' ಅಟ್ಟು ಹಣಾನೂ ಅರವೆನೂ ನಿಂಗೆ ಸಿಕ್ಕಿದಾಗೂನು ಜಪೆದಾರರ ನೆನಪು ನಿಂಗೆ ಬಂತೆನೋ ಪರ್ದೇಸಿ ತಡಿ! ನಿಂಗೆ ನಾ ಮಾಡೋ ಬಗೆ ಬೇರೆ ಐತೆ. ಬಾಯಿಂದ ಪೌರಸ ಆಡ್ತೇನೆ ಅಂದಿ, ಮಾಡಿಕೊಂಡಿದ್ದೀಯಾ ಅಲ್ಲ, ಅಲ್ಲ. ವಳ್ಳು ಮಾಡೆಕೆ ಕಷ್ಟ ಹಡ್ಗಿ ಮಾಡೆಕೆ ಎಟ್ಟು ಹೊತ್ತು ಬೇಕು ನೋಡುವ" ಎಂದು ದಫೆದಾರನು ಹೊಟ್ಟೆಕಿಚ್ಚು ತಡೆಯಲಾರದೆ ಆಡಿದ ಪರಾಕ್ರಮಕ್ಕೆ ಯಾಕುಬಖಾನನು ಒಂದು ಸಾಸಿವೆ ಕಾಳಿನಷ್ಟು ಗಣ್ಯಮಾಡತಕ್ಕ ಅಗತ್ಯವಿರಲಿಲ್ಲ. ಆದರೂ ತನ್ನ ಮೇಲ ಉದ್ಯೋಗಸ್ತನೂ ವಯೋವೃದ್ಧನೂ ಆದ ಅವನ ನರೆ ಗಡ್ಡಕ್ಕಾದರೂ ಮರ್ಯಾದೆ ಕೊಡಬೇಕೆಂಬ ಗ್ರಹಿಕೆಯಿಂದ ಎರಡು ರುಪಾಯಿಗಳನ್ನು ಅಂಗಿ ಕಿಸೆಯಿಂದ ತೆಗೆದು— "ಇಕೊಳ್ಳಿ, ಯಾಗಪ್ಪಣ್ಣಾ! ಸ್ವಲ್ಪ ಆಯಿತೆಂದು ಮನಸ್ಸಿನಾಗೆ ಖವುಟು ಇಟ್ಟುಕೋಬ್ಯಾಡಿ. ಮುಂದೆ ನಿಮ್ಮ ಸೇವೆ ನಾನು ಮಾಡುವವನೇ ಎಂದನು. ದಫೆದಾರಗೆ ಕಾನ ಖುಶಿಯೂ ದಿಲ ಖುಶಿಯೂ ಆಯಿತು. ನಾ ಬೇಗ ನಾರ್ನಪರ್ವಸಿ ತಕ್ಕೊಂಡ ಕಾಟಿ ನನ್ನ ಬೆಳ್ಳಿ ಬಿಲ್ಲೆ ನಿನ್ನ ಎದೆಗೆ ಹಾಕ್ತೇನೆ" ಎಂದು ದಫೆದಾರನು ಯಾಕುಬಖಾನಗೆ ಉಪಕಾರ ಸ್ಮರಣೆರೂಪವಾಗಿ ಆಶೆ ಹುಟ್ಟಿಸಿದನು. ಹಾಗೆಯೇ ಅವರಿಬ್ಬರೂ ತಂತಮ್ಮ ದಾರಿ ಹಿಡಿದರು.

ತಿಪ್ಪಾಶಾಸ್ತ್ರಿಗೂ ವಾಗ್ದೇವಿಗೂ ದಿನೇ ದಿನೇ ಆಪ್ತಭಾವ ಕಡಿಮೆಯಾಗುತ್ತಾ ಬಂತು. ಶಾಸ್ತ್ರಿಗೆ ಅವಳ ಮೇಲಿನ ಮೋಹವೂ ಕೊಂಚವಾದರೂ ಕಮ್ಮಿಯಾಗಲಿಲ್ಲ. ಅವಳು ಅವನ ಮೇಲೆ ರವಷ್ಟಾದರೂ ವಿಶ್ವಾಸವಿಡಲಿಕ್ಕೆ ಮನಸ್ಸಿಲ್ಲದವಳಾದುದರಿಂದ ಅವನ ವ್ಯಸನವು ಅನುದಿನವೂ ಏರುತ್ತಾ ಬರುವದಾಯಿತು. ಗೃಹಕೃತ್ಯ ಸರಿಯಾಗಿ ನಡೆಯುವಂತೆ ತಾತ್ಪರ್ಯಕೊಟ್ಟು ನೋಡುವದಕ್ಕೆ ಜನ ಬಲವು ಕಡಿಮೆಯಾಗಿ ವಾಗ್ದೇವಿಯು ಯೋಚನೆಗೈಯುತ್ತಿರುವವೇಳೆ ಭೀಮನ ಹಳ್ಳಿಯಲ್ಲಿ ವಾಸವಾಗಿರುತ್ತಿದ್ದ ಅವಳ ಚಿಕ್ಕ

ತಾಯಿ ನೇತ್ರಾವತಿಯ ಮಗಳು ಶೃಂಗಾರಿಗೂ ಅವಳ ಪತಿಗೂ ವಿರೋಧ ಹುಟ್ಟಿ ಪತಿ ಪತ್ನಿ ಪ್ರತ್ಯೇಕವಾದ ದೆಸೆಯಿಂದ ಆ ಸ್ತ್ರೀಯು ಜೀವನೋಪಾಯವಿಲ್ಲದೆ ಕಷ್ಟಪಡುವ ಕಾಲ ಬಂತು. ಇದು ತನ್ನ ಉದ್ದೇಶಕ್ಕೆ ಉಪಯುಕ್ತವಾದ್ದೆಂದು ವಾಗ್ದೇವಿಯು ನೆನಸಿ ಶೃಂಗಾರಿಯನ್ನು ಕರೆಕಳುಹಿಸಿ ತನ್ನಲ್ಲಿದ್ದುಕೊಳ್ಳೆಂದು ಪ್ರೀತಿಯಿಂದ ಹೇಳಿದಳು ಅವಳಿಗೆ ಆ ಅಭಿಮಂತ್ರಣವು ಅತಿ ಹಿತಕರವಾಗಿ ಕಂಡು ಬಂದು ಅದನ್ನು ಉಲ್ಲಾಸದಿಂದ ಅಂಗೀಕರಿಸಿದಳು. ಶೃಂಗಾರಿ ಎಂಬ ಹೆಸರು ಅವಳಿಗೆ ಛಂದಾಗಿ ಒಪ್ಪುವಂಥಾದ್ದೆಂದು ಅವಳ ಆವಭಾವ ರೂಪ ಲಾವಣ್ಯವನ್ನು ನೋಡಿದವರು ಹೇಳದಿರರು. ಅವಳ ಸೌಂದರ್ಯವನ್ನು ಎಷ್ಟು ಸಮಯ ಪರಿಯಂತ್ರವೂ ವರ್ಣಿಸಬಹುದು. ವಾಗ್ದೇವಿಯ ದ್ವಿತೀಯ ಸ್ಥಾನವನ್ನು ಹೊಂದಲಿಕ್ಕೆ ಶೃಂಗಾರಿಯೇ ಅರ್ಹಳೆನ್ನಬೇಕು. ಎಷ್ಟು ಪೇಚಾಡಿದರೂ ಗಂಡನು ಪುನರಪಿ ಮನೆಯೊಳಗೆ ತನ್ನನ್ನು ಪ್ರವೇಶಿಸಬಿಡೆನೆಂದು ಅವಳಿಗೆ ಖಂಡಿತವಾಗಿ ಗೊತ್ತಿರುವದರಿಂದ ಅವನ ಹಂಬಲನ್ನು ಬಿಟ್ಟು ಅಕ್ಕ ವಾಗ್ದೇವಿಯ ಸೇವೆಯಲ್ಲಿ ಮನಃಪೂರ್ತಿಯಾಗಿ ಅಮರಿಕೊಂಡಳು.

ತಿಪ್ಪಾಶಾಸ್ತ್ರಿಗೆ ವಾಗ್ದೇವಿಯ ಹೃದಯಮಂದಿರದಲ್ಲಿ ಮೊದಲು ದತ್ತ ಮಾಡಿರುತ್ತಿದ್ದ ಅಂತಸ್ಥು ತಪ್ಪಿಹೋದಂದಿನಿಂದ ಅವನು ನೀರಿನಿಂದ ಎತ್ತಿ ಮೇಲಕ್ಕೆ ಹಾಕಲ್ಪಟ್ಟ ಮತ್ಸ್ಯದಂತೆ ಕಳವಳಗೊಳ್ಳುತಿದ್ದನು. ಆ ಕುಯುಕ್ತಿಗಾರ ಶಾಸ್ತ್ರಿಯು ಮೆಲ್ಲಮೆಲ್ಲಗೆ ಶೃಂಗಾರಿಯ ಮಮತೆಯನ್ನು ಪ್ರಾಪ್ತಿಸಿಕೊಳ್ಳಲಿಕ್ಕೆ ಪ್ರಯತ್ನಿಸಿದನು. ಸಾಧನೆ ಮಾಡಿದವ ಸಬಳ ನುಂಗ್ಯಾನೆಂಬ ನಾಮತಿಯಂತೆ ಬಹುಸೂಕ್ಷ್ಮ ಉಪಾಯಗಳಿಂದ ವರ್ತಿಸಿದ ತಿಪ್ಪಾಶಾಸ್ತ್ರಿಯು ಹೆಚ್ಚು ವಿಳಂಬವಿಲ್ಲದೆ ಶೃಂಗಾರಿಯ ಹೃದಯದಲ್ಲಿ ತನ್ನ ಕಾಮಿತಕ್ಕೆ ಇಂಬು ದೊರಕಿಸಿಕೊಂಡನು. ವಾಗ್ದೇವಿಯು ಇದು ಚನ್ನಾಗಿ ತಿಳದೇ ಅವರಿಬ್ಬರ ಸ್ನೇಹಲತೆಯನ್ನು ಏರಬಿಟ್ಟಳಲ್ಲದೆ ಮುರಿಯಲಿಕ್ಕೆ ಸರ್ವಥಾ ನೋಡಲಿಲ್ಲ. ಹೀಗಾದುದರಿಂದ ತಿಪ್ಪಾಶಾಸ್ತ್ರಿಗೆ ವಾಗ್ದೇವಿಯ ಮೇಲೆ ಅಭಿಮಾನ ಉಳಿಯಿತು. ಅವನನ್ನು ಪೂರ್ಣವಾಗಿ ತಿರಸ್ಕಾರ ಮಾಡಿಬಿಟ್ಟರೆ ಕ್ರಮೇಣ ಅವನ ಶತ್ರುತ್ವದಿಂದ ದೊಡ್ಡ ಬಾಧಕ ಬರುವದೆಂಬ ಭಯವು ನಿವಾರಣೆಯಾದ ಹಾಗಾಯಿತು. ಒಟ್ಟಾರೆ ಇದೊಂದು ದೊಡ್ಡ ಅಡಚಣಿಯಿಂದ ವಾಗ್ದೇವಿಯು ಪಾರಾದ್ದು ಅವಳ ಪುಣ್ಯವೆನ್ನಬೇಕು.

## ಮೂವತ್ತೈದು

ಸೂರ್ಯನಾರಾಯಣನು ದಿನಾಗಲೂ ವಿದ್ಯಾಭ್ಯಾಸದಲ್ಲಿ ಪೂರ್ಣ ಮನಸ್ಸಿಟ್ಟು ಸುಜ್ಞನೆನಿಸಿಕೊಳ್ಳುವವನಾದನು. ಅವನ ಮುಖದ ವರ್ಚಸ್ಸು ಬಾಲಾರ್ಕನಂತೆ ಶೋಭಿಸುವದಾಯಿತು. ದ್ವಾದಶ ವರ್ಷಗಳು ಮಾತ್ರ ತುಂಬಿರುವುದಾದರೂ ನೋಡುವಿಕೆಗೆ ಹದಿನಾರು ವರ್ಷ ಪ್ರಾಯವಂತನಂತೆ ಕಾಣುವನು. ಯತಿಯು ಕೊಟ್ಟ ಭಾಷೆಯ ನೆನಪು ಹುಟ್ಟಿಸಿ ಅವನಿಂದ ಅದನ್ನು ಶೀಘ್ರ ನೆರವೇರಿಸಿಕೊಳ್ಳುವದಕ್ಕೆ ಪ್ರಶಸ್ತವಾದ ಸಮಯವು ಬಂದಿರುವುದೆಂದು ವಾಗ್ದೇವಿಗೆ ತೋರಿತು. ತನ್ನ ಮಗನಿಗೆ ಆಶ್ರಮವಾಗುತ್ತಲೇ ಶತ್ರುಗಳು ಎಡೆಬಿಡದೆ ನಾನಾ ಉಪದ್ರ ಕೊಡದಿರಲಾರರೆಂದು ವಾಗ್ದೇವಿಗೆ ಚೆನ್ನಾಗಿ ಗೊತ್ತಿತ್ತು. ಆದರೆ ಅದು ತನ್ನ ಕೋರಿಕೆಯು ಈಡೇರುವವದಕ್ಕೆ ಒಂದು ಅಭ್ಯಂತರವಾಗಿರಕೂಡದೆಂದು ಅವಳು ನಿರ್ಧಾರಮಾಡಿರುತ್ತಿದ್ದಳು. ಮುಖ್ಯದೈವತವಾದ ಹರಿಯಾಗಲೀ ಹರನಾಗಲೀ ಒಲಿದರೆ ಕ್ಷುದ್ರ ದೇವತೆಗಳನ್ನು ಗಣ್ಯ ಮಾಡುವ ಅಗತ್ಯವದೆಯೇ. ಪುರದಲ್ಲಿ ಅತ್ಯಧಿಕ ಅಧಿಕಾರವುಳ್ಳ ಕೊತ್ವಾಲನೂ ಪೌಜದಾರಿ ಕಾರಭಾರಿಯೂ ವಾಗ್ದೇವಿಯ ಮೇಲೆ ಸಂಪೂರ್ಣ ಮಮತೆಯಿಂದ ಅವಳ ನಿರಂತರ ಶುಭಚಿಂತಕರಾಗಿ ವಜ್ರಾವರಣದಂತೆ ಸಹಾಯಕರಾಗಿರುವ ಸುಸಮಯದಲ್ಲಿ ವೇದವ್ಯಾಸ ಉಪಾಧ್ಯನಂತಿರ್ಪ ಬಣಗು ಪ್ರಾಣಿಗಳಿಗೆ ಅವಳು ಹೆದರುವದುಂಟೇ? ಯತಿಯ ಮನಸ್ಸುಹ್ಯಾಗದೆಂಬದೊಂದೇ ಯೋಚನೆಯು ಅವಳಿಗೆ ಕಾಡುತ್ತಿತ್ತು.

ಪಟ್ಟದ ದೇವರ ಮುಂದೆ ಪ್ರಮಾಣ ಮಾಡಿಕೊಟ್ಟ ಭಾಷೆಯು ನೆರವೇರುವ ಮೊದಲೇ ಯತಿಯು ಗತನಾದರೆ ನೀರಿನಲ್ಲಿ ಹೋಮ ಇಟ್ಟ ಹಾಗೆ ಆಗುವದೇ ಸರಿ. ಈಗಲೇ ಆ ಪ್ರಸ್ತಾಪವನ್ನು ಯತಿಯ ಕೂಡೆ ನಡೆಸಿ ವಾಂಛಿತವನ್ನು ಪಡೆಯದಿದ್ದರೆ ಮುಂದಿನ ಆಶೆಯು ನಿರರ್ಥಕವಾಗುವದೆಂಬ ಅನುಮಾನವು ಅವಳ ಮನಸ್ಸಿನಲ್ಲಿ ಗಲಿಬಿಲಿ ಮಾಡತೊಡಗಿತು. ಯತಿಯ ಪ್ರಾಣೋತ್ಕ್ರಮಣ ಕಾಲದ ವರೇಗೆ ತಾಳ್ಮೆಯಿಂದಿರುವದು ಲೇಸಲ್ಲ. ಒಂದು ವೇಳೆ ಅಂಥಾ ಸಂದುಕಟ್ಟಿನಲ್ಲಿ ತನ್ನ ಮಗನಿಗೆ ಆಶ್ರಮಕೊಟ್ಟರೂ ವೈರಿಗಳು ಆ ಮಾತೇ ಸುಳ್ಳೆಂದು ವಾದಿಸಿ ತನ್ನನ್ನೂ ಮಗನನ್ನೂ ಮೂಲೆಗೆ ಸೇರಿಸಿ ಬಿಟ್ಟರೆ ಜನ್ಮವೇ ವ್ಯರ್ಥವಾಗುವದು. ಶೀಘ್ರ ಆಶ್ರಮಕೊಡಿಸಿಯೇ ಸಿದ್ಧವೆಂದು ವಾಗ್ದೇವಿಯು ದೃಢಮನಸ್ಸಿನಿಂದ ಸುಲಭವಾದ ಉಪಾಯ ನಡೆ

ಯಲಿಕ್ಕೆ ಅನುಕೂಲ ನೀರಿಕ್ಷಣೆಯಲ್ಲಿರುತಿದ್ದಳ. ಒಂದು ದಿನ ಭಿಕ್ಷೆಯಾದ ಕೊಂಚ ಹೊತ್ತಿನಲ್ಲಿ ಚಂಚಲನೇತ್ರರು ಫಕ್ಕನೆ ಮೂರ್ಛೆಹೊಂದಿದರು. ವಿಳಂಬ ಮಾಡದೆ ವಾಗ್ದೇವಿಯು ಘನವೈದ್ಯರನ್ನು ಕರತರಿಸಿ ಬೇಕಾದ ಚಿಕಿತ್ಸೆಯನ್ನು ಮಾಡಿಸುವದರಿಂದ ಯತಿಯ ಜೀವವು ಉಳಿಯಿತು. ವೈದ್ಯರ ಅನುಜ್ಞೆಗಳಂತೆಯೇ ವಾಗ್ದೇವಿಯು ಚಂಚಲನೇತ್ರರನ್ನು ಒಂದೆರಡು ವಾರಗಳ ಪರಿಯಂತರ ಪಥ್ಯದಲ್ಲಿಟ್ಟು ಬಹು ಜಾಗ್ರತೆ ತಕ್ಕೊಂಡಳು.

ಗಂಡಾಂತರದ ಅವಧಿಯು ದಾಟಿತೆಂದು ವೈದ್ಯರು ಖಚಿತಪಟ್ಟ ತರುವಾಯ ಯತಿಯು ನಿತ್ಯಕರ್ಮಗಳನ್ನಾಗಲೀ ಬೇರೆ ಯಾವ ಕಾರ್ಯಗಳನ್ನಾಗಲೀ ಮುಂಚಿನಂತೆ ನಡಿಸಲಿಕ್ಕೆ ಯಾರೊಬ್ಬರೂ ತಡೆಯಲಿಲ್ಲ. ಪ್ರಾಯಶಃ ಚಂಚಲನೇತ್ರರ ಆರೋಗ್ಯಸ್ಥಿತಿಯು ಭಯರಹಿತವೆಂದು ತೋರಿದರೂ ಪ್ರಾಯಸಲುವ ದೆಸೆಯಿಂದ ಮೃತ್ಯು ಹೆಡತಲೆಯಲ್ಲಿರುವದಾಗಿ ಭಾವಿಸಬೇಕಾಯಿತು. ಅನ್ಯರ ಪರಿಮುಖ ಈ ಪ್ರಸ್ತಾಪ ಯತಿಯ ಕೂಡೆ ಮಾಡುವದು ಪರಿಷ್ಕಾರವಲ್ಲ. ಬಹುಶಃ ವೆಂಕಟಪತಿ ಆಚಾರ್ಯನಿಂದ ಮಾತಾಡಿಸಿ ನೋಡಬಹುದೆಂದರೆ ಅವನು ಅನಾರೋಗ್ಯಸ್ಥಿತಿಯಲ್ಲಿರುವ ನೆವದಿಂದ ಮಠಕ್ಕೆ ಬರುವದೇ ಹೆಚ್ಚು ಅಪರೂಪವಾಗಿಯದೆ. ತಾನೇ ಮಾತಾಡಿನೋಡುವದೇ ಅತಿ ಉತ್ತಮವೆಂದು ವಾಗ್ದೇವಿಯು ನಿಶ್ಚಯ ಮಾಡಿ ಯಥೋಚಿತ ಸಮಯವನ್ನು ಹಾರಯಿಸಿ "ಪರಾಕೆ, ನನ್ನದೊಂದು ಅರಿಕೆ ಅದೆ. ನಡಿಸುವದಾದರೆ ಹೇಳುತಿದ್ದೆ" ಎಂದು ವಾಗ್ದೇವಿಯು ವಿನಯಪೂರ್ವಕವಾಗಿ ಬಿನ್ನವಿಸಿದಳು. "ಏನು? ಹೇಳು" ಎಂದು ಚಂಚಲನೇತ್ರರ ಅಪ್ಪಣೆಯಾಯಿತು.

ವಾಗ್ದೇವಿ—"ಸೂರ್ಯನಾರಾಯಣನು ವಿದ್ಯೆಯಲ್ಲಿಯೂ ಬುದ್ಧಿಯಲ್ಲಿಯೂ ನಿರಾಕ್ಷೇಪಕರ ಹುಡುಗನೆಂದು ಕಾಣುತ್ತದೆ. ಶ್ರೀಪಾದಂಗಳ ಅಭಿಪ್ರಾಯ ಹ್ಯಾಗದೊ ತಿಳಿಯದು."

ಚಂಚಲ—"ನಮ್ಮಿಬ್ಬರ ಅಭಿಪ್ರಾಯವು ಒಂದೇ! ನಾವು ವಿಮತವಾಗುವದು ಹ್ಯಾಗೆ?"

ವಾಗ್ದೇವಿ—"ಹಾಗಾದರೆ ಶ್ರೀಪಾದಂಗಳವರು ನನ್ನ ಮೇಲೆ ಕೃಪೆ ಇಟ್ಟು ಮಠಕ್ಕೆ ಕರಸಿಕೊಂಡ ದಿನ ಕೊಟ್ಟ ಭಾಷೆಯನ್ನು ನೆನಪಿಗೆ ತರಲೇ?"

ಚಂಚಲ—" ಆ ಭಾಷೆ ಯಾವುದು?"

ವಾಗ್ದೇವಿ—"ಅಷ್ಟು ಬೇಗ ಅದು ಮರವೆಗೆ ಬಂದದ್ದು ಬಹು

ಚೋದ್ಯವೇ. ಆಗಲಿ, ಹೇಳಿ ಬಿಡುತ್ತೇನೆ. ನನ್ನಲ್ಲಿ ಹುಟ್ಟಿದ ಮಗನಿಗೆ ಆಶ್ರಮ ಕೊಡುವದಾಗಿ ಪಟ್ಟದ ದೇವರ ಮುಂದೆ ಪ್ರಮಾಣ ಮಾಡಿಕೊಟ್ಟ ಭಾಷೆ. ಈಗಲಾದರೂ ನೆನಪಿಗೆ ಬಂತೇ"

ಚಂಚಲ—"ಹೌದು ಆ ಭಾಷೆ ಸಲಿಸುವ ಸಂದರ್ಭ ಈಗ ಒದಗಿರುವದೇನು?"

ವಾಗ್ದೇವಿ — "ಒದಗಿಲ್ಲವಾದರೆ ಒದಗುವ ಕಾಲವು ಯಾವದೆಂದು ಅಪ್ಪಣೆಯಾದರೆ ನಿಶ್ಚಿಂತಳಾಗಿರಬಹುದು."

ಚಂಚಲ—"ನಮ್ಮ ದೇಹ ಪ್ರಕೃತಿಯು ಬಲಹೀನವಾದ್ದಲ್ಲಾ. ಈಗ ನಮ್ಮ ದೇಹದಲ್ಲಿ ಏನೂ ಆಯಾಸವಿಲ್ಲ. ಅಷ್ಟು ಬೇಗ ಶಿಷ್ಯನನ್ನು ಮಾಡಿಕೊಳ್ಳುವದ್ಯಾಕೆ? ಪ್ರಾಣಸಂದೇಹದ ಚಿನ್ಹೆ ತೋರಿದಾಗ ಅನ್ಯನೊಬ್ಬಗೆ ಆಶ್ರಮ ನಾವು ಕೊಡುವ ಹಾಗುಂಟೇನು? ನೀನು ಇಷ್ಟು ಅವಸರ ಮಾಡುವುದು ನಮಗೆ ಸರಿ ತೋರುವದಿಲ್ಲ"

ವಾಗ್ದೇವಿ — "ಕ್ಷಣಭಂಗುರವಾದ ನರದೇಹಸ್ಥಿತಿಯನ್ನು ನೆಚ್ಚಬಹುದೇ? ತಮಗೆ ದೇವರು ದೀರ್ಘಾಯುಷ್ಯಕೊಡಲೆಂದು ನನ್ನ ಪ್ರಾರ್ಥನೆ. ಆದರೆ'ಶುಭಸ್ಯಶೀಘ್ರಂ, ಅಶುಭಸ್ಯ ಕಾಲಹರಣಂ' ಎಂಬ ವಚನವಿದೆ. ಹೆಚ್ಚಿಗೆ ಅರಿಕೆಮಾಡಲಿಕ್ಕೆ ಶಕ್ತಳಲ್ಲ. ಸರ್ವಜ್ಞನಾದ ತಮಗೆ ಅನ್ಯರು ಆಲೋಚನೆ ಹೇಳಬೇಕೆ? ನಾನನಕಾ ಒಬ್ಬಳು ಹೆಣ್ಣು ಹೆಂಗಸು."

ಚಂಚಲ — "ಕ್ರಮೇಣ ನೋಡೋಣ. ಹುಡುಗನಿಗೂ ಕೊಂಚ ಪ್ರಾಯ ತುಂಬಲಿ. ಈಗ ಅನಪತ್ಯವೇನು?"

ವಾಗ್ದೇವಿ—"ಕೆಟ್ಟದೆಣಿಸಿದ ಮೇಲೆ ಒಳ್ಳೇದೆಣಿಸಬೇಕೆಂಬದೊಂದು ಮಾತು ರೂಢಿಯಲ್ಲಿದೆ ಪರಾಕೆ! ಒಬ್ಬ ಸನ್ಯಾಸಿಯು ಥಕ್ಕನೆ ಗತನಾದರೆ ಅವನಿಗೋಸ್ಕರ ದ್ವಂದ್ವಮಠದಧಿಪತಿಗಳು ಆಶ್ರಮವನ್ನು ಕೊಡಬೇಕಷ್ಟೇ! ಗತವಾದ ಸನ್ಯಾಸಿಯು ಆರಿಸಿಟ್ಟವನಿಗೇನೇ ಅಂಥಾ ಸಂಧಿಯಲ್ಲಿ ಆಶ್ರಮವಾದೀತೆಂದು ನಿರೀಕ್ಷಿಸಬಹುದೇ? ಯಾರೊಬ್ಬರ ಕೇಡುಬಯಸದೆ ನಾನು ಹೇಳುವ ಈ ಮಾತು ಶ್ರೀಪಾದಂಗಳ ಮನಸ್ಸಿಗೆ ಅಯುಕ್ತವೆಂತ ತೋಚದೆಂದು ನನ್ನ ಅಭಿಪ್ರಾಯ."

ಚಂಚಲ— "ಹಾಗಾದರೆ ನೀನು ಕೇವಲ ಹಿತಚಿಂತಕಳೇ ಸರಿ. ಏನೋ ಸ್ವಲ್ಪ ಅನಾರೋಗ್ಯಸ್ಥಿತಿ ಒಂದು ದಿನ ಕಂಡುಬಿಟ್ಟು ನೀನು ವಿಳಂಬ

ವಿಲ್ಲದೆ ನಿನ್ನ ಮಗನಿಗೆ ಆಶ್ರಮಕೊಡಬೇಕೆಂದು ಹಟಹಿಡಿಯುವದು ನೋಡು ವಾಗ ನಮ್ಮ ಪ್ರಾಣ ಎಂದು ಹೋದೀತೆಂಬ ನಿರೀಕ್ಷೆಯು ನಿನ್ನಲ್ಲಿ ಕುಣಿದಾಡುತ್ತದೆಂದು ನಾವು ಭಾವಿಸಬೇಕಾಗುತ್ತವೆ. ಅವರವರ ಪ್ರಯೋಜನ ಅವರವರು ನೋಡುವದು ಸೋಜಿಗವಲ್ಲ."

ವಾಗ್ದೇವಿ—"ಸ್ವಾಮಿಾ! ಇಂಥಾ ಸಂಜಿನ ಮತ್ತು ರಾಗಛಾಯದ ಮಾತುಗಳ್ಯಾಕೆ? ಕೊಟ್ಟಮಾತು ನಡಿಸಲಿಕ್ಕೆ ಆಗುವದಿಲ್ಲವೆಂದು ಖಂಡ ತುಂಡವಾಗಿ ಆಡಿಬಿಟ್ಟರೆ ನಾನೇನು ಮಾಡುವ ಹಾಗುಂಟು."

ಚಂಚಲ—"ನೀನು ನಮ್ಮ ಮಠಕ್ಕೆ ಬಂದಂದಿನಿಂದ ಇದುವರೆಗೂ ಏನೊಂದು ಕಲಹಮಾಡದೆ ಈ ದಿನವೇ ಸಣ್ಣದೊಂದು ಜಗಳದ ಬೀಜವನ್ನು ಬಿತ್ತಲಿಕ್ಕೆ ನೋಡುವದಾಗಿ ನಮ್ಮ ಮನಸ್ಸಿಗೆ ಕಾಣುತ್ತೆ. ಹೀಗೆ ಮಾಡಲಿಕ್ಕೆ ನೀನು ಆಸೆಪಡುವದು ನಿನ್ನ ಸ್ವಬುದ್ಧಿಯಿಂದಲೋ ಬೇರೆಯವರ ದುರಾಲೋಚನೆಯಿಂದಲೋ ಎಂಬುದು ತಿಳಿಯದೆ ನಾವು ಮನಸ್ಸಿನಲ್ಲಿ ಕೊಂಚ ಸಂದೇಹಪಡಬೇಕಾಗುತ್ತದೆ. ಅದಂತಿರಲಿ. ಕೃತಾಕೃತ ಪಾಪಗಳಿಗೆ ಅವರ ವರೇ ಹೊಣೆಯಾಗುವದು ಸಹಜ. ನಾವೀಗ ಈ ಪ್ರಸಂಗದಲ್ಲಿ ಬೇರೇನೂ ಹೇಳತಕ್ಕದ್ದಿಲ್ಲ."

ವಾಗ್ದೇವಿ—"ಪರಾಕೆ! ಈಗ ತಾವು ಹೇಳತಕ್ಕದ್ದೇನಿಲ್ಲವೆಂಬ ಅನುಮಾನ ಚಂದಾಗಿ ಇದ್ದಕಾರಣದಿಂದಲೇ ಈ ಪ್ರಸ್ತಾಪ ನಾನೆತ್ತಿದೆ! ನನ್ನ ನವ ಯೌವನವನ್ನು ತಮ್ಮ ವ್ಯಾಮೋಹಕ್ಕೆ ಬಲಿ ಅರ್ಪಿಸುವುದಕ್ಕೆ ಮಾತ್ರ ತಾವು ನನ್ನನ್ನು ಕರೆಸಿಕೊಂಡಿರೆಂದು ನನಗೆ ಪೂರ್ಣವಾಗಿ ಗೊತ್ತಿದ್ದೇ ತಮ್ಮಿಂದ ಪ್ರಮಾಣ ಪೂರ್ವಕವಾದ ವರವನ್ನು ಅಪೇಕ್ಷಿಸಿದೆ ಮತ್ತು ಆ ವರವು ಸಿಕ್ಕುವಪರಿಯಂತರ ತಮ್ಮ ಅಪೇಕ್ಷೆಯನ್ನು ಸಲ್ಲಿಸುವುದಕ್ಕೆ ಕಟ್ಟು ನಿಟ್ಟಾಗಿ ನಿರಾಕರಿಸಿದೆ. ಆದರೂ ನಾನು ಸೋಥೋದೆನಷ್ಟೆ! ಪರವಾ ಇಲ್ಲ. ತಾವು ನಿತ್ಯ ಪೂಜಿಸುವ ಪಟ್ಟದ ದೇವರ ಮೇಲೆ ತಮಗೆಷ್ಟು ಭಕ್ತಿಯಿದೆ ಎಂಬುದು ಮಿತಿಕಟ್ಟಲಿಕ್ಕೆ ತಮ್ಮ ಈಗಿನ ಮಾತಿನಿಂದ ಅನುಕೂಲವಿದೆ. ಅತಿಶಯೋಕ್ತಿಯಿಂದ ಏನು ಪುರುಷಾರ್ಥ ಸ್ವಾಮಿಾ! ತಮ್ಮ ವಾಗ್ದಾನದ ಮೌಲ್ಯ ತಿಳಿದ ಹಾಗಾಯಿತು. ಸಾಕು ತಮಗೂ ನನಗೂ ಪ್ರಾಯ ವೃದ್ಧಿಯಾಗುತ್ತಾ ಒಬ್ಬರ ಸಾಮಿಾಪ್ಯ ಇನ್ನೊಬ್ಬರಿಗೆ ಅಗತ್ಯವಿಲ್ಲದ ಸಮಯವು ಬರಲಿಕ್ಕಾಯಿತು. ನಮ್ಮ ನಮ್ಮ ಹಾದಿ ನಾವು ನಾವು ನೋಡುವುದಕ್ಕೆ

ಇದೇ ಸಮಯವೆನ್ನಬಹುದು. ಇಂದಿನವರೆಗೆ ತಮ್ಮ ಮಠದ ದ್ರವ್ಯದಿಂದ ಮೃಷ್ಟಾನ್ನಭೋಜನವೂ ಸಂಪತ್ತೂ ದವಲತ್ತೂ ತಮ್ಮ ವಿತ್ತಾಪಹಾರವೂ ನನಗೆ ನಿರಾಯಾಸವಾಗಿ ದೊರಕಿತು. 'ನಾಯಿ ಹಸಿದಿತ್ತು ಅಂಬಲಿ ಹಳಸಿತ್ತು' ಎಂಬ ಗಾದೆಯಂತೆ ನಮ್ಮಿಬ್ಬರ ಅವಸ್ಥೆಯಾಗಿತ್ತು. ನನ್ನ ರೂಪ ಲಾವಣ್ಯಕ್ಕೂ ಪ್ರಾಯಕ್ಕೂ ತಕ್ಕವನಾದ ವರನು ನನಗೆ ದೊರಕದೆ ಯಾರ ಬಯಕೆಗೂ ಒಳಪಡುವ ಆವಶ್ಯಕತೆಯುಳ್ಳ ಪ್ರಾಣಿಯಾಗಿದ್ದೆ. ಸನ್ಯಾಸದ ಪಾಶಬದ್ಧರಾಗಿ ಮದುವೆ ಆಗಕೂಡದೆ ಇಂದ್ರಿಯದಮನದ ಶಕ್ತಿಶೂನ್ಯರಾಗಿ ತಾವು ಇರುತಿದ್ದಿರಿ. ಹೀಗಾಗಿ ನಮ್ಮಿಬ್ಬರಿಗೆ ಸಂಘಟನ ಸುಲಭವಾಯಿತು. ತಾವು ಕೊಟ್ಟ ಭಾಷೆಯ ಮೇಲೆ ನಾನು ವಿಶ್ವಾಸವಿಟ್ಟದ್ದೊಂದು ತಪ್ಪು. ಅದರ ಫಲ ಉಣ್ಣತಕ್ಕವಳು ನಾನೇ! ಇನ್ನು ಅಪ್ಪಯಾಗಲಿ; ಹೋಗಿ ಬರುತ್ತೇನೆ."

ಚಂಚಲ—"ಯಾವಲ್ಲಿಗೆ ಹೋಗುತ್ತೀ? ಏನು ಹುಚ್ಚು ಹರಕೋಥಿ! ನಿನಗೆ ದೈವ ಸೋಕಿತೇನು? ವಿವೇಕದಿಂದ ಇದು ದರಿಗೆ ಇದ್ದವಳು ಈಗ ಒಮ್ಮೆಯೇ ಕರ್ಕಶಳಾದೆಯಾ? ನಿನಗೆ ಕೊಟ್ಟ ಭಾಷೆ ಮರತವರು ಯಾರು? ಛಲ ಯಾರಿಗೂ ಕ್ಷೇಮಕರವಲ್ಲ. ಅವಸರವ್ಯಾಕೆ? ನೀನು ಕಠಿಣ ಮಾತುಗಳಾಡಿದಿ ಎಂದು ನಾವು ಆಗ್ರಹ ಪಡುವುದಿಲ್ಲ. ನಿನ್ನನ್ನು ಹಳಸಿ ಹೋದ ಅಂಬಲಿಗೂ ನಮ್ಮನ್ನು ನಾಯಿಗೂ ಹೋಲಿಸಿದರೂ ಚಿಂತಿಲ್ಲ. ಸಿಟ್ಟಿನ ಸಮಯದಲ್ಲಿ ಬಾಯಿಯಿಂದ ಯದ್ವಾತದ್ವಾ ಮಾತುಗಳು ಹೊರಡುವುದು ಲೋಕದಲ್ಲಿ ರೂಢಿಯಿದೆ."

ವಾಗ್ದೇವಿ— "ನಾನು ಕೊಟ್ಟ ಉಪಮೆಯು ಸರಿಯಾದ್ದೆ. ಮಾತು ಬಲ್ಲವಗೆ ಜಗಳವಿಲ್ಲ, ಊಟ ಬಲ್ಲವಗೆ ರೋಗವಿಲ್ಲವೆಂಬ ಸಾಮತಿಗೆ ಸರಿಯಾಗಿ ತಮ್ಮ ವಹಿವಾಟು ನಡಿಯುತ್ತದೆ. ನಾನನಕಾ ಅನಾಥೆ. ದೇವರೇ ನನ್ನನ್ನು ರಕ್ಷಣೆ ಮಾಡಬೇಕು. ನಾವು ಪರಸ್ಪರ ಮುಖಾವಲೋಕನ ಮಾಡಿಕೊಳ್ಳುವ ಕಡೆ ಕಾಲವು ಇದೇ. ಇನ್ನೊಮ್ಮೆ ಅಪ್ಪಣೆ ಬೇಡುತ್ತೇನೆ. ಬಡವಳ ಮೇಲೆ ಪ್ರೀತಿ ಇರಲಿ."

ಹೀಗೆಂದು ಸಟ್ಟನೆ ವಾಗ್ದೇವಿಯು ಬೆನ್ನು ಹಾಕಿ ಹೊರಡುವ ವೇಳೆಯಲ್ಲಿ ಚಂಚಲನೇತ್ರರು ಅವಳ ಮುಖವನ್ನು ನೋಡಿದರೆ ಅವಳು ಸಿಟ್ಟು ತಡೆಯಲಾರದೆ ಗಡಗಡನೆ ನಡುಗುತ್ತಾ ಕರಾಳವದನಳಾಗಿರುವದನ್ನು

ಕಂಡು ನಿಜವಾಗಿ ಹೆದರಿ ಅಧೋಮುಖರಾದರು. ವಾಗ್ದೇವಿಯು ಹಿಂದೆ ನೋಡದೆ ಅತಿ ವೇಗದಿಂದ ಬಿಡಾರಕ್ಕೆ ಬಂದು ಗಂಡನನ್ನು ಕರೆದು ಏನೋ ಅಂತರಂಗ ಸಂಭಾಷಣೆಯ ಮೂಲಕ ಅನುಜ್ಞೆಗಳನ್ನು ಕೊಟ್ಟು ನಿತ್ಯ ಉಪ ಯೋಗಕ್ಕೆ ಬೇಕಾದ ಅಡಿಗೆ ಪಾತ್ರಾದಿ ಸಾಹಿತ್ಯಗಳನ್ನು ಹೊರೆ ಕಟ್ಟಿಸಿ ತತ್ಕಾಲ ವೆಚ್ಚಕ್ಕೆ ಬೇಕಾಗುವಷ್ಟು ಹಣಕಾಸು ಚಿನ್ನಚಿಗುರು ಇತ್ಯಾದಿ ಕಟ್ಟಿಕೊಂಡು ಶೃಂಗಾರಿಯ ಸಮೇತ ಬಂಡಿ ಏರಿ ನಡೆದು ಬಿಟ್ಟಳು. ಮುಂಚಿತವಾಗಿಯೇ ಮತ್ತೊಂದು ಬಿಡಾರ ಹುಡುಕಲಿಕ್ಕೆ ಕಳುಹಿಸಲ್ಪಟ್ಟ ವಿಶ್ವಾಸಿ ಸೇವಕನು ನೇಮರಾಜನ ಭಂಡಸಾಲೆಯ ಸಮೀಪ ಅವನಿಗಿರುವ ಅನೇಕ ಕಟ್ಟೋಣಗಳಲ್ಲಿ ಒಂದನ್ನು ಬಾಡಿಗೆ ನಿಶ್ಚಯಿಸಿಟ್ಟಿರುತ್ತಿದ್ದನು. ಅದರಲ್ಲಿ ಅವಳು ನಿರಾತಂಕವಾಗಿ ಪ್ರವೇಶಿಸಿ ಸೂರ್ಯನಾರಾಯನನ್ನು ಕೂಡಾ ಶಾಲೆಯಿಂದ ಅಲ್ಲಿಗೆ ಬರುವ ಹಾಗೆ ಹೇಳಿಕಳುಹಿಸಿದಳು. ಮಾತೆ ಯಾಜ್ಞೆಯಂತೆ ಪುತ್ರನು ಪ್ರವರ್ತಿಸಿದನು. ತಾಯಿಯು ಬೇರೆ ಬಿಡಾರ ಮಾಡಿಕೊಂಡಿರುವ ಕಾರಣವೇನೆಂದು ತಿಳಿಯದೆ ಅವನು ಕೊಂಚ ಬೆರಗಾ ದನು. ಆದರೆ ಆ ವಿಷಯದಲ್ಲಿ ಅವ್ವನ ಕೂಡೆ ಪ್ರಸ್ತಾಪಿಸಲಿಕ್ಕೆ ಅಂಜಿ ಮೌನ ವಾದನು.

ಆಬಾಚಾರ್ಯನು ಮಠದಲ್ಲಿಯೇ ಇದ್ದು ಅಲ್ಲಿಯೇ ಭೋಜನ ತೀರಿಸಿ ಕೊಂಡು ದಿನಕೊಮ್ಮೆಯಾಗಲೀ ಹೆಚ್ಚು ಸಲವಾಗಲೀ ಪತ್ನಿಯ ಬಿಡಾರಕ್ಕೆ ಬಂದು ಲವಕಾಲ ಅಂತರಂಗ ಮಾತಾಡಿ ಬಿಟ್ಟು ಹಿಂತಿರುಗಿ ಹೋಗುವನು. ಶೃಂಗಾರಿಗೂ ಅಕ್ಕನು ಮಠವನ್ನು ಬಿಟ್ಟು ಪ್ರತ್ಯೇಕ ವಾಸಮಾಡಿಕೊಂಡಿರುವ ಗುಟ್ಟು ತಿಳಿಯಬೇಕೆಂಬ ಕುತೂಹಲವಿದ್ದರೂ ಅವಳ ಕೂಡೆ ಪ್ರಸ್ತಾಪ ಮಾಡಲಿಕ್ಕೆ ಧೈರ್ಯವಿರಲಿಲ್ಲ. ಮಠದಿಂದ ಹೊರಟು ಬೇರೆ ಠಾವಿನಲ್ಲಿ ಉಳಕೊಂಡ ಸಂಬಂಧ ಜೀವನ ನಡಿಸಿಕೊಳ್ಳಲಿಕ್ಕೆ ಸಾಲ ಕಡ ಮಾಡುವ ಅವಶ್ಯತೆಯಿಲ್ಲದಿದ್ದರೂ ಕೈಯಲಿ ಕಾಸೊಂದೂ ಇಲ್ಲದವಳಂತೆ ಅವಳು ದಿನ ದಿನದ ಸಾಹಿತ್ಯಗಳನ್ನು ನೇಮರಾಜನ ಅಂಗಡಿಯಿಂದ ಬೇಕಾದ ಹಾಗೆ ಕಡವಾಗಿ ತರಿಸಿಕೊಂಡು ನಿಶ್ಚಿಂತಳಂತೆ ತೋರಿಸಿಕೊಂಡು ಕಾಲಹರಣ ಮಾಡುವವಳಾದಳು. ಒಂದೆರಡು ದಿನಗಳ ತರುವಾಯ ಆ ಬಿಡಾರವು ಬಹು ಒಳ್ಳೆಯದೆಂಬ ಹಾಗೆ ಶೃಂಗಾರಿಯ ಮನಸಿಗೆ ತೋಚಿ ಅಲ್ಲಿಯೇ ಉಳಕೊಳ್ಳುವದು ಬಹು ಸೌಖ್ಯವೆಂತ ಅವಳು ತಿಳಕೊಂಡಳು.

## ಮೂವತ್ತಾರು

ವಾಗ್ದೇವಿಯು ಚಂಚಲನೇತ್ರರ ಸಂಗಡ ಜಗಳ ಮಾಡಿ ಬೇರೆ ಬಿಡಾರ ಮಾಡಿಕೊಂಡಿರುವ ಸುದ್ದಿಯು ಕುಮುದಪುರದಲ್ಲಿ ಹಬ್ಬಿ ಬಹು ಜನರಿಗೆ ವಿಸ್ಮಯವನ್ನುಂಟುಮಾಡಿತು. ಭೀಮಾಜಿಗೆ ಈ ವರ್ತಮಾನವು ಆರಂಭದಲ್ಲಿ ಸಟೆಯಾಗಿ ಕಂಡರೂ ವಿಚಾರಿಸಿ ತಿಳಿಕೊಂಡಾಗ ಅದರ ನಿಜತ್ವದ ಕುರಿತು ಸಂದೇಹ ಬರಲಿಲ್ಲ. ಅವನು ಸಾಯಂಕಾಲ ಸಮಯದಲ್ಲಿ ವಾಗ್ದೇವಿಯನ್ನು ಅವಳ ಬಿಡಾರದಲ್ಲಿ ಕಂಡು ಜಗಳದ ಮೂಲವನ್ನು ಕೇಳಿ ತಿಳಿದ ಮೇಲೆ ಅವಳ ಉದ್ದೇಶ ನೆರವೇರುವದಕ್ಕೆ ತನ್ನ ಪೂರ್ಣ ಸಹಾಯ ಉಂಟೆಂದು ಅವಳ ಮನಸಿಗೆ ದೃಢಪಡಿಸಿ ಶಾಬಯ್ಯಗೆ ಈ ವಿಶೇಷ ವರ್ತಮಾನವನ್ನು ತಿಳಿಸಿದನು. ವಾಗ್ದೇವಿಯ ಮೇಲೆ ಅತಿಶಯ ಅನುರಕ್ತಿ ಇರುವ ಈ ದೊಡ್ಡ ಉದ್ಯೋಗಸ್ಥನು ಅವಳನ್ನು ಕಾಣಲಿಕ್ಕೆ ಅಪೇಕ್ಷೆಯುಳ್ಳವನಾಗಿರುವನೆಂದು ಭೀಮಾಜಿಯ ಪರಿಮುಖ ತಿಳಿಸುತ್ತಲೇ ಅವಳು ಪ್ರೀತಿಯ ವಸ್ತುಗಳನ್ನು ಹಿಡಿಸಿಕೊಂಡು ಕತ್ತಲೆಯ ಸಮಯದಲ್ಲಿ ಆವನನ್ನು ಕಂಡು ಕಣ್ಣೀರಿಟ್ಟು ಸಕಲ ವೃತ್ತಾಂತವನ್ನು ಅರುಹಿದಳು.

ಶಾಬಯ್ಯನು ರೇಗಿದನು. "ಹೆದರಬೇಡ; ಸರ್ವ ಅಭ್ಯಂತರಗಳನ್ನು ನಿವಾರಣೆ ಮಾಡಿ ಕೊಡುವೆನು" ಎಂದು ಆವಳಿಗೆ ಪೂರ್ಣವಾಗಿ ನಂಬಿಕೆ ಕೊಟ್ಟು ಮನೆಗೆ ಮರಳಿ ಹೋಗಿಬಿಟ್ಟನು. ವಾಗ್ದೇವಿಯ ಹಿತಚಿಂತಕರಲ್ಲಿ ಪ್ರಥಮಸ್ಥಾನವನ್ನು ಹೊಂದಿದ ಬಾಲಮುಕುಂದಾಚಾರ್ಯನು ಕೆಲವು ವರ್ಷಗಳಿಂದ ಅಪಸ್ಮಾರ ವ್ಯಾಧಿ ಪೀಡಿತನಾದ ದೆಸೆಯಿಂದ ಅವನನ್ನು ನೋಡಲಿಕ್ಕೆ ವಾಗ್ದೇವಿಗೆ ಸಂದರ್ಭವಾಗದೆ ಅವರೊಳಗಿನ ಮಿತ್ರತ್ವವು ಅಂತ್ಯವಾದಂತಾಯಿತು. ಭೀಮಾಚಾರ್ಯನು ವೃದ್ಧಾಪ್ಯದಿಂದ ಮನೆ ಬಿಟ್ಟು ಹೊರಡುವ ಮನಸಿಲ್ಲದವನಾಗಿರುವ ಪ್ರಯುಕ್ತ ಅವನೊಬ್ಬನಿಂದಲೇ ಕಾರ್ಯ ಸಾಧನೆಯಾಗುವ ಆಶೆಯು ವ್ಯರ್ಥವಾದುದರಿಂದಲೂ ಅವನ ಒತ್ತಾಸೆಯನ್ನು ವಾಗ್ದೇವಿಯು ಅಪೇಕ್ಷಿಸಲಿಲ್ಲ. ಕಾರಭಾರಿಯ ಮತ್ತು ಕೊತ್ವಾಲನ ಪರಿಪೂರ್ಣವಾದ ದಯವು ದೊರಕಿರುವ ಅವಳಿಗೆ ಇನ್ನೊಬ್ಬನ ಸಾಹಾಯದ ಅಗತ್ಯವೇನದೆ? ಅಮೃತವೇ ಕೈವಶವಾದ ಮೇಲೆ ಕಲಗಚ್ಚು ಯಾರಿಗೂ ಪ್ರಿಯಕರವಾಗುವದುಂಟೇ?

ವಾಗ್ದೇವಿಯು ಮಠದಿಂದ ಹೊರಟುಹೋದ ಸಮಾಚಾರ ತಿಳಿಯ

ಲಾಗಿ ಚಂಚಲನೇತ್ರರು ಬಹಳ ಖಿನ್ನರಾಗಿ ಅಶ್ರುಜಲವನ್ನು ಧಾರಾಳವಾಗಿ ಸುರಿಸಿದರು. ತಾನು ಮೊದಲೇ ಜನರ ಅಪಹಾಸ್ಯಕ್ಕೆ ಗುರಿಯಾಗಿರುವಾಗಲೇ ಇದೊಂದು ನವೀನವಾದ ಪರಿಹಾಸ್ಯಕ್ಕೆ ಆಸ್ಪದ ಕೊಟ್ಟೆನೆಂಬ ಚಿಂತೆಯಿಂದ ಇರುವಾಗ ಎದುರಿಗೆ ಕಾಣಸಿಕ್ಕಿದ ತಿಪ್ಪಾಶಾಸ್ತ್ರಿಯನ್ನು ಸಮೀಪಕ್ಕೆ ಕರೆದು ಸಂಧಾನೋಪಾಯವನ್ನು ವರ್ತಿಸಿ ಬಾರೆಂದು ಆಜ್ಞಾಪಿಸೆ ಆಗಬಹುದು ಅವನು ವಾಗ್ದೇವಿಯ ಬಿಡಾರಕ್ಕೆ ಹೋದನು. ಅವಳ ಕೂಡೆ ತಾನು ಬಂದಿರುವ ಕಾರ್ಯದ ಸ್ವಭಾವವನ್ನು ತಿಳಿಸಿದನು. ಅವಳು ಅದಕ್ಕೆ ಕಿವಿ ಕೊಡಲೇ ಇಲ್ಲ. ಹೀಗಾಗಿ ಅವನು ಮೆಲ್ಲಗೆ ಅಲ್ಲಿಂದ ಎದ್ದು ಶೃಂಗಾರಿಯ ಕೂಡೆ ಕೊಂಚ ಸಮಯ ಸಂಭಾಷಣೆಮಾಡಿ ಮಠಕ್ಕೆ ಬಂದು ತಾನು ಹೋದ ಕೆಲಸ ಕೈಗೂಡಲಿಲ್ಲವೆಂದು ಯತಿಗಳಿಗೆ ಅರಿಕೆಮಾಡಿಕೊಳ್ಳುವದಕ್ಕೆ ನಾಚಿದನು. ಆಬಾಚಾರ್ಯನ ಮುಖಾಂತರ ಸಂಧಾನ ನಡೆಸಿ ನೋಡೆಂದು ಯತಿಗಳು ತಿಪ್ಪಾಶಾಸ್ತ್ರಿಗೆ ಹೇಳಿದರು. ತಿಪ್ಪಾಶಾಸ್ತ್ರಿಯು ಕೇಳಿದಾಗ ಆಬಾಚಾರ್ಯನು ಒಲ್ಲೆನೆಂದನು.

ವೆಂಕಟಪತಿ ಆಚಾರ್ಯನ ಅನಾರೋಗ್ಯವು ನಿತ್ಯವೂ ಹೆಚ್ಚುತ್ತಿರುವದೆಂಬ ನೆವನದಿಂದ ಮನೆಬಿಟ್ಟು ಹೊರಡುತ್ತಿದ್ದಿಲ್ಲ. ಅವನ ತಮ್ಮ ಶ್ರೀಧರಾಚಾರ್ಯನು ಪಾರುಪತ್ಯವನ್ನು ನಡೆಸಿಕೊಂಡು ಬರುವನಾದರೂ ಅವನ ಮೇಲೆ ಚಂಚಲನೇತ್ರರಿಗೆ ಹೆಚ್ಚು ಪ್ರೀತಿಯಾಗಲೀ ವಿಶ್ವಾಸವಾಗಲೀ ಇರಲಿಲ್ಲ. ವೆಂಕಟಪತಿ ಆಚಾರ್ಯನನ್ನು ಕರೆಕಳುಹಿಸದೆ ನಿರ್ವಾಹವಿಲ್ಲವೆಂದು ಕಂಡು ಬಂದುದರಿಂದ ಅವನನ್ನು ಕರೆಯುವದಕ್ಕೆ ಜನ ಬಿಡೋಣಾಯಿತು. ಅವನು ತಡೆಯದೆ ಬಂದು ಅಪ್ಪಣೆಯಾದ ಕಾರಣವೇನೆಂದು ಏನೂ ತಿಳಿಯದಂತೆ ವಿಚಾರಿಸಲು ವಾಗ್ದೇವಿಗೂ ತನಗೂ ನಡೆದ ವಾಚಾಟ ಮತ್ತು ಅವಳು ಕೂಡಲೇ ಮಠವನ್ನು ಬಿಟ್ಟುಹೋದ ಹದನವನ್ನು ಅವನಿಗೆ ಆದ್ಯಂತ ತಿಳಿಸಿ ಮಗುವಿನೋಪಾದಿ ಅಳಲಿಕ್ಕೆ ತೊಡಗಿದರು. ವೆಂಕಟಪತಿಗೆ ಬಹಳ ಕರಕರೆಯಾಯಿತು. ಪರಂತು ತನ್ನ ಧಣಿಯು ವಾಗ್ದೇವಿಗೆ ಕೊಟ್ಟ ಭಾಷೆಯಂತೆ ನಡೆಯುವದಕ್ಕೆ ಇದೇ ಸಕಾಲವಾಗಿರುತ್ತೆ. ಅವಳ ಅಪೇಕ್ಷೆಯನ್ನು ಪೂರೈಸಲಿಕ್ಕೆ ಅನಾವಶ್ಯಕ ಅಡ್ಡಿಹೇಳಿದ್ದು ನ್ಯಾಯವೆಂತ ತಾನು ತಿಳಕೊಳ್ಳುವದಿಲ್ಲವಾಗಿ ಅವನು ಖಂಡಿತವಾಗಿ ಹೇಳಿದನು.

ಚಂಚಲ—"ಈಗಲೇ ಆಶ್ರಮ ಕೊಡಬೇಕೆಂದು ನಿನ್ನದೂ ತಾತ್ಪರ್ಯ

ವೇನಪ್ಪಾ! ಅಷ್ಟು ಅವಸರವ್ಯಾತಕ್ಕೋ ತಿಳಿಯದು."

ವೆಂಕಟಪತಿ—"ಸನ್ನಿಧಿಯ ಅಭಿಪ್ರಾಯ ಹ್ಯಾಗೋ ತಿಡಿಯದು."

ಚಂಚಲ—"ನಮಗೆ ಅಂತ್ಯಕಾಲ ಸಮೀಪಿಸುವಾಗ ಆಶ್ರಮ ಕೊಟ್ಟು ಬಿಡೋಣ. ಈಗಲೇ ಏನು ಅಗತ್ಯ?"

ವೆಂಕಟಪತಿ—ಅಂಥಾ ಕಾಲದ ಬರುವಿಕೆಯು ಬಹಳ ಮುಂದಿರಲಿ. ಆವಾಗ ತಮ್ಮ ಸಂಕಲ್ಪ ತೀರಿಸುವುದಕ್ಕೆ ಸಾಕಷ್ಟು ಸಮಯ ದೊರಕುವ ದೆಂಬ ನಿಶ್ಚಯ ಹ್ಯಾಗೆ? ದೊರಕುವದೆನ್ನುವಾ. ಆಗ್ಗೆ ಸೂರ್ಯನಾರಾಯ ಣನ ಪ್ರಾಯವು ಬಾಲಸನ್ಯಾಸ ಪಡೆಯುವದಕ್ಕೆ ಅಧಿಕವಾಗಿರದೆ? ಆಶ್ರಮ ಕೊಡತಕ್ಕ ಪ್ರಾಯವು ಈಗಲೇ ಒದಗಿರುತ್ತದೆ. ಪರಾಕೆ! ತಾವು ವಾಗ್ದೇವಿಗೆ ಕೊಟ್ಟ ಉತ್ತರವು ಸಂದೇಹಕರವಾಗಿ ತೋರುವ ಕಾರಣದಿಂದಲೇ ಅವಳು ತಮ್ಮನ್ನಗಲಿ ಹೋಗಬೇಕಾಯಿತು. ನಾಲಿಗೆ ಮೀರಿದ ಬಳಿಕ ಅನ್ಯಥಾ ವರ್ತಿಸುವದು ಇಹಪರದಲ್ಲಿಯೂ ದೋಷಕರವಾದದ್ದು ಅಪಕೀರ್ತಿ ಬರುವ ಹಾಗಿರುವ ಈ ಆಶಾಭಂಗವು ವಾಗ್ದೇವಿಗೆ ಸನ್ನಿಧಿಯಿಂದ ಆಗಕೂಡದೆಂದು ನನ್ನ ವಿಜ್ಞಾಪನೆ."

ಚಂಚಲ— "ವೆಂಕಟಪತಿಯೇ! ನಿನ್ನ ಮಾತು ನ್ಯಾಯವಾದದ್ದೆ. ಲೋಕಾಪವಾದಕ್ಕೆ ಹೆದರಬೇಕಾಗುತ್ತದಷ್ಟೇ. ಅದನ್ನು ಗಣ್ಯಮಾಡದೆ ಆಶ್ರಮ ಒಂದು ವೇಳೆ ಕೊಟ್ಟುಬಿಡೋಣವೆಂದರೆ ಉಳಕಿ ಮಠದವರು ಒಗ್ಗ ಟ್ಟಾಗಿ ಕೀಟಕ ಜನರ ಮಾತು ಕೇಳಿ ನಮ್ಮ ಮೇಲೆ ಸೊಂಟಕಟ್ಟಿದರೆ ಮಾಡತಕ್ಕದ್ದೇನು?"

ವೆಂಕಟಪತಿ— "ಸನ್ನಿಧಿಯ ಅಪ್ಪಣೆಯಾದರೆ ಖಡಾಖಡಿಯಾಗಿ ಒಂದು ಮಾತು ಹೇಳಿಬಿಡುತ್ತೇನೆ. ಆಕಾಶವೇ ಜರಿದು ಬಿದ್ದರೂ ಪಟ್ಟದ ದೇವರ ಮುಂದೆ ಪ್ರಮಾಣಮಾಡಿಕೊಟ್ಟ ವಾಗ್ದತ್ತ ಹುಸಿಯಾಗ ಕೂಡದು. ಏನು ಬಂದರೂ ಬರಲಿ, ದೇವರು ಸುಧಾರಿಸುವನು. ಮಠದಲ್ಲಿ ಚಿಕ್ಕಾಸೂ ಉಳಿಯದೆ ಖರ್ಚಾದರೂ ಸರಿ. ವಾಗ್ದೇವಿಗೆ ಕೊಟ್ಟ ಭಾಷೆಯನ್ನು ಸಲ್ಲಿಸಲೇ ಬೇಕು. ಇದು ನನ್ನ ಮತ. ತಮ್ಮ ಅನುಮತಿಯನ್ನು ಮುಂದಾಗಿ ಕೇಳಿ ಕೊಂಡು ನಾನು ಅವಳನ್ನು ಮನೆಯಿಂದ ಹೊರಡಿಸಿ ತಂದು ತಮ್ಮ ಪಾದಕ್ಕೆ ಅರ್ಪಿಸಿದೆ. ತತ್ಪೂರ್ವದಲ್ಲಿ ನಾನು ಮಾಡಿದ ಪ್ರಸಂಗವು ಸನ್ನಿಧಿಗೆ ಹಿತವಾಗಿ ತೋರಲಿಲ್ಲ. ಹಿಂದೆ ಮಾಡಬೇಕಾಗಿರುತ್ತಿದ್ದ ಜಾಗ್ರತೆ ಈಗ ಮಾಡಲಿಕ್ಕೆ

ನೋಡುವದು ಅನುಚಿತ. ಲೋಕಾಪವಾದಕ್ಕೆ ಆಸ್ಪದ ಕೊಡುವದಕ್ಕೆ ಇನ್ನೇನುಬೇಕು? ವಾಗ್ದೇವಿಯನ್ನು ಮೋಸಗೊಳಿಸಿದರೆ ಶ್ರೀಪಾದಂಗಳವರಿಗೆ ಬರುವ ದೋಷದ ಅರೆಪಾಸಿಗೆ ನಾನು ಸಹಾ ಬಾಧ್ಯನಾಗುತ್ತೇನೆ. ಹ್ಯಾಗೆಂದು ನಾನು ವಿವರಿಸಿ ಹೇಳತಕ್ಕ ಅಗತ್ಯವೇನದೆ? ಸನ್ನಿಧಿಗೆ ಪೂರ್ಣ ಪರಾಂಬರಿಕೆ ಇರುವ ಪ್ರಸ್ತಾಪವನ್ನು ಪುನಃ ಎತ್ತಬೇಕೇನು?" ವೆಂಕಟಪತಿ ಆಚಾರ್ಯನು ಆಡಿದ ಮಾತುಗಳು ಚಂಚಲನೇತ್ರರಿಗೆ ಸಾಣೆಗೆ ಮಸಗಿದ ಬಾಣಗಳಂತೆ ಮನೋವೇದನೆ ಉಂಟು ಮಾಡಿದವು "ವಾಗ್ದೇವಿಯನ್ನು ತಾತ್ಸಾರ ಮಾಡಿ ಬಿಟ್ಟರೆ ಅವಳಿಗೆ ಕ್ರೋಧ ಹುಟ್ಟಿ ರಾಜದ್ವಾರದವರೆಗೆ ಮುಂದರಿಸಲಿಕ್ಕೆ ಅವಳು ಉದ್ಯುಕ್ತಳಾದರೆ ಮಠದ ಗತಿ ಹ್ಯಾಗಾಗುವದೆಂದು ಬುದ್ಧಿಯುಳ್ಳವರು ಗ್ರಹಿಸಿಕೊಳ್ಳಬಹುದು. ಸೂರ್ಯನಾರಾಯಣನಿಗೆ ಆಶ್ರಮ ಕೊಟ್ಟರೆ ಶತ್ರುಗಳ ಉಪಟಳದ ದೆಸೆಯಿಂದ ಹಣ ವೆಚ್ಚವಾಗುವ ಸಂಭವ ಒದಗಲಿಕ್ಕಿಲ್ಲವೆನ್ನಕೂಡದು. ಹಾಗೆಯೇ ವಾಗ್ದೇವಿಯ ಸಿಟ್ಟಿನಿಂದ ದ್ರವ್ಯನಷ್ಟವಾಗಲಾರದೆನ್ನಬಹುದೇ? ಉಭಯ ಸಂಕಟ ಬಂದೊದಗಿದಾಗ್ಗೆ ಕಡಿಮೆ ನಷ್ಟ ಮತ್ತು ಕಡಿಮೆ ಕಷ್ಟವುಳ್ಳ ಮಾರ್ಗವನ್ನು ಹಿಡಿಯಬೇಕು. ಗುರುಗಳ ಘನತೆಗೆ ಯೋಗ್ಯವಲ್ಲದ ರೀತಿಯಲ್ಲಿ ಎಷ್ಟು ಸಣ್ಣ ಕಾರ್ಯವನ್ನಾಗಲೀ ಮಾಡಕೂಡದು" ಹೀಗೆ ನ್ಯಾಯವಾದ ತರ್ಕದಿಂದ ವೆಂಕಟಪತಿ ಆಚಾರ್ಯನು ಚಂಚಲನೇತ್ರರ ಮನಸ್ಸಿಗೆ ಮುಸುಕಿದ ಮೊಬ್ಬನ್ನು ಓಡಿಸಿ ಅವರಿಗೆ ನಾಚಿಕೆಯುಂಟಾಗುವಂತೆ ಮಾಡಿದನು. "ನಿನ್ನ ಬುದ್ಧಿಗೆ ತೋಚುವಂತೆ ವರ್ತಿಸಪ್ಪಾ! ವೆಂಕಟಪತಿ, ನನ್ನ ಮೇಲೆ ಮತ್ತೆ ಮಾತಿನವಾಸಿ ಇಡಬೇಡ" ಎಂದು ಚಂಚಲನೇತ್ರರು ನಿಟ್ಟುಸಿರುಬಿಟ್ಟು ಖಂಡಿತವಾದ ಉತ್ತರ ಕೊಟ್ಟರು.

ಆವಾಗಲೇ ವೆಂಕಟಪತಿ ಆಚಾರ್ಯನು ಅಂತರಂಗದಲ್ಲಿ ರವಷ್ಟು ಮಾತಾಡಿ ವಾಗ್ದೇವಿಯ ಬಿಡಾರಕ್ಕೆ ತಾನೊಬ್ಬನೇ ಹೊರಟುಹೋದನು ದೂರದಿಂದ ವೆಂಕಟಪತಿಯನ್ನು ನೋಡುತ್ತಿದ್ದ ವಾಗ್ದೇವಿಯು ಇಷ್ಟುಹೊತ್ತು ತನ್ನ ಎಡ ಕಣ್ಣು ಹಾರುತ್ತಾ ಇದ್ದ ಶುಭಶಕುನವು ಈಡೇರುವದೆಂಬ ಹರುಷದಿಂದ ಆಚಾರ್ಯನನ್ನು ಅತಿಶಯವಾದ ಉಪಚಾರಗಳಿಂದ ಎದುರುಗೊಂಡು ಆಸನದಲ್ಲಿ ಕುಳ್ಳಿರಿಸಿ ತನ್ನ ಪೂರ್ವ ಸ್ಥಿತಿಯು ನೆನಪಿಗೆ ಬರುವ ಕಾಲ ಒದಗಿದಾಗ ಮರೆಯದೆ ವಿದುರನ ಮನೆಗೆ ಶ್ರೀಕೃಷ್ಣಸ್ವಾಮಿಯು ಬಂದ ಹಾಗೆ ಸವಾರಿ ಚಿತ್ತೈಸಿದ್ದು ತನ್ನ ಪೂರ್ವ ಪುಣ್ಯವೆಂದಳು. ವೆಂಕಟಪತಿಯು

ನಸುನಗುತ್ತಾ—"ಯಾಕಪ್ಪಾ! ಮಠದಿಂದ ಹೊರಟು ಬಂದಿ?" ಎಂದು ಕೇಳಿದನು. "ಏನೂ ಗೊತ್ತಿಲ್ಲದವರಂತೆ ಪ್ರಶ್ನೆಮಾಡುತ್ತೀರಾ?" ಎಂದು ವಾಗ್ದೇವಿಯು ಪುನಃ ಪ್ರಶ್ನೆಮಾಡಿದಳು. "ಗತಗೋಷ್ಟಿ ಹಾಗಿರಲಿ. ಈಗಲೇಹೊಗಡು. ಮಠಕ್ಕೆ ಮರಳಿ ಬಾ; ನಿನ್ನ ವಾಂಛಿತ ದೊರಿಯಲಿಕ್ಕೆ ಸರ್ವಥಾ ಅಡ್ಡಿಯುಂಟಾಗದು" ಎಂದು ವೆಂಕಟಪತಿ ಆಚಾರ್ಯನು ಹೇಳಿದನು. ವಾಗ್ದೇವಿಯು ಪ್ರತಿವಾದಿಸದೆ ಹೊರಡಲಿಕ್ಕೆ ಅನುವಾದಳು. ಶೃಂಗಾರಿಯು ಕೂಡಲೇ ಹೊರಡುವ ಮನಸ್ಸಿಲ್ಲದೆ ಸಂದು ಮೂಲೆಯಲ್ಲಿ ನಿಂತು ನೇಮುರಾಜನ ಭಂಡಸಾಲೆಯಲ್ಲಿ ಅವನ ಬೈಟಕಿನ ಕಡೆಗೆ ಹಿಣಕಿ ನೋಡುತ್ತ ಕೊಂಚ ಸಾವಕಾಶ ಮಾಡುವ ಬಗೆಯನ್ನು ಕಂಡ ವಾಗ್ದೇವಿಯು ರವಷ್ಟು ಹೆದರಿಸಿದ ಹಾಗೆ ಮಾಡಿದಳು. ಅವಳು ಒಡನೆ ಹೊರಟಳು. ವೆಂಕಟಪತಿಯು ಭಂಡಿಯಲ್ಲಿ ಅವರಿಬ್ಬರನ್ನು ಕೂಡ್ರಿಸಿ ತಾನು ಪಾದಚಾರಿಯಾಗಿ ಮಠಕ್ಕೆ ಬಂದು ವಾಗ್ದೇವಿಯನ್ನು ಚಂಚಲನೇತ್ರರ ಸಮ್ಮುಖಕ್ಕೆ ಕರತಂದು ಅವರೊಳಗೆ ಪೂರ್ಣ ವಿವೇಕ ಉಂಟಾಗುವಂತೆ ಮಾಡಿ ಮರುದಿನ ಬರುವೆನೆಂದು ಮನೆಗೆ ಹೋದನು.

ಮರುದಿವಸ ವೆಂಕಟಪತಿ ಆಚಾರ್ಯನು ಮಠಕ್ಕೆ ಬಂದು ತಿಪ್ಪಾಶಾಸ್ತ್ರಿ ಮತ್ತು ಅವನಿಗಿಂತಲೂ ಜ್ಯೋತಿಷ್ಯದಲ್ಲಿ ಹೆಚ್ಚು ಪಾರಂಗತರಾದವರನ್ನು ಕರೆಸಿ ಅವರ ತರ್ಕದಿಂದ ನಿರ್ಣಯಿಸಿದ ಮುಹೂರ್ತವನ್ನು ಒಪ್ಪಿಕೊಂಡು ಆ ಮುಹೂರ್ತಕ್ಕೆ ಮಠದ ಪದ್ಧತಿಗನುಸಾರವಾಗಿ ಸೂರ್ಯನಾರಾಯಣನಿಗೆ ಆಶ್ರಮ ಕೊಡುವದಕ್ಕೋಸ್ಕರ ಬೇಕಾದ ಸನ್ನಾಹಗಳು ಸರಿಯಾಗಿ ಆಗುವ ವಿಷಯದಲ್ಲಿ ಮುಂಜಾಗ್ರತೆಯನ್ನು ತಕ್ಕೊಂಡನು. ವಾಗ್ದೇವಿಯು ಈ ವದಂತಿಯನ್ನು ಕೇಳಿ ಆನಂದದಲ್ಲಿ ಮುಳುಗಿದಳು. ಭೀಮಾಜಿಯು ಅವಳನ್ನು ಕಂಡು ಅವಳ ಮನಸ್ಸಿಗೆ ಸರಿಯಾಗಿ ಯತಿಗಳು ನಡಕೊಳ್ಳಲಿಕ್ಕೆ ಒಡಂಬಟ್ಟರೆಂಬ ಸಂಹರ್ಷ ತಡೆಯದೆ ಹೋದನು. ಆ ಶುಭವಾರ್ತೆಯು ಶಾಬಯಗೆ ತಿಳಿದಾಗ ಆ ದೊಡ್ಡ ಉದ್ಯೋಗಸ್ಥನು ಹರ್ಷಿತನಾದನು. ಆಶ್ರಮ ಕೊಡುವದಕ್ಕೆ ನೇಮಿಸಿದ ದಿನದ ಎರಡು ಮೂರು ದಿನಗಳ ಮುಂಚೆಯೇ ವಾಗ್ದೇವಿಯು ಪ್ರೀತಿಕರವಾದ ವಸ್ತುಗಳನ್ನು ಹಿಡಿಸಿಕೊಂಡು ಶಾಬಯನ ಮನೆಗೆ ಹೋಗಿ ಅವನನ್ನು ಕಂಡು ಹೆಚ್ಚು ಹೊತ್ತು ಆಹ್ಲಾದಕರವಾಗಿ ಸಂಭಾಷಣೆ ಮಾಡುತ್ತಾ ಮುಂದೆ ಬರಬಹುದಾದ ಸಂಕಷ್ಟ ನಿವಾರಣೆಯಾಗುವ ಪ್ರಮೇಯದಲ್ಲಿ ಸಂಪೂರ್ಣವಾದ ಸಹಾಯ

ಮಾಡುವೆನೆಂಬ ವಾಗ್ದಾನವನ್ನು ಸುಲಭವಾಗಿ ಅವನಿಂದ ಪಡಕೊಂಡು ಮನೆಗೆ ಬಂದಳು.

ಮಠದ ಸಂಪ್ರದಾಯಕ್ಕನುಗುಣವಾಗಿ ಶಿಷ್ಯವರ್ಗಕ್ಕೂ ಬೇರೆ ಪ್ರಮುಖ ಗ್ರಹಸ್ತರಿಗೂ ಅಭಿಮಂತ್ರಣ ಕೊಡೋಣಾಯಿತು. ಇಟ್ಟ ಲಗ್ನಕ್ಕೆ ಕೆಲವು ದಿವಸಗಳ ಮೊದಲು ಸೂರ್ಯನಾರಾಯಣನಿಗೆ ಚೈತನ್ಯಸ್ತರು ತಮ್ಮ ತಮ್ಮ ಮನೆಗಳಿಗೆ ಕರಸಿ ದೊಡ್ಡ ಔತಣ ಉಡುಗೊರೆ ಉಪಚಾರಾದಿಗಳಿಂದ ಸತ್ಕರಿಸಿ ಮಠದ ಕೃಪಾವಲೋಕನಕ್ಕೆ ಪಾತ್ರರಾದರು. ವೆಂಕಟಪತಿ ಆಚಾರ್ಯನು ತನ್ನ ಮುಂದಿನ ಧನಿಯನ್ನು ಮನೆಗೆ ಭಾರಿ ಗದ್ದಲದಿಂದ ಕರಿಸಿಕೊಂಡು, ಉತ್ಕೃಷ್ಟವಾದ ಔತಣವನ್ನು ಮಾಡಿಸಿ ಹೆಚ್ಚು ಮೌಲ್ಯದ ಉಚಿತಗಳನ್ನು ಕೊಟ್ಟು ಚಂಚಲನೇತ್ರರ ಅನುಗ್ರಹಕ್ಕೆ ಅರ್ಹನಾದನು. ಕುಮುದಪುರದ ನಿವಾಸಿಕರಲ್ಲಿ ಅನ್ಯಮತದ ಶಿಷ್ಯರಾದ ಭೂಸುರರೂ ಶಕ್ತ್ಯಾನುಸಾರವಾಗಿ ಸೂರ್ಯನಾರಾಯಣನನ್ನು ಔತಣೋಪಚಾರಗಳಿಂದ ಸಂತುಷ್ಟಿಪಡಿಸಿ ಯತಿಗಳ ಶ್ಲಾಘನೆಗೆ ಯೋಗ್ಯರಾದರು. ಒಬ್ಬನಿಂದಲೇ ಪೂರೈಸದ ಸಂದಿನಲ್ಲಿ ಕೆಲವರು ಒಟ್ಟುಕೂಡಿ ದೇವಸ್ಥಾನ ಮುಂತಾದ ತಾವಿನಲ್ಲಿ ಅವನಿಗೆ ಭೋಜನಾದಿ ಸತ್ಕಾರಗಳಿಂದ ಸಂತೃಪ್ತಿಪಡಿಸಿ ಚಂಚಲನೇತ್ರರಿಗೂ ವಾಗ್ದೇವಿಗೂ ಪ್ರೇಮಪಾತ್ರರಾದರು. ಸದ್ಗುಣಭರಿತನಾದ ಸೂರ್ಯನಾರಾಯಣನು ಪುರವಾಸಿ ಸಕಲರಿಗೂ ಪ್ರೇಮಿಯಾಗಿರುವ ಕಾರಣ ಅನುಕೂಲವಿರುವಷ್ಟರಮಟ್ಟಿಗೆ ಒಬ್ಬನಾದರೂ ತನ್ನ ಕಡೆಯಿಂದ ಅವನಿಗೆ ಸಾಭಿಮಾನವಾಗುವದರಲ್ಲಿ ಕಡಿಮೆ ಆಸಕ್ತಿಯುಳ್ಳವನೆಂಬ ಅಪವಾದಕ್ಕೆ ಬೀಳಲಿಲ್ಲ. ಆಶ್ರಮ ಹೊಂದುವ ತನಕ ಈ ಒಳ್ಳೇಹುಡುಗನು ಪಟ್ಟಣದಲ್ಲಿ ತುಂಬಾ ಸಂತೋಷದಿಂದ ಆದರಣೆಯನ್ನು ಹೆಚ್ಚು ಕಡಿಮೆ ಸರ್ವರಿಂದಲೂ ಪಡಕೊಂಡು ಮಠಾಧಿಪತಿಯಾಗಲಿಕ್ಕೆ ತಕ್ಕ ಪುರುಷನೆಂದು ಬಹುಜನರಿಂದ ಹೇಳಿಸಿಕೊಂಡು ನಿಶ್ಚೈಸಲ್ಪಟ್ಟ ಲಗ್ನದಲ್ಲಿ ಸನ್ಯಾಸವನ್ನು ಹೊಂದುವ ನಿರೀಕ್ಷೆಯಲ್ಲಿ ಸುಖವಾಗಿ ಕಾಲವನ್ನು ಕಳೆದನು.

ವಾಗ್ದೇವಿಯ ಪರಿಮುಖ ಮಠದ ದ್ರವ್ಯದ ಮೇಲೆ ವಾತ್ಸಲ್ಯ ಇಟ್ಟಿರುತ್ತಿದ್ದ ಭೀಮಾಜಿಯೂ ಶಾಬಯನೂ ಈ ವೇಳೆ ತಮ್ಮ ಕರ್ತವ್ಯವನ್ನು ಮರೆತಿರಲಿಲ್ಲ. ತಿಪ್ಪಾಶಾಸ್ತ್ರಿಯ ಮನೆಯಲ್ಲಿ ಅವರಿಬ್ಬರ ಕಡೆಯಿಂದಲೂ ಬೇರೆ ಬೇರೆ ದಿವಸಗಳಲ್ಲಿ ಯಥೋಚಿತವಾಗಿ ಸೂರ್ಯನಾರಾಯಣನಿಗೆ ಔತಣ

ಗಳಾದುವು. ಅವರ ಪದವಿಗೆ ಯೋಗ್ಯವಾದ ಉಚಿತಗಳನ್ನು ಕೊಡುವದರ ಮೂಲಕ ಅವರೀರ್ವರೂ ವಾಗ್ದೇವಿಯ ಪ್ರೇಮಕ್ಕೆ ಭಾಗಿಗಳಾದರು. ನೇಮು ರಾಜಸೆಟ್ಟಿಯು ಹೆಸರುಹೋದ ಸಾವಕಾರನಾಗಿ ಕುಮುದಪುರದಲ್ಲಿ ಆಢ್ಯ ಮನುಷ್ಯನಾಗಿ ಕೊಂಚ ಕೃಪಣತ್ವ ಉಳ್ಳವನಾದರೂ ತಾನು ಮಾಡಬೇಕಾದ ಉಪಚಾರವನ್ನು ಮರೆಯದೆ ಅಂಜನೇಯ ದೇವಸ್ಥಾನದಲ್ಲಿ ಊಟದ ರುಚಿ ಚೆನ್ನಾಗಿ ಬಲ್ಲವರು ಹೊಗಳುವಂತೆ ಔತಣವನ್ನು ಮಾಡಿಸಿ ಸೂರ್ಯನಾರಾಯಣನನ್ನು ದಣಿಸಿದನು. ಆ ಕಾಲದಲ್ಲಿ ಆ ದೊಡ್ಡವರ್ತಕನು ಧಾರಾಳವಾಗಿ ಕೊಟ್ಟ ಉತ್ಕೃಷ್ಟವಾದ ಉಡುಗೊರೆಯನ್ನು ಕುರಿತು ಪುರನಿವಾಸಿಗಳು ಆಗಾಗ್ಗೆ ಶ್ಲಾಘನೀಯವಾಗಿ ಮಾತಾಡುತ್ತಿರುವವರಾದರು. ವಾಗ್ದೇವಿಯು ಇಂಥಾ ಶುಭ ಸಮಯದಲ್ಲಿ ಹೆಚ್ಚಳಪಡಬೇಕಲ್ಲವೇ? ಹೌದು; ಅವಳು ಪರಿಪೂರ್ಣವಾಗಿ ಆನಂದದ ಸಾಗರದಲ್ಲಿ ಮುಳುಗಿದಳು. ಕುಮುದಪುರಮಠದ ಸಂಸ್ಥಾನವು ಸಣ್ಣದಾದ್ದಲ್ಲ. ಹೆಸರುಹೋದ ಪುರವೇಸರಿ. ಅದರ ಆಧಿಪತ್ಯವು ತನ್ನ ಕುಮಾರನಿಗೆ ದೊರೆಯುವ ಸಂಭವ ಒದಗಿರುವ ಕಾಲದಲ್ಲಿ ಸಂತೋಷಪಡುವದು ಅಸಹಜವಾದ್ದಲ್ಲ. ಚಂಚಲನೇತ್ರರು ಪ್ರಥಮತಃ ಈ ಪ್ರಮೇಯ ನಿರ್ಲಕ್ಷ್ಯ ಮಾಡಿಬಿಟ್ಟರೂ ವೆಂಕಟಪತಿ ಆಚಾರ್ಯನು ಅವರಲ್ಲಿ ವಿವೇಕ ಹುಟ್ಟುವಂತೆ ಮಾಡಿದ ಬಳಿಕ ಅವರ ಮನೋಭಾವವು ಪೂರ್ಣವಾಗಿ ಮಾರ್ಪಾಟಾಯಿತು. ವಾಗ್ದೇವಿಯಲ್ಲಿ ತನಗೆ ಹುಟ್ಟಿದ ಮಗನನ್ನು ಪಟ್ಟಕ್ಕೆ ನೇಮಿಸುವದು ಧರ್ಮವೆಂದು ಸಮ್ಮತಿಪಟ್ಟು ಈ ಶುಭಕಾರ್ಯವು ಚಂದವಾಗಿ ನೆರವೇರುವದಕ್ಕೆ ಅವಶ್ಯವೆಂದು ತೋರಿದ ಎಲ್ಲಾ ಸಾಧನೆಗಳನ್ನು ಹಣದ ಮುಖನೋಡದೆ ಒದಗಿಸಿ ಕೊಳ್ಳುವದರಲ್ಲಿ ಸ್ವತಃ ಹೆಚ್ಚು ಪ್ರಯಾಸಪಟ್ಟರು.

## ಮೂವತ್ತೇಳು

ಸೂರ್ಯನಾರಾಯಣನಿಗೆ ಚಂಚಲನೇತ್ರರು ಸನ್ಯಾಸವನ್ನು ಕೊಟ್ಟು ತನ್ನ ಉತ್ತರಾಧಿಕಾರಿಯಾಗಿ ನೇಮಿಸುವರೆಂಬ ಜನ್ಯವು ದಶದಿಕ್ಕುಗಳಲ್ಲಿಯೂ ತುಂಬಿತು. ವೇದವ್ಯಾಸ ಉಪಾಧ್ಯನ ಕಿವಿಗೂ ಅದು ಬೀಳದೆ ಹೋಗುವದುಂಟೇ! ವಾಗ್ದೇವಿಯು ತನ್ನ ಪತ್ನಿಯನ್ನು ಜರದು ಮಾತಾಡಿದ ಸಿಟ್ಟು ಅವನ ಒಡಲನ್ನು ಬಿಟ್ಟು ಹೋಗಿರಲಿಲ್ಲ. ಹಾಗೂ ಪೇಷ್ಕಾರನು ತನ್ನನ್ನೂ

ತನ್ನ ಅನುಜನನ್ನೂ ಸೆರೆಮನೆಯಲ್ಲಿ ಇರಿಸಲಿಕ್ಕೆ ವಾಗ್ದೇವಿಯೇ ಮೂಲ ಪುರುಷಳೆಂಬ ನೆನಪು ಚಂದಾಗಿ ಇತ್ತು. ಒಮ್ಮೆ ಸೂರ್ಯನಾರಾಯಣನಿಗೆ ಆಶ್ರಮವಾದರೆ ವಾಗ್ದೇವಿಯ ದರ್ಪವನ್ನು ತಗ್ಗಿಸುವದು ಸುಲಭವಾದ ಕೆಲಸವಲ್ಲವೆಂದು ಅವನಿಗೆ ಪೂರ್ಣವಾಗಿ ಗೊತ್ತಿತ್ತು. ಪರಂತು ವಿಘ್ನವನ್ನು ಒಡ್ಡುವ ಉಪಾಯ ನಡಸುವ ಬಗೆ ತಿಳಿಯದೆ ಇದ್ದರೂ ನಿರುದ್ಯೋಗಿಯಾಗಿ ರಲಿಕ್ಕೆ ಅವನಿಗೆ ಮನಸ್ಸು ಬರಲಿಲ್ಲ. ಕುಮುದಪುರದ ಗೃಹಸ್ಥರಲ್ಲಿ ಒಬ್ಬನ ಮನೆಯಾದರೂ ಬಿಡದೆ ನಡದಾಡಿದರೂ ಅವನ ಮಾತಿಗೆ ಯಾರೂ ಕಿವಿ ಕೊಡಲಿಲ್ಲ. ಬಾಲಮುಕುಂದಾಚಾರ್ಯನು ಕೇವಲ ರೋಗಿಯಾಗಿ ಮೃತಾ ಸನದಲ್ಲಿ ಇದ್ದವನ ಅವಸ್ಥೆಯುಳ್ಳವನಾದ ಪ್ರಯುಕ್ತ ವಾಗ್ದೇವಿಯ ಬಲ ಮುರಿದಂತಾಯಿತು. ಜೆಂಬಲಕ್ಕೆ ಸಾಮಾನ್ಯ ಬುದ್ಧಿಯುಳ್ಳವನೊಬ್ಬನು ದೊರಕಿದರೆ ತನ್ನ ಶತ್ರುಗಳನ್ನು ಸದೆಬಡಿಯುವೆನೆಂಬ ಧೈರ್ಯದಿಂದ ಪುರು ಷನನ್ನು ಹುಡುಕುವವರಲ್ಲಿ ಬಿದ್ದನು.

ಆಗ ಅದೇ ಪಟ್ಟಣದ ಉಪಗ್ರಾಮವಾದ ಕಂಬನಿಹಳ್ಳಿಯಲ್ಲಿ ರಾಮ ದಾಸ ರಾಯನೆಂಬ ಹೆಸರಿನ ಯೌವನಸ್ಥನು ಚನ್ನಾಗಿ ಕಲಿತು ಬುದ್ಧಿವಂತ ನಾಗಿ ವಕೀಲಿ ಉದ್ಯೋಗವನ್ನು ನಡೆಸಲಿಕ್ಕೆ ಯೋಗ್ಯನೆಂದು ಸರ್ಕಾರದಿಂದ ಅಧಿಕಾರಪತ್ರಹೊಂದಿ ಒಂದು ದೊಡ್ಡ ಪ್ರಕರಣ ಸಿಕ್ಕಿದರೆ ಒಂದೇ ಸಾರಿ ಹಣವನ್ನು ಪೆಟ್ಟಿಗೆಯಲ್ಲಿ ತುಂಬಿಸಿಬಿಡುವದಕ್ಕೆ ಅತ್ಯಾಶೆಯಿಂದ ಕಾದು ಕೊಂಡಿದ್ದನು. ಈ ಹೊಸವಕೀಲಗೆ ವೇದವ್ಯಾಸ ಉಪಾಧ್ಯನು ಗಂಟು ಬಿದ್ದನು. ಆದರೆ ಅವನ ಕೈಯಲ್ಲಿ ಕಾಸೊಂದು ಇಲ್ಲವಷ್ಟೇ. ಇದ್ದರೂ ಸರ್ವಥಾ ಬಿಡುವವನಲ್ಲ. ಮೊತ್ತಮೊದಲು ಹಿಡಿಯುವ ಮೊಕದ್ದಮೆಯಲ್ಲಿ ಧರ್ಮಕ್ಕೆ ವ್ಯವಹರಿಸಿ ಹೆಸರುಪಡೆಯುವದು ಉತ್ತಮವಾದ ವಶೀಕರಣವೆಂದು ವೇದ ವ್ಯಾಸ ಉಪಾಧ್ಯನು ರಾಮದಾಸಗೆ ಬುದ್ಧಿ ಉಪದೇಶಕೊಟ್ಟರೂ ಬೋಣಿ ಯಾಗದೆ ಕಡಕೊಡುವದು ಹ್ಯಾಗೆಂದು ಅಂಗಡಿಗಾರರು ಹೇಳುವ ರೀತಿಯಲ್ಲಿ ಹೊಸವಕೀಲನು ಗುಣುಗುಟ್ಟಲೆಸಗಿದನು. ಲಾಭದ ಮೇಲೆ ದೃಷ್ಟಿ ಇಟ್ಟು, ಹಟಮಾಡಿದರೆ ತಾನು ಬೇರೆ ಯಾರಿಗಾದರೂ ಹುಡುಕಿ ತೆಗೆಯುವದೇ ಸರಿ ಕೀರ್ತಿಯನ್ನೂ ಹಣವನ್ನೂ ಸಮುಚ್ಚಯವಾಗಿಯೂ ಪ್ರತ್ಯೇಕವಾಗಿಯೂ ಸಂಪಾದಿಸಲಿಕ್ಕೆ ಆತುರವುಳ್ಳವನು ತಾಳ್ಮೆಯಿಂದ ಉದ್ಯೋಗವನ್ನು ನಿರ್ವಹಿ ಸಿದರೆ ಮುಂದೆ ಒಂದೇಸರ್ತಿ ಹಣದ ರಾಶಿಯೇ ಸಿಕ್ಕುವ ಸಂಭವವಿದೆ. ಅವ

ಸರವಮಾಡಿ ವೃದ್ಧಿಯನ್ನು ಹಾಳುಮಾಡಿಕೊಳ್ಳಬೇಡವೆಂದು ವೇದವ್ಯಾಸನು ಹೇಳಿದ ಜ್ಞಾನವು ಕೊನೆಗೆ ರಾಮದಾಸಗೆ ಸಮ್ಮತವಾಯಿತು.

"ಹಾಗಾದರೆ ನಿನ್ನ ಬುದ್ಧಿವಂತಿಗೆಯ ಪರೀಕ್ಷೆ ಈಗಲೇ ನೋಡಬೇಕು" ಎಂದು ವೇದವ್ಯಾಸನು ಹೇಳಿದನು. ಹೊಸವಕೀಲನು ದೊಡ್ಡ ದೊಡ್ಡ ಕಾನೂನಿನ ಪುಸ್ತಕಗಳನ್ನು ಅತ್ತಿತ್ತ ಮಗುಚಿ ನಾಲ್ಕುತಾವು ಕಾಗದ ಖರ್ಚು ಮಾಡಿ ಒಂದು ಮನವಿಯ ಮಸೂದೆಯನ್ನು ಸಮನಿಸಿ ವೇದವ್ಯಾಸಗೆ ಓದಿ ಹೇಳಿದನು. ಉಪಾಧ್ಯನು ಅದರ ಒಕ್ಕಣೆಯಚಾತುರ್ಯಕ್ಕೆ ಮೆಚ್ಚಿಹೋದನು. ಅದರ ನಕಲು ಮಾಡುವದಕ್ಕೆ ಹತ್ತು ಹಾಳೆ ದಪ್ಪವಾದ ಕಾಗದ ತಾರೆಂದು ವಕೀಲನು ಹೇಳಲು "ಪೆಟ್ಟಿಗೆಯಲ್ಲಿ ಒಂದಾಣೆ ದುಡ್ಡು ಇದ್ದರೆ ಕೊಡು; ನನ್ನ ಕೈಯಲ್ಲಿ ಕಾಸೊಂದು ಇಲ್ಲ" ಎಂದು ವೇದವ್ಯಾಸನು ನಗುತ್ತಾ ನುಡಿದನು. "ಆಹಾ! ಎಷ್ಟು ಔದಾರ್ಯ ಗುಣಭರಿತ ಕಕ್ಷಿಗಾರನು ನನಗೆ ದೊರಕಿದನಪ್ಪಾ" ಎಂದು ರಾಮದಾಸನು ಒಂದಾಣೆ ದುಡ್ಡು ಪೆಟ್ಟಿಗೆಯಿಂದ ತೆಗೆದುಕೊಟ್ಟನು. ಅದನ್ನು ಸೊಂಟಕ್ಕೆ ಸಿಕ್ಕಿಸಿ ವೇದವ್ಯಾಸನು ಸಮೀಪವಿರುವ ನಾಲ್ಕೈದು ಅಂಗಡಿಗಳಿಗೆ ಹೋಗಿ ಐದಾರು ಹಾಳೆ ಕಾಗದ ಬೇಡಿ ತಂದು ವಕೀಲಗೆ ಕೊಟ್ಟನು. ವಕೀಲನು ತನ್ನ ಗುಮಾಸ್ತನಿಂದ ಮನವಿಯ ನಕಲು ಬರಿಸಿ ಅವನಿಗೇನಾದರೂ ಶುಲ್ಕ ಕೊಡೆಂದು ವೇದವ್ಯಾಸಗೆ ಅಪೇಕ್ಷಿಸಿದನು. ಧನಿಗೆ ಶುಲ್ಕ ಕೊಟ್ಟರಷ್ಟೇ ಗುಮಾಸ್ತನಿಗೆ ಕೋಡೋದು. ನಿಮ್ಮಿಬ್ಬರಿಗೂ ಒಂದೇ ಸರ್ತಿ ಕೈತುಂಬಾ ಕೊಡಿಸೋಣ ಎಂದು ಸಮಜಾಯಿಸಿ ಮಾತು ಹೇಳಿ ಕೂತುಕೊಂಡನು.

ಮನವಿಯನ್ನು ವೇದವ್ಯಾಸ ಉಪಾಧ್ಯನು ವಕೀಲನ ಅನುಜ್ಞೆಗಳಂತೆ ಪೇಷ್ಕಾರ ತಿಮ್ಮಯ್ಯನ ಮುಂದೆ ದಾಖಲುಮಾಡಿದನು. ಪೇಷ್ಕಾರನು ಅದನ್ನು ನೋಡಿ—"ಇದು ಛೋಟಾ ಕಿತಾಬಿನ ಪ್ರಕರಣವಲ್ಲ. ಕಾರ್ಬಾರಿಗಳ ಕಚೇರಿಗೆ ಕೊಂಡುಹೋಗು" ಎಂದು ತಿರುಗಿ ಕೊಟ್ಟನು. ಅದರ ಬುಡದಲ್ಲಿ ಹಾಗೆಯೇ ಬರಕೊಡಬೇಕೆಂದು ವೇದವ್ಯಾಸ ಉಪಾಧ್ಯನು ಅಪೇಕ್ಷಿಸಿದನು. ಪೇಷ್ಕಾರನು ಅವನ ಅಪೇಕ್ಷೆಯಂತೆ ನಡೆಸಿದನು. ಶಾಬಯನ ಮುಂದೆ ಅದು ಹೋದಾಗ ಅವನು ಅದನ್ನು ಓದಿನೋಡಿ ಎದ್ರಿಗಳಿಗೆ ವಿದಿತಪತ್ರ ಕೊಡಬೇಕಾಗಿ ತನ್ನ ಕರಣೀಕರಿಗೆ ಆಜ್ಞೆಮಾಡಿದನು. ಚಂಚಲನೇತ್ರರಿಗೆ ಮತ್ತು ಅವರ ಪಾರುಪತ್ಯಗಾರಗೆ ವಿದಿತ ಪತ್ರಗಳು ಮುಟ್ಟಿದುವು. ಇದನ್ನು

ತಿಳಿದ ವಾಗ್ದೇವಿಯು ಭೀಮಾಜಿಯನ್ನು ಅಂತರಂಗದಿಂದ ಕರಸಿ ತಿಳಿಸಿದಾಗ "ಬರಕೈಯಿಂದ ಮೊಳ ಹಾಕುವ ಸಮಯ ಇದಲ್ಲವೆಂದು ಅನೇಕರು ಹೇಳಲಿಕ್ಕೆ ಸಾಕು. ಪರಂತು ಅಂಥಾ ಮಾತುಗಳಿಗೆ ಕಿವಿಗೊಟ್ಟು ಕುಣಿದಾಡಿದರೆ ಕಾರ್ಯ ಹಾನಿಯೂ ಕಾರ್ಬಾರಿಯ ಅವಕರಣವೂ ಉಂಟಾಗುವದು. ಶಾಬಯನು ಸಂಭಾವಿತನೂ ನಿಶ್ಚಲಪ್ರಾಮಾಣಿಕತೆಯುಳ್ಳವನೂ ಆಗಿರುವದರಿಂದ ದ್ರವ್ಯ ದಾಶೆಯನ್ನು ತೋರಿಸಿ ಅವನ ಮನಸ್ಸುಂಟುಮಾಡಿಕೊಳ್ಳಬಹುದೆಂಬ ಭ್ರಮೆಯನ್ನು ಬಿಟ್ಟುಬಿಡಬೇಕು. ದೀನಭಾವದಿಂದ ಅವನ ಮರೆ ಹೊಕ್ಕವ ರಿಗೆ ಅವನು ಸರ್ವಥಾ ಬಿಟ್ಟು ಹಾಕುವದಿಲ್ಲ. ಸಾರ್ವಜನಿಕ ಉಪಯೋಗದ ಸದ್ಧರ್ಮವನ್ನು ಮಾಡಿಸಿ ಪುಣ್ಯಸಂಗ್ರಹ ಮಾಡಬೇಕೆಂಬ ಆತುರದಿಂದ ಈ ಪಟ್ಟಣದಲ್ಲಿ ಕೆಲವು ಪ್ರಮುಖ ಗೃಹಸ್ತರು ಒಗ್ಗಟ್ಟಾಗಿ ವಿದ್ಯಾಶಾಲೆಗಳನ್ನು ಛತ್ರಗಳನ್ನು ದೇವಾಲಯಗಳನ್ನು ಕಟ್ಟಿಸಿ ಬಡವರ ಉಪಕಾರಿಗಳಾಗಿ ಮೆರೆ ಯಬೇಕೆಂಬ ಆಶೆವುಳ್ಳವರಾಗಿರುತ್ತಾರೆ. ಪ್ರಕೃತ ದೊಡ್ಡದೊಂದು ವಿದ್ಯಾಶಾಲೆ ಯನ್ನು ಕಟ್ಟಿಸಲಿಕ್ಕೆ ಅವರು ಉದ್ಯುಕ್ತರಾಗಿರುವರು. ಇಂಥಾ ಸತ್ಕಾರ್ಯಕ್ಕೆ ಸಹಾಯಾರ್ಥವಾಗಿ ಮಠದಿಂದ ಆಶ್ರಮ ಕೊಡುವ ಸಮಯ ದ್ರವ್ಯದಾನ ವನ್ನು ಮಾಡಿದರೆ ಕಾರ್ಭಾರಿಗೆ ಆ ವಾರ್ತೆಯು ಸಿಕ್ಕಿ ಸಂತೋಷಪಟ್ಟು ಮಠದ ಮೇಲೆ ಮತ್ತಷ್ಟು ಅಭಿಮಾನವಿಡುವನೆಂದು ನನಗೆ ತೋರುತ್ತದೆ." ಹೀಗೆಂದು ಕೊತ್ವಾಲನು ಕೊಟ್ಟ ಸೂಚನೆಯನ್ನನುಸರಿಸಿ ಚಂಚಲನೇತ್ರರು ವೆಂಕಟಪತಿ ಆಚಾರ್ಯನನ್ನು ಕರೆಸಿ ಆಲೋಚನೆಮಾಡಿದರು. ಭೀಮಾಜಿಯು ಹೇಳಿದ ಬುದ್ಧಿಯಂತೆ ನಡಕೊಳ್ಳುವದು ಉತ್ತಮವೆಂದು ಆಚಾರ್ಯನೆಂದನು. ಯತಿಗಳು ಹಾಗಾಗಲೆಂದರು. ಅದರ ಮರುದಿವಸ ಭೀಮಾಜಿಯು ಪರಿಮುಖ ಆ ಪುಣ್ಯ ಸಂಗ್ರಹಸಂಘದ ಬಕ್ಷಿ ಚಲುವೈಯನನ್ನು ಮಠಕ್ಕೆ ಕರೆಸಿ ಲಕ್ಷ ರೂಪಾಯಿಯ ಪವನುಗಳನ್ನು ಗಂಟುಕಟ್ಟಿ ಅವನ ವಶಕೊಟ್ಟಲ್ಲಿ ಅವನು ಅದನ್ನು ಮಠದ ಕಡೆಯಿಂದ ಗುಪ್ತ ದ್ರವ್ಯದಾನವಾಗಿ ಲೆಕ್ಕಕ್ಕೆ ಬರಕೊಂಡನು.

ವೇದವ್ಯಾಸ ಉಪಾಧ್ಯನ ಮನವಿಯ ಅನುಸಂಧಾನಕ್ಕೆ ನಿಶ್ಚೈಸಿದ ದಿವಸ ಅವನ ಕಡೆಯಿಂದ ಬಂದ ವಕೀಲ ರಾಮದಾಸನ ಚರ್ಚೆಗಳನ್ನು ಕೇಳುತ್ತಿರುವಾಗಲೇ ಕಾರಭಾರಿಗಳಿಗೆ ಸಿಟ್ಟೇರಿತು. "ಸಾಕು, ನಿನ್ನ ಪಂಚಾಂಗ ಕಟ್ಟು; ಅನಾವಶ್ಯಕವಾಗಿ ಫಸಾದಖೋರನಾದ ಈ ದಿಂಡ ಹಾರುವನನ್ನು ಉಬ್ಬೇರಿಸಿ ಹಣ ಸುಲಿಯುವದಕ್ಕೆ ನೋಡುತ್ತೀಯಾ? ನೀನಿನ್ನೂ ಹೊಸ

ವಕೀಲ. ಕಣ್ಣುಗಳು ತೆರೆಯದ ಬೆಕ್ಕಿನ ಮರಿಯಂತೆ ಇರುವಿ. ಆದರೂ ದುಸ್ವಾಭಾವ ಬಿಡವಲ್ಲೆ. ಈ ತಂಟಲಮಾರಿ ಬ್ರಾಹ್ಮಣನು ಮೊದಲೊಮ್ಮೆ ನಜರಬಂದಿಯಲ್ಲಿ ಇರಿಸಲ್ಪಟ್ಟ ಹದನವನ್ನು ನೀನು ತಿಳಿಯಲಿಲ್ಲವೇ? ಅವನ ಸಂಗಡ ನೀನೂ ಕೂಡಿ ಫಸಾದಖೋರನೆನ್ನಿಸಿಕೊಳ್ಳುವ ಮನಸ್ಸುಳ್ಳವ ನಾದರೆ ಅನ್ನ ಬೆಲ್ಲವಾದೀತು ನೋಡಿಕೋ” ಎಂದು ಶಾಬಯನು ರಾಮ ದಾಸಗೆ ಚನ್ನಾಗಿ ಗದರಿಸಿಬಿಟ್ಟನು. ರಾಮದಾಸರಾಯನು ಎಳ್ಳಿನಷ್ಟು ಹೆದ ರಲಿಲ್ಲ. ವಕೀಲನಾಗಿ ಕಕ್ಷಿಗಾರನ ಕಡೆಯಿಂದ ವ್ಯವಹರಿಸುವದು ನ್ಯಾಯ ವಾದ ಮಾರ್ಗವಾಗಿರುತ್ತದೆ ಅವನು ಫಸಾದಖೋರನಾದರೆ ತಾನು ಅವ ನಂತೆ ದುರ್ನಾಮವನ್ನು ಪಡೆಯತಕ್ಕವನಲ್ಲ. ಕಾನೂನಿಗೆ ಸರಿಯಾಗಿ ವ್ಯವಹರಿಸುವ ತನಕ ತನ್ನ ಮೇಲೆ ಯಾರೊಬ್ಬರೂ ದೋಷ ಆರೋಪಿಸಕೂ ಡದು ಎಂದು ಘಟ್ಟಿಯಾಗಿ ರಾಮದಾಸನು ಉತ್ತರಕೊಟ್ಟನು. ಇವನು ಹಾಗೆಲ್ಲಾ ಭಯಪಡುವವನಲ್ಲ. ಇವನನ್ನು ಉಪಾಯದಿಂದ ನೆಲಕ್ಕೆ ಬಡಿ ಯುವ ಕಾಲ ಮುಂದೆ ಉಂಟು. ಈಗಲೇ ರೌದ್ರಾವತಾರತಾಳಿದರೆ ಕಾರ್ಯ ಹಾಳಾದೀತೆಂದು ಶಾಬಯನು ತನ್ನ ಸಿಟ್ಟು ತಾನೇ ನುಂಗಿಕೊಂಡನು. “ಒಳ್ಳಿದು ನಿನಗೆ ರವಷ್ಟು ಬುದ್ಧಿಬರಲೆಂದು ಮಾತಾಡಿದೆ ನಿನಗೆ ಹಿತವಾಗ ಲಿಲ್ಲವೇ! ಹೋಗಲಿ. ನೀನು ಹೇಳುವದೇನುಂಟೋ ಅದೆಲ್ಲಾ ಅಧಿಕಪ್ರಸಂಗ ವಿಲ್ಲದೆ ಒದರಿಬಿಡು” ಎಂದು ಕಾಭಾರಿಯ ಅಪ್ಪಣೆಯಾಯಿತು.

ರಾಮದಾಸನು ಹಿಗ್ಗಿ ನಸುನಗೆಯಿಂದ ಒಂದು ತಾಸಿನ ಪರಿಯಂತರ ದೊಡ್ಡ ಸ್ವರದಿಂದ ಶಬ್ದಮಂಜರಿಯೊಳಗಿನ ಮುಕ್ಕಾಲುವಾಸಿ ದೊಡ್ಡ ದೊಡ್ಡ ಮಾತುಗಳನ್ನುಪಯೋಗಿಸಿ ಕೇಳುವ ಜನರು ಶಹಬಾಸು! ಧೀರನೇ ಸರಿ! ವಕೀಲನು ಹೀಗೆ ಬುದ್ಧಿಶಾಲಿಯೂ ವಾಗ್ಮಾಲಿಯೂ ಆಗಿರಬೇಕು. ಎಂದು ಹೊಗಳುವಂತೆ ಭಾಷಣಮಾಡಿದನು. ವೇದವ್ಯಾಸನು ನಗಲಿಕ್ಕೆ ತೆರೆದಬಾಯಿಯನ್ನು ಮುಚ್ಚಲಿಕ್ಕೆ ಮರೆತುಬಿಟ್ಟು ಪ್ರಾಣವಾಯು ತೊಲಗುವ ಸಂಭವದಲ್ಲಿದ್ದವನಂತೆ ಕಾಣುತ್ತಿದ್ದನು. ಕಾಭಾರಿಯು ಮಧ್ಯೆ ಮಧ್ಯೆ ಮಾಡುವ ಕಕ್ಷೆಯನ್ನು ಲಕ್ಷ್ಯಮಾಡದೆ ವಕೀಲನು ಕಾನೂನಿನ ಪುಸ್ತಕ ಗಳ ಕಾಗದಗಳನ್ನು ಸಾವಿರಾರು ಸಲ ಮಗುಚುತ್ತಾ ಸಮರ್ಪಕವಾದ ಉತ್ತರಗಳಿಂದ ಬಾಯಿ ಮುಚ್ಚಿಸಿಬಿಟ್ಟನು. ಇಂಥಾ ಲಕ್ಷೋಪಿ ವಕೀಲರನ್ನು ಕಕ್ಷದಲ್ಲಿ ಔಕಿಕೊಳ್ಳುವ ಸಾಮರ್ಥ್ಯವುಳ್ಳ ಶಾಬಯ್ಯನು ಕೊಂಚ ಸಮಯ

ವಕೀಲನ ಭಾಷಣಕ್ಕೆ ಮೆಚ್ಚಿಹೋದವನಂತೆ ಮುಗುಳು ನಗೆಯಿಂದ ಅವನ ಕಕ್ಷಿಗಾರನ ಪಕ್ಷಕ್ಕೆ ಹಿತವಾದ ಮಾತುಗಳನ್ನಾಡುತ್ತಾ ಅವನಿಗೆ ಧೈರ್ಯ ಉಂಟಾಗುವಂತೆ ಮಾಡಿ ಕೊನೆಯಲ್ಲಿ ಮನವಿಯು ರೂಪ್ಯಕರವಾದ ಪ್ರಯುಕ್ತ ಅದನ್ನು ತಳ್ಳಿಹಾಕಿಯದೆಂದು ತೀರ್ಪುಕೊಟ್ಟನಲ್ಲದೆ ಸೂರ್ಯ ನಾರಾಯಣನಿಗೆ ಆಶ್ರಮವಾಗುವ ಕಾಲದಲ್ಲಿ ದೊಡ್ಡ ಕಲಹ ನಡೆಯುವ ಸಂಭವವಿರದೆನ್ನಕೂಡದಾದ ಕಾರಣ ಮುಂದಾಗಿ ಯಾರಿಗೂ ತಿಳಿಯದ ಹಾಗೆ ಗುಪ್ತ ಚರರನ್ನಿಟ್ಟು ವರ್ತಮಾನವನ್ನು ಸಂಗ್ರಹಿಸಿ ವಿಘ್ನಸಿವಾರ ಣೆಯ ಸೌರಣೆಮಾಡುವ ಜಾಗ್ರತೆ ತಕ್ಕೊಳ್ಳಬೇಕೆಂದು ಕೊತ್ವಾಲಗೆ ಅಪ್ಪಣೆ ಮಾಡಿದನು.

ರಾಮದಾಸರಾಯಗೆ ಸಿಟ್ಟುಬಂದು ಇಡೀ ದೇಹವು ನಡುಗಲಾರಂಭಿ ಸಿತು. ಆ ಪರಿಯಂತರ ವೇದವ್ಯಾಸ ಉಪಾಧ್ಯನು ತೆರೆದುಕೊಂಡೇ ಇದ್ದ ಬಾಯಿಯನ್ನು ಮುಚ್ಚಿ ಸಮೀಪಕ್ಕೆ ಬಂದು, ಮನವಿಯು ಹ್ಯಾಗೆ ತೀರಿತೆಂದು ವಿಚಾರಿಸಿದಾಗ, “ನಿನ್ನಪ್ಪನ ಶ್ರಾದ್ಧವಾಯಿತು” ಎಂದು ವಕೀಲನ ಉತ್ತರ ವಾಯಿತು. “ನನ್ನಪ್ಪನ ಶ್ರಾದ್ಧ ಮೊದಲೇ ಆಗಿಯದೆ; ಜೀವದಲ್ಲಿರುವ ನಿಮ್ಮಪ್ಪನ ಶ್ರಾದ್ಧವಾಗುವದು ಉಳದದೆ” ಎಂದು ಉಪಾಧ್ಯನು ಸಿಟ್ಟಿನಿಂದ ಪ್ರತ್ಯುತ್ತರ ಕೊಟ್ಟನು. ಇಬ್ಬರಿಗೂ ಝುಟಾಪಟಾ ಹಿಡಿಯಿತು. ಅಷ್ಟರಲ್ಲಿ ಸಮೀಪ ಇದ್ದ ಗೃಹಸ್ಥರು ಉಭಯರನ್ನೂ ಸಮಾಧಾನಮಾಡಿ ಅವರಲ್ಲಿ ವಿವೇಕವಾಗುವಂತೆ ಪ್ರಯತ್ನ ಮಾಡಿದರು. ಕೊಂಚ ಸಮಯದಲ್ಲಿ ಇಬ್ಬರ ಸಿಟ್ಟೂ ತಣಿದು ಮುಂದೇನು ಉಪಾಯವೆಂದು ತಿಳಿಯದೆ ಕಚೇರಿ ಯಿಂದ ಇಳಿದು ತಮ್ಮ ತಮ್ಮ ಮೀಸೆಗಳನ್ನು ತಿಕ್ಕಿಕೊಂಡು ಬಿಡಾರಸೇರಿ ಕೊಂಡರು.

ರಾತ್ರಿ ಭೋಜನವಾದ ತರುವಾಯ ಬರಬೇಕೆಂದು ವಕೀಲನಿಂದ ಅಪೇಕ್ಷಿಸಲ್ಪಟ್ಟ ವೇದವ್ಯಾಸ ಉಪಾಧ್ಯನು ರಾಮದಾಸರಾಯನ ಮನೆಯಲ್ಲಿ ಕಾದುಕೊಂಡಿರುವಾಗ ವಕೀಲನು ಊಟವಾದಮೇಲೆ ಹೊರಗೆ ಬಂದು ಅಂತ ರಂಗದಲ್ಲಿ ಉಪಾಧ್ಯನ ಕೂಡೆ ಕೊಂಚ ಸಮಯ ಮಾತಾಡಿದನು. ಹಾಗೆಯೇ ಸರಿ! ಬೇರೆ ಏನೂ ಮಾಡಲಿಕ್ಕೆ ಈಗ ಸಮಯ ಸಾಲದು; ಅಪ್ಪಣೆಯಾದಂತೆ ವರ್ತಿಸಿ ಅರಿಕೆ ಮಾಡುವೆನೆಂದು ವಕೀಲನ ಮನೆಯಿಂದ ಹೊರಟುಬಂದನು. ಪತ್ನಿಯು ಹಿಂದೆ ಅಪರಾಜಿತ ಸೆಟ್ಟಿಯಿಂದ ಬಂದ ಬವಣೆಯನ್ನು ನೆನಪಿಗೆ

ತಂದು ಈಗ ಅನಕ ಅಧಿಕ ಜಾಗ್ರತೆಯಿಂದಿರುವದು ಅವಶ್ಯವೆಂದು ಪತಿಗೆ ಬುದ್ಧಿಮಾರ್ಗ ಹೇಳಿದಳು. "ನಾನು ಹಾಗೇನೂ ಕುರುಬನೇ? ಒಮ್ಮೆ ಸಿಕ್ಕಿ ಬಿದ್ದೆ, ಮತ್ತೆ ಹಾಗೆ ಸಿಕ್ಕಿಬೀಳಲಾರೆ" ಎಂದು ಹೆಂಡತಿಗೆ ಧೈರ್ಯಹೇಳಿ ಮನಸ್ಸಿನಲ್ಲಿಯೇ ಯೋಚನೆ ಗೈಯುವದರಲ್ಲಿ ಬಿದ್ದು ಇಡೀ ರಾತ್ರೆ ನಿದ್ದೆ ಹೋಗದೆ ತಲೆ ವೇದನೆಯಿಂದ ಪ್ರಾತಃಕಾಲದಲ್ಲಿ ಎದ್ದು ಮುಖ ಮಜ್ಜನ ವಾದ ಬಳಿಕ ಹೊರಟನು.

## ಮೂವತ್ತೆಂಟು

ಕುಮುದಪುರದಲ್ಲಿರುವ ವೈಷ್ಣವ ಮಂಡಳಿಯು ಸಣ್ಣದಲ್ಲ. ಆ ಮತದ ಪ್ರಮುಖ ಗೃಹಸ್ತರಲ್ಲಿ ಮತಸಂಬಂಧವಾದ ವಿಚಾರಗಳಿಗೆ ಹೆಚ್ಚು ತಾತ್ಪರ್ಯ ಕೊಡುವ ರಂಗಾಚಾರ್ಯ, ಲಕ್ಷ್ಮೀಲೋಲಾಚಾರ್ಯ, ಶಾರ್ಙ್ಗಧರ ಉಪಾಧ್ಯ, ಗರುಡಾಚಾರ್ಯ, ಖಗವಾಹನ ಭಟ್ಟ, ಜ್ಞಾನಸಾಗರರಾಯ, ಮೀನಾಕ್ಷಯ್ಯ, ಉಪೇಂದ್ರ, ವರುಣ ಇವರ ಸಮಯವನ್ನು ಕಾದು ಅವ ರೆಲ್ಲರ ಕೂಡೆಯೂ ಸೂರ್ಯನಾರಾಯಣನ ಆಶ್ರಮಕ್ಕೆ ವಿಘ್ನತಾರದಿದ್ದರೆ ಇಡೀ ಬ್ರಹ್ಮ ಸಭೆಗೆ ಕಲ್ಮಷ ತಗಲುವುದೇ ಸರಿ ಎಂದು ಅವರಿಗೆ ದುರ್ಬೋಧನೆ ಕೊಟ್ಟು ಶೀಘ್ರ ಒಂದು ದೊಡ್ಡ ಸಭೆಯ ಮೂಲಕ ಆಶ್ರಮವಾಗದಂತೆ ಉಪಾಯ ಹುಡುಕುವುದಕ್ಕೆ ಅವರ ಸಾನುಮತಿಯನ್ನು ವೇದವ್ಯಾಸನು ಅಪೇಕ್ಷಿಸಿದನು. ಅವರೆಲ್ಲರೂ ಒಡಂಬಟ್ಟರು. ಸಭೆಯು ಯಾವಲ್ಲಿ ಕೂಡಿಬರ ಬೇಕೆಂಬುದನ್ನು ಕುರಿತು ಆಲೋಚನೆಯಾಯಿತು. ಆಂಜನೇಯಾಲಯದಲ್ಲಿ ಹಿಂದೆ ವೇದವ್ಯಾಸನ ಮುಖಕ್ಕೆ ಮಸಿತಗಲಿದ ನೆನಪು ಎಲ್ಲರಿಗೂ ಇತ್ತು. ಆದುವರಿಂದ ಅಲ್ಲಿ ಬೇಡವೆಂದು ನಿರ್ಣಯವಾಗಿ ಪದ್ಮನಾಭ ಘನಪಾಠಿಯ ಮಠವನ್ನು ಆರಿಸೋಣಾಯಿತು. ಪಟ್ಟಣವಾಸಿ ಬ್ರಾಹ್ಮಣರಿಗೆಲ್ಲಾ ಹೇಳಿಕೆ ಮಾಡುವುವದಕ್ಕೆ ಮಾಧವ ಭಟ್ಟನೆಂಬವನನ್ನು ನೇಮಿಸಿತು. ಅವನು ಅವ ರೆಲ್ಲರಿಗೂ ಹೇಳಿಬಿಟ್ಟು ಮರಳಿ ಬರುವಾಗ, ಭೀಮಾಜಿಯಿಂದ ಮುಂದಾಗಿ ಎಚ್ಚರಿಸಲ್ಪಟ್ಟ ಯಾಕೂಬಖಾನನು ಅವನನ್ನು ಕಂಡು, ಕೊಂಚಸಮಯ ಅವನ ಸಂಗಡ ವಾಗ್ದೇವಿಯನ್ನು ದೂರಿ ಸಂಭಾಷಣೆ ಮಾಡುತ್ತಾ ಸಭೆಯ ಉದ್ದೇಶವನ್ನು ತಿಳಿದು ಕೊತ್ವಾಲಗೆ ವರ್ತಮಾನಕೊಟ್ಟನು. ಸಭೆಯು ಕೂಡಿ ಬಂದ ಪಕ್ಷದಲ್ಲಿ ಸಭಾಸದರಿಂದ ಮಾಡಲ್ಪಡಬಹುದಾದ ನಿರ್ಣಯವು ವೇದ

ವ್ಯಾಸನ ಹಟಸಾಧನೆಗೆ ಉಪಯುಕ್ತವಾಗಿ ಸೂರ್ಯನಾರಾಯಣನ ಅಭ್ಯುದಯಕ್ಕೆ ವಿಪತ್ತುಂಟುಮಾಡುವ ಸ್ವಭಾವದ್ದಾಗುವ ಕಾರಣ ಸಭೆಯೇ ಕೂಡದಂತೆ ಕೃತ್ರಿಮೋಪಾಯ ನಡೆಸುವದು ಉತ್ತಮವೆಂದು ಶಾಬಯ್ಯನ ಅನುಮತಿಯಿಂದ ಭೀಮಾಜಿಯು ನಿಶ್ಚೈಸಿ ವಾಗ್ದೇವಿಗೆ ಬರಲಿಕ್ಕಿರುವ ಈ ಅನಿಷ್ಟ ನಿವಾರಣೆಯ ಯತ್ನವನ್ನು ಮಾಡಲುದ್ಯುಕ್ತನಾದನು.

ಸಭೆಗೆ ನೇಮಿಸಿದ ದಿನಕ್ಕೆ ಎರಡು ದಿವಸಗಳ ಮುಂಚೆ ಭೀಮಾಜಿಯು ಯಾಕುಬಖಾನನಿಂದ ಒಂದು ವರ್ತಮಾನ ಸಂಗ್ರಹದ ವಾಜ್ಮೂಲವನ್ನು ಬರೆಸಿಕೊಂಡು ರಾಮದಾಸರಾಯನ ದುಭೋರ್ಧನೆಯಿಂದ ವೇದವ್ಯಾಸ ಉಪಾಧ್ಯನು ಕುಮುದಪುರದ ಆಢ್ಯಬ್ರಾಹ್ಮಣರನ್ನು ಒಟ್ಟುಗೂಡಿಸಿ ಚಂಚಲನೇತ್ರರ ಮೇಲಿನ ದ್ವೇಷವನ್ನು ಪೂರೈಸಿಕೊಳ್ಳುವುದಕ್ಕೋಸ್ಕರ ದೊಂಬಿಯನ್ನು ಮಾಡುವ ದುರಾಲೋಚನೆಯಲ್ಲಿರುವದಾಗಿ ಒಂದು ಮನವಿಯನ್ನು ಬರೆದು ಕಳುಹಿಸಿ, ತಾನು ನಡೆಸಿರುವ ವೈಸವ ಸಮಾಚಾರವನ್ನು ವಾಗ್ದೇವಿಯ ತಿಳುವಳಿಕೆಗೆ ತಂದನು. ಶಾಬಯ್ಯಗೆ ಆ ಮನವಿ ತಲಪಿದೊಡನೆ ಅಂಥಾ ದ್ವ್ಯಾವದೊಂದು ಕೂಟದ ದೆಸೆಯಿಂದ ನೆಮ್ಮದಿಗೆ ಭಂಗಬಾರದಂತೆ ಮುಂದಾಗಿ ಯೋಚನೆ ಮಾಡುವ ಹಾಗೂ ಅಂಥಾ ಸಂಭವ ಒದಗಿದರೆ ಅಪರಾಧಿಗಳನ್ನು ಒಡನೆ ಕೈದುಮಾಡಿ ನ್ಯಾಯಕ್ಕೆ ಗುರಿಪಡಿಸುವ ಹಾಗೂ ಮುಂಜಾಗ್ರತೆ ತೆಗೆದುಕೊಳ್ಳುವಂತೆ ಕೊತ್ವಾಲಗೆ ಅವನು ಅಂತರಂಗದಲ್ಲಿ ನಿರೂಪಿಸಿದನು. ಶಾಬಯ್ಯನ ಕಚೇರಿಯಲ್ಲಿ ವ್ಯವಹರಿಸುವ ವಕೀಲರ ಸಂಘದಲ್ಲಿ ಅವನ ಆಪ್ತನಾದ ಅನಂತಮೋನವನೆಂಬ ಹೆಸರುಹೋದ ವಕೀಲಗೆ ಐದು ಸಾವಿರ ರೂಪಾಯಿ ರುಸುಂ ಮುಂಗಡಕೊಟ್ಟು ನೇಮಿಸಿ ಅವನ ಅನುಜ್ಞೆಗಳಂತೆ ಮಾಡಬೇಕಾದ ಕ್ರಮವನ್ನು ಚಂಚಲನೇತ್ರರ ಕಡೆಯಿಂದ ಅನುಸರಿಸೋಣಾಯಿತು.

ಸಭೆಯು ಕೂಡಿಬರುವದಕ್ಕೆ ನಿರ್ಣಯಿಸಿದ ಕಾಲಕ್ಕೆ ಮುಂಚಿತವಾಗಿ ಸಭಾಸದರ ಸವಾರಿಯು ಘನಪಾಠಿಯ ಮಠಕ್ಕೆ ಬರುವ ವೇಳೆ ದಾರಿಯಲ್ಲಿ ಕೆಲವು ಪೋಕರಿಜನರು ನಗುತ್ತಾ--ಇಂದೇನು ವಿಶೇಷವಪ್ಪ? ಎಂದು ಒಬ್ಬನು ಇನ್ನೊಬ್ಬನಿಗೆ ಪ್ರಶ್ನೆಮಾಡುವುದಕ್ಕೆ ತೊಡಗಲು; ಅವಕ್ಕೆ ಪ್ರತ್ಯುತ್ತರವಾಗಿ- ಇಂದೋ! ವೇದವ್ಯಾಸ ಉಪಾಧ್ಯನ ತಲೆ ಬೋಳಿಸುವ ಹಬ್ಬವೆಂದು ಒಬ್ಬನೂ, ರಾಮದಾಸರಾಯನ ಮಾತೃದಿನವೆಂದು ಇನ್ನೊಬ್ಬನೂ, ಅಷ್ಟೆ

ಯೋ ಪದ್ಮನಾಭಘನಪಾಠಿಯು ಮತಕ್ಕೆ ಯಜ್ಞೇಶ್ವರನ ಪ್ರತಿಷ್ಠೆ ಪ್ರಸ್ತವೆಂದು ಇಸ್ನೊಬ್ಬನೂ ಹೀಗೆ ಬಾಯಿಗೆ ಬಂದಂತ ಗೇಲಿಮಾಡುವ ಲೀಲೆಯನ್ನು ನೋಡಿ ಸಹಿಸಕೂಡದೆ ವೇದವ್ಯಾಸನೂ ರಾಮದಾಸರಾಯನೂ ಮಣ್ಣು ಗಟ್ಟಿಗಳನ್ನು ಬಿಸುಡುವದರ ದ್ವಾರ ಆ ಶಠರನ್ನು ಓಡಿಸಿಬಿಡುವದಕ್ಕೆ ನೋಡಿ ದರು. ದೂರ ಒತ್ತಟ್ಟು ನಿಂತುಕೊಂಡಿದ್ದ ಯಾಕುಬಖಾನನು ಪದ್ಮನಾಭ ಘನಪಾಠಿಗೆ ನೇತ್ರ ಸಂಕೇತ ಮಾಡಿದನು. ಅವನು ಒಳಗಿನಿಂದ ಒಂದು ಕತ್ತಿ ಯನ್ನು ಹಿಡುಕೊಂಡು ಬಂದು--"ಬಾಯಿ ಮುಚ್ಚಿ ನಡದು ಬಿಟ್ಟರೆ ಒಳ್ಳೇದು; ಇಲ್ಲವಾದರೆ ಕಡಿದು ಬಿಡುತ್ತೇನೆ" ಎಂದು ಬೆದರಿಸಿದನು. ಇಷ್ಟೆಲ್ಲಾ ಹೊರಗೆ ನಡೆಯುವ ಸಮಯದಲ್ಲಿ ಮಠದೊಳಗೆ ಸಭಾನಾಯಕನಾಗಿ ಆರಿಸಲ್ಪಟ್ಟಿ ರುವ ಗರುಡಾಚಾರ್ಯನು ಕುದುರೆಗೆ ಹೊಡಿಯುವ ಚಬುಕನ್ನು ಹಿಡು ಕೊಂಡು ಬೀದಿಗೆ ಇಳಿದು ಇಬ್ಬರು ಮೂವರಿಗೆ ಏಟುಕೊಟ್ಟನು. ಆಗ ಹಿಂದಿನಿಂದ ಆ ಪೋಕರಿಗಳ ಕೂಟದವರು ಹಲವರು ಒಮ್ಮೇಲೇ ಸಭಾನಾ ಯಕನನ್ನು ಮುತ್ತಿ ಚಬುಕನ್ನು ಕ್ಷಣದಲ್ಲಿ ಅವನ ಕೈಯಿಂದೆಳೆದುಬಿಟ್ಟು ಅದರ ಬುಡದಿಂದ ಅವನ ಪೃಷ್ಟಕ್ಕೆ ಚನ್ನಾಗಿ ಬಡಿದರು.

ಹಾರಯ ಗರುಡಾ ಹಾರಯ
ಬಾರಯ ಕುರುಬಾ ಬಾರಯ
ತೋರಯ ಪೋರೆಯ ತೋರಯ
ಸೇರಯ ಬಾನವ ಸೇರಯ

ಹೀಗೆಂದು ಹಾಡಿ ಅವನನ್ನು ಹೀಯಾಳಿಸಿ ಅವನ ಸೊಂಟದಲ್ಲಿರುವ ಜೋಡೆಳೆ ಉಡಿದಾರವನ್ನು ಕೈಬೆರಳುಗಳಲ್ಲಿರುವ ನವರತ್ನದ ಉಂಗುರಗ ಳನ್ನೂ ಕಸುಕೊಂಡು ಕೈಕಟ್ಟಿ ಕುಣಿಯಲಿಕ್ಕೆ ಉಪಕ್ರಮಿಸಿದರು. ಸಭಾನಾ ಯಕನ ಪಾಡವನ್ನು ಕಂಡು ಸಭಾಸದರಲ್ಲಿ ಒಬ್ಬನಾದರೂ ಆ ಶುಂಠರ ಕಣ್ಣೆದುರುಬೀಳದೆ ಅಸ್ತವ್ಯಸ್ತವಾಗಿ ಹಿಂಬಾಗಲಿನಿಂದ ಪಲಾಯನ ಮಾಡಿ ದರು.

ವೇದವ್ಯಾಸ ಉಪಾಧ್ಯನು--"ಆಹಾ! ನನಗಿನ್ನೆಂಥಾ ದುರ್ದಶೆಹಿಡಿ ಯಿತು. ಜಯಹೀನನಾದ ನಾನು ಯಾಕೆ ಈ ಪೃಥ್ವಿಯಲ್ಲಿ ಜನನಕ್ಕೆ ಬಂದೆ" ಎಂದು ಎರಡು ಕೈಗಳನ್ನು ತಲೆಯ ಮೇಲೆ ಮಡಗಿ ರೋಧನ ಮಾಡುವದಕ್ಕೆ ಆರಂಭಿಸಿದನು. ಈ ವೇಳೆಯಲ್ಲಿ ರಾಮದಾಸರಾಯನು ಅವನನ್ನು ಬಹು

ಚಂದದಿಂದ ಸಮಾಧಾನ ಪಡಿಸಿದನು. “ಸಭೆಯು ನಿರ್ವಿಘ್ನವಾಗಿ ನಡೆಯು ತ್ತಿದ್ದ ಪಕ್ಷದಲ್ಲಿ ನಮ್ಮ ಕೋರಿಕೆಯು ನೆರವೇರಲಿಕ್ಕೆ ಅನುಕೂಲವಿರುವದರ ನೂರುಮಡಿ ಪ್ರಯೋಜನ ಈಗ ದೊರೆಯುವದಕ್ಕೆ ಸಂದರ್ಭವಾಯಿತು. ನಮ್ಮ ಅಹಿತರು ಕೇವಲ ಅಪಾಪೋಲಿ ಜನರನ್ನು ಕೂಡಿಸಿ ಮಾಡಿಸಿದ ಲೂಟಿಯು ಅವರನ್ನು ಕಾರಾಗೃಹದ ಬಾಗಲಿಗೆ ಸ್ವತೇವ ಎಳಕೊಂಡು ಹೋಗುವದು. ಗರುಡಾಚಾರ್ಯರ ಮೈಮೇಲೆ ಇದ್ದ ಆಭರಣಗಳನ್ನು ಕಸು ಕೊಂಡ ಅಪರಾಧಕ್ಕೆ ‘ಚೋರಿ’ ಎಂಬ ಹೆಸರು ಕಾನೂನು ಪುಸ್ತಕದಲ್ಲಿ ಹಾಕಿದೆ. ಅದು ಸಣ್ಣ ತಪ್ಪಲ್ಲ. ಒಡನೆ ಕೊತ್ವಾಲನ ಮುಂದೆ ಫಿರ್ಯಾದು ಬಾಯಿದೆರೆಯಿಂದ ಹೇಳಿಬಿಟ್ಟರೆ ಸಾಕು, ಜವಾನರನ್ನು ಕಳುಹಿಸಿ ಅಪರಾಧಿ ಗಳನ್ನು ಎಳತರಿಸದೆ ಇರುವನೇನು? ಫಿರ್ಯಾದು ಹೇಳುವಾಗ ಅಲ್ಲಿ ಕೊಂಚ ಅಥರ್ವಣೋಪಾಯ ಮಾತ್ರ ಮಾಡಿಬಿಡಬೇಕು. ಇಲ್ಲವಾದರೆ ಗಾಯ ಒಂದುಕಡೆಯಲ್ಲಿ ಮದ್ದು ಇನ್ನೊಂದು ಕಡೆಯಲ್ಲಿ ಆಗಿಹೋಗದೆ ಚೋರಕೃತ್ಯ ನಡೆಯುವದಕ್ಕೆ ಸಹಕಾರಿಗಳಾದ ಮಠಾಧಿಪತಿಗಳಿಗೂ ಅವರ ಪರಿವಾರದ ಮುಖ್ಯಸ್ಥರಿಗೂ ಅದೇ ಫಿರ್ಯಾದಿಯಲ್ಲಿ ಕೂಡಿಸಿಬಿಟ್ಟರೆ ಕೆಲಸ ಪರಿಷ್ಕಾರ ವಾಗುವುದು. ಕೊನೆಗೆ ನಾವು ಹೇಳಿದಂತೆ ಕೇಳಿದರೆ ಹ್ಯಾಗೂ ಸುಧಾರಿಸಿ ಬಿಡೋಣ ಇಲ್ಲವೇ ಅವರೆಲ್ಲರೂ ಸೆರೆಮನೆಯಲ್ಲಿ ಬಿದ್ದಿರಲಿ. ಏವಂಚ “ಆಶ್ರ ಮವು ಸ್ವಪ್ನದಲ್ಲಿ ಬಾಳೆಹಣ್ಣು ತಿಂದಂತಾಗುವುದು.” ವಕೀಲನು ಪೀಗಂಬೋಣ, ವೇದವ್ಯಾಸ ಉಪಾಧ್ಯನು ಅಳುತ್ತಿರುವ ಬಾಯಿಯಿಂದಲೇ ನಗಲಿಕ್ಕೆ ತೊಡಗಿ ಆ ಕುನ್ನಿಗಳ ಬಿನಾತೇನೆಂದು ಕುಣಿದಾಡಿದನು.

ವಿಳಂಬಮಾಡದೆ ಗರುಡಾಚಾರ್ಯನೊಬ್ಬನನ್ನೇ ಕರೆದು ಕೊಂಡು ರಾಮದಾಸನು ಕೊತ್ವಾಲನ ಕಚೇರಿಗೆ ಹೋದನು. ಮತ್ತು ಚಂಚಲನೇತ್ರ ರಿಗೂ ವಾಗ್ದೇವಿಗೂ ಮಠದ ಪಾರುಪತ್ಯಗಾರರಿತ್ಯಾದಿ ಪರಿವಾರ ಸಂಘಕ್ಕೆ ಕೂಡಿಸಿ ಚೋರಿ ಫಿರ್ಯಾದು ಬರಸಿ ಭೀಮಾಜಿಯ ಮುಂದೆ ಇಟ್ಟನು. ಈ ದೂರು ಕೊತ್ವಾಲನ ಮುಂದೆ ಬರುವದರ ಮುಂಚಿತವಾಗಿಯೇ ಎದುರು ಪಕ್ಷದ ಪ್ರಧಾನಪುರುಷ ದಾಮೋದರಭಟ್ಟನು ತಾನು ಕಸುಕೊಂಡ ನಗ ಗಳಲ್ಲಿ ನೇವಳವನ್ನು ಬಚ್ಚಿಟ್ಟು ಉಂಗುರಗಳನ್ನೂ ಚಬುಕನ್ನೂ ಕೊತ್ವಾಲ ನಿಗೆ ತೋರಿಸಿ ನಡೆದ ವೃತ್ತಾಂತವನ್ನು ತಿಳಿಸಿದ್ದುದರಿಂದ ಅವನ ವಾಗ್ಮೂಲ ಮೊದಲೇ ಅವನು ಬರಕೊಂಡಿದ್ದನು. “ಅಯ್ಯಾ ಗರುಡಾಚಾರ್ಯರೇ! ನಿಮ್ಮ

ಮತ್ತು ಬೇರೆ ಹಲವು ಜನರ ಮೇಲೆ ದಾಮೋದರಭಟ್ಟನು ನಮ್ಮ ಮುಂದೆ ದೂರುಕೊಟ್ಟು ಅವನ ದೂರಿಗೆ ಆಧಾರವಾಗಿ ಕೊಂಚ ಸಂಗತ್ಯಾನುಸಾರ ವಾದ ತಾರ್ಕಣೆ ತಂದಿರುತ್ತಾನೆ. ನಿಮ್ಮ ಫಿರ್ಯಾದು ಸಹಾ ಈಗ ಬಂತಲ್ಲ. ಈ ಎರಡು ಮೊಕದ್ದಮೆಗಳಲ್ಲಿ ನಾನು ನಡೆಸಬೇಕಾದ ವಿಚಾರಣೆಯನ್ನು ಮಾಡಿಬಿಟ್ಟು ಕಾರ್ಭಾರಿಗಳಿಗೆ ಮನವಿ ಬರಕೊಂಡು ಅವರ ಆಜ್ಞೆಯಂತೆ ನಡಕೊಳ್ಳುವೆನು. ಈಗ ನೀವೆಲ್ಲರೂ ನಿಮ್ಮ ನಿಮ್ಮ ಮನೆಗಳಿಗಭಿಮುಖರಾಗ ಬಹುದು" ಎಂದು ಕೊತ್ವಾಲನ ಅಪ್ಪಣೆಯಾಯಿತು. "ಇದೇನಪ್ಪಾ, ದುರ್ವಾರ್ತೆ ನಮ್ಮ ಒಡವೆಗಳನ್ನೇ ಎಳಕೊಂಡು, ನಮ್ಮ ಮೇಲೆಯೇ ಮುಂದಾಗಿ ದೂರು ಕೊಟ್ಟಿರುವರೇನು? ಪೂರ್ವಾಪರ ನಾವು ಚಂದಾಗಿ ಆಲೋಚಿಸದೆ ಪತಂಗ ಬೆಂಕಿಗೆ ಹಾರಿದಂತಾಗುವದೋ ಏನೋ? ನಾವು ಸ್ವಲ್ಪ ಅವಸರ ಮಾಡಿದೆವೆನ್ನಬೇಕು. ಇದೆಲ್ಲಾ ವೇದವ್ಯಾಸನ ಪ್ರಸಾದವಷ್ಟೇ. ತಕ್ಕೊಂಡ ನಕ ನಿವೃತ್ತಿಯಿಲ್ಲ. ಶ್ರೀಹರಿ ಇಟ್ಟಂತೆ ಆಗುವದು. ನಷ್ಟ ಭ್ರಷ್ಟ ಕಷ್ಟಕ್ಕೆ ಗುರಿಯಾದೆವಲ್ಲ! ಮ್ಲಾನವದನರಾಗಿ ಮನೆಗಳಿಗೆ ಮರಳುವಾ! ನಿನ್ನೆಯಿಂದ ಎಡಕಣ್ಣು ಹಾರುತ್ತದೆ. ದುರಿತ ಸೂಚನೆ ಆದಿಯಲ್ಲೇ ಇದ್ದು ನಾವು ಈ ದುರ್ವಾದದಲ್ಲಿ ಪ್ರವೇಶಿಸಿದ್ದೇ ಅನುಚಿತ" ಎಂದು ಗರುಡಾಚಾರ್ಯನು ಅತಿಶಯ ದುರ್ಮಾನದಿಂದ ಮನೆಗೆ ನಡೆದನು. ಅವನಂತೆ ಮರ್ಯಾದೆವಂತ ರಾದ ಬೇರೆ ಗೃಹಸ್ಥರು ಕೂಡಾ ಮುಖ ಸಣ್ಣದು ಮಾಡಿ ಕೊಂಡು ಅವನ ಹಿಂದೆಯೇ ನಡೆದರು. ರಾಮದಾಸನು ಅವರಿಗೆಲ್ಲಾ ಧೈರ್ಯಹೇಳುವದಕ್ಕೋಸ್ಕರ ಬಡ ಬಡ ಮಾತನಾಡುತ್ತಾ ಇದ್ದರೂ ಅವರ್ಯಾರೂ ಅವನ ನನ್ನಿಗೆ ಕಿವಿಕೊಡಲಿಲ್ಲ. ವೇದವ್ಯಾಸನೊಬ್ಬನೇ ಬಸವನ ಹಿಂದೆ ಬಾಲವೆಂಬ ಗಾದೆ ಯಂತೆ ಅವನನ್ನು ಹಿಂಬಾಲಿಸಿದನು.

ಸಾಯಂಕಾಲ ಸಮಯದಲ್ಲಿ ಭೀಮಾಜಿಯು ಅನಂತಪಂಡಿತನನ್ನು ಕಂಡು ಶಾಬಯ್ಯನ ಭೇಟಿಯನ್ನು ಮಾಡಿ, ಅಂದು ನಡದ ವಿನೋದಕಾರಕ ವಾದ ವಾರ್ತೆಯನ್ನು ತಿಳಿಸಿದ ಬಳಿಕ ಇಬ್ಬರೂ ಅಳ್ಳೆಬಿರಿಯುವ ಪರಿಯಂತ ನಕ್ಕರು. ಅಂತರಂಗದಲ್ಲಿ ಕಾರ್ಭಾರಿಯು ಕೊಟ್ಟ ಅನುಜ್ಞೆಗಳನ್ನನುಸರಿಸಿ ಭೀಮಾಜಿಯು ಮರುದಿವಸ ಉಭಯ ಪಕ್ಷದವರಿಗೂ ಕಚೇರಿಗೆ ಕರತರಿಸಿ ಅವರವರ ಕಡೆಯ ಸಾಕ್ಷಿಗಾರರನ್ನು ವಿಚಾರಿಸಿ ಅವರ ಹೇಳಿಕೆಗಳನ್ನೆಲ್ಲಾ ಸಂಕ್ಷೇಪವಾಗಿ ಬರಕೊಂಡನು. ರಾಮದಾಸನ ಆಲೋಚನೆಗನುಗುಣವಾಗಿ

ಚಜುಕು ತನ್ನದಲ್ಲವೆಂದು ಗರುಡಾಚಾರ್ಯನು ತನ್ನ ಹೇಳಿಕೆಯಲ್ಲಿ ಬರ ಕೊಟ್ಟನು. ಉಂಗುರಗಳು ತನ್ನದೆಂದು ಒಪ್ಪಿಕೊಂಡನು. ನೇವಳ ತಾನು ಎಳಕೊಳ್ಳಲಿಲ್ಲವೆಂದು ದಾಮೋದರ ಭಟ್ಟನು ಖಂಡಿತವಾಗಿ ಹೇಳಿದ ಕಾರಣ ಅದರ ತಲಾಷಿಯನ್ನು ಮಾಡಿಸುವ ಅವಶ್ಯವಾಯಿತು. ಯಾಕುಬ ಖಾನನನ್ನು ಅದಕ್ಕೋಸ್ಕರ ಕಳುಹಿಸೋಣಾಯಿತು. ಕೊತ್ವಾಲನೂ ಕಾರ್ಭಾರಿಯೂ—ಹೆಚ್ಚು ಸಂಬಳ ಸಿಕ್ಕುವ ಐಶ್ವರ್ಯವಂತರು, ಅವರಿಗೆ ಹಣದ ಬಿಸಾತಿಲ್ಲ. ತನಗೇನಾದರೂ ಈ ಸಮಯದಲ್ಲಿ ಕೈವಶವಾಗದೆ ಹೋದರೆ ವ್ಯರ್ಥವಾಗಿ ಒದ್ದಾಡುವದರಿಂದ ಮುಂದೆ ದೊಡ್ಡ ಬಡ್ತಿಯಾಗುವ ಪ್ರಯೋಜನ ಸಿಕ್ಕುವ ನಂಬಿಗೆಯಿಲ್ಲದೆ ಯಾಕೂಬಖಾನನು ನೇವಾಳವನ್ನು ಬಗಲಾಗೆ ನೇರಿಸಿಕೊಳ್ಳಬೇಕೆಂಬ ಇಚ್ಛೆಯುಳ್ಳವನಾಗಿ ದಾಮೋದರ ಭಟ್ಟ ನನ್ನು ಒಂದು ಗೋಪ್ಯವಾದ ಸ್ಥಳಕ್ಕೆ ಕರತಂದು, "ಇಗೋ! ನೇವಳ ನೀನು ಕಸಕೊಂಡಿರುವದು ನನ್ನ ದೃಷ್ಟಿಗೆ ಬಿದ್ದದೆ. ವೃಥಾ ಸುಳ್ಳು ಹೇಳಿ ದಣಿಯ ಬೇಡ ತೋರಿಸಿಕೊಡು" ಎಂದು ಕೇಳಿದನು. "ಎಂಥಾ ಮಾತು! ಮಷ್ಕಿರಿ ಮಾಡುತ್ತೀರೇನು ಸಾಹೇಬರೇ?" ಎಂಬ ಹಾಸ್ಯಕರವಾದ ಉತ್ತರವನ್ನು ಅವನು ಕೊಟ್ಟನು.

ಯಾಕುಬಖಾನನಿಗೆ ಕೋಪ ಬಂತು. ತಾವುಸವಿಲ್ಲದೆ ಅವನು ಭಟ್ಟನ ಎರಡು ದವಡೆಗೆ ಅಷ್ಟೆ ತಪರಾಖು ಕೊಟ್ಟ ಒಡನೆ ಅವನ ಕಣ್ಣುಗಳ ಮುಂದೆ ತಾರಾಮಂಡಲ ಕುಣಿಯುವಂತೆ ತೋಚಿತು. ಹಾಗೆಯೇ ಪೃಷ್ಠದ ಮೇಲೆ ಎರಡು ಲತ್ತೆಗಳನ್ನು ಚಡಾಯಿಸುತ್ತಲೇ ಬ್ರಾಹ್ಮಣನ ಸೊಂಟದ ಕೀಲು ತಪ್ಪಿತು. "ದಮ್ಮಯ್ಯಾ! ಮಹಾರಾಯ! ತೋರಿಸಿಕೊಡುತ್ತೇನೆ, ಒಮ್ಮೆ ಪ್ರಾಣಮಾತ್ರ ಉಳಿಸೆ"ಂದು ಅಡ್ಡಬಿದ್ದ ದಾಮೋದರನನ್ನು ಯಾಕೂಬ ಖಾನನು ಶ್ವಾನದಂತೆ ದರದರನೆ ಎಳದು, ಬೇಗ ತೋರಿಸಿಕೊಡದಿದ್ದರೆ ಕೈ ಉಗುರುಗಳ ಸಂದಿನಲ್ಲಿ ಸೂಜಿಗಳನ್ನು ನಡಿಸುವೆನೆಂದನು. ಯಾಕುಬಖಾನನ ಅನುಮತಿಪಡಕೊಂಡು. ಅಲ್ಲಿ ಸಮೀಪವಿರುವ ಕೆರೆಗೆ ಇಳಿದು, ಎರಡು ಗುಟಕು ನೀರು ಕುಡದು ಕೊಂಚ ತಂಗಾಳಿಯನ್ನು ಉಶ್ವಾಸಿಸಿ ಧಾತು ಮಾಡಿಕೊಂಡ ಬಳಿಕ ಅವಸರದಲ್ಲಿರುವ ಯಾಕುಬಖಾನನನ್ನು ನೇವಳ ಬಚ್ಚಿಟ್ಟಲ್ಲಿಗೆ ಕರತಂದು, ಆ ನಗವನ್ನು ಅವನ ಕೈಯಲ್ಲಿಕೊಟ್ಟು —ಹ್ಯಾಗಾ ದರೂ ರಕ್ಷಿಸು, ನೀನು ಹೇಳಿದಂತೆ ಕೇಳುವೆನೆಂದು ದಾಮೋದರಭಟ್ಟನು

ಅವನ ಕಾಲಿಗೆ ಬಿದ್ದನು. "ಇದು ಕೊತ್ವಾಲನ ದೃಷ್ಟಿಗೆ ಬಿದ್ದರೆ ನಿನ್ನನ್ನು ಈಗಲೇ ಸೆರೆಮನೆಗೆ ದಬ್ಬದೆ ಇರಲಾರನು! ಏನು ಮಾಡಲಿ ಹೇಳು" ಎಂದು ಯಾಕೂಬಖಾನನು ಕೇಳಿದನು. ದಾಮೋದರಗೆ ಏನೊಂದು ಯುಕ್ತಿಯೂ ಸೂಚಿಸದೆ ಹೋಯಿತು. ಯಾಕುಬಖಾನನು ಅಭಯಕೊಟ್ಟು, ಸಂತೋಷ ದಿಂದ ಮನೆಗೆ ನಡೆದನು. ಮರುದಿವಸ ಕೊತ್ವಾಲನು ಕೇಳಿದಾಗ ನೇವಳ ಕಸಕೊಂಡದ್ದೆಂಬ ಮಾತೇ ಸುಳ್ಳು; ಹಾಗೆ ನಡೆದಿರುತ್ತಿದ್ದರೆ ಆ ಠಾವಿನಲ್ಲಿದ್ದ ತನಗೆ ಆಗಲೇ ತಿಳಿಯದೆ ಹೋಗುತ್ತಿದ್ದಿಲ್ಲವೆಂದು ಕೊತ್ವಾಲನನ್ನು ಸಮಾಧಾನಪಡಿಸಿದನು. ಇಕ್ಕಡೆಯಿಂದಲೂ ಕೊತ್ವಾಲನ ಮುಂದೆ ತರಲ್ಪಟ್ಟ ಫಿರ್ಯಾದುಗಳನ್ನು ಭೀಮಾಜಿಯು ತನಿಖೆಮಾಡಿ ನೋಡಿ, ಕಾರ್ಭಾರಿಗೆ ತನ್ನ ಅಭಿಪ್ರಾಯವನ್ನು ಒಂದು ಬಿನ್ನವತ್ತಳೆಯ ಮೂಲಕವಾಗಿ ನಿವೇದಿಸಿದನು. ಅದರ ಮುಖ್ಯ ತಾತ್ಪರ್ಯವು ಮುಂದಿನ ಅಧ್ಯಾಯದಿಂದ ತೋರುವದು.

## ಮೂವತ್ತೊಂಭತ್ತು

ಶ್ರೀಕುಮುದಪುರದ ಮಠಾಧಿಪತಿ ಚಂಚಲನೇತ್ರ ಶ್ರೀಪಾದಂಗಳು ವೃದ್ಧಾಪ್ಯದದೆಸೆಯಿಂದ ತನಗೆ ಉತ್ತರಾಧಿಕಾರಿಯಾಗಿ ಸೂರ್ಯನಾರಾಯಣಾಚಾರ್ಯನೆಂಬ ಯೋಗ್ಯ ಹುಡುಗನನ್ನು ಆರಿಸಿ ಅವನಿಗೆ ಪಾಡಿಕೆಯಿರುವ ಕ್ರಮದಲ್ಲಿ ಆಶ್ರಮಕೊಡುವುದಕ್ಕೆ ಮುಹೂರ್ತವನ್ನು ನೋಡಿರುತ್ತಾರೆ. ಈ ಮಠದಮೇಲೆ ದೀರ್ಘಕಾಲದಿಂದ ದ್ವೇಷ ಉಳ್ಳವನಾದ ವೇದವ್ಯಾಸ ಉಪಾಧ್ಯನೆಂಬ ದುರ್ವಾದಿಯು ಬೇರೆ ಕೆಲವು ತುಂಟರನ್ನು ತನ್ನ ಒತ್ತಾಸೆಗೆ ತೆಗೆದುಕೊಂಡು ವಿವಿಧ ರೀತಿಯಲ್ಲಿ ಚಂಚಲನೇತ್ರರಿಗೆ ಕೇಡುಮಾಡಲಿಕ್ಕೆ ಪವಿತ್ರಕರ್ತನಾಗಿದ್ದಾನೆ. ಹಿಂದೆ ಸೂರ್ಯನಾರಾಯಣಾಚಾರ್ಯನ ಬ್ರಹ್ಮ ಪ್ರತಿಷ್ಠೆ ಕಾಲದಲ್ಲಿ ಅನಾಹುತ ಮಾಡತೊಡಗಿ ತಕ್ಷೀರುಕರವಾಗಿ ನಡಕೊಂಡದ್ದಕ್ಕಾಗಿ ಅವನಿಗೂ ಅವನ ತಮ್ಮನಿಗೂ ಪೇಷ್ಕಾರರು ಛೋಟಾ ಕಿತಾಬಿನ ಪ್ರಕರಣದಲ್ಲಿ ನಜರಬಂದಿ ಜುರುಮಾನೆ ಇತ್ಯಾದಿ ಶಿಕ್ಷೆವಿಧಿಸಿದ್ದಾಗಿ ತಿಳಿದು ಬರುತ್ತೆ. ಆದರೂ ಅವನು ಹಟಸಾಧನೆಯನ್ನು ಬಿಡದೆ ಈವಾಗ ತಗಣೆ ಮರಿಯಂತೆ ಉಪದ್ರವಕರನಾಗಿ ತೋರುವ ಹೊಸ ವಕೀಲ ರಾಮದಾಸ ರಾಯನ ದುರ್ಬೋಧನೆಯ ಬಲದಿಂದ ಮತ್ತಷ್ಟು ಉನ್ಮತ್ತನಾಗಿ ಪಟ್ಟಣದ

ವೈಷ್ಣವ ಮತಸ್ಥರಲ್ಲಿ ಹಲವು ಜಗಳಗಂಟರ ಕೂಟವನ್ನು ಪದ್ಮನಾಭ ಘನ ಪಾಟಿಯ ಮಠದಲ್ಲಿ ಕೂಡಿಸಿ ತಮ್ಮ ಪಕ್ಷಕ್ಕೆ ರಾಜಮಾರ್ಗದಲ್ಲಿ ತಿರುಗಾಡಿ ಕೊಂಡಿದ್ದ ನಿರಪರಾಧಿ ಜನರ ಮೇಲೆ ಕತ್ತಿ ಮುಂತಾದ ಆಯುಧಗಳಿಂದ ಬೆದರಿಕೆ ಹುಟ್ಟಿಸಿ ಮಣ್ಣು ಗಡ್ಡೆಗಳನ್ನು ಬಿಸಾಡುವುದರ ಮೂಲಕ ನೆಮ್ಮದಿಗೆ ಭಂಗಬರುವ ಹಾಗೆ ನಡಕೊಂಡದ್ದಲ್ಲದೆ ದಾಮೋದರ ಭಟ್ಟಗೆ ಗರುಡಾಚಾರ್ಯನೆಂಬ ಹೋಕನು ಭರಬೀದಿಯಲ್ಲಿ ಚಬುಕಿನಿಂದ ಹೊಡಿಯುವಾಗ ಹಿಂದು ಮುಂದು ಇರುವವರಲ್ಲಿ ಕೆಲವರು ಲಟ್ಟಗೆ ಸಹಾಯಮಾಡಿದ ದೆಸೆಯಿಂದ ಅವನು ಚಬುಕನ್ನು ಎಳಕೊಂಡು ಆತ್ಮರಕ್ಷಣೆಗಾಗಿ ಅದೇ ಆಯುಧದಿಂದ ಗರುಡಾಚಾರ್ಯಗೆ ಹೊಡೆದು ಹಿಮ್ಮೆಟ್ಟಿಸಿ ಮುಂದೆ ಅವನು ತಕ್ಷೀರು ನಿರಾಕರಿಸಿದರೆ ಅವನ ಮೇಲೆ ನಿರಾನುಮಾನವಾದ ಪ್ರಮಾಣರೂಪವಾಗಿ ಅಂಗೀರಿಸಲ್ಪಡುವದಕ್ಕೋಸ್ಕರ ಅವನ ಕೈ ಉಂಗುರಗಳನ್ನು ಸೆಳಕೊಂಡು ಹಾಜರುಪಡಿಸಿದ್ದಾನೆ. ಗರುಡಾಚಾರ್ಯನನ್ನು ಕೇಳಿದರೆ ಚಬುಕು ತನ್ನದ್ದಲ್ಲವೆಂದರೂ ಉಂಗುರಗಳು ತನ್ನ ಸೊತ್ತುಗಳೆಂದು ಒಪ್ಪುತ್ತಾನೆ. ಮತ್ತು ತನ್ನ ಸೊಂಟದ ಜೋಡೆಳೆ ನೇವಳವನ್ನು ಸಹಾ ದಾಮೋದರನು ಕಸುಕೊಂಡಿರುವನೆಂದು ನುಡಿಯುತ್ತಾನೆ. ತಾನು ಹಾಗೆ ಮಾಡಲಿಲ್ಲವೆಂದು ಅವನು ಪ್ರತಿವಾದಿಸುತ್ತಾನೆ. ತುಡುಗುಮಾಡುವುದಕ್ಕೆ ದಾಮೋದರಗೆ ಮನಸ್ಸಿರುತ್ತಿದ್ದರೆ ಆತನು ಉಂಗುರಗಳನ್ನು ಹಾಜರುಮಾಡುತ್ತಿದ್ದನೇ? ಚಬುಕು ಮಾತ್ರ ಹಾಜರು ಮಾಡಿದ್ದರೆ ನಾಕಿತ್ತಲ್ಲವೇ! ಈ ಕಾರಣಗಳಿಂದ ಗರುಡಾಚಾರ್ಯನು ಮಾಡುವ ಅಸಂಭವ ಸಾಧನೆಯು ಒಡಂಬಡತಕ್ಕದ್ದಾಗಿರುವದಿಲ್ಲ. ಚಬುಕಿನಿಂದ ದಾಮೋದರಗೆ ಹೊಡೆಯಲಿಲ್ಲವೆನ್ನುವ ಗರುಡಾಚಾರ್ಯನ ಮಾತಿನಮೇಲೆ ಏನೇನೂ ವಿಶ್ವಾಸವಿಡಕೂಡದು. ಕನಿಕರವಿಲ್ಲದೆ ಹೊಡೆದ ಪೆಟ್ಟುಗಳ ಗುರ್ತಗಳು ದಾಮೋದರನ ಮೈತುಂಬಾ ಅವೆ ಅವನು ತಾನಾಗಿಯೇ ಹೊಡಕೊಂಡನೆಂದು ಒಬ್ಬ ಮರುಳನಾದರೂ ಹೇಳುವದಿಲ್ಲ ಈ ಅಪರಾಧಿಗಳ ಮೇಲೆ ತರಲ್ಪಟ್ಟ ದೋಷಾರೋಪಣೆಯು ಬಡಾ ಕಿತಾಬಿನ ಪ್ರಕರಣವಾಗಿರುತ್ತದೆ. ಅದರ ಇತ್ಯರ್ಥಮಾಡಲಿಕ್ಕೆ ಅಧಿಕಾರ ಉಳ್ಳ ಕಾರಭಾರಿಗಳ ಸನ್ನಿಧಾನಕ್ಕೆ ವಿನಯಪೂರ್ವಕವಾಗಿ ನನ್ನ ತನಖಿಯ ಫಲವನ್ನು ಬಿನ್ನವಿಸಿರುತ್ತೇನೆ, ದೇವರು.

ಹೀಗಿನ ಬರವಣಿಗೆಯುಳ್ಳ ಮನವಿಯ ಸಮೇತ ಗರುಡಾಚಾರ್ಯ

ರಾಮುದಾಸರಾಯ, ವೇದವ್ಯಾಸ ಉಪಾಧ್ಯ, ಪದ್ಮನಾಭ ಘನಪಾಟಿ, ಖಗ ವಾಹನ ಭಟ್ಟ, ಜ್ಞಾನಸಾಗರರಾಯ, ಲಕ್ಷ್ಮೀಲೋಲಾಚಾರ್ಯ, ಪತ್ರವಡೆ ರಂಗಾಚಾರ್ಯ, ಶಾರ್ಙ್ಗಧರಉಪಾಧ್ಯ, ಮೀನಾಕ್ಷೈಯ್ಯ, ಕೇಶವಹತ್ವಾರಿ, ಮುಸ್ಕಿನೊಡೆ ಗುರುರಾಯ, ನಕ್ಷತ್ರಿ, ಉಪೇಂದ್ರ, ವರುಣ, ಇಷ್ಟು ಜನ ರನ್ನು ಕಾರಭಾರಿಯ ಮುಂದೆ ಇರಿಸೋಣಾಯಿತು. ಉಂಗುರಗಳನ್ನು ಕಳು ಹಿಸಬೇಕಾದರೆ ಆದಿಯಲ್ಲಿಯೇ ಅಮೂಲ್ಯವಾದ ರತ್ನಗಳಲ್ಲಿ ಒಂದೆರಡು ಮಾತ್ರ ಉಂಗುರಗಳಲ್ಲಿ ಇರಗೊಟ್ಟು ಬೇರೆಯವುಗಳನ್ನು ಎಬ್ಬಿಸಿ ಅವುಗಳ ಪ್ರತಿಯಾಗಿ ಗಾಜಿನ ಹರಳುಗಳನ್ನು ಸೇರಿಸಿದ ಒಂದು ಚಮತ್ಕಾರವು ಯಾರಿಂಪಲೋ ನಡೆಯಿತು. ದಾಮೋದರ ಭಟ್ಟ ಆದಿಯಾಗಿ ಅನೇಕ ಜನರ ಮೇಲೆ ರಾಮುದಾಸರಾಯನ ಆಲೋಚನೆಗನುಗುಣವಾಗಿ ವೇದವ್ಯಾಸ ಉ ಪಾಧ್ಯನು ಕೊಟ್ಟ ಫಿರ್ಯಾದು ಸ್ವತೇವ ಸಟೆಯಂತಾಯಿತು. ಇದು ಬಹಳ ಸಂಕಷ್ಟಕರವಾಗಿ ಅಪರಾಧಿಗಳಿಗೆ ತೋಚಿ ಮುಂದಿನ ಉಪಾಯವೇನೆಂದು ರಾಮುದಾಸರಾಯನನ್ನು ಕೇಳಿದರು. “ಪರ್ವಾ ಇಲ್ಲ, ಪುನರ್ವಿಮರ್ಶಾಧಿಪತಿ ಗಳಿಗೆ ಕೆಲಸವೇನು? ಸುಮ್ಮನೆ ಧೈಲಿ ಧೈಲಿ ಸಂಬಳಕೊಟ್ಟು ರಾಜರು ಇಟ್ಟಿ ರುವರೇನು? ಅವರ ಜನಾಬಿಗೆ ಅರ್ಜಿ ಬರಕೊಂಡು ಈ ಕಾರಭಾರಿಯ ದಪ್ತ ರದಿಂಪ ಮೇಲಧಿಕಾರಸ್ಥರ ಮುಂದೆ ಹಾಕಿಸಿಬಿಡುವುದು ಎಷ್ಟು ದೊಡ್ಡ ಕೆಲಸ; ಹೆದರಬೇಡಿ” ಎಂದು ವಕೀಲನು ಹೇಳುತ್ತಲೇ “ಶಹಬ್ಬಾಸ್ ಶಹ ಬ್ಬಾಸ್! ಬದುಕಿರಪ್ಪಾ! ನನ್ನ ಧನಿ ನಿನ್ನ ಪಾದವೇ ಗತಿ” ಎಂದು ವೇದವ್ಯಾ ಸನು ಅವನನ್ನು ಯಥೇಚ್ಛ ಉಬ್ಬೇರಿಸಿಬಿಟ್ಟನು. ರಾಮುದಾಸನು ಆಗಲೇ ದೊಡ್ಡದೊಂದು ಮನವಿಯನ್ನು ಬರೆದು ಪುನರ್ವಿಮರ್ಶಾಧಿಪತಿಯ ಬಳಿಗೆ ಕಳುಹಿಸಿಕೊಟ್ಟನು.

ಆ ಕಾಲದ ಪುನರ್ವಿಮರ್ಶಾಧಿಪತಿಯ ಹೆಸರು ಕನಕಸಭಾನಾಯಕ. ಈ ದೊಡ್ಡ ಉದ್ಯೋಗಸ್ಥನು ಪ್ರಾಮಾಣಿಕತೆಯಲ್ಲಿ ಖ್ಯಾತನಾಗಿದ್ದನು. ಪರ ಧನವು ತೃಣಸಮಾನವಾಗಿಯೂ ಪರಕಾಮಿನಿಯು ಮಾತೆಯಂತೆಯೂ ಅವನಿಗೆ ತೋರುವುದೇ ಸರಿ. ಷಟ್ಪುರನಗರದಲ್ಲಿ ಇಂಥಾ ಸತ್ಯಪುರುಷನಿನ್ನೊ ಬ್ಬನು ಸಿಕ್ಕುವದು ಅತಿದುರ್ಲಭವೆಂದು ಸರ್ವರಬಾಯಿಯಿಂದಲೂ ಬರುವದು. ಈ ಸದ್ಗುಣವಂತನ ಮುಂದೆ ತರಲ್ಪಟ್ಟ ಮನವಿಯ ತೀರ್ಮಾನಕ್ಕೋಸ್ಕರ ಪದ್ಧತಿಗನುಸಾರವಾಗಿ ಒಂದು ದಿವಸ ನೇಮಿಸಲಾಯಿತು. ಆ ದಿನ ಸಂಬಂಧ

ಪಟ್ಟೆ ಕಕ್ಷಿಗಾರರು ವಕೀಲರು ಇದ್ದರೆ ಅವರ ಸಹಿತ ಇಲ್ಲದಿದ್ದರೆ ತಾವಾಗಿಯೇ ಕಚೇರಿಯಲ್ಲಿ ಕಾದಿರಬೇಕೆಂದು ಅಪ್ಪಣೆಯು ಬರಹಮೂಲಕ ಮಾಡೋಣಾಯಿತು. ಇಷ್ಟಾಗುತ್ತಲೇ, ಅವಸರದಲ್ಲಿ ಪ್ರಥಮಸ್ಥಲದವನಾದ ರಾಮುದಾಸರಾಯನು "ಈಗ ಹ್ಯಾಗೆ? ಬಿಡುತ್ತೇನೋ ನೋಡಿ. ಈ ಬಣಗುಗಳೆಲ್ಲಾ ಉಂಡ ತಾಯಿಯ ಹಾಲೂನೂವೇ ಕಾರಿಸಿಬಿಡುವೆನು." ಎಂದು ಮಿಾಸೆಕೊನೆಗಳನ್ನು ಹುರಿಹಾಕುತ್ತಾ ಬೀದಿ ಉದ್ದಕ್ಕೂ ಅಲೆದಾಡಲಿಕ್ಕಾದನು. ಈ ಸಮಾಚಾರವು ಭೀಮಾಜಿಯ ಕಿವಿಗೂ ಭೀಮಾಜಿಯಿಂದ ಶಾಬಯ್ಯನ ಕಿವಿಗೂ ಬಿತ್ತು. ಕನಕಸಭಾನಾಯಕಗೆ ಶಾಬಯ್ಯನಮೇಲೆ ಕೊಂಚ ಪ್ರೀತಿಯಿತ್ತು. ಯಾಕೆಂದರೆ ಅವನು ಕೌಶಲವಲ್ಲಿ ಕಡಿಮೆಯುವನಾಗಿರಲಿಲ್ಲ. ಹಾಗೂ ಲಂಚಗಾರನೆಂಬ ಅಪವಾದಕ್ಕೆ ಬಿದ್ದಿರಲಿಲ್ಲ. ಒಂದು ದಿನ ಬೆಳಗಿನ ಸಮಯ ತಾನು ಆಕಸ್ಮಾತ್ತಾಗಿ ಮಾತನಾಡಲು ಸಿಕ್ಕಿದಹಾಗೆ ತೋರುವಂತೆ ಉಪಾಯಮಾಡಿ ಮೇಲಧಿಕಾರಿಯು ತಿರುಗಾಡಿಕೊಂಡು ಬರುವ ವೇಳ್ಯ ಬೀದಿಯಲ್ಲಿ ನಿಂತು ಸಲಾಂ ಕೊಟ್ಟು ಬೇರೆ ಬೇರೆ ಪ್ರಸ್ತಾಪಗಳನ್ನು ಮಾಡುತ್ತಾ ಮನೆತನಕ ಆವನನ್ನು ಹಿಂಬಾಲಿಸಿಕೊಂಡು ಹೋದನು. ಮನೆವರೆಗೆ ಬಂದ ಶಾಬಯ್ಯನನ್ನು ಆಸನಕೊಟ್ಟು ಕೂರಿಸಿದಾಗ ರಾಮುದಾಸನ ಮನವಿಯ ನೆನಪು ಬಂದು ಅವನು ಹೀಗೆಂದನು—"ಏನಯ್ಯಾ ಶಾಬಯ್ಯ! ನಿಮ್ಮ ಮೇಲೆ ಅಪವಾದರೂಪವಾದ ಒಂದು ಮನವಿ ಬಂದದೆ. ನಿಮ್ಮ ಮುಂದೆ ಇರುವ ಪ್ರಕರಣವನ್ನು ನಾವೇ ತರಿಸಿಕೊಂಡು ಫೈಸಲು ಮಾಡಬೇಕಾಗಿ ಮನವಿದಾರರು ಬೇಡಿಕೋಥಾರೆ. ಹೀಗಾಗಲಿಕ್ಕೆ ಏನು ಕಾರಣ?" ಆವಾಗ ಥಟ್ಟನೆ ಎದ್ದು ನಿಂತು ಶಾನೆ ಭಯಪಟ್ಟು ಅಂಗೋಪಾಂಗಗಳಲ್ಲಿ ಕಂಪನ ಉಂಟಾದವನಂತೆ ಗದ್ಗದಸ್ವರದಿಂದ ಶಾಬಯ್ಯನು ಸಣ್ಣದೊಂದು ಪ್ರಸಂಗ ರೂಪವಾದ ಉತ್ತರವನ್ನು ಕೊಟ್ಟನು. ಹ್ಯಾಗಂದರೆ—

"ಬುದ್ಧೀ! ಇದುವರೆಗೂ ಸಂಭಾವಿತನಾಗಿ ತಮ್ಮ ಅನುಗ್ರಹವೆಂಬ ಸೂರ್ಯಕಾಂತಿಯ ಪ್ರಭಾವದಿಂದ ಶತ್ರುಗಳನ್ನು ಜಯಿಸಿ ಸತ್ಯಶೀಲ, ದುರ್ಗುಣಶೂನ್ಯ ಸುಚರಿತನೆನಿಸಿ ಭಗವತ್ಕಟಾಕ್ಷದ ಬಲದಿಂದ ಧರ್ಮಪತ್ನಿ ಸುಪುತ್ರವರ್ಗವನ್ನು ಸಾಕಿಸಲಹಿ ಇನ್ನೊಬ್ಬನ ದಂಬಡಿಯನ್ನು ವಮನವಂತೆ ಹೇಸುವ ಬಡಕಿಂಕರನಾದ ನನ್ನ ಮೇಲೆ ಇದೀಗ ಚೊಚ್ಚಲುದೂರು. ರಾಮುದಾಸನೆಂಬ ನೀಚಸ್ವಭಾವದ ಹೊಸ ವಕೀಲನ ಪನ್ನಿ ಅನಕ ತಡಕೊಳ್ಳ

ವದೇ ಪ್ರಯಾಸ. ಅದು ಹಾಗಿರಲೆಂದರೆ ಅವನಿಗಿರುವ ಪ್ರವ್ಯದಭಿಲಾಷೆಯನ್ನು ಪೂರೈಸಿಕೊಳ್ಳುವದಕ್ಕೆ ನ್ಯಾಯವಾದ ಮಾರ್ಗ ತಿಳಿಯದೆ ಯಾರಮನೆಯಾದರೂ ಹೋಗಲಿ, ಯಾವ ಸ್ತ್ರೀಯ ಕರಿಮಣಿಯಾದರೂ ಹರಿಯಲಿ, ತನ್ನ ಬೊಕ್ಕಸ ತುಂಬಲೆಂದು ಬಕಮಾರಿಯ ಹಾಗೆ ಬಾಯಿತೆರೆದು ಕೊಂಡಿರುವ ಶಂಖಪಾಳನ ಬಸುರಿನಿಂದ ಹೊರಟ ವಿಷಪ್ರಾಣಿಯ ಸ್ವಭಾವಯುಕ್ತನಾಗಿ ಸಜ್ಜನರ ಪೀಡೆ ದುರ್ಜನರ ಪರಿಪಾಲನೆಯಲ್ಲಿ ಆಸಕ್ತನಾಗಿಯೂ ಲೋಕ ಕಂಟಕನಾಗಿಯೂ ಸಚರಾಚರದ ಅರಿಯಾಗಿಯೂ ಜನನಕ್ಕೆ ಬಂದವನೋ ತಿಳಿಯದು. ನಾನು ಅನೂನ ಸುಶೀಲತೆಯಿಂದ ನಡಕೊಳ್ಳುವವನೆಂದು ಸನ್ನಿಧಾನಕ್ಕೆ ಗೋಚರವಿರುವ ವಿಷಯದಲ್ಲಿ ಪದೇ ಪದೇ ಶ್ರಮಪ್ರದವೆನ್ನಿಸಿಕೊಳ್ಳುವ ಹಾಗಿನ ಅಪ್ರಾಸಂಗಿಕ ಮಾತುಗಳನ್ನಾಡಿ ಖಾವಂದರ ಅಮೂಲ್ಯವಾದ ಸಮಯವನ್ನು ಹಾಳುಮಾಡಲೇ? ಛೀ, ಹಾಗೆಂದೂ ಮಾಡಲಾರೆ. ಕೇವಲ ದುರಾಗ್ರಹಿಯಾದ ವೇದವ್ಯಾಸ ಉಪಾಧ್ಯನೆಂಬ ಹಾರುವನ ಹಾರಾಟವು ವರ್ಣಿಸಲಸಾಧ್ಯ. ಕಾಸೊಂದು ವೆಚ್ಚಮಾಡಲಿಕ್ಕೆ ಅವನಿಗೆ ತಿಳಿಯದು. ಕುಯುಕ್ತಿಗಳನ್ನು ನಡೆಸಿ ಇನ್ನೊಬ್ಬನ ಮನೆ ಹಾಳಾಗಿ ತನ್ನ ಮನೆ ತುಂಬಲೆಂಬುವ ದುರ್ಧರ ದುರ್ಜನಮಣಿಯಾಗಿರುವ ಅವನ ಮೂಲಪ್ರಸಾದದಿಂದ ನಿಸ್ಪೃಹನಾದ ನನ್ನ ಮೇಲೆ ಯಜಮಾನರ ಜನಾಬಿನಲ್ಲಿ ನಾನು ದುರ್ನಿರತನೆಂಬ ಅನ್ವಯವಾಗುವ ಅಪವಾದಕ್ಕೆ ಬೀಳುವ ಸಂಭವ ಒದಗಿರುವದೆಂದು ಬಹಳ ಪಶ್ಚಾತ್ತಾಪದಿಂದ ಬೆಂಡಾಗಿರುತ್ತೇನೆ. ಸನ್ನಿಧಾನದಿಂದ ಶೀಲದ ಕುರಿತು ಇದ್ದರೆ ಮೊದಲೇ ನನಗೆ ಗುಣಕರವಾದ ಅಭಿಪ್ರಾಯ ಪಡಲಿಕ್ಕೆ ಅನಾನುಕೂಲವಾಗಿಯದಾದ ಪಕ್ಷದಲ್ಲಿ ಇನ್ನಾದರೂ ಕೂಲಂಕಶವಾದ ಪರಿಶೋಧನ ಪರಿಮುಖ ಪ್ರಥಮತಃ ನನ್ನ ಸ್ವರೂಪವನ್ನು ನಿರ್ಣಯಿಸಿದ ಮೇಲೆ ನನ್ನ ಪರಿಭವಕಾರಕವಾದ ಆಜ್ಞೆಯಾಗಬೇಕಲ್ಲದೆ ಈಗಲೇ ಅಪರಾಧಿಗಳ ಅರ್ಜಿಯ ಮತಲಬಿನ ಮೇಲೆ ಭಾರವಿಟ್ಟು ಅವನ ಅರಿಕೆಯನ್ನು ನಡಿಸೋಣಾಗದೆಂಬ ಭರವಸೆ ಉಳ್ಳವನಾಗಿದ್ದೇನೆ. ಪರಂತು ಕುಹಕ ಮತ್ತು ಲಾವಕ ಜನರು ವಿವಿಧ ಕಸಕುಗಳನ್ನು ರಚಿಸಿ ನಿರಪರಾಧಿಯಾದ ನನ್ನ ಪೀಡನೆಯ ಉದ್ದೇಶವುಳ್ಳ ಸಾಧನೆಗಳನ್ನು ನಡಿಸುವದರಿಂದ ನನ್ನ ಅಭಿಮಾನ ಭಂಗವಾದರೆ ನಾನು ಬದುಕಿರುವದಕ್ಕಿಂತ ಸಾಯುವದೇ ಲೇಸು. ಇನ್ನೊಂದು ಅರಿಕೆ."

ಎಡೆಬಿಡದೆ ಸುರಿಯುವ ಘೋರವಾದ ಮಳೆಯಹಾಗೆ ಶಬ್ದಮಂಜರಿಯ ಸುಸ್ವರ ಪದಗಳನ್ನೆಲ್ಲಾ ಪೋಣಿಸಿ ಉಪನ್ಯಾಸರೂಪವಾಗಿ ಬಿನ್ನವಿಸುವ ಶಾಬಯ್ಯನನ್ನು ಕನಕಸಭಾನಾಯಕನು ಫಕ್ಕನೆ "ಸದ್ದೋಸದ್ದು" ಎಂದು ತಡಿಯುವದರ ದ್ವಾರ ತನ್ನ ಅಮೂಲ್ಯವಾದ ಸಮಯವು ಮತ್ತು ಹಾಳಾಗದಂತೆ ಮಾಡಿದ ಪೈಸಕ್ಕೆ ಬಾಗಲ ಸಂದಿನಲ್ಲಿ ನಿಂತುಕೊಂಡು ಕಾಫಿಯನ್ನು ಕುಡಿಯಲಿಕ್ಕೆ ಬಾರೆಂದು ಕೈಸನ್ನೆಯಿಂದ ಪತಿಯನ್ನು ಕರೆಯುವ ಕನಕಮ್ಮಾಲು ಮೆಚ್ಚಿ ಕಿಸ್ಕನೆ ನಕ್ಕಳು. ಆವಾಗ ಸ್ವಪ್ನಾವಸ್ಥೆಯಲ್ಲಿರುವವನು ಎಚ್ಚರವಾಗಿ ಬೆರಗಾಗುವಂತೆ ಶಾಬಯ್ಯನು ತಟಸ್ಥನಾಗಿ ನಾಲಿಗೆಗೆ ಬಹು ಹೆಚ್ಚು ನಲಿಗೆ ಕೊಟ್ಟದ್ದು ಅನುಚಿತವೆಂದು ಅವನಿಗೇನೇ ಕಂಡು ಬಂತು. ಅದೇ ಸಮಯದಲ್ಲಿ ಆ ಉದ್ಯೋಗಸ್ಥನ ಮುಖದಲ್ಲಿ ನಾಚಿಕೆಯ ಛಾಯೆಯನ್ನು ಕಂಡು ಕನಕಸಭಾನಾಯಕನು ಅವನ ಮೇಲೆ ಕನಿಕರಪಟ್ಟು ಮನೆಗೆ ಬಂದವನಿಗೆ ಒಂದು ವಿಧವಾದ ಧಿಕ್ಕಾರವಾಗಿ ವಿಷಾದ ಹುಟ್ಟಿತೆಂಬ ಊಹೆಯಿಂದ ಅವನ ಮನಸ್ಸಿಗೆ ಯಥೋಚಿತವಾದ ಹರುಷವನ್ನುಂಟುಮಾಡುವದಕ್ಕೆ ಯತ್ನಿಸಿದನು. "ಅಯ್ಯಾ ಶಾಬಯ್ಯಾ, ಸುಮ್ಮಗಾದರೂ ಬೆದರ ಬೇಡ ಕಂಡಿಯಾ! ಧಾರುಥೇನೂ ಹೇಳಲಿ. ನಾನು ಹಾಂಗೆಲ್ಲಾ ಕೇಳುವವನೇ? ನಿನ್ನ ಮಾನಭಂಗ ಮಾಡತಕ್ಕವನು ನಾನಲ್ಲಕಾಣೊ; ಸುಮ್ಮಗೆ ಮನಸಿನಾಗೆ ಕರಗಬೇಡ. ಹಾಗೆಂದು ಜಾಗ್ರತೆ ತಪ್ಪಿ ಸಿಟ್ಟಿನಿಂದಾಗಲೀ ಮತ್ಯಾತರಿಂದಾಗಲೀ ಅನೀತಿಗೆ ಆಸ್ಪದ ಕೊಟ್ಟುಬಿಟ್ಟಿಯಾ? ನಾನು ಮತ್ತೆ ಯಮನಂತೆ ಕನಲುವವನೇ ಸರಿ! ನೋಡಿಕೋ! ಇನ್ನು ನನ್ನ ನಿನ್ನ ಸಮಯ ವ್ಯರ್ಥಹಾಳಾಗಲ್ಯಾಕೆ? ಮನೆಗೆ ನಡೆದು ಬಿಡು; ಸೌಖ್ಯದಲ್ಲಿ ಊಟಮಾಡಿ ಕೆಲಸ ನೋಡಿಕೊಂಡಿರು" ಎಂದು ಅಭಯಪ್ರದ ಉತ್ತರವು ಸಿಕ್ಕಿತು. ಸೂರ್ಯನಿಂದ ರೆಕ್ಕೆಗಳನ್ನು ಸುಡಿಸಿಕೊಂಡು ಬಿದ್ದ ಸಂಪಾತಿಗೆ ಶ್ರೀರಾಮನನ್ನು ಕುರಿತು ವಾರ್ತೆಯು ಕಪಿ ಮುಖದಿಂದ ಕಿವಿಗಳಿಗೆ ಬಿದ್ದು ಪುನಃ ರೆಕ್ಕೆಗಳು ಹುಟ್ಟಿದಂತೆ ಹರುಷಯುತನಾಗಿ ಶಾಬಯ್ಯನು ವಾಯುವೇಗದಿಂದೆಂಬಂತೆ ಮನೆಗೆ ಹೋಗಿ ಭೀಮಾಜಿಯನ್ನು ಕರಿಸಿ ಅಂದಿನ ಸುವಾರ್ತೆಯನ್ನು ತಿಳಿಸಿದನು. ಇಂಥಾದ್ದೊಂದು ಸಂದರ್ಭವು ಎಂದು ದೊರಕುವದೆಂದು ಅವಕಾಶ ನಿರೀಕ್ಷೆಯಲ್ಲಿರುವ ಭೀಮಾಜಿಯು ತಡೆಯದೆ ವಾಗ್ದೇವಿಯ ದರುಷನವನ್ನು ತಕ್ಕೊಂಡು ಪುನರ್ವಿಮರ್ಶಾಧಿಕಾರಿಯ ನ್ಯಾಯಸ್ಥಾನದಲ್ಲಿ ವಾದಿಗಳು

ಮನವಿ ಮಾಡಿ ನಡಿಸುವ ವೈನಗಳು ನಿಷ್ಫಲವಾಗುವ ಹಾಗೆ ಮಾಡುವಪಕ್ಕೆ ಶಾಬಯ್ಯನು ಒಳ್ಳೆ ವೈನವನ್ನು ಮಾಡಿರುವೆನೆಂದು ಹೇಳಿ ಅವರಿಗೂ ಚಂಚಲ ನೇತ್ರರಿಗೂ ತನ್ನ ಮೇಲಿರುವ ಪ್ರೀತಿಯು ವೃದ್ಧಿಯಾಗಮಾಡಿದನು.

## ನಲುವತ್ತು

ಕನಕಸಭಾನಾಯಕನು ನ್ಯಾಯಸ್ಥಾನದಲ್ಲಿ ಸಾಕ್ಷಾತ್ ಯಮಧರ್ಮನಂತೆ ನಿಷ್ಕರುಣಿಯು ನೀತಿಧರ್ಮವನ್ನು ಪರಿಪಾಲಿಸುವದರಲ್ಲಿ ಸ್ವಂತಮಗನಿಗಾದರೂ ಲಕ್ಷ್ಯಮಾಡದ ಸ್ವಭಾವವುಳ್ಳವನು. ಪರಂತು ಕೊಂಚ ಸ್ತುತ್ಯಪ್ರಿಯನೂ ಚಾಡಿಮಾತುಗಳಿಗೆ ಕಿವಿಕೊಡುವ ದುರಭ್ಯಾಸದವನೂ ಆಗಿರುವ ಕುಂದು ಮಾತ್ರ ಸೂರ್ಯಚಂದ್ರಾದಿಗಳಿಗೆ ಗ್ರಹಣ ತಗಲುವ ಹಾಗೆ ಅವನಿಗೆ ಅಂಟಿಕೊಂಡಿತ್ತು. ಹಾಹಾ ಹೀಹೀಗಳಂತಿರುವ ವೇದವ್ಯಾಸ ಉಪಾಧ್ಯನೂ ಅವನ ಅನುಜ ರಾಘವೇಂದ್ರನೂ ರಾಮದಾಸನ ಧೈರ್ಯ ಬಲದಿಂದ ಏನನ್ನಾದರೂಮಾಡಿ ಜಯ ಪಡೆಯಬೇಕೆಂಬ ಹಟದಿಂದ ಕಚೇರಿ ಬಾಗಲು ಕಾಯುವದರಲ್ಲಿ ಕಡಿಮೆಮಾಡಲಿಲ್ಲ. ನಿಯಮಿತ ದಿನ ಕ್ಲಪ್ತಸಮಯಕ್ಕೆ ಆ ಅಧಿಕಾರಿಯು ಒಳ ಅಧಿಕಾರಸ್ಥರ ವ್ಯವಹರಣೆಗಳನ್ನೆಲ್ಲಾ ಮೊಕದ್ದಮೆಯ ಲವಾಜಮೆಗಳಿಂದ ತಿಳಿಯುವಷ್ಟರ ಮಟ್ಟಿಗೆ ಗ್ರಹಿಸಿನೋಡಿ ಪಕ್ಷಪಾತದ ಅಪವಾದಕ್ಕೆ ಗುರಿಯಾಗುವ ಸ್ವಭಾವದ ಯಾವದೊಂದು ವೈಪರೀತ್ಯ ನಡಿಸಿದ್ದು ಕಂಡುಬಾರದಿರುವ ಪ್ರಯುಕ್ತ ರಾಮದಾಸನ ಅಧಿಕಪ್ರಸಂಗ ಲೆಕ್ಕಿಸದೆ ಪ್ರಕರಣವನ್ನು ಕಾರಭಾರಿಯಿಂದಲೇ ವಿಮರ್ಶೆಯಾಗಲಿಕ್ಕೆ ಆಕ್ಷೇಪವಿರಕೂಡದಾಗಿ ತೀರ್ಮಾನಿಸಿದನು. ಈ ವಾರ್ತೆಯು ವಾಯುವೇಗದಿಂದ ಊರು ಪರಊರಿಗೆ ಹಬ್ಬಿತು. ವಿಪರೀತ ಧೈರ್ಯವಂತನಾದ ರಾಮದಾಸನು ಮುಖಕಂದಿದವನಾಗಿ ಮೂಗಿನ ಮೇಲೆ ಬೆರಳಿಟ್ಟು ಮುಂದಿನಿಂದಲೂ ಸೋತು ಕಂಗಾಣದ ವೇದವ್ಯಾಸನು ಆಶಾಭಂಗ ಪ್ರದರ್ಶನಕ್ಕೆ ಚಿನ್ಹೆಯನ್ನು ತೋರಿಸುವದಕ್ಕೆ ಉಭಯಪಾಣಿಗಳನ್ನು ತಲೆಯ ಮೇಲಿರಿಸಿಕೊಂಡು ಹಿಂದಿನಿಂದಲೂ ಅಮಿತಭಾರವುಳ್ಳ ವಸ್ತುವನ್ನು ಹೇರಿದ ಸಂಬಂಧ ಕುಸಿದು ಬಳಲುವವನ ಗತಿಯನ್ನು ಹೊಂದಿದ ಗರುಡಾಚಾರ್ಯನು ನಿಸ್ತೇಜವದನನಾಗಿ ಪೂರ್ವ ಸುಮಂಗಲೆಯರ ಹಾಗೆ ಮುಸುಕು ಹಾಕಿಕೊಂಡು ಚಿಂತೆಯಲ್ಲಿ ಮುಳುಗಿದರು.

ಈ ಶುಭವಾರ್ತೆಯು ಕಾರಭಾರಿಯ ಕಿವಿಗಳಿಗೆ ಬಿದ್ದಕೂಡಲೇ ಅವ ನಿಗೆ ನವಯುವ್ವನ ಇನ್ನೊಮ್ಮೆ ಬಂದಂತಾಗಿ ಉಬ್ಬೇರಿದನು. ಅತಿಸುಲಭ ವಾಗಿ ಜಯಸಿರಿಯು ತಮಗೆ ವೈದೋರಿದಳೆಂದು ಹಿಗ್ಗಿದ ಭೀಮಾಜಿಯು ಅಂದು ಸಾಯಂಕಾಲ ವಾಗ್ದೇವಿಯ ಒಟ್ಟಿನಲ್ಲಿ ಶಾಬಯ್ಯನನ್ನು ಕಂಡನು. ವಾಗ್ದೇವಿಯು ಹರುಷಾಶ್ರುಗಳನ್ನು ಸುರಿಸಿದಳು. ಮಂದಸ್ಮಿತವದನದಿಂದ ಜಯಮುದೋನ್ಮತ್ತತೆಯನ್ನು ತಾಳಿದ ಕಾರಭಾರಿಯು ಬಂದಕಾರಣವೇ ನೆಂದು ವಿಚಾರಿಸಲಾಗಿ–"ತಮ್ಮ ದಯದಿಂದ ಇದುವರೆಗಿನ ಕೆಲಸವೆಲ್ಲಾ ಸುಧಾರಿಸಿಕೊಂಡಂತಾಯಿತು. ಆಶ್ರಮಕ್ಕೆ ನೆನದ ಲಗ್ನಕ್ಕೆ ಇನ್ನು ದಿನತ್ರ ಯವೇ ಉಂಟು. ಈ ಮಂಗಲಕಾರ್ಯ ನಿರ್ವಿಘ್ನವಾಗಿ ನಡೆಯುವದಕ್ಕೆ ಶತ್ರುಬಾದೆಯಲ್ಲದೆ ಇನ್ನೊಂದು ಅಡಚಣೆ ತಮ್ಮ ಪಾದದ ಅನುಗ್ರಹದಿಂದ ಇರದು. ಅಭಯಕೊಟ್ಟು ರಕ್ಷಣೆಯ ವಾಗ್ದಾನ ಪಾಲಿಸಿದ ಮಾತ್ರವೇ ಅದನ್ನು ನೆರವೇರಿಸುತ್ತೇನೆ. ಅಲ್ಲವಾದರೆ ಅದರಗೊಡವೆಯೇ ಬಿಟ್ಟು ಬಿಡು ವೆನು" ಎಂದು ವಾಗ್ದೇವಿಯು ಹೇಳಿಕೊಂಡಳು. ನಿರ್ಭಯವಾಗಿರಲಿಕ್ಕೂ ಸಂತಸದಿಂದ ಶುಭಕೆಲಸವನ್ನು ತೊಡಗಲಿಕ್ಕೂ ಅಭಯಕೊಡಲ್ಪಟ್ಟಿತು.

ಇನ್ಯಾಕೆ ಹಳವಳಿಸೋಣ! ವಾಗ್ದೇವಿಯು ಅತ್ಯಾನಂದದಿಂದ ಮಠಕ್ಕೆ ಮರಳಿ ಯತಿಯನ್ನು ಶೀಘ್ರ ಕಂಡು ಕಾರಭಾರಿಯು ಇತ್ತ ಅಭಯದಾನದ ಸುವಿಶೇಷವನ್ನು ಅರಿಕೆಮಾಡಿದಾಗ ಬೇಗ ಚಂಚಲನೇತ್ರರು ವೆಂಕಟಪತಿ ಆಚಾರ್ಯನನ್ನು ಕರೆಸಿ ಸೂರ್ಯನಾರಾಯಣನ ಆಶ್ರಮಕ್ಕೆ ಸೋಪಸ್ಕರ ಗಳನ್ನು ಜಾಗ್ರತೆಯಿಂದ ಒದಗಿಸಿಕೊಳ್ಳಬೇಕೆಂದರು. ಒಳ್ಳೇಅನುಭವಸ್ಥ ಮತ್ತು ಯುಕ್ತಿವಂತ ಪಾರುಪತ್ಯಗಾರನಾದ ಆ ಪುರುಷನು ಕ್ಷಿಪ್ರ ಸಕಲ ಸಾಹಿತ್ಯಗಳನ್ನು ಸವಣಿಸಿ ಮಾತಿನವಾಶಿ ಬಾರದಂತೆ ಮುಂಜಾಗ್ರತೆ ತಕ್ಕೊಂಡನು. ದಿಗಿಲುಹತ್ತಿ ಬಳಲುವ ಉಭಯಉಪಾಧ್ಯರು ಗರುಡಾಚಾರ್ಯ ಮತ್ತು ಅವನ ಸಂಗಡಿಗರಾದ ಅಪರಾಧಿಗಳು ರಾಮದಾಸರಾಯನ ದುರಾ ಲೋಚನೆಯಿಂದ ಏನಾದರೂ ಕಿತಾಪತಿ ಮಾಡುವರೆಂಬ ಭಯದಿಂದ ಕೊತ್ವಾಲನು ಒಂದು ಬಿನ್ನವತ್ತಳಿಕೆಯನ್ನು ಕಾರಭಾರಿಗೆ ಬರಕೊಂಡನು. ಅಪರಾಧಿಗಳನ್ನು ನಜರಬಂದಿಯಲ್ಲಿಡದೆ ಹೋದರೆ ಆಶ್ರಮಕ್ಕೆ ವಿಘ್ನಪಡಿಸುವ ಆಲೋಚನೆಯಿಂದ ಅವರು ನಡೆಸಬೇಕೆಂದು ಯೋಚಿಸಿರುವ ಕಲಾಪವು ತೊಡಗಿದರೆ ಭಾರಿಹೊಡೆದಾಟ ಉಂಟಾಗಿ ಜನರ ನೆಮ್ಮದಿಗೆ ಭಾಧಕ ಇರು

ವದೆಂಬದಾಗಿ ಅದರ ತಾತ್ಪರ್ಯವಾಗಿತ್ತು. ಆ ಬಿನ್ನಪವು ಶಾಬಯ್ಯಗೆ ತಲ್ಪು ತ್ತಲೇ ಕ್ಷಣತಡಿಯದೆ ಅಪರಾಧಿಗಳನ್ನು ಕರತರಿಸಿ, ಪ್ರತಿ ಒಬ್ಬನೂ ತಾರತ ಮ್ಯಾನುಸಾರವಾದ ಜಾಮೀನು ಕೊಡದೆ ಹೋದರೆ ಕಾರಾಗೃಹವಾಸ ಮಾಡಬೇಕಾಗುವದೆಂದು ಎಚ್ಚರಿಸಿದನು. ರಾಮದಾಸನು ಕುಗ್ಗಿಹೋದನು. ವೇದವ್ಯಾಸ ಗರುಡಾಚಾರ್ಯ ಮುಂತಾದವರು ಹರಿನಾಮಸ್ಮರಣೆ ಮಾಡ ಲೆಸಗಿದರು. ನಿರ್ವಾಹವಿಲ್ಲದ ವಿಷಯದಲ್ಲಿ ಏನುಮಾಡಬಹುದು. ಯಾರ್ಯಾರ ಕಾಲುಹಿಡಿದು ಜಾಮೀನು ನಿಲ್ಲಿಸಿ ಬಂದ ಸಂಕಷ್ಟ ನಿವಾರಣೆ ಮಾಡಿ ಕೊಂಡರೂ ಆಶ್ರಮದ ದಿವಸ ಇವರಲ್ಲಿ ಒಬ್ಬನಾದರೂ ಮನೆಬಿಟ್ಟು ಬೀದಿಗೆ ಇಳಿಯಲಿಲ್ಲ.

ಸುಮುಹೂರ್ತದಲ್ಲಿ ಆಶ್ರಮಕೊಡುವ ಮಹತ್ಕಾರ್ಯ ಉಪಕ್ರಮಿ ಸೋಣಾಯಿತು. ನೋಟಕರ ಸಂದಣಿಯು ಹೆಚ್ಚಿತು. ದೊಡ್ಡ ಬ್ರಹ್ಮ ಸಭೆಯು ನೆರೆದಿತ್ತು. ವಿಧಿಗನುಸಾರವಾಗಿ ಸುಮುಹೂರ್ತದಲ್ಲಿ ಶ್ರೀಪಾದಂ ಗಳು ಸೂರ್ಯನಾರಾಯಣಗೆ ಆಶ್ರಮಕೊಟ್ಟು ಯಥೋಚಿತ ಆಶೀರ್ವಚನ ಯುಕ್ತವಾಗಿ ಸುನೇತ್ರ ಭಾರತಿ ಎಂಬ ಅಭಿಧಾನವನ್ನು ಇಟ್ಟು ವಾಗ್ದೇವಿಯ ಮನ ಕುಮುದಚಂದ್ರರಾದರು. ತನ್ನ ಪೂರ್ವ ಸ್ಥಿತಿಗೆ ಪ್ರಕೃತದ ವೈಭವ ವನ್ನು ಹೋಲಿಸಿ ನೋಡುವಾಗ ಕೇವಲ ಬಡತನದಿಂದ ಮೂಲೆಗೆ ಸೇರಿದ ತನ್ನ ಮೇಲೆ ದೈವಾನುಗ್ರಹ ಉಂಟಾದ್ದು ಸುಕೃತವೆಂದು ಸಾನಂದದಿಂದ ವಾಗ್ದೇವಿಯು ವೆಂಕಟಪತಿ ಆಚಾರ್ಯನ ಕಾಲಿಗೆ ಬಿದ್ದು– "ಆಚಾರ್ಯರೇ! ನಿಮ್ಮ ದಯದಿಂದ ನನಗೆ ಈ ಸಂಭ್ರಮವು ದೊರಕಿದ್ದಕ್ಕಾಗಿ ಕೃತಜ್ಞತೆ ಯುಳ್ಳವಳಾಗಿರುತ್ತೇನೆ" ಎಂದು ದೀನ ಭಾವದಿಂದ ಹೇಳಿ ಮೃದು ನುಡಿ ಯಿಂದ ಅವನ ಮನಸ್ಸನ್ನು ಆಕರ್ಷಿಸಿಕೊಂಡಳು. ಮಠದ ಸಂಪ್ರದಾಯ ಕ್ಕನುಗುಣವಾಗಿ ಆಯಾವ ರಾಜಸೇವಕರಿಗೂ ಗ್ರಾಮಾಧಿಕಾರಿ ಪುರಾಧಿಕಾರಿ ಗಳಿಗೂ ಸಂತಸಜ್ಜನರಿಗೂ ಅರದೇಶಿ ಪರದೇಶಿಗಳಿಗೂ ಯೋಗ್ಯತಾನುಸಾರ ವಾದ ಸಾಮ್ಯವು ಕೊಡೋಣಾಯಿತು. ಎಲ್ಲರ ಮನಸ್ಸಿಗೂ ತೃಪ್ತಿಯಾ ಯಿತು. ಭೀಮಾಜಿಗೂ ಶಾಬಯ್ಯಗೂ ಅತಿರೇಕ ಮನೋರಂಜಕ ಒಡವೆ ವಸ್ತುಗಳು ಊಟೋಪಚಾರಗಳು ಉಡುಗೊರೆ ಉಚಿತಗಳು ಪದ್ಧತಿಗನು ಸಾರವಾಗಿ ಕೊಡಲ್ಪಟ್ಟವು. ಅವರಿಬ್ಬರೂ ಸಂತುಷ್ಟರಾಗಿ ವಾಗ್ದೇವಿಯನ್ನು ಹೆಚ್ಚು ಶ್ಲಾಘನೆಮಾಡಿದರು. ತನು ಮನ ಧನದಿಂದಲೂ ಮರೆಹೋದ

ಅಬಲೆಯನ್ನು ಕಡೆವರೆಗೂ ಬಿಟ್ಟುಹಾಕದೆ ತನ್ನ ಮಗನ ಅಭ್ಯುದಯವನ್ನು ಪಾಲಿಸಬೇಕಾಗಿ ಮಂಜುಳ ವಚನಗಳಿಂದ ವಾಗ್ದೇವಿಯು ಉಭಯತರಿಗೂ ಅಡ್ಡಬಿದ್ದಳು. ಶಾಬಯ್ಯನು ಅವಳನ್ನು ಕೈಗಳಿಂದ ಹಿಡಿದೆಬ್ಬಿಸಿ ತನ್ನ ಜೀವ ಇರುವ ಪರಿಯಂತರ ಮುಡಿದ ಹೂ ಬಾಡದು; ನಿರ್ಭೀತಳಾಗಿರೆಂದು ಅವಳ ಬೆನ್ನಿನ ಮೇಲೆ ಕರಸ್ಪರ್ಶನ ಮಾಡಿದನು. ಬ್ರಹ್ಮಸಮೂಹಕ್ಕನಕ ಚಲೋ ಭೋಜನವಾಯಿತು. ಸೂರ್ಯನಾರಾಯಣನ ಆಶ್ರಮದ ಸಂಬಂಧ ವೇದ ವ್ಯಾಸ ಉಪಾಧ್ಯ ಮತ್ತು ಅವನ ಪಕ್ಷದವರಿಗಲ್ಲದೆ ಇನ್ಯಾರಿಗೂ ಹೊಟ್ಟೆ ಕಿಚ್ಚು ಇರಲಿಲ್ಲ. ಸದ್ಗುಣವಂತನಾದ ಅವನು ಸರ್ವರ ಮನಸ್ಸನ್ನು ಉಂಟುಮಾಡಿಕೊಳ್ಳುವ ಸಮಾಧಾನಿಯೂ ಧರ್ಮಶೀಲನೂ ಆಗಿರುವದ ರಿಂದ ಅವನ ಮೇಲೆ ಬಹುಮಂದಿ ನಿರ್ವೈರಭಾವದಿಂದಿರುವದು ಏನೂ ಆಶ್ಚರ್ಯವಲ್ಲ.

## ನಲುವತ್ತೊಂದು

ಆಶ್ರಮದ ವಿಶಿಷ್ಟ ವಹಿವಾಟು ನಾಂಗನಾಗಿ ನಡೆದ ಮೇಲೆ ವೇದ ವ್ಯಾಸ ಉಪಾಧ್ಯನ ಹೊಟ್ಟೆಕಿಚ್ಚು ವೃದ್ಧಿಯಾಗುತ್ತಾ ಬಂತು ಹಾಗೆಯೇ ತನ್ನ ಮೇಲಿರುವ ಪ್ರಕರಣದಲ್ಲಿ ತನ್ನ ಗತಿ ಹ್ಯಾಗಾಗುವದೋ ಎಂಬ ಭಯವು ತುಂಬಿ ಚಿಂತಾತುರನಾಗಿರುವದು ಅವನ ಮುಖಭಾವದಿಂದ ಪತ್ನಿಯ ಮನಸ್ಸಿಗೆ ತಿಳಿಯುತ್ತಲೇ ಅವಳು ತನ್ನ ಮಾತುಕೇಳಿದರೆ ಸ್ವಸ್ಥ ವಾಗಿರಬಹುದಿತ್ತೆಂದು ಮೆಲ್ಲಗೆ ಹೇಳಿದಾಗ ಆದದ್ದು ಆಯಿತು ಇನ್ನೇನು ಮಾಡಲೆಂದು ಬಿಸುಸುಯ್ದನು. ದೇವರಿಗೆ ಚೆನ್ನಾಗಿ ಪ್ರಾರ್ಥನೆಮಾಡಿ ಕೊಂಡರೆ ದುರಿತ ಉಪಶಮನವಾಗುವದು ಆಶ್ಚರ್ಯವಲ್ಲವೆಂದು ಹೆಂಡತಿಯು ಹೇಳಿದಳು. ದೇವರನ್ನು ಮಠದವರು ಅವರ ಬಾಗಿಲಲ್ಲಿ ಕಟ್ಟಿಹಾಕಿರುವ ಪ್ರಯುಕ್ತ ಅವನು ಪರಸ್ವಾಧೀನನಾಗಿರುವನೆಂದು ಅಸಹಾಸ್ಯದ ಮಾತು ಆಡಿಬಿಟ್ಟನು. ಇದು ಅವಳ ಮನಸ್ಸಿಗೆ ಏನೂ ಹಿತವಾಗಲಿಲ್ಲ. ಏನು ಮಾಡೋಣ! ಬಂದದ್ದು ಅನುಭವಿಸದೆ ನಿರ್ವಾಹವುಂಟೇ? ತನ್ನ ಗಂಡನ ಚಿಂತೆಯನ್ನು ನೋಡಿ ಅವಳು ಕರಗಿದಳು. ಸಹಾಯಕರ್‍ಯಾರಿದ್ದರೇನಾಯಿತು? ಜಯಶ್ರೀ ತೊಲಗಿದ ಮೇಲೆ ಎಷ್ಟು ಬಡಕೊಂಡರೂ ವ್ಯರ್ಥ! ತನ್ನ ಗಂಡನ ಹಟವೂ ದುಸ್ಸಾಧನೆಯೂ ಅನಾವಶ್ಯಕವಾದದ್ದೆಂದು ಅವಳ ಮನಸ್ಸಿಗೆ

ಪೂರ್ಣವಾಗಿ ಗೊತ್ತಿತ್ತು. ಬಾಯಿಬಿಟ್ಟು ಹೇಳಬಹುದೆ? ಪತಿವ್ರತಾಸ್ತ್ರೀಯು ಸರ್ವಥಾ ಗಂಡನಿಗೆ ಸಿಟ್ಟು ಬರುವ ಹಾಗಿನ ಕೃತ್ಯಮಾಡುವದಾಗಲೀ ಮಾತು ಆಡುವದಾಗಲೀ ಕೇವಲ ಧರ್ಮವಿರುದ್ಧವಾದದ್ದು.

ಗರುಡಾಚಾರ್ಯನ ವ್ಯಥೆಯನಕ ಘೋರವಾದ್ದೇ ಸರಿ. ತರ್ಕ್ಕಮಟ್ಟಿನ ಸಂಪನ್ನನೂ ಆ ಪರಿಯಂತ್ರ ಅನ್ಯಾಯ ಕೃತ್ಯವಲ್ಲಿ ಪ್ರವರ್ತಿಸದೆ ತನ್ನ ಮರ್ಯಾದೆಯನ್ನು ಕಾಪಾಡಿ ಗೃಹಸ್ಥನೆನಿಸಿಕೊಂಡವನೂ ಖರೆ. ಪರಂತು ರಾಮದಾಸನ ಚಕ್ಕಂದಕ್ಕೆ ಸೋತುಹೋಗಿ ಮಾನಭಂಗ ಮಾಡಿಕೊಂಡು ಕೆಟ್ಟೆನೆಂಬ ವ್ಯಸನವು ಅವನ ಬುದ್ಧಿಚಾತುರ್ಯವನ್ನೂ ಧೈರ್ಯವನ್ನೂ ಕುಂದಿಸಿಬಿಟ್ಟಿತು. ರಾಮದಾಸನು ಅವನ ಮತಸ್ಥನಾದ ಕಾರಣ ಅವನ ಮಾತನ್ನು ಕೇಳಬೇಕಾಯಿತಲ್ಲ. ಅವನ ತಿಷ್ಟತಿಯನ್ನು ಬಿಡುವ ಸಮಯವು ಹಿಂದುಳಿಯಿತು. ಈಗ ಹತ್ತು ಜನರ ಸಾವು ಮದುವೆಗೆ ಸಮಾನವೆಂಬ ಗಾದೆಯಂತೆ ತಮ್ಮ ಗತಿ ಎಂದು ಗರುಡಾಚಾರ್ಯನೂ ಅವನಂತೆಯೇ ಅಪರಾಧಿಗಳ ಸಾಲಿಗೆ ಸೇರಿದ ಬೇರೆ ಗೃಹಸ್ಥರೂ ಅಂದುಕೊಳ್ಳುತ್ತಾ ಸಂತಪ್ತರಾದರು ರಾಮದಾಸರಾಯನು ಅವರಿಗೆಲ್ಲಾ ಧೈರ್ಯಹೇಳುವು ದರಲ್ಲಿ ಕಡಿಮೆ ಮಾಡಲಿಲ್ಲ. ಹಾಗೆಯೇ ಆಲೋಚನೆ ಕೊಡುವುದರಲ್ಲಿಯೂ ಹಿಂಜರಿಯಲಿಲ್ಲ. ಶಾಬಯ್ಯನು ಪೂರ್ಣವಾಗಿ ಭೀಮಾಜಿಯ ಒಡನಾಟವಲ್ಲಿ ವಾಗ್ದೇವಿಯ ಪಕ್ಷವನ್ನು ಹಿಡಕೊಂಡು ಅವಳ ಅಹಿತರ ನಡೆಬಡಿಯುವದಕ್ಕೆ ಪವಿತ್ರಕರ್ತನಾಗಿರುವದು ನಿಸ್ಸಂದೇಹಕರವೇ! ವಿಮರ್ಶಾಧಿಕಾರಿಯು ಸತ್ಯ ವಂತನೆಂಬ ಖ್ಯಾತಿಯುಳ್ಳವನಾಗಿರುತ್ತಾ ಪ್ರಕೃತದ ವಿಚಾರದಲ್ಲಿ ಸತ್ಯಮಿಥ್ಯ ಪರಿಶೋಧನೆ ಮಾಡುವದರಲ್ಲಿ ಕೊಂಚವಾದರೂ ತಾತ್ಪರ್ಯಕೊಡಲಿಲ್ಲ. ಹೀಗಾಗುವ ಕಾರಣವೇ ತಿಳಿಯದು, ಕಾರ್ಭಾರಿಯೂ ಭೀಮಾಜಿಯೂ ಎಂಥೆಂಥ ವೈನಗಳನ್ನು ಯಾರೂ ತಿಳಿಯದ ಹಾಗೆ ಮಾಡಿರುವರೋ ಎಂಬ ವಿಕಲ್ಪ ಹುಟ್ಟಿತು. 'ಷಡ್ಭಿರ್ಮನುಷ್ಯ ಚಿಂತಾನಾಂ ಸಪ್ತಮಂ ದೈವಚಿಂತಕಂ' ಎಂಬ ನ್ಯಾಯಕ್ಕನುಸರಿಸಿ ಒಂದು ಪ್ರಯತ್ನವನ್ನು ಮಾಡಿ ನೋಡುವ ಆಸೆಯು ರಾಮದಾಸನ ಬೋಧನೆಯಿಂದ ಅವನ ಕಕ್ಷಿಗಾರರಲ್ಲಿ ಹುಟ್ಟಿತು. ಶಾಬಯ್ಯನು ತಮ್ಮ ಮೇಲೆ ಅನ್ಯಾಯ ನಡೆಸಬೇಕೆಂಬ ಪ್ರತಿಜ್ಞೆಮಾಡಿ ಕೊಂಡಿರುವನಾದುದರಿಂದ ಅವನ ಮುಂದೆ ತಮ್ಮ ಮೇಲೆ ತರೋಣಾಗಿರುವ ಪ್ರಕರಣವನ್ನು ಅವನು ವಿಚಾರಣೆ ಮಾಡದಹಾಗೆ ಅಪ್ಪಣೆಯನ್ನಪೇಕ್ಷಿಸಿ

ಮಾಡಿದ ಮುನವಿಯನ್ನು ವಿಮರ್ಶಾಧಿಕಾರಿಯು ಚೆನ್ನಾಗಿ ಗ್ರಹಿಸಿನೋಡಪೆ ತಳ್ಳಿಹಾಕಿದ ದೆಸೆಯಿಂದ ಅನೀತಿಯಾಗಿ ಛಾನಾಹಾನಿಯಾಗುವ ಕಾಲ ಬಂದೊದಗಿದೆ. ಆವಕಾರಣ ತಮ್ಮ ಮೇಲಿನ ಮೊಕದ್ದಮೆಯನ್ನು ಕಾರ್ಭಾರಿ ವಿನಾ ಬೇರೆ ಯಾರಾದರೂ ವಿಚಾರಣೆಮಾಡಬೇಕೆಂದು ಬೇಡಿ ಇಂಥಾ ಮುನವಿಗಳನ್ನು ತೀರಿಸಲಿಕ್ಕೆ ಅಧಿಕಾರವುಳ್ಳ ಕಿರಿಯ ದಿವಾನರ ಮುಂದೆ ಬಿನ್ನವತ್ತಳೆಯನ್ನು ಕಳುಹಿಸೋಣಾಯಿತು.

ಕಿರಿಯ ದಿವಾನರು ಅದನ್ನು ಚಂದವಾಗಿ ಓದಿನೋಡಿ ಮುನಷಿಯನ್ನು ಕರೆಸಿ "ನೀನು ಇದರಲ್ಲಿ ಏನಾದರೂ ಬಲ್ಲೆಯಾ? ಜನರ ಹಿತಾಹಿತಗಳನ್ನು ನೋಡುವ ಕೆಲಸ ನಮ್ಮದಲ್ಲವೇ? ಅವಸರದಿಂದ ಒಂದು ಹುಕುಂ ಬರೆದು ಹಾಕುವುದು ನ್ಯಾಯವೇನಯ್ಯ?" ಎಂದು ನುಡಿದನು. ಚಂದವಾಗಿ ತಿಳಿದು ಕ್ರಮೇಣ ಅರಿಕೆಮಾಡುವೆನು. ಸಾಂಪ್ರತ ಈ ಬಿನ್ನಹಪತ್ರವನ್ನು ವಿಮರ್ಶಾಧಿಕಾರಿಯ ಬಳಿಗೆ ಕಳುಹಿಸಿ ಅವನೇನು ಹೇಳುವದುಂಟೆಂದು ತಿಳುಕೊಳ್ಳುವದು ಅತಿ ಅಗತ್ಯವಿದೆ ಎಂಬ ಆಲೋಚನೆಯನ್ನು ಮುನಷಿಯು ಕೊಟ್ಟನು. 'ವಾಸ್ತವ್ಯ, ಹಾಗಾಗಲಿ' ಎಂದು ಕಿರಿದಿವಾನರ ಅಪ್ಪಣೆಯಾಯಿತು. ಮುನಷಿಯು ಅದರ ಮೇಲೊಂದು ತಾಕೀದು ಬರೆದು ವಿಮರ್ಶಾಧಿಕಾರಿಯ ಬಳಿಗೆ ಕಳುಹಿಸಿಕೊಟ್ಟನು. ಈ ವರ್ತಮಾನವು ಶಾಬಯ್ಯಗೆ ತಿಳಿಯಿತು. ಭೀಮಾಜಿಯನ್ನು ತತ್ಕಾಲ ಕರೆಸಿ ಮುನಷಿಗೆ ಬಾಯಿ ಸೀ ಮಾಡದೆಹೋದರೆ ಅವನು ಪಾಯಸದಲ್ಲಿ ಪಾದರಕ್ಷೆಯನ್ನು ಮುಳುಗಿಸಿಬಿಡುವನೇ ಸೈ. ನಮ್ಮ ಮುಖಗಳಿಗೆ ಮಸಿ ಆಗುವದು" ಎಂದು ತಿಳಿಸಿದನು. ತಾಮಸಮಾಡದೆ ಭೀಮಾಜಿಯು ವಾಗ್ದೇವಿಯ ಕೂಡ ಪ್ರಸ್ತಾಪಿಸಿದನು. ಅವಳು ಕೂಡಲೇ ನೇಮರಾಜ ಸೆಟ್ಟಿಯಿಂದ ಸಹಸ್ರ ರೂಪಾಯಿಯನ್ನು ತರಿಸಿಕೊಂಡು ಒಂದು ಮುತ್ತಿನ ಕಂಠಿಯನ್ನು ಕೊಂಡುಕೊಂಡು ಆಶ್ರಮಕಾಲದ ಉಚಿತವೆಂದು ಮುನಷಿಗೆ ಅವನ ಆಪ್ತರ ಪರಿಮುಖ ಕಳುಹಿಸಿಕೊಟ್ಟಳು. ಅಷ್ಟರಲ್ಲಿ "ಮುನವಿದಾರರು ಅನಾಹುತಗಾರರು ಹಣಸುಲಿಯುವ ಯೋಚನೆಯಿಂದ ಸಜ್ಜನರಿಗೆ ಉಪದ್ರಕೊಡುವ ಕಾಕಪೋಕರು ಶಾಬಯ್ಯನ ಮೇಲೆ ಹಾಕಲ್ಪಟ್ಟ ಅಪವಾದವು ಮಿಥ್ಯವೆಂದು ತೋರಿಬಂದಕಾರಣ ಮುನವಿದಾರರ ಅರಿಕೆಯನ್ನು ಪೂರೈಸಲಿಕ್ಕೆ ನಿರಾಕರಿಸಿದೆನೆಂದು ವಿಮರ್ಶಾಧಿಕಾರಿಯು ಉದಾಹರಣೆಯನ್ನು ಬರೆದು ಕಳುಹಿಸಿದನು. ಅದು ತಲಪುವುದಕ್ಕೆ ಮುಂಚೆಯೇ

ಮುನಷಿಯು ಸಾವಿರಾರು ರೂಪಾಯಿ ಮೌಲ್ಯದ ಕಂಠಿಯನ್ನು ಪೆಟ್ಟಿಗೆಯಲ್ಲಿ ಮಡಗಿ ಸಾನಂದವಾಗಿದ್ದನು. ಕಿರಿಯು ದಿವಾನನು ಮುನಷಿಯನ್ನು ಕರೆಸಿ “ಇದೇನಪ್ಪಾ, ವಿಮರ್ಶಾಧಿಕಾರಿಯ ಉತ್ತರಬಂದದೆ. ಅದು ಹಾಗಿರಲಿ ನಿಜ ಸ್ಥಿತಿ ತಿಳಿಸು ಹೇಳೆಂದೆನಷ್ಟೆ. ಮರೆತುಬಿಟ್ಟಿಯಾ” ಎಂದು ಪ್ರಶ್ನೆಮಾಡಿದನು. ಪರಾಕೇ, ಸನ್ನಿಧಾನದ ಮಾತು ಮರವೆಗೆ ಬರುವದುಂಟೇ? ನಿಜವಾದ ಸಮಾಚಾರ ತರಿಸಿಕೊಂಡಿರುವೆ; ಮನವಿದಾರರ ವಾಗ್ವಾದವು ಸತ್ಯವಾದ್ದಲ್ಲ. ದುರಾಗ್ರಹದಿಂದ ಅವರು ನಡೆಸುವ ಅಕೃತ್ಯಗಳನ್ನು ಸಹಿಸಕೂಡದಂತೆ; ಕಾರಭಾರಿಯಾಗಲೀ ವಿಮರ್ಶಾಧಿಕಾರಿಯಾಗಲೀ ಸತ್ಯವನ್ನು ವಿರೋಧಿಸು ವವರಲ್ಲ, ಸುಮ್ಮಗೆ ಅವರ ಮೇಲೆ ತೋಹ ಮತ್ತೂ ಹಾಕುವ ದುರಾತ್ಮ ರನ್ನು ದಬ್ಬಿಸಿಬಿಡೋದು ಉತ್ತಮ ಎಂದು ಮುನಷಿಯು ರಾಗ ಎಳದು ಮಾತಾಡಿದನು. ಕಿರೀದಿವಾನರು ವೇದವಾಕ್ಯದಂತೆ ಮುನಷಿಯ ಮಾತಿನ ಮೇಲೆ ನಂಬಿಗೆ ಇಟ್ಟು ಮನವಿಯನ್ನು ತಳ್ಳಿಹಾಕಿದ್ದಾಗಿ ಹುಕುಂ ಬರೆಯು ವದಕ್ಕೆ ಅಪ್ಪಣೆ ಕೊಟ್ಟರು. ತಾಮಸವಿಲ್ಲದೆ ಹಾಗೆ ಅಪ್ಪಣೆ ಬರೆದಾಯಿತು. ಮನವಿಯು ಮರಳಿ ಕಳುಹಿಸಲ್ಪಟ್ಟೇ ತೀರಿತು.

ಈ ಅಪ್ಪಣೆಯು ಗರುಡಾಚಾರ್ಯನ ಕೈಗೆ ಸಿಕ್ಕುತ್ತಲೇ ಅವನು ಕಣ್ಣೀರಲ್ಲಿ ಮುಳುಗಿಸಲ್ಪಟ್ಟವನಂತಾದನು. ಆಹಾ! ಈ ರಾಮದಾಸನ ಮಾತು ಕೇಳಿ ಇಷ್ಟು ಅಪಜಯವೂ ಮಾನಭಂಗವೂ ಆಯಿತು! ಇನ್ನು ನಮಗೆ ಬರತಕ್ಕ ಕಂಟಕವು ಕಠಿಣವಾದ್ದೇ. ಕಾಭಾರಿಗೂ ವಿಮರ್ಶಾಧಿ ಕಾರಿಗೂ ಏಕಪ್ರಕಾರ ತಮ್ಮ ಮೇಲೆ ದ್ವೇಷ ಉಂಟಾಗುವ ಹಾಗೆ ನಾವೇ ಮಾಡಿಕೊಂಡಂತಾಯಿತೆಂಬ ತಾಪವು ಗರುಡಾಚಾರ್ಯರನ್ನು ಹೆಚ್ಚು ಪೀಡಿ ಸಿತು. ಕಾಭಾರಿಗಳ ಕಚೇರಿಯಿಂದ ಆಜ್ಞಾಪತ್ರಗಳು ಅಪರಾಧಿಗಳಿಗೆ ಬಂದು ತಲ್ಪಿದವು. ಯಾವ ದಿನ ಕಚೇರಿಗೆ ಬರಬೇಕೆಂದು ಅದರಲ್ಲಿ ಆಜ್ಞೆ ಯಿತ್ತೋ ಆ ದಿನ ಅಪರಾಧಿಗಳು ಕಾರಭಾರಿಯ ಮುಂದೆ ಹಾಜರಾದರು. ವಾದಿಯನ್ನೂ ಅವನ ಪಕ್ಷದ ಸಾಕ್ಷಿಗಾರರನ್ನೂ ವಿಚಾರಣೆಗೆ ನಿಲ್ಲಿಸಿದರು. ಯಾಕುಬಖಾನನ ಸಾಕ್ಷಿ ಅಂದು ಆಗಲಿಕ್ಕೆ ಸಮಯ ಸಾಕಾಗಲಿಲ್ಲ. ರಾಮ ದಾಸರಾಯನು ತನ್ನ ಮೇಲೆ ಕಾರಭಾರಿಯು ದ್ವೇಷವಿಟ್ಟು ಏನು ಮಾಡಿ ಬಿಡುತ್ತಾನೋ ಎಂಬ ಹೆದರಿಕೆಯುಳ್ಳವನಾಗಿದ್ದರೂ ಎದೆಗುಂದಲಿಲ್ಲ. ಆದರೆ ಅವನ ತಂದೆಯು ಮಗನ ಉರಾ ಉರಿಯು ಅತಿಶಯವಾದ್ದೆಂದು ಬಲ್ಲವ

ಮಾಡದಿದ್ದರೆ ಅವನ ಮುಂದಿನ ವೃದ್ಧಿಯು ಹಾಳಾಗುವ ಹಾಗಿನ ದಂಡನೆಗೆ ಪಾತ್ರನಾಗುವನೆಂಬ ಭಯದಿಂದ ಕೊತ್ವಾಲನ ಕಾಲಿಗಾದರೂ ಬಿದ್ದು ಸುಧಾರಿಸಿಕೊಳ್ಳಲಿಕ್ಕೆ ಸಂದರ್ಭವಾಗುವದಾದರೆ ನೋಡಿ ಬಿಡುವಾ ಎಂದು ಬೀದಿಯಿಂದ ಹೋಗುವ ವೇಳೆಯಲ್ಲಿ ಎದುರಿನಲ್ಲಿ ಯಾಕುಬಖಾನನು ಸಿಕ್ಕಿದನು. ಅವರಿಬ್ಬರಿಗೂ ರಹಸ್ಯವಾಗಿ ಸಂಭಾಷಣೆಯಾಯಿತು. ಕೊತ್ವಾಲನ ಕಾಲು ಹಿಡಿಯಲ್ಯಾಕೆ ಇನ್ನೊಬ್ಬನ ಕೈ ಹಿಡಿಯಲ್ಯಾಕೆ? ರೂಪಾಯಿ ಮುನ್ನೂರು ನಗದಿಯಾಗಿ ಮಡಗಿಬಿಟ್ಟರೆ ಸಾಕ್ಷಿಹೇಳುವಾಗ ನಿಮ್ಮ ಮಗನನ್ನು ತಪ್ಪಿಸಿ ಬಿಡುವೆನೆಂದು ಆ ಖಾನನು ಹೇಳಿದ ಮಾತು ಮುದುಕನ ಮನಸ್ಸಿಗೆ ಬಂತು. ಮುನ್ನೂರು ರೂಪಾಯಿ ಹೆಚ್ಚಾಯಿತು, ಇನ್ನೂರು ಕೊಡುವೆನೆಂದು ಮುದುಕನು ವಾರ್ಜಿಕಮಾಡುವಾಗ ಇನ್ನೂರೈವತ್ತಾಗಬೇಕೆಂದು ಖಾನನು ಹಟಹಿಡಿದನು. ಕೊನೆಗೆ ಇನ್ನೂರ ಇಪ್ಪತ್ತೈದು ಕೊಡಲಿಕ್ಕೆ ಸಮ್ಮತಿಸಿದ ಮುದುಕನು ಯಾಕುಬಖಾನನನ್ನು ಮನೆಗೆ ಕರಕೊಂಡು ಹೋಗಿ ಅಷ್ಟು ಹಣವನ್ನು ಕೊಟ್ಟು ಮರ್ಯಾದೆ ಇರಿಸಿಕೊಳ್ಳುವ ಉಪಾಯವನ್ನು ಕೈಕೊಂಡನು.

ಮರುದಿನ ಯಾಕುಬಖಾನನ ವಿಚಾರಣೆ ಆಗುವಾಗ ವಾದಿಯ ಕಡೆ ವಕೀಲನು ಎಷ್ಟು ಬೇಡಿದರೂ ರಾಮದಾಸನ ವಿರೋಧದ ಒಂದು ಅಕ್ಷರವಾದರೂ ತುರುಕನ ಬಾಯಿಯಿಂದ ಹೊರಡಲಿಲ್ಲ. ಕಾರಭಾರಿಯು ಸಿಟ್ಟಿನಿಂದ ಔಡುಗಳನ್ನು ಕಚ್ಚಿಕೊಂಡು ಕಣ್ಣಾಲಿಗಳನ್ನು ಗರಗರನೆ ತಿರುಗಿಸಿ ಕಿಚ್ಚುಮೋರೆ ಮಾಡಿಕೊಂಡು ಯಾಕುಬಖಾನನನ್ನು ನುಂಗಿಬಿಡುವನೋ ಎಂಬಂತೆ ರೌದ್ರಾವತಾರ ತಾಳಿಕೊಂಡನು. ಖಾನನು ನಿರ್ಭೀತನಾಗಿ ರಾಮದಾಸನ ಗುಣಕ್ಕೂ ಉಳಿದ ಅಪರಾಧಿಗಳ ಅವಗುಣಕ್ಕೂ ಸಾಕ್ಷಿಕೊಟ್ಟನು. ರಾಮದಾಸರಾಯನನ್ನು ಬಿಡದೆ ಏನು ಮಾಡಬಹುದು? ಎಂದು ಬಹು ಪಶ್ಚಾತ್ತಾಪದಿಂದ ಕಾರ್ಭಾರಿಯು ಅವನನ್ನು ಬಿಟ್ಟು ಬೇರೆ ಪ್ರತಿವಾದಿಗಳ ಮೇಲೆ ಅಪಠಾಧ ಪತ್ರವನ್ನು ಏರ್ಪಡಿಸಿ ಎದುರುಸಾಕ್ಷಿಗಳುಂಟೋ? ಎಂದು ಪ್ರಶ್ನೆಮಾಡಲು ಉಂಟೆಂದು ಅವರ ಕಡೆಯಿಂದ ರಾಮದಾಸರಾಯನು ಒಂದು ಇಡೀ ಥಾವು ಕಾಗದದಲ್ಲಿ ನೂರಾರು ಸಾಕ್ಷಿಗಾರರ ಹೆಸರುಗಳನ್ನು ಬರದುಕೊಟ್ಟನು. ಆ ಸಾಕ್ಷಿಗಾರರಿಗೆ ಆಜ್ಞಾಪತ್ರಗಳು ಹೊರಟವು. ಮಠದ

ದ್ರವ್ಯವು ಮತ್ತಷ್ಟು ವ್ಯಯವಾಗುವ ಅವಶ್ಯವಾಯಿತು. ಪ್ರತಿವಾದಿಗಳ ಕಡೆಯಿಂದ ಬರಿಸಲ್ಪಟ್ಟ ಸಾಕ್ಷಿಗಾರರನ್ನು ತಿರುಗಿಸದೆ ಹೋದರೆ ಅವರ ಮೇಲಿನ ಪ್ರಕರಣವು ಬಲವಾಗುವದೆಂಬ ಹೆದರಿಕೆಯಿಂದ ಅನಂತ ಪಂಡಿತನ ಆಲೋಚನೆ ಪ್ರಕಾರ ತಾರತಮ್ಯಾನುಸಾರವಾಗಿ ಸಾಕ್ಷಿಗಾರರಗೆ ಲಂಚಕೊಡೋಣಾಯಿತು ಅವರಲ್ಲಿ ಅನೇಕರು ಪ್ರತಿವಾದಿಗಳ ಅವಗುಣಕ್ಕೆ ನುಡಿದರು. ಕೆಲವರು ಮಾತ್ರ ಎದುರು ಪಕ್ಷದ ಹಣವನ್ನು ತಿಂದು ಪ್ರತಿವಾದಿಗಳ ಗುಣದ ಸಾಕ್ಷಿನುಡಿದರು. ಅಡ್ಡ ವಿಚಾರಣೆಯಲ್ಲಿ ಸೋತುಹೋದರು. ಹೀಗಾಗಿ ಅವರ ಸಾಕ್ಷದ ಭಾರವು ಲಘುವಾಯಿತು. ಕಾರಭಾರಿಯು ಗರುಡಾಚಾರ್ಯರಿಗೂ ಪದ್ಮನಾಭ ಉಂಗ್ರುತ್ತಾಯಗೂ ಪ್ರತಿಯೊಬ್ಬನಿಗೆ ಇನ್ನೂರು ರೂಪಾಯಿ, ಅಪರಾಧಿಗಳಿಗೆ ಐವತ್ತು ರೂಪಾಯಿ ಅಪರಾಧ ನಿಶ್ಚೈಸಿ ಬಲವಾದ ತೀರ್ಪು ಬರೆದು ವಾಗ್ದೇವಿಯ ನಿರಂತರ ಪ್ರೇಮಕ್ಕೆ ಅರ್ಹನಾದನು. ಮೊಕದ್ದಮೆಯು ತೀರ್ಮಾನವಾದ ತರುವಾಯ ಕೊತ್ವಾಲನೂ ಕಾರಭಾರಿಯೂ ಯಾಕುಬಖಾನನ ಮೇಲೆ ಜರದುಬಿದ್ದರು. ರಾಮದಾಸನ ಬಚಾವಿಗೆ ಸುಳ್ಳು ಸಾಕ್ಷಿ ನುಡಿದನೆಂದು ಅವನಿಗೆ ವಿವಿಧ ರೀತಿಯಲ್ಲಿ ಗದರಿಸಿದರು. ಪಠಾನನಾದ ಅವನು ರವಷ್ಟಾದರೂ ಹೆದರದೆ ಸರಿಯಾದ ಮಾರುತ್ತರಗಳನ್ನು ಕೊಟ್ಟು ಇಬ್ಬರಿಗೂ ಬಾಯಿಮುಚ್ಚಿಸಿಬಿಟ್ಟನು. ಅವನು ಸಿಕ್ಕಿಬೀಳುವ ಹಾಗಿಲ್ಲದ ಸಂಧಿಯಲ್ಲಿ ಆ ತುರುಕನನ್ನು ಪೀಡಿಸಿದರೆ ಸರ್ಪನ ಬಾಲ ಮೆಟ್ಟಿದಂತಾಗುವದೆಂಬ ಭಯದಿಂದ ಅವರಿಬ್ಬರೂ ಸುಮ್ಮಗಿರಬೇಕಾಯಿತು. ಬಿಡುಗಡೆ ಹೊಂದಿದ ರಾಮದಾಸರಾಯನು ಮೀಸೆಯ ಕೊನೆಗಳನ್ನು ತಿರುಹುತ್ತಾ— "ಯಾರಾದರೆ ಏನು? ನನಗೆ ಏನು ಲಕ್ಷ್ಯವಿದೆಯೇ? ಮುಂದಾಗುವ ತಮಾಷೆ ಬೇರೆಯೇ ಅದೆ. ಕ್ರಮೇಣ ನೋಡಬಹುದು" ಎಂದು ಬಹಿರಂಗವಾಗಿ ಗಳಹಿದನು.

ಕಾರ್ಭಾರಿಯು ಕೊಟ ತೀರ್ಪಿನ ನಕಲು ಪಡಕೊಂಡು ಅಪರಾಧಿಗಳ ಕಡೆಯಿಂದ ವಕಾಲತ್ತು ತೆಗೆದುಕೊಂಡ ರಾಮದಾಸನು ವಿಮರ್ಶಾಧಿಕಾರಿಗಳ ಮುಂದೆ ವಿಮರ್ಶೆ ಮನವಿಯನ್ನು ಕೊಟ್ಟನು. ತನ್ನನ್ನು ದೂರಿ ಅಪರಾಧಿಗಳು ಮನವಿ ಮಾಡಿದ್ದಕ್ಕಾಗಿ ವಿಮರ್ಶಾಧಿಕಾರಿಯು ಮನಸ್ಸಿನಲ್ಲಿ ಕಠಿಣವಾದ ಕೋಪವಿತ್ತು. ಆದರೂ ಅವನು ನಿಧಾನವಾಗಿ ಆಲೋಚಿಸಿ ಕಾರ್ಭಾರಿಯು ಪ್ರಕರಣದ ಲವಾಜಮೆಗಳನ್ನು ಬಹುಚಾತುರ್ಯದಿಂದ ಸಂಗ್ರಹಿಸಿ

ಜಾಗ್ರತೆಯಿಂದ ಬರದ ತೀರ್ಪನ್ನು ಚೆನ್ನಾಗಿ ಓದಿನೋಡಿ ಉಭಯ ಕಕ್ಷಿಗಾರರ ಕಡೆ ರುಜುವಾತನ್ನು ಪರಿಶೋಧಿಸಿ ಕಾರಭಾರಿಯು ತೀರ್ಪುನ್ಯಾಯವಾದ್ದೆಂತ ನಿರ್ಣಯಿಸಿದನು.

ಕುಮುದಪುರದಲ್ಲಿರುವ ಬ್ರಾಹ್ಮಣ ಮಂಡಳಿಯ ಪ್ರಮುಖರು ಕಾರ್ಭಾರಿಯ ಮತ್ತು ಭೀಮಾಜಿಯ ಮೇಲೆ ವಿಮುಖರಾದರು. ವಿಮರ್ಶಾಧಿಕಾರಿಯ ಮೇಲೆಯೂ ಅವರು ವೈಮನಸ್ಸು ತಾಳಿದರು. ಗರುಡಾಚಾರ್ಯನೂ ಅವನ ಸಂಗಡ ಅಪರಾಧಹಾಕಲ್ಪಟ್ಟವರೂ ವೃತಪ್ರಾಯವಾಗಿ ಊರೊಳಗೆ ಮುಖ ತೋರಿಸಲಿಕ್ಕೆ ನಾಚಿ ಮುಂಡಾಮೋಚಿಕೊಂಡವರಂತೆ ಮನೆಯ ಒಳಗೆ ಸೇರಿಕೊಂಡರು. ರಾಮದಾಸರಾಯನು ಪಟ್ಟಣದ ಬ್ರಹ್ಮಸಮೂಹವನ್ನು ಚತುರೋಪಾಯದಿಂದ ಒಗ್ಗಟ್ಟು ಮಾಡಿ ಮಠದ ಮೇಲೆ ಅವರು ತಿರುಗಿಬೀಳುವಂತೆ ಭಗೀರಥಪ್ರಯತ್ನ ಮಾಡುವದರಲ್ಲಿ ಬಿದ್ದನು. ವಿಮರ್ಶಾಧಿಕಾರಿಯ ತೀರ್ಮಾನದ ಮೇಲೆ ಕಿರಿಯ ದಿವಾನರ ಮುಂದೆ ಪುನರ್ವಿಮರ್ಶೆ ಮನವಿಯನ್ನು ಕೊಡಲಿಕ್ಕೆ ಬರೇ ಜುಲುಮಾನೆಯ ವಿಧಿಯಾದ ಕಾರಣ ಕಾನೂನಿನ ನಿಬಂಧನೆ ಇಲ್ಲದೆ ಅಸಂದರ್ಭವಾಯಿತು. ಈ ಮೂರು ಅಧಿಕಾರಿಗಳು ಪೂರ್ಣವಾಗಿ ಮಠದ ಅಭಿಮಾನವನ್ನು ಕಾಯಲಿಕ್ಕೆ ಬದ್ಧಕಂಕಣರಾಗಿರುವರೆಂದು ಬ್ರಾಹ್ಮಣರೆಲ್ಲರೂ ಅಭಿಪ್ರಾಯಪಟ್ಟು ಭವಿಷ್ಯಚಿಂತನೆಯಲ್ಲಿರುವಾಗ ಸಣ್ಣದೊಂದು ಕದನ ನಡೆಯಿತು.

## ನಲುವತ್ತೆರಡು

ನೃಸಿಂಹಮಠದ ಪಾರುಪತ್ಯಗಾರನ ಅಳಿಯ ಶೋಣಭದ್ರ ಭಟ್ಟನು ಕುಮುದಪುರದಲ್ಲಿರುವ ಆ ಮಠಕ್ಕೆ ಇರುವ ಭೂಮಿಗಳಿಂದ ಅದರ ಜೀರ್ಣೋದ್ಧಾರಕ್ಕೋಸ್ಕರ ಕೆಲವು ಮರಗಳನ್ನು ಕಡಿಸುವುದಕ್ಕೆ ಬಂದವನು ಆಂಜನೇಯಾಲಯದಲ್ಲಿ ಬಿಡಾರವಿದ್ದು ಮಾವನು ಕೊಟ್ಟ ಆಜ್ಞೆಗಳಂತೆ ಪ್ರವರ್ತಿಸುವ ವೇಳೆಯಲ್ಲಿ ತಿಪ್ಪಾಶಾಸ್ತ್ರಿಯು ಯಾರಿಗೂ ಹೇಳದೆ ಕೇಳದೆ ಶೋಣಭದ್ರನ ಕೂಡೆ ವಾಗ್ವಾದ ಮಾಡಲುಪಕ್ರಮಿಸಿ ಅವನು ಕಡಿಸಲಿಕ್ಕೆ ನೋಡುವ ಮರಗಳಲ್ಲಿ ಹಲವು ಚಂಚಲನೇತ್ರರ ಭೂಮಿಗೆ ಸಂಬಂಧವಾದವುಗಳೆಂದು ಒಂದು ದುರ್ವಿವಾದ ಹುಟ್ಟಿಸಿ ಈ ಉಭಯ ಮಠಾಧಿಪತಿಗಳೊಳಗೆ ದ್ವೇಷದ ಬೀಜವನ್ನು ಬಿತ್ತಿಬಿಟ್ಟನು. ಶೋಣಭದ್ರನು ಚಂಚಲನೇತ್ರರನ್ನು ಕಂಡು ತಾನು

ಬಂದಿರುವ ಕಾರ್ಯಕ್ಕೆ ನಿರ್ನಿಮಿತ್ತವಾಗಿ ವಿಘ್ನತರುವುದಕ್ಕೆ ತಿಪ್ಪಾಶಾಸ್ತ್ರಿಯು ಮಾಡುವ ದುಸ್ಸಾಧನೆಯನ್ನು ಮನ್ನಿಸಬಾರದಾಗಿ ಮರ್ಯಾದೆಪೂರ್ವಕವಾಗಿ ಹೇಳಿಕೊಂಡನು. ಅದನ್ನು ಕುರಿತು ತನ್ನ ಕಡೆಯವರಿಂದ ಪೂರ್ಣವಿಚಾರಿಸಿ ತಿಳುಕೊಂಡು ಉತ್ತರ ಹೇಳಿಕಳಿಸುವೆನೆಂದು ಚಂಚಲನೇತ್ರರ ಪ್ರತಿ ಉತ್ತರವಾಯಿತು. ಪರಂತು ಮಠದ ದ್ರವ್ಯವೆಲ್ಲಾ ಕಾಕತ್ರಯವಾಯಿತೆಂಬ ಚಿಂತೆಯಲ್ಲಿ ಮುಳುಗಿದ ಈ ಸನ್ಯಾಸಿಗೆ ತಾನು ಕೊಟ್ಟಿರುವ ಮಾತಿನ ನೆನಪಿಲ್ಲದೆಹೊಯಿತು. ಮೌನಧಾರಣೆಯಿಂದ ತನ್ನ ಪ್ರಾರ್ಥನೆಯನ್ನು ಅವಜ್ಞೆಮಾಡಿದರೆಂಬ ಸಿಟ್ಟಿನಿಂದ ಶೋಣಭದ್ರನು ತನ್ನ ಧಣಿಯ ಪಕ್ಷದ ಅನೇಕ ಮಂದಿ ಒಕ್ಕಲುಗಳನ್ನು ಗುಂಪುಕೂಡಿಸಿ ಮರಗಳನ್ನು ಕಡಿಸುವಾಗ ತಿಪ್ಪಾಶಾಸ್ತ್ರಿಯು ಸ್ವೇಚ್ಛೆಯಿಂದ ಕೊತ್ವಾಲನ ಬಳಿಗೆ ಹೋಗಿ ದೂರು ಕೊಟ್ಟನು.

ಮಠದ ಕಡೆಯಿಂದ ಕರೀಕಾಗೆಯು ಬಂತೆಂದು ಯಾರಾದರೂ ಹೇಳಿದರೆ ಅದಕ್ಕೆ ಒಂದು ನಮಸ್ಕಾರ ಹಾಕಿಬಿಡುವಾ ಎಂಬುವಷ್ಟು ಮಠದ ವಾಂಛಲ್ಯ ವಿರುವ ಭೀಮಾಜಿಯು ವಿಚಾರ ಮಾಡದೆ ಶೋಣಭದ್ರನು ಜಗಳಗಂಟನೆಂಬಂತೆ ಊಹೆ ಹುಟ್ಟುವ ಒಂದು ಮನವಿಯನ್ನು ಬರಕೊಂಡಾಕ್ಷಣ ಚಂಚಲನೇತ್ರರು ತನ್ನದೆಂತ ಸಾಧಿಸುವ ಮರಗಳನ್ನು ಶೋಣಭದ್ರನು ಕಡಿಸಕೂಡದೆಂದು ಅಪ್ಪಣೆಮಾಡಿದನು ಈ ಅಪ್ಪಣೆಯು ತಾಮಸವಿಲ್ಲದೆ ಶೋಣಭದ್ರಭಟ್ಟಗೆ ತಿಳಿಸೋಣಾಯಿತು. ಭಟ್ಟಗೆ ಸಿಟ್ಟುಬಂತು. ಅವನು ಲವಕಾಲ ಅಲ್ಲಿ ತಡೆಯದೆ ಊರಿಗೆ ಹೋಗಿ, ನೃಸಿಂಹ ಮಠದ ಪಾರುಪತ್ಯಗಾರನ ಪರಿಮುಖ ಅಲ್ಲಿಯ ಶ್ರೀಪಾದಂಗಳಿಗೆ ತಿಳಿಸೋಣ ಅವರು ರುದ್ರಭೀಮನಂತೆ "ಕಡಿಯಲೋ ಕೊಚ್ಚಲೋ" ಎಂದು ತುಟಿಗಳನ್ನು ಕಚ್ಚಿಕೊಂಡು ಬಾಯಿಯಿಂದ ನೊರೆ ಹೊರಡಿಸುತ್ತಿರುವ ಸಮಯ ಹ್ಯಾಗೋ ಈ ಸುದ್ಧಿಯನ್ನು ತಿಳಿದ ವೇದವ್ಯಾಸ ಉಪಾಧ್ಯನು ರಾಮದಾಸರಾಯನನ್ನು ಸಂಗಡ ಕರಕೊಂಡು ಜ್ಞಾನಸಾಗರತೀರ್ಥರ ಪಾದಕ್ಕೆರಗಿ ಮುಕುಳಿತಹಸ್ತನಾಗಿ ನಿಂತು ಕೊಂಡನು. ಅವರು ಬಂದದ್ಯಾಕೆಂದು ಸ್ವಾಮಿಗಳು ಕೇಳಿದರು. ರಾಮದಾಸರಾಯನು ಸಕಲ ಪೂರ್ವೋತ್ತರವನ್ನು ಶ್ರೀಪಾದಂಗಳಿಗೆ ಅರಿಕೆ ಮಾಡಿದನು. ಆವಾಗ ಹಿಂದೆ ವೇದವ್ಯಾಸ ಉಪಾಧ್ಯನು ದೂರು ತಂದ ವೇಳೆಯಲ್ಲಿ ಅವನನ್ನು ಧಿಕ್ಕರಿಸಿದ ನೆನಪು ಹುಟ್ಟಿ ಅನುತಾಪವಾಗಿ ಮುಂದೆ ನಡೆಸ

ಬೇಕಾದ ಉಪಾಯವನ್ನು ಕುರಿತು ರಾಮುದಾಸನ ಕೂಡೆ ಜ್ಞಾನಸಾಗರ ತೀರ್ಥರು ಆಲೋಚನೆ ಕೇಳಿದಾಗ ಮಠಗಳ ವಿವಾದವನ್ನು ಕೋಂಟಸವು ಯವಲ್ಲಿ ತೀರುವ ಹಾಗಿನ ವೈಸ ತಾನು ನಡೆಸುವದಾಗಿ ವಕೀಲನು ಅವರನ್ನು ನಂಬಿಸಿದನು. ಸೂರ್ಯನಾರಾಯಣನ ಆಶ್ರಮುವನ್ನು ಕುರಿತು ಶ್ರೀಪಾದಂಗಳು ಪ್ರಸ್ತಾಪಿಸಿದಾಗ, ದ್ವಂದ್ವ ಮಠದವರಾದ ತಾವು ಯೋಗ್ಯನಾದ ಇನ್ನೊಬ್ಬ ನನ್ನು ಆರಿಸಿರೆಂದು ರಾಮುದಾಸನು ಸೂಚನೆ ಕೊಟ್ಟನು. ಯಾವುದಕ್ಕೂ ಪಾರುಪತ್ಯಗಾರನ ಅಭಿಪ್ರಾಯ ಪಡಕೊಳ್ಳುವದು ಉಚಿತವಾದ ಕಾರಣ ಅವನನ್ನು ಕರೆಕಳುಹಿಸೋಣಾಯಿತು.

ಅಳಿಯನು ಹೇಳಿದ ದೂಷಣೆಯನ್ನು ಕೇಳಿ, ಮೊದಲೇ ಕಡುಕೋಪ ವನ್ನು ತಾಳಿದ ಪಾರುಪತ್ಯಗಾರನು ಧನಿಯ ಅಪ್ಪಣೆಯಾಯಿತೆಂದು ಕೇಳು ತ್ತಲೇ ಮಠಕ್ಕೆ ಬಂದು ಪ್ರಣಾಮುಮಾಡಿ ನಿಂತುಕೊಂಡನು. ಸಾಂಪ್ರತ ನಡೆಯುವ ಪ್ರಸ್ತಾಪದಲ್ಲಿ ಅವನ ಅಭಿಪ್ರಾಯವನ್ನು ಯತಿಗಳು ಕೇಳಿದಾಗ ಸೂರ್ಯನಾರಾಯಣನನ್ನು ಕುರಿತು ರಾಮುದಾಸನು ಕೊಟ್ಟ ಆಲೋಚನೆ ಯನ್ನೇ ಪ್ರತಿಧ್ವನಿ ಮಾಡಿದನು. ವಕೀಲನೂ ಪಾರುಪತ್ಯಗಾರನೂ ಏಕಮತಿ ಯಾದ ಮೇಲೆ ಬೇರೆ ಯಾರನ್ನು ಕೇಳಬೇಕೆ? ಉಳಕಿ ಮಠದವರಿಗೆ ಪತ್ರಿಕೆ ಗಳನ್ನು ಬರೆದು ಕಳುಹಿಸಿ ಅವರ ಅಭಿಮತವನ್ನು ಕೇಳಿಬಿಡುವದು ಒಳ್ಳೇ ದೆಂದು ಸ್ವಾಮಿಗಳು ಮಾಡಿದ ನಿರ್ಣಯಕ್ಕೆ ಆಗ್ಗೆ ಸಮಿಾಪ ಇದ್ದವರೆಲ್ಲರೂ ತಥಾಸ್ತು ಎಂದರು. ಒಡನೆ ಆಯಾಯ ಮಠಾಧಿಪತಿಗಳಿಗೆ ಲೇಖನಗಳು ಬರೆ ಯಲ್ಪಟ್ಟವು. ಅವುಗಳ ಒಕ್ಕಣೆಯು ರಾಮುದಾಸನದು. ಈ ವಕೀಲನು ನೃಸಿಂಹ ಮಠದಲ್ಲಿ ಬಹು ವಿಶ್ವಾಸಿಯಾಗಿ ಮೆರೆಯಲಿಕ್ಕಾದನು. ಮೊದಲ ತೀರ್ಥವು ಅವನಿಗೆ ಕೊಡುವ ವಾಡಿಕೆಬಿತ್ತು. ಭೋಜನಕಾಲದಲ್ಲಿ ಮರ್ಯಾದೆ ಎಲೆಯು ಅವನಿಗೆ ಸಿಕ್ಕುವದಾಯಿತು. ಮಠಗಳ ವ್ಯಾಜ್ಯವನಕ ಅವನ ಯುಕ್ತಿಗೆ ಬಿಡಲ್ಪಟ್ಟಿತು.

ದೊಡ್ಡ ಯತಿಗಳೇ ರಾಮುದಾಸರಾಯನ ಕಕ್ಷಿಗಾರರಾದ ಬಳಿಕ ವಕೀಲನ ವೈಭವಕ್ಕೆ ಎಣೆಯುಂಟೇ? ಮಠಗಳನ್ನು ಕುರಿತು ವಿವಾದವು ಆಗುವಷ್ಟು ಘೋರವಾಗಿ ಬೇಗನೆ ತೀರ್ಮಾನಕ್ಕೆ ಬಾರದಂತೆ ವಕೀಲನು ದೊಡ್ಡ ದೊಡ್ಡ ಮನವಿಗಳನ್ನು ಬರೆದು ನಗರದಲ್ಲಿರುವ ಬೇರೆ ಬೇರೆ ಉದ್ಯೋ ಗಸ್ಥರಿಗೆ ಎಡೆಬಿಡದೆ ಕಳುಹಿಸಿದನು. ಒಂದಕ್ಕೂ ಸುಸೂತ್ರವಾದ ಉತ್ತರವು

ದೊರಕದೆ ಸ್ವಾಮಿಗಳಿಗೆ ಬೇಸರವಾಯಿತು. ಕಡೆಗೆ ಆ ವಿಷಯದಲ್ಲಿ ಮಾಡಲ್ಪಟ್ಟ ದಾವೆಯು ಅದಾಲತ ಅಧಿಕಾರಿಯ ಕಚೇರಿಯಲ್ಲಿ ವಿಮರ್ಶೆಗೆ ಬಂತು. ಅವನು ಚಂಚಲನೇತ್ರರ ಕಡೆಗೆ ಮಾಲಿದನು. ದಾವೆಯು ಜ್ಞಾನಸಾಗರ ತೀರ್ಥರಿಗೆ ಅವಗುಣವಾಯಿತು. ಈ ವದಂತಿಯು ನೃಸಿಂಹಪುರದ ಯತಿಗಳ ಕಿವಿಗೆ ಬಿದ್ದಾಕ್ಷಣ ಅವರಿಗೆ ಉಂಟಾದ ಕ್ರೋಧವು ವರ್ಣಿಸಲಿಕ್ಕೆ ಅಸಾಧ್ಯವೇ.

ಅಷ್ಟರಲ್ಲಿ ಮಠಾಧಿಪತಿಗಳು ಒಟ್ಟು ಕೂಡಿ ಒಂದು ಸಭೆಯನ್ನು ಮಾಡಿ ಸೂರ್ಯನಾರಾಯಣನು ಆಶ್ರಮಕ್ಕೆ ಅಯೋಗ್ಯನೆಂದು ನೃಸಿಂಹ ಮಠದ ಸ್ವಾಮಿಗಳು ಪಡುವ ಅಭಿಪ್ರಾಯವು ಸರಿ ಎಂದು ನಿರ್ಣಯಿಸಿದರು. ಆದರೂ ಹೆಸರುಹೋದ ಮಠಾಧಿಪತಿಗಳಾದ ಚಂಚಲನೇತ್ರರು ಅಂಥಾ ಅವಹಿತ ಕಾರ್ಯಕ್ಕೆ ಮನಸ್ಸು ಕೊಟ್ಟದ್ದು ಯಾಕೆಂಬದನ್ನು ಕುರಿತು ಮೊದಲು ಅವರನ್ನು ಬರಹಮೂಲಕವಾಗಿ ಕೇಳಿ ಅವರ ಪ್ರತ್ಯುತ್ತರ ಸಿಕ್ಕಿದ ಬಳಿಕ ಈ ಪ್ರಸಂಗವನ್ನು ಕೊನೆಗೊಳಿಸುವದು ಯುಕ್ತವೆಂಬ ಹಾಗೆ ಯತಿಗಳಲ್ಲಿ ಅಧಿಕ ಪಕ್ಷದವರ ಮತವಾದ ಕಾರಣ ನೃಸಿಂಹಪುರದ ಸ್ವಾಮಿಗಳು ಅವಸರವನ್ನು ತಡೆದಿಡುವದಕ್ಕೆ ಅಗತ್ಯಪಟ್ಟರು. ರಾಮದಾಸರಾಯನಿಗೂ ಮಿಕ್ಕ ಯತಿಗಳ ಮನೋಗತವು ಸರಿಯಾಗಿ ತೋಚದೆ ನಡೆವ ಕಾರ್ಯವು ಕೇವಲ ಆಗಮ ವಿರುದ್ಧವಾದದ್ದೆಂದು ಸರ್ವರೂ ಏಕಮತವಾದ ಮೇಲೆ ತಪ್ಪಿಬಿದ್ದ ಸನ್ಯಾಸಿಯ ಪ್ರತಿವಾದವನ್ನು ಕೇಳಬೇಕಾದ್ದೇನು ಅವಶ್ಯವೆಂದು ಕಷ್ಟಿಮಾಡಿದನು. ಇಂಥ ವಿಶೇಷವಾದ ಸಂಗತಿಯಲ್ಲಿ ಮುಂದೆ ಅನೇಕ ವಾಗ್ವಾದಗಳು ರಾಜದ್ವಾರದಲ್ಲಿಯೂ ಹುಟ್ಟಿ ಸಕಲ ಮಠಾಧಿಪತಿಗಳ ಅಭಿಜ್ಞತೆಯ ಗುರುಲಘುತ್ವದ ಪರಿಶೀಲನವಾಗುವ ಸಂಭವವಿರುವದರಿಂದ "ಎತ್ತು ಕರು ಹಾಕಿತಂದರೆ ಕೊಟ್ಟಿಗೆಯಲ್ಲಿ ಕಟ್ಟೆಂದು" ಹೇಳಿದಂತಾಯಿತೆಂಬ ಅಪವಾದ ಬಾರದ ಹಾಗೆ ನೋಡಿಕೊಳ್ಳುವ ಮುಂಜಾಗ್ರತೆ ಉತ್ತಮವೆಂದು ನಿಷ್ಪಕ್ಷಪಾತಿಗಳು ತಿಳಕೊಂಡರು. ಆದುದರಿಂದ ರಾಮದಾಸನು ಸೋತನು. ಜ್ಞಾನಸಾಗರತೀರ್ಥರ ಮನಸ್ಸೂ ಕೊಂಚ ಕುಸಿಯಿತು. ಆದರೂ ಒಮ್ಮಿಂದೊಮ್ಮೆ ಗಡಿಬಿಡಿಮಾಡಿದರೆ ಮುಂದಿನ ಸಾಧನೆ ನಿರರ್ಥಕವಾಗುವದೆಂಬ ಭಯದಿಂದ ಅಧಿಕ ಪಕ್ಷದ ನಿರ್ಣಯಕ್ಕೆ ತಮ್ಮ ಅಭಿಮತವನ್ನು ಕೊಟ್ಟರು.

ಕುಮುದಪುರದ ಮಠಾಧೀಶರಿಗೆ ಬರೆಯಬೇಕಾದ ಲೇಖನದ ಮಸೂ

ದೆಯನ್ನು ಗಮನಿಸಲಿಕ್ಕೆ ರಾಮದಾಸನನ್ನು ಯತಿಗಳೆಲ್ಲರೂ ಅಪೇಕ್ಷಿಸಲಾಗಿ ಅವನು ಆ ರೀತಿ ವರ್ತಿಸಿದನು. ಪರಂತು ಅವನ ಬರವಣಿಗೆಯು ಅಂದವು ದುರ್ವಾಕ್ ಭರಿತವಾಗಿ ಸಿಟ್ಟೆಬ್ಬಿಸುವ ಹೋಲ್ಪೆ ಉಳ್ಳದ್ದಾಗಿ ತೋರಿಬಂದ ಪ್ರಯುಕ್ತ ಮಠಾಧಿಪತಿಗಳೂ ಸರ್ವರೂ ಅದನ್ನು ಓದಿಸಿ ಕೇಳುತ್ತಲೇ ಮುಖ ಗಳನ್ನು ತಿರುಗಿಸಿಬಿಟ್ಟರು. ರಾಮದಾಸನು ಈ ದೆಸೆಯಿಂದ ಕೊಂಚವಾದರೂ ಲಜ್ಜಿತನಾಗಲಿಲ್ಲ. ತಲೆ ಬೋಳಿಸಿಕೊಂಡು ಸನ್ಯಾಸಿಗಳೆನ್ನಿಸಿಕೊಳ್ಳುವವರೆ ಲ್ಲರೂ ದುರಾಭಿಮಾನಿಗಳು; ಹಣಸುಲಿಯುವದೊಂದೇ ವಿಷಯದಲ್ಲಿ ಪ್ರವೀಣ ರಲ್ಲದೆ ಬೇರೆ ಎಲ್ಲಾ ವಿಚಾರದಲ್ಲಿ ಅವರಲ್ಲಿರುವಷ್ಟು ವಿವೇಕ ಇನ್ನೊ ಬ್ಬನಲ್ಲಿ ಇರಲಾರದೆಂದು ತನ್ನ ಮನಸ್ಸಿನಲ್ಲಿಯೇ ಅಂದುಕೊಂಡು ತುಚ್ಛ ನಗೆಯಿಂದ ತನ್ನ ದೂಷ್ಯನಡತೆಯನ್ನು ಆಛಾದಿಸಿದನು. ನೃಸಿಂಹಮಠದ ಶ್ಯಾನುಭಾಗನು ಒಕ್ಕಣೆಗಾರನೆಂಬ ಹೆಸರು ಪಡದಿರುವನು. ಅವನ ಬರ ವಣಿಗೆಯೇ ಸಾಂಪ್ರತ ಸಾಕಾಗುವದೆಂದು ಯೋಚಿಸಿ ಮಠಾಧಿಪತಿಗಳು ಅವನನ್ನು ಕುರಿತು ಅಪೇಕ್ಷಿಸೋಣ ಅವನು ವಿಳಂಬಮಾಡದೆ ಬಂದು ಪ್ರಶ್ನಾಪತ್ರವನ್ನು ಬರೆದು ಓದಿ ಹೇಳಿದನು.

ಪ್ರಕೃತದ ಪ್ರಸಂಗಕ್ಕೆ ಉಪಯುಕ್ತವಾದ ಪ್ರಶ್ನೆಗಳು ಪತ್ರದಲ್ಲಿ ಹಾಕಿ ರುವುದರಿಂದ ಹೆಚ್ಚಿನ ಆಲೋಚನೆ ಮಾಡುವ ಅಗತ್ಯವಿಲ್ಲ. ಆ ಪತ್ರಿಕೆಯನ್ನು ಸರಿಯಾಗಿ ಬರೆಸಿದ ತರುವಾಯ ನಾಲ್ಕು ಮಂದಿ ಯತಿಗಳು ಅದಕ್ಕೆ ತಮ್ಮ ಒಪ್ಪಿಗೆ ಹಾಕಿದರು. ಹರಿಕಾರನೊಬ್ಬನು ಶೀಘ್ರ ಕುಮುದಪುರಕ್ಕೆ ಹೋಗಿ ಅದನ್ನು ಚಂಚಲನೇತ್ರರ ಕೈಯಲ್ಲಿ ಕೊಟ್ಟನು. ಅವರು ಅದನ್ನು ತಾನೇ ಓದಿನೋಡಿ, ಇದೇನಪ್ಪಾ ಆಶ್ಚರ್ಯ! ವೇದವ್ಯಾಸ ಉಪಾಧ್ಯಗೆ ಏಕಾದಶಕ್ಕೆ ಶನಿಬಂದನೇ! ನಾಯಿಯಂತೆ ತುಚ್ಛಮಾಡಲ್ಪಟ್ಟು ಪ್ರತಿ ಮಠದಿಂದ ಹೊರಗೆ ದಬ್ಬಲ್ಪಟ್ಟ ಆ ಕುನ್ನಿಯ ಪಕ್ಷವನ್ನು ಈಗ ನಮ್ಮಸರಿ ಮಠದವರೆಲ್ಲರೂ ಅವಲಂಭಿಸಲಿಕ್ಕೆ ಉಂಟಾದ ಹೇತು ತಿಳಿಯುವದಿಲ್ಲವಾಗಿ ಹೇಳಿಕೊಳ್ಳುತ್ತಾ ಕುಳಿತಿರುವ ಯತಿಗಳ ಬಳಿಗೆ ಚಾಕರನೊಬ್ಬನು ಓಡಿಬಂದು ಪರಾಕೆ ಆಬಾ ಚಾರ್ಯರಿಗೆ ಕಂಪನತೊಡಗಿ ಬಳಲುವರೆಂದು ವರದಿಕೊಟ್ಟನು.

ಮಠಾಧಿಪತಿಗಳು ಪ್ರಶ್ನಪತ್ರವನ್ನು ಅಲ್ಲಿಯೇ ಬಿಟ್ಟು ಅವಸರದಿಂದ ವಾಗ್ದೇವಿಯ ವಾಸಸ್ಥಾನಕ್ಕೆ ಬಂದು ನೋಡಿದಾಗ ವಾಗ್ದೇವಿಯು ಭೂಮಿಯ ಮೇಲೆ ನಡುಗುತ್ತಾ ಬಿದ್ದಿರುವ ಪತಿಯ ಮಗ್ಗಲಲ್ಲಿ ಕೂತು ಪ್ರಲಾಪಿಸುವದು

ತೋಚಿತು. ಆಬಾಚಾರ್ಯಗೆ ಮಾತನಾಡುವದಕ್ಕೆ ಕೂಡುತ್ತಿದ್ದಿಲ್ಲ. ಪ್ರಾಣ ವಾಯು ತೊಲಗುವದಕ್ಕೆ ಹೆಚ್ಚು ಸಮಯ ತಗಲದೆಂದು ನೋಡುವವರೆ ಲ್ಲರೂ ಕುಸುಗುಟ್ಟಲಿಕ್ಕೆ ತೊಡಗಿದರು. ಪಟ್ಟಣದಲ್ಲಿರುವ ಪ್ರಖ್ಯಾತ ಘನ ವೈದ್ಯ ತುಕಾರಾಮ ಪಂಡಿತನನ್ನು ಯಾನವಲ್ಲಿ ಕುಳ್ಳಿರಿಸಿ ಬೇಗ ತರುವದಕ್ಕೆ ಸ್ವಾಮಿಗಳ ಆಜ್ಞೆಯಾಯಿತು. ಪಂಡಿತನು ತಲಪಿ ರೋಗಿಯ ಮುಖಾವಲೋಕನ ಮಾಡುವದಕ್ಕೆ ಮುಂಚೆಯೇ ಆಬಾಚಾರ್ಯನು ಪರಲೋಕ ಯಾತ್ರೆಗೈದನು. ವಾಗ್ದೇವಿಯು ದೀರ್ಘರೋಧನ ಮಾಡುತ್ತಾ ಹೆಣದ ಮೇಲೆ ಬಿದ್ದು ಹೊರಳಾಡುವವಳಾದಳು. ಬಹುಮಂದಿ ಅವಳನ್ನು ಸಂತವಿಸಿದರು. ಆಬಾಚಾರ್ಯನ ಸ್ವರ್ಗಾರೋಹಣದ ವಾರ್ತೆಯು ಪುರದಲ್ಲಿ ಆಗಲೇ ಹಬ್ಬಿತು. ಭೀಮಾಜಿಯ ಕಿವಿಗೆ ಈ ವಾರ್ತೆಯು ಬೀಳುತ್ತಲೇ ಅವನು ಬಂದು ಶೋಕಾಗ್ನಿಯಿಂದ ಸಂತಪ್ತಳಾದ ವಾಗ್ದೇವಿಗೆ ಮಾನುಷ ಜನ್ಮದ ಅಸ್ಥಿರತೆಯನ್ನು ಕುರಿತು ಜ್ಞಾನಬೋಧೆಯನ್ನು ಕೊಟ್ಟನು. ನೇಮರಾಜಸೆಟ್ಟಿಯೂ ಬಂದು ವಾಗ್ದೇವಿಯ ದುಃಖೋಪಶಮನಕ್ಕಾಗಿ ಆಗುವಷ್ಟರ ಮಟ್ಟಿಗೆ ತತ್ವಜ್ಞಾನವನ್ನು ಹೇಳಿದನು. ಶೃಂಗಾರಿಯೂ ತಿಪ್ಪಾಶಾಸ್ತ್ರಿಯೂ ಸುಮ್ಮಗಿರಲಿಲ್ಲ. ನವ ವಿಧವೆಯಾದ ಅಕ್ಕನ ಸಂತಾಪವನ್ನು ಶಾಂತಪಡಿಸುವ ಯತ್ನ ನಡೆಸುವದರಲ್ಲಿ ತಂಗಿಯು ಉಪೇಕ್ಷೆ ಮಾಡಲಿಲ್ಲ. ತಿಪ್ಪಾಶಾಸ್ತ್ರಿಯು ನಾನಾ ಗ್ರಂಥಗಳಿಂದ ಗದ್ಯ ಪದ್ಯ ವಚನಗಳನ್ನು ಒದರಿ ವಾಗ್ದೇವಿಯ ಶೋಕವನ್ನು ದೂರ ಮಾಡುವುದರಲ್ಲಿ ಬಿದ್ದನು. ಕೊನೆಗೆ ಚಂಚಲನೇತ್ರರು ಆ ಕಾಲಕ್ಕೆ ಉಪಯುಕ್ತವಾದ ಮಾತುಗಳಿಂದ ಅವಳನ್ನು ಕೂಡುವಷ್ಟು ಶಾಂತಪಡಿಸಿದರು. ಶವ ದಹನದ ಕೆಲಸವನ್ನು ತೀರಿಸಿದ ಬಳಿಕ ಮೃತನ ಉತ್ತರಕ್ರಿಯಾದಿಗಳನ್ನು ಧಾರಾಳವಾದ ವೆಚ್ಚದಿಂದ ಮಠದ ಕಡೆಯಿಂದ ನಡೆಸೋಣಾಯಿತು.

## ನಲುವತ್ತಮೂರು

ಪತಿಯ ಮರಣದ ದೆಸೆಯಿಂದ ಮುಖವನ್ನು ತೋರಿಸಲಿಕ್ಕೆ ನಾಚುವ ವಾಗ್ದೇವಿಯು ಬಂಧನದಲ್ಲಿದ್ದಂತೆ ಮನೆಯ ಒಳಗೆ ಇದ್ದುಕೊಂಡಳು. ಕರುಣಾಳುವಾದ ಭೀಮಾಜಿಯು ಅವಳನ್ನು ಆಗಾಗ್ಗೆ ಕಂಡು ಮಾತಾಡುವುದಕ್ಕೆ ಯಾವುದೊಂದು ಅಂತರಾಯವಿರಲಿಲ್ಲ. ಶಾಬಯ್ಯನ ಭೇಟಿಗೆ ಮಾತ್ರ ಕೊಂಚ ತೊಡಕುಂಟಾಯಿತು. ಆದರೆ ಭೀಮಾಜಿಯ ಪರಿಮುಖ ವಾಗ್ದೇವಿ

ಶಾಬಯ್ಯರೊಳಗೆ ತಂತಿ ಟಪ್ಪಾಲಿನಂತೆ ಸುಖದುಃಖಗೋಷ್ಟಿಯು ಸಮಯಾನುಸಾರವಾಗಿ ನಡೆಯುತ್ತಲಿತ್ತು. ಆಬಾಚಾರ್ಯನ ಅಕಸ್ಮಾತ್ ಮರಣದಿಂದ ಇಡೀ ಮಠದ ಮೇಲೆ ದುಮ್ಮಾನದ ಕಾರ್ಮುಗಿಲು ಮುಸುಕಿ ಕೆಲವು ಸಮಯಗಳಲ್ಲಿ ವಿಶೇಷವಾದ ಕಾರುಭಾರು ಅಲ್ಲಿ ನಡೆಯದೆ ಸಕಲ ವಿಷಯಗಳಲ್ಲಿಯೂ ಮೌನವೇ ಪ್ರಧಾನವಾಗುತಿತ್ತು. ಚತುರ್ಮಠಾಧಿಪತಿಗಳ ಪತ್ರಿಕೆಗೆ ಪ್ರತ್ಯುತ್ತರ ಕಳುಹಿಸಿಕೊಡುವುದಕ್ಕೆ ಹಿಂದೆ ವಿವರಿಸಿದ ಮರಣದ ಕಾರಣದಿಂದ ಮರೆತುಹೋದ ಕುಮುದಪುರದ ಮಠಾಧೀಶರಿಗೆ ನೆನಪು ಹುಟ್ಟಿಸುವದಕ್ಕೋಸ್ಕರ ಪುನರ್ಪತ್ರಿಕೆಯು ತಲಪಿತು. ಅದನ್ನು ನೋಡಿ ಚಂಚಲನೇತ್ರರಿಗೆ ಮತ್ತಷ್ಟು ಸಿಟ್ಟೇರಿತು.

ಈ ಯತಿಗಳು ಶಾಸ್ತ್ರಾಧಾರಗಳನ್ನು ಹುಡುಕಿ ತೆಗೆಯುವದರಲ್ಲೇ ಆಗಲಿ ಬುದ್ಧಿವಂತಿಕೆಯಲ್ಲೇ ಆಗಲಿ ಕಡಿಮೆ ಸಾಮರ್ಥ್ಯ ಉಳ್ಳವರಲ್ಲ. ವಕೀಲ ಮುಂತಾದ ಲೌಕಿಕ ಜನರನ್ನು ಕರೆಸಿ, ಆಲೋಚನೆ ಕೇಳುವ ಅವಶ್ಯಕತೆಯು ಅವರ ಮನಸ್ಸಿಗ ಬರಲಿಲ್ಲ. ಪಾರುಪತ್ಯಗಾರನನ್ನಾದರೂ ಕರೆಸಿ ಅವನ ತಾತ್ಪರ್ಯವನ್ನು ತಿಳಿಯುವದು ಅಗತ್ಯವೆಂದು ಅವರು ತಿಳುಕೊಳ್ಳಲಿಲ್ಲ. ಅವರು ಸ್ವಬುದ್ಧಿಯಿಂದ ಸೂರ್ಯನಾರಾಯಣನ ಆಶ್ರಮವನ್ನು ಕುರಿತು ಪ್ರಶ್ನಪತ್ರಕ್ಕೆ ಪ್ರತ್ಯುತ್ತರವನ್ನು ಗೀರ್ವಾಣ ಭಾಷೆಯಲ್ಲಿ ಬರೆದು ಕಳುಹಿಸಿದರು. ಅದರ ಮುಖ್ಯ ತಾತ್ಪರ್ಯ ಏನಾಗಿತ್ತೆಂದರೆ:--ವಿಪ್ರಕುಲೋತ್ತಮರಾದ ಮಾತಾಪಿತರ ಸಂಯೋಗದಿಂದ ಉದ್ಭವಿಸಿದ ಪಿಂಡವು ಬ್ರಹ್ಮತೇಜಾಧಿಕ್ಯದಿಂದ ಅನುದಿನ ಬೆಳೆಯುತ್ತಾ ಪ್ರಫುಲ್ಲತೆಯನ್ನುಹೊಂದಿ ನ್ಯೂನಾತಿರಿಕ್ತವಿಲ್ಲದೆ ವಿರಾಜಿಸಿದ ಬಗೆಯೇ ಆಶ್ರಮಹೊಂದುವ ಯೋಗ್ಯತೆಯ ಚಿಹ್ನೆಯಾಗಿ ತೋರಿದ ಕಾರಣ ಅಂಥಾ ಯೋಗ್ಯ ಪುರುಷನಾದ ಸೂರ್ಯನಾರಾಯಣನನ್ನು ತನ್ನ ಉತ್ತರಾಧಿಕಾರಿಯಾಗಿ ನೇಮಿಸಿದ್ದೇನೆ. ಈ ಸ್ವತಂತ್ರ ತನ್ನೊಬ್ಬನದಾಗಿರುವದಲ್ಲದೆ ಅನ್ಯನೊಬ್ಬನು ಎಷ್ಟು ಶ್ರೇಷ್ಠನಾದರೂ ಅದರಲ್ಲಿ ಚರ್ಚೆ ಮಾಡತಕ್ಕ ಯೋಗ್ಯತೆಯುಳ್ಳವನಲ್ಲ. ಇತರ ದ್ವೇಷದಿಂದ ವೈಮನಸ್ಸು ಹುಟ್ಟಿದ ನೃಸಿಂಹಪುರದ ಶ್ರೀಪಾದಂಗಳ ಕುತಂತ್ರದಿಂದ ಹುಟ್ಟಿದ ಈ ಪ್ರಸಂಗದಲ್ಲಿ ಉಳಕಿ ಮಠಾಧಿಪತಿಗಳು ಸೇರಿಕೊಂಡದ್ದಕ್ಕಾಗಿ ಬಹಳ ವ್ಯಸನಪಡುತ್ತೇನೆ. ನ್ಯಾಯವಾದ ಉತ್ತರಾಧಿಕಾರಿಯು ಯೋಗ್ಯನಾಗಿರುತ್ತಾ ಅವನನ್ನು ತ್ಯಜಿಸಿ ಇನ್ನೊಬ್ಬಗೆ ನೇಮಿಸುವ ಅಧಿಕಾರವು ಚತು

ಮಠದವರ್‍ಯಾರಿಗೂ ಇಲ್ಲ. ಅಂಥಾ ಪುಂಡತನ ಅವರು ನಡೆಸಿದರೆ ಅವರು ದೇವರ ಅವಕರಣಕ್ಕೆ ಒಳಗಾಗುವರು; ಹಾಗೂ ಲೋಕನಿಂದ್ಯರಾಗಿ ತುಚ್ಛಕ್ಕೆ ಪಾತ್ರರಾಗುವರು. ಮತ್ತು ತನ್ನ ಮಠಕ್ಕೆ ಉಂಟಾಗುವ ಸಕಲ ನಷ್ಟ ತೆರಲಿಕ್ಕೂ ಬಾಧ್ಯರಾಗುವರು. ಇಂಥಾ ಕಠಿಣವಾದ ಪ್ರತ್ಯುತ್ತರವನ್ನು ನೋಡಿ ಚತುರ್ಮಠದಲ್ಲಿ ಪ್ರಮುಖರಾದ ನೃಸಿಂಹಪುರದ ಮಠಾಧೀಶರಿಗೆ ಈರ್ಷೆಯು ಏರಿತು. ಅವರ ಸಂಗಡಿಗರಿಗೆ ಕೊಂಚ ನಾಚಿಕೆಯೂ ಪಶ್ಚಾತ್ತಾಪವೂ ಹುಟ್ಟಿತು. ಕಾರ್ಯವುಂದರಿಸಿಹೋಯಿತು. ಏನು ಮಾಡುವದೆಂಬ ಚಾಂಚಲ್ಯ ಉಂಟಾಯಿತು.

ಜ್ಞಾನಸಾಗರತೀರ್ಥರು ತಡಮಾಡದೆ ದ್ವಂದ್ವ ಮಠಾಧಿಪತಿಯಾದ ತನ್ನ ಅಧಿಕಾರವನ್ನು ನಡೆಸಲಿಕ್ಕೆ ಉದ್ಯುಕ್ತರಾದರು. ಬೇರೆ ಮೂವರು ಯತಿಗಳು ಸಮ್ಮತಿಯನ್ನು ಕೊಡಲಿಕ್ಕೆ ಜಾಪ್ಯ ಮಾಡಲಿಲ್ಲ. ನಾಲ್ವರು ಯತಿಗಳು ಏಕ ರೀತಿಯಲ್ಲಿ ಸೂರ್ಯನಾರಾಯಣನು ಆಶ್ರಮ ಪಡೆಯಲಿಕ್ಕೆ ಅಯೋಗ್ಯನೆಂಬ ನಿರ್ಣಯವನ್ನು ಬರೆದು ಅವನ ಸ್ಥಳದಲ್ಲಿ ನಿರಾಕ್ಷೇಪಕರವಾದ ಇನ್ನೊಬ್ಬನನ್ನು ಆರಿಸುವದಕ್ಕೆ ಯೋಚಿಸಿದರು. ಒಂದುವೇಳೆ ಮುಂದೆ ಆ ಆಶ್ರಮವು ಊರ್ಜಿತವಾಗಿ ದ್ವಂದ್ವ ಮಠದವರಿಂದ ಆರಿಸಲ್ಪಟ್ಟ ಶಿಷ್ಯನು ಅತಂತ್ರನಾಗುವ ಕಾಲ ಬಂದರೆ ಮಾಡಬೇಕಾಗುವ ಮುಂಜಾಗ್ರತೆಯನ್ನು ಕುರಿತು ಸಣ್ಣದೊಂದು ವಾದ ಹುಟ್ಟಿತು. ಅಂಥಾ ವೈಪರೀತ್ಯ ಸಂಭವಿಸಿದರೆ ದ್ವಿತೀಯಾಶ್ರಮಹೊಂದಿದ ಯತಿಗೋಸ್ಕರ ಚತುರ್ಮಠದವರು ಈಗಲೇ ವಂತಿಗೆ ಪರಿಮುಖ ಭಂಡಾರವನ್ನು ಅನುಕೂಲಿಸಿಕೊಂಡು ಅವನ ಪೋಷಣೆ ನಡೆಯುವ ಹಾಗೆ ನೋಡಿಕೊಳ್ಳುವದೆಂದು ಜ್ಞಾನಸಾಗರರು ಅಭಿಪ್ರಾಯಪಟ್ಟರು. ಆಶ್ರಮ ಕೊಡುವ ಮಠದವರೇ ಭಂಡಾರವನ್ನು ಸ್ವಂತದಿಂದ ಸ್ಥಾಪಿಸಬೇಕು; ತಾವು ಚಿಕ್ಕಾಸು ತೆರುವವರಲ್ಲವಾಗಿ ಉಳಿದ ಮೂರು ಮಠಾಧಿಪತಿಗಳು ಖಂಡಿತವಾಗಿ ಹೇಳಿಬಿಟ್ಟರು. ನೃಸಿಂಹಮಠಾಧೀಶರು ದೊಡ್ಡ ಇಕ್ಕಟ್ಟಿನಲ್ಲಿ ಸಿಲುಕಿದರು. ಹಣದ ಆಸೆಯಿಂದ ಹಿಂಜರಿದರೆ ಅಪಹಾಸ್ಯಕ್ಕೆ ಕಾರಣವಾಗುವದು. ಹಣದ ಮುಖನೋಡಿ ಈ ಪ್ರಸ್ತಾಪವನ್ನೇ ಬಿಟ್ಟು ಸುಮ್ಮಗಿರುವುದಕ್ಕೆ ಬೇರೆ ಮೂವರು ಯತಿಗಳಿಗೆ ಮನಸ್ಸಿದ್ದರೂ ಜ್ಞಾನಸಾಗರರು ಹಟಬಿಡುವುದಕ್ಕೆ ಮನಸ್ಸುಳ್ಳವರಾಗಲಿಲ್ಲ.

ಯಜಮಾನರ ಅನುಜ್ಞೆಗನುಗುಣವಾಗಿ ಪಾರುಪತ್ಯಗಾರನು ತಕ್ಕ

ಪ್ರಾಯದ ಸುಲಕ್ಷಣ ಹುಡುಗನೊಬ್ಬನನ್ನು ಆರಿಸಿ ಅವನ ತಂದೆತಾಯಿಗಳಿಗೆ ಒಂದು ಸಾವಿರ ರೂಪಾಯಿ ಮುಂಗಡವಾಗಿ ಕೊಡುವುದಕ್ಕೆ ವಾಗ್ದತ್ತ ಮಾಡಿ ಹೋಯಿತು. ಎಷ್ಟು ಬೋಧಿಸಿದರೂ ಬೇರೆ ಮಠಗಳಿಂದ ಕಿಂಚಿತ್ ದ್ರವ್ಯ ವಾದರೂ ಕೊಡುವದಕ್ಕೆ ಯತಿಗಳು ಸಮ್ಮತಿಪಡುವುದಿಲ್ಲ. ದ್ವಿತೀಯಾಶ್ರಮ ಕೊಡುವುದಕ್ಕೆ ಮುಹೂರ್ತ ಹ್ಯಾಗೂ ಮೊದಲೇ ನಿಶ್ಚಯಿಸಿಟ್ಟಿತ್ತು. ಒಂದು ಕಡೆಯಿಂದ ಮರ್ಯಾದೆಯ ಭಯವೂ ಇನ್ನೊಂದು ಕಡೆಯಿಂದ ದ್ರವ್ಯದಾಶೆಯೂ ಜ್ಞಾನಸಾಗರರನ್ನು ಚಿಂತಾಸಾಗರದಲ್ಲಿ ಅದ್ದಿದವು. ಹಗಲು ರಾತ್ರೆ ನಿಟ್ಟುಸಿರುಬಿಡುತ್ತಾ ಪ್ರೇತಪಿಶಾಚಿ ಸೋಂಕಿದವರಂತೆ ಕಾಣಿಸಿಕೊಳ್ಳುವ ತನ್ನ ಒಡೆಯನ ಅವಸ್ಥೆಯನ್ನು ಸಹಿಸಲಾರದೆ ಪಾರುಪತ್ಯಗಾರನು ತಾನಾಗಿ ವ್ಯಸನವನ್ನು ಕುರಿತು ರಹಸ್ಯವಾಗಿ ಪೃಛೆ ಮಾಡಿದಾಗ ಬಾಯಿಬಿಡದೆ ನಿರ್ವಾಹವಿಲ್ಲದ್ದರಿಂದ ತನ್ನ ದುಮ್ಮಾನದ ಕಾರಣವನ್ನು ಅವರು ವಿವರಿಸಿದರು. "ಹಣದ ಅಭಿಲಾಷೆ ಮಾಡುವ ಸಮಯವು ಇದಲ್ಲ. ಸಂಸ್ಥಾನಕ್ಕೆ ದೇವರ ದಯೆಯಿಂದ ಏನೂ ಕಡಿಮೆ ಇಲ್ಲ. ಇಂಥಾ ಹತ್ತು ಆಶ್ರಮಗಳನ್ನು ಕೊಟ್ಟರೂ ಸಾಕಷ್ಟು ಭಂಡಾರ ಪ್ರತ್ಯೇಕಿಸಿಡಬಹುದು" ಎಂದು ಪಾರುಪತ್ಯಗಾರನುಹೇಳಿದನು. ನಿನ್ನ ಮನಸ್ಸಿದ್ದಂತಾಗಲೆಂದು ಜೀವಸಂಕಟಕ್ಕೆ ಒಂದು ಪ್ರತ್ಯುತ್ತರವನ್ನು ಯಜಮಾನರು ಕೊಟ್ಟರು. ಕೂಡಲೇ ಪಾರುಪತ್ಯಗಾರನು ಮುಂದಿನ ಕೆಲಸ ಸುಧಾರಿಸಲಿಕ್ಕೆ ಉಪಕ್ರಮಿಸಿದನು.

ನೋಡಿಟ್ಟ ಮುಹೂರ್ತದಲ್ಲಿ ಆಶ್ರಮವು ಆಯಿತು. ಈ ಒಸಗೆಯು ಕುಮುದಪುರಕ್ಕೆ ತಲಪಿತು. ವಾಗ್ದೇವಿಗೂ ಚಂಚಲನೇತ್ರರಿಗೂ ಕಳವಳ ಹುಟ್ಟಿತು. ದುಷ್ಮಾನರ ಹಟವು ಸಿದ್ಧಿಸುವ ಕಾಲಬಂತೇ ಎಂದು ಉಭಯತರು ಹೆಚ್ಚು ವ್ಯಾಕುಲ ಪಟ್ಟರೂ ಭಯಪಟ್ಟವರಂತೆ ತೋರಿಸಿಕೊಳ್ಳದೆ ಇರುವವರಾದರು. ಇನ್ನು ಮುಂದೆ ರಾಜದ್ವಾರದಲ್ಲಿರುವ ಪ್ರಮುಖ ಉದ್ಯೋಗಸ್ಥರ ಕೃಪೆಯನ್ನು ದೊರಕಿಸಿಕೊಳ್ಳುವುದರ ಮೇಲೆ ತಮ್ಮ ಭವಿಷ್ಯವು ಹೊಂದಿಕೊಂಡಿರುವದಾದ ಕಾರಣ ಈ ಮುಖ್ಯ ವಿಷಯಕ್ಕೆ ಲಕ್ಷ್ಯಕೊಟ್ಟರೆ ಜಯಹೊಂದುವುದಕ್ಕೆ ಪ್ರಯಾಸವಾಗದೆಂಬ ನಂಬಿಗೆಯಿಂದ ಉಭಯತ್ರರೂ ಸ್ವಸ್ಥಮಾನಸರಾದರು. ಯಾವುದಕ್ಕೂ ಭೀಮಾಜಿಯನ್ನು ಕರೆಸಿ ಈ ಜನ್ಯವನ್ನು ಅವನ ಕಿವಿಗೆ ಹಾಕಿ ಅವನ ಆಪ್ತಾಲೋಚನೆಯನ್ನು ಕೇಳುವದಕ್ಕಾಗಿ ಒಬ್ಬ ಚಾರನನ್ನು ಕೊತ್ವಾಲನ ಮನೆಗೆ ವಾಗ್ದೇವಿಯು ಕಳುಹಿಸಿದಳು.

ಅವನು ಊಟದಲ್ಲಿರುವದರಿಂದ ಅದು ತೀರಿದಾಕ್ಷಣ ಬರುವನೆಂದು ಉತ್ತರ ಬಂತು. ಅಷ್ಟರಲ್ಲಿ ಮಠದಲ್ಲಿ ಒಂದು ದೊಡ್ಡ ಅನಾಹುತ ನಡೆಯಿತು. ಅದೇನೆಂದು ವರ್ಣಿಸುವುದಕ್ಕೆ ಮುಂಚೆ ವಾಚಕರ ಮನಸ್ಸಿಗೆ ಹಿಂದಿನ ಸಣ್ಣದೊಂದು ವಿದ್ಯಮಾನವನ್ನು ನೆನಪಿಗೆ ತರುವ ಅಗತ್ಯವದೆ.

ಸೂರ್ಯನಾರಾಯನ ಆಶ್ರಮುವನ್ನು ಕುರಿತು ಚಂಚಲನೇತ್ರರು ಅರಿಮನಸ್ಸು ತೋರಿಸಿಕೊಂಡ ಸಂಬಂಧ ವಾಗ್ದೇವಿಯು ಅವರ ಕೂಡೆ ಜಗಳವಾಡಿ ಪ್ರತ್ಯೇಕ ಬಿಡಾರ ಮಾಡಿದಳಷ್ಟೆ. ಆ ಬಿಡಾರದಲ್ಲಿರುವಾಗ ನೇಮರಾಜ ಸೆಟ್ಟಿಯು ಶೃಂಗಾರಿಯ ಮೇಲೆ ವ್ಯಾಮೋಹಪಟ್ಟು, ಅವರಿಬ್ಬರಲ್ಲಿ ಗುಹ್ಯಾತಿಗುಹ್ಯವಾಗಿ ಸ್ನೇಹಭಾವ ವೃದ್ಧಿಯಾಗುತ್ತ ಬರುವದು ವಾಗ್ದೇವಿಯು ಅರಿತವಳಾಗಿದ್ದಳು. ಈ ದೆಸೆಯಿಂದಲೇ ಮಠದಿಂದ ಕೇಳಿದಷ್ಟು ಹಣವನ್ನು ಅವನು ಸಾಲವಾಗಿ ಕೊಟ್ಟು ಅನುದಿನವೂ ವಾಗ್ದೇವಿಯ ಬಿಡಾರಕ್ಕೆ ಬಂದು ಸಮಯಾನುಸಾರ ಶೃಂಗಾರಿಯ ಸಮಾಗಮದಲ್ಲಿ ರವಷ್ಟು ಹೊತ್ತು ಕಳೆಯುತಿದ್ದನು. ತಿಪ್ಪಾಶಾಸ್ತ್ರಿಯು ಶೃಂಗಾರಿಯ ಪ್ರಥಮ ಮಿತ್ರನಾಗಿ ಇವರೊಳಗಿನ ಅನ್ಯೋನ್ಯವು ಹೆಚ್ಚುತ್ತಾ ಬರುವ ಸಂಧಿಯಲ್ಲಿಯೇ ನೇಮರಾಜ ಸೆಟ್ಟಿಯು ಅವಳ ಮೋಹಜಾಲದಲ್ಲಿ ಸಿಲುಕಿದ ಕಾರಣ ಅವಳಿಗೆ ತಿಪ್ಪಾಶಾಸ್ತ್ರಿಯ ಮೇಲಿನ ಪ್ರೀತಿಯು ಕಡಿಮೆಯಾಗುತ್ತಾ ಬರುವದಾಯಿತು. ಇದುತಿಪ್ಪಾಶಾಸ್ತ್ರಿಗೆ ಗೊತ್ತಾಗಿ ಅದರ ಕಾರಣವು ತಿಳಿದದ್ದರಿಂದ ನೇಮರಾಜನ ಮೇಲೆ ಶಾಸ್ತ್ರಿಗೆ ಹಗೆಯು ಬೆಳೆಯುತ್ತಾ ಬಂತು. ಆ ವರ್ತಮಾನವನ್ನು ಹ್ಯಾಗಾದರೂ ದೂರಪಡಿಸಿ ಶೃಂಗಾರಿಯ ಪ್ರೀತಿಯನ್ನು ತಾನೊಬ್ಬನೇ ಅಪಹರಿಸಿಕೊಳ್ಳಬೇಕೆಂಬ ದೊಡ್ಡ ಆತುರವು ಅವನಿಗೆ ವೇಷ್ಟಿಸಿರುತಿತ್ತು. ಪರಂತು ಅವನ ಬಯಕೆಯು ನೆರವೇರಲಿಲ್ಲ. ವೈಷಮ್ಯದ ಕುರುಹುಗಳೇ ಶೃಂಗಾರಿಯ ನಡವಳಿಕೆಯಲ್ಲಿ ಅವನಿಗೆ ಕಂಡುಬಂದು ರೋಷ ಉಂಟಾಯಿತು. ಕಾಲಕಳೆಯುತ್ತಾ ಶೃಂಗಾರಿಯ ಮುಖಾವಲೋಕನ ಅಪರೂಪವಾಗಿಯಾದರೂ ಶಾಸ್ತ್ರಿಗೆ ದೊರಕುವದು ದುರ್ಲಭವಾಯಿತು. ಶಾಸ್ತ್ರಿಯು ಕ್ರೋಧ, ಮೋಹ ಮತ್ತು ಮತ್ಸರ ತಡೆಯಲಾರದೆ, ನೇಮರಾಜನನ್ನು ವಧಿಸಿಯಾದರೂ ಶೃಂಗಾರಿಯನ್ನು ಸಂಪೂರ್ಣವಾಗಿ ತನ್ನ ಸ್ವಾಧೀನ ಇಟ್ಟುಕೊಳ್ಳದಿರಲಾರೆನೆಂದು ಭಾಷೆತೊಟ್ಟುಕೊಂಡು, ತನ್ನ ವಿರೋಧಿಯನ್ನು ಕೊಲ್ಲಲಿಕ್ಕೆ ಅವಕಾಶವನ್ನು ಕಾಯುತ್ತಾ ಇದ್ದನು.

## ನಲುವತ್ತನಾಲ್ಕು

ಸೂರ್ಯನಾರಾಯಣನ ಅವಗುಣಕ್ಕೆ ದ್ವಿತೀಯಾಶ್ರಮುಪಾಯಿತೆಂಬ ದುರ್ವಾರ್ತೆಯು ತಲಪಿ, ಸ್ವಾಮಿಗಳೂ ವಾಗ್ದೇವಿಯೂ ಏಕಾಂತ ಗೃಹದಲ್ಲಿ ಅನುವಾದಿಸಿಕೊಂಡಿರುವ ವೇಳೆಯಲ್ಲಿ ನೇಮರಾಜಸೆಟ್ಟಿಯು ಶೃಂಗಾರಿಯ ಸಂಗಡ ಸಂಭಾಷಣೆ ನಡಿಸುತ್ತಿದ್ದನು. ಇದನ್ನು ಹ್ಯಾಗೋ ತಿಳಿದ ತಿಪ್ಪಾಶಾಸ್ತ್ರಿಯು ತಪ್ಪನೆ ಆ ಸ್ಥಳಕ್ಕೆ ಪ್ರವೇಶವಾಗಿ ಕಾಲರುದ್ರನಂತೆ ಕನಲಿ ಹಿಂದು ಮುಂದು ನೋಡದೆ ನೇಮರಾಜನ ಮೇಲೆ ಬಿದ್ದು ಅವನ ಗಂಟಲನ್ನು ಒತ್ತಿ ಅವನು ಬಿಡಿಸಿಕೊಳ್ಳುವಷ್ಟರಲ್ಲಿ ಸಮೀಪವಿರುವ ತಾಂಬೂಲದ ಹರಿವಾಣ ದಲ್ಲಿ ಕೈಗೆ ಸಿಕ್ಕಿದ ಚೂರಿಯಿಂದ ಅವನ ಹೊಟ್ಟೆಗೆ ತಿವಿಮುಬಿಟ್ಟನು. ಕರುಳು ಹೊರಗೆ ಬಂದು ನೇಮರಾಜಸೆಟ್ಟಿಯು ಪ್ರಾಣಬಿಟ್ಟನು. ಆವಾಗ ಶಾಸ್ತ್ರಿಗೆ ಕಂಪನವಾಗಲಿಕ್ಕೆ ಪ್ರಾರಂಭವಾಯಿತು. ಶೃಂಗಾರಿಯು ದೆವ್ವಬಡದವಳಂತೆ ಘಟ್ಟಿಯಾಗಿ ಒಮ್ಮೆ ಕೂಗಿಬಿಟ್ಟು ಸ್ಮೃತಿತಪ್ಪಿ ಬಿದ್ದಳು. ಆ ಕೂಗು ಕೇಳಿ ಏನೋ ಅಸಂಭವ ನಡಿಯಿತೆಂಬ ಅನುಮಾನದಿಂದ ಒಡನೆ ವಾಗ್ದೇವಿಯು ಬಂದಳು. ಕೊಲೆಪಾತಕವನ್ನು ನೋಡಿ ಅವಳ ಕಣ್ಣುಗಳಿಗೆ ಕತ್ತಲೆ ಬಂದು "ಅಯ್ಯೋ, ತಿಪ್ಪಾ! ಜೀವಕ್ಕೆ ಮುನದಿಯಾ" ಎಂದು ತಟ್ಟನೆ ಶೃಂಗಾರಿಯ ಸಮೀಪ ಮೂರ್ಛೆ ಹೊಂದಿ ನೆಲಕ್ಕೆ ಉರುಳಿದಳು. "ವಾಗ್ದೇವಿಯು ತಿರುಗಿ ಬರಲಿಲ್ಲವ್ಯಾಕೆ? ಇದೇನು ದುರ್ದಿನ" ಎಂದು ಚಂಚಲನೇತ್ರರು ತಾವೇ ನೇಮರಾಜಸೆಟ್ಟಿಯು ಮೃತಹೊಂದಿದ ಕೋಣೆಯ ಬಾಗಲಿಗೆ ಬಂದು ನೋಡಿ ಸಂತಪ್ತರಾಗಿ "ಕೊಲೆಗಾರ ನೀನೇ?" ಎಂದು ಅಲ್ಲಿ ನಿಂತು ಕೊಂಡಿದ್ದ ತಿಪ್ಪಾಶಾಸ್ತ್ರಿಯನ್ನು ಕೇಳಿದರು. ಧೂರ್ತನಾದ ತಿಪ್ಪನ ಬಾಯಿಯಿಂದ ಪ್ರತ್ಯುತ್ತರ ಹೊರಡದೆ ಇರುವುದರಿಂದ ಮಿತಿಮೀರಿ ಕೋಪ ಹುಟ್ಟಿದ ಚಂಚಲನೇತ್ರರು ಅವನ ಎದೆಗೆ ಒಂದಾವರ್ತಿ ಒದ್ದುಬಿಟ್ಟು ಅವನ ಪ್ರಾಣವನ್ನು ತೆಗೆಯಲಿಕ್ಕೆ ಒಂದು ಆಯುಧವನ್ನು ಹುಡುಕುತ್ತಾ ಇರುವ ಸಂಧಿಯಲ್ಲಿ ವಾಗ್ದೇವಿಯು ಚೇತರಿಸಿಕೊಂಡೆದ್ದು ಯತಿಗಳನ್ನು ಅಲ್ಲಿಂದ ಹಿಂದಕ್ಕೆ ಎಳಕೊಂಡು ಅವರ ಸಿಂಹಾಸನದ ಕೋಣೆಯಲ್ಲಿ ಕೂರಿಸಿ ಮರಳಿ ಕೊಲೆ ಪಾತಕದ ಗೃಹಕ್ಕೆ ಬಂದಳು.

ಶೃಂಗಾರಿಯನ್ನೂ ತಿಪ್ಪಾಶಾಸ್ತ್ರಿಯನ್ನೂ ಆ ಕೊಠಡಿಯಿಂದ ಹೊರಡಿಸಿ ಕದವನ್ನು ಘಟ್ಟಿಯಾಗಿ ಮುಚ್ಚಿಬಿಟ್ಟು ಚಂಚಲನೇತ್ರರ ಕಿವಿಯಲ್ಲಿ ವಾಗ್ದೇ

ವಿಯು ಕುಸಕುಸುಗುಟ್ಟುತ್ತಿರುವ ಹೊತ್ತಿನಲ್ಲಿ ಭೀಮಾಜಿಯ ಸವಾರಿಯು ಬಂದಿರುವದೆಂದು ಹರಿಕಾರನೊಬ್ಬನಿಂದ ಗೊತ್ತಾಯಿತು. ವಾಗ್ದೇವಿಯೂ ಚಂಚಲನೇತ್ರರೂ ಒಟ್ಟಿನಲ್ಲಿ ಏಕಾಂತ ಕೋಣೆಗೆ ಪ್ರವೇಶಿಸಿ ಅಲ್ಲಿ ಭೀಮಾಜಿಯನ್ನು ಸನ್ಮಾನದಿಂದ ಕುಳ್ಳಿರಿಸಿದರು. ಅಶ್ರುಜಲಧಾರೆಗಳು ಪ್ರವಹಿಸುತ್ತಿರುವ ವಾಗ್ದೇವಿಯನ್ನೂ ಭೀತಿಯಿಂದ ಗಡಗಡನೆ ನಡುಗುವ ಚಂಚಲನೇತ್ರರನ್ನೂ ಕೊತ್ವಾಲನು ಈಕ್ಷಿಸಿ ಸೂರ್ಯನಾರಾಯಣನನ್ನು ಕುರಿತು ಅಂದು ಸಿಕ್ಕಿದ ಅಶುಭವಾರ್ತೆಯಿಂದ ಈ ಅವಸ್ಥೆಯು ಇವರಿಬ್ಬರಿಗಾಯಿತೆಂಬ ಸಂದೇಹದಿಂದ ಉಭಯತರಿಗೂ ಅವರ ಗಣ್ಯಮಾಡಬೇಡಿರೆಂದು ಸಮಾಧಾನಪಡಿಸುವ ಪ್ರಯತ್ನದಲ್ಲಿರುವಾಗ—“ಅದೆಲ್ಲಾ ಅಂತಿರಲಿ! ನಾವೀಗ ಗಲ್ಲಿಗೆ ಬೀಳುವ ಸಂಭವ ಒದಗಿಯದೆ, ಸ್ವಾಮಿಾ! ನಮ್ಮನ್ನು ರಕ್ಷಣೆ ಮಾಡುವವರು ತಾವಲ್ಲದಿನ್ನಾರು? ನಮಗಿಡುತ್ತಿರೋ? ಈಗಲೇ ನಮ್ಮ ಪ್ರಾಣತ್ಯಾಗದ ಉಪಾಯ ನೋಡುವದಕ್ಕೆ ಅನುಜ್ಞೆಯಾಗುತ್ತೋ?” ಎಂದು ಕೇಳುತ್ತಾ ಅವರೀರ್ವರೂ ಮರುಗಿದರು. “ಸ್ವಾಮಿಾ! ಯಾಕೆ ಶೋಕಮಾಡುತ್ತೀರಿ? ಏನು ಕಷ್ಟ ಬಂದದೆ? ಅಂಜದೆ ಹೇಳಿ. ನಿವೃತ್ತಿಯ ಉಪಾಯ ಹೇಳುವೆನು” ಎಂದು ಕೊತ್ವಾಲನು ಚಂಚಲನೇತ್ರರಿಗೆ ಅತಿ ವಿನಯದಿಂದ ಭರವಸೆಯನ್ನು ಕೊಟ್ಟನು. ನಡೆದ ಕೃತ್ಯವನ್ನು ನಮ್ಮ ಬಾಯಿಯಿಂದ ಕೇಳುವದಕ್ಕಿಂತಲೂ ಕಣ್ಣಿನಿಂದ ನೋಡಿದರೆ ಸಕಲ ವೃತ್ತಾಂತವು ಮನಸ್ಸಿಗೆ ಹೋಗುವದೆಂದು ವಾಗ್ದೇವಿಯ ಸಮೇತ ಯತಿಗಳು ಕೊತ್ವಾಲನನ್ನು ಸಂಗಡ ಕರಕೊಂಡು ನೇಮರಾಜನ ಶವವು ಬಿದ್ದಿರುವ ಕೋಣೆಯ ಬಾಗಲನ್ನು ತೆರೆದು ತೋರಿಸಿದರು.

ಭೀಮಾಜಿಯು ಒಮ್ಮೆ ನ್ಯೆ ತೆಗೆದನು. ಕೋಣೆಯ ಹೊರಗೆ ಶೃಂಗಾರಿಯೂ ತಿಪ್ಪಾಶಾಸ್ತ್ರಿಯೂ ಬಾಗಿಲ ಇಕ್ಕಡೆಗಳಲ್ಲಿ ಬಾಗಲು ಕಾಪುಗೊಂಬೆಗಳಂತೆ ನಿಂತು ಕೊಂಡಿದ್ದರು. ಶೃಂಗಾರಿಯು ನಾಚಿಕೆಯಿಂದಲೂ ವ್ಯಸನದಿಂದಲೂ ತಲೆಯನ್ನು ಬಗ್ಗಿಸಿಕೊಂಡಿದ್ದಳು. ತಿಪ್ಪಾಶಾಸ್ತ್ರಿಯ ಮುಖದ ಮೇಲೆ ಕೊಲೆಪಾತಕದ ಭೀಕರ ಛಾಯವು ನೆಲೆಯಾಗಿತ್ತು. “ಈ ನಾಯಿಯನ್ನು ಅರೆನಿಮಿಷದಲ್ಲಿ ಗಲ್ಲಿಗೆ ತೂಗ ಹಾಕ ಬಹುದಿತ್ತು. ಪರಂತು ಮಠದ ಮೇಲೆ ಬರುವ ಅಧ್ವಾನವು ಸಣ್ಣದಾಗಿರಲಿಕ್ಕಿಲ್ಲ. ನಾನು ಇಂಥಾ ಸಂದುಗಟ್ಟಿನಲ್ಲಿ ಈ ಸ್ಥಳಕ್ಕೆ ಬಂದದ್ದು ಪರಿಷ್ಕಾರವಾಗಿ ನನಗೆ ತೋರುವುದಿಲ್ಲ.

ಕದವನ್ನು ಮುಚ್ಚಿಬಿಡಿ. ಸಿಂಹಾಸನದ ಕೋಣೆಗೆ ಹೋಗುವಾ" ಎಂದು ಭೀಮಾಜಿಯು ಹೇಳಿದನು. ಹಾಗೆ ಅನುವರ್ತಿಸೋಣಾಯಿತು. ಆ ಕೋಣೆಯಲ್ಲಿ ವಾಗ್ದೇವಿಯೂ ಚಂಚಲನೇತ್ರರೂ ಭೀಮಾಜಿಯೂ ಹೆಚ್ಚುಸಮಯದವರೆಗೂ ಗುಪ್ತ ಸಂಭಾಷಣೆಮಾಡಿದರು. ಸುಸೂತ್ರವಾದ ಅನುಸಂಧಾನವನ್ನು ಭೀಮಾಜಿಯು ಸೂಚಿಸಲಿಕ್ಕೆ ಅನುಮಾನಪಡುತ್ತಾ ಕಾಲ ಕಳೆದನು. ಘೋರವಾದ ಪಾಪಕೃತ್ಯವು ಮಠದಲ್ಲಿ ನಡೆಯಿತಲ್ಲ! ಅಪರಾಧಿಗಳು ಯಾರಾದರೂ ಸರಿ. ಮಠದ ಕಳೆಗುಂದುವ ಸಂಭವ ಒದಗಿತು! ಶಾಬಯ್ಯನ ಕಿವಿಗೆ ಈ ದುರ್ವಾರ್ತೆಯು ಬೀಳುತ್ತಲೇ ಅವನ ಮನಸ್ಸು ಮುರಿಯುವದು. ಬೇಕಾದಷ್ಟು ದ್ರವ್ಯವನ್ನು ಮಠಮಾರಿಯಾದರೂ ವೆಚ್ಚಮಾಡಲಿಕ್ಕೆ ಸಿದ್ಧವಿರುವದಾಗಿ ಚಂಚಲನೇತ್ರರು ಹೇಳಿಕೊಂಡರು. ತಾನಾಗಲೀ ಕಾರಭಾರಿಯಾಗಲೀ ಲಂಚಲವಣವನ್ನು ವಮನದಂತೆ ಎಣಿಸುವವರೆಂದು ಇದುವರೆಗೂ ನಡೆದ ವಿದ್ಯಮಾನಗಳಿಂದ ಪ್ರತ್ಯಕ್ಷವಾಗಲಿಲ್ಲವೇ? ಅಂಥ ಹೀನ ವಿಚಾರವನ್ನು ಬಿಟ್ಟುಬಿಡಬೇಕೆಂದು ಖಂಡಿತವಾಗಿ ಭೀಮಾಜಿಯು ನುಡಿದನು. ಅದು ತಾನು ಚೆನ್ನಾಗಿ ಅರಿತವಳು ಮುಖ್ಯ ಅನಾಥೆಯಾದ ತನನ್ನು ಕಡೇವರೆಗೆ ರಕ್ಷಿಸುವೆವೆಂದು ಉಭಯತರು ಕೊಟ್ಟ ಭಾಷೆಯು ಹುಸಿಯಾಗದೆಂಬ ಧೈರ್ಯದಲ್ಲಿರುತ್ತೇನೆ. ಪ್ರಕೃತ ಪಾಪಕೃತ್ಯದಲ್ಲಿ ತಾನೂ ಶ್ರೀಪಾದಂಗಳೂ ನಿರಾಪರಾಧಿಯಾದವರು. ಮಠದಲ್ಲಿ ನಡೆದುಹೋದ ಕೊಲೆಪಾತಕದ ಅರಿಷ್ಟಪರಿಹಾರವಾಗುವದಕ್ಕೆ ಎರಡು ಲಕ್ಷ ರೂಪಾಯಿಗಳನ್ನು ಪ್ರಾಯಶ್ಚಿತ್ತರೂಪವಾಗಿ ಪುಣ್ಯಸಂಗ್ರಹಸಂಘವವರಿಗೆ ಒಪ್ಪಿಸಿ ಕೊಡುವೆನೆಂದು ವಾಗ್ದೇವಿಯು ಭೀಮಾಜಿಯ ಕಾಲುಗಳ ಮೇಲೆ ಬಿದ್ದು ಕಂಬನಿಗಳಿಂದ ಅವನ ಪಾದಗಳನ್ನು ತೊಳೆದಳು. ಭೀಮಾಜಿಯು ಉತ್ತರಕೊಡದೆ ಸುಮ್ಮಗಿರುವದು ಅನುಮಾನಕರವಾಗಿ ತೋರಿದ ಕಾರಣ ಚಂಚಲನೇತ್ರರು ತಾವೇ ಎದ್ದು ವಾಗ್ದೇವಿಯಂತೆ ನಡಕೊಳ್ಳುವದಕ್ಕೆ ಅನುವಾದರು. ಭೀಮಾಜಿಯು ಫಕ್ಕನೆ ನಿಂತು ಕೊಂಡು—"ಪರಾಕೆ! ನೆವನ ಮೂಲಕವಾದ ಉಪಚಾರದಿಂದ ಕಿಂಕರನಾದ ನನ್ನ ಆಯುಷ್ಯ ಕ್ಷೀಣವಾಗುವ ಗಂಡಾಂತರದಲ್ಲಿ ನನ್ನನ್ನು ಹಾಕಬಾರದು" ಎಂದು ಪ್ರಣಾಮಮಾಡಿ ಹೇಳಿಕೊಂಡನು. ಹಾಗೂ ಹೆದರಬಾರದಾಗಿ ಧೈರ್ಯ ಹೇಳಿದರು.

ಪುಣ್ಯಸಂಗ್ರಹ ಸಂಘಕ್ಕೆ ಎರಡು ಲಕ್ಷ ರೂಪಾಯಿ ಕೊಡುವದಕ್ಕೆ

ಅಗತ್ಯ ಬೀಳುವ ಸಾಧನೆಯು ತಾಮಸವಿಲ್ಲದೆ ನಡೆಯಲಿ ಶಾಬಯ್ಯನನ್ನು ಕಂಡು ಬರುವೆನೆಂದು ಕೊತ್ವಾಲನು ಕಾರ್ಭಾರಿಯ ಮನೆಗೆ ನಡೆದನು. ಭೀಮಾಜಿಯು ದುಮ್ಮಾನದ ಮುಖಭಾವವನ್ನು ತಾಳಿಕೊಂಡು ಶಾಬಯ್ಯನನ್ನು ಶೀಘ್ರ ಕಂಡು ಆ ದಿನ ತಾನು ತಂದಿರುವ ಸಮಾಚಾರವನ್ನು ತಿಳಿಸಿದನು. ಇಂಥಾ ಪಾಪಕೃತ್ಯ ನಡೆದ ಆ ಮಠದ ಕಡೆಗೆ ತಲೇ ಹಾಕಿ ಮಲಗಬಾರದು; ಕೇವಲ ದುರಾಚಾರದ ವಾಯು ಸಂಚಾರದಿಂದ ಮಲೀನವಾದ ಆ ಗೃಹದೊಳಗೆ ಇನ್ನು ಯಾರೂ ಪ್ರವೇಶಿಸಬಾರದೆಂದು ಕಾರಭಾರಿಯು ಖಂಡಿತವಾಗಿ ಹೇಳಿದನು. ವಾಗ್ದೇವಿಯ ಸದ್ಗುಣಗಳನ್ನೂ ಅವಳಿಗೆ ಕೊಟ್ಟ ಭಾಷೆಯನ್ನೂ ಅವಳು ಈ ಕೃತ್ಯದಲ್ಲಿ ರವಷ್ಟಾದರೂ ಸೇರದೆ ನಿರಾಪರಾಧಿಯಾಗಿರುತ್ತಾ ಅವಳ ಮೇಲೆ ಬಂದಿರುವ ಕಷ್ಟವನ್ನು ಆಲೋಚಿಸಿವರೆ ಶಾಬಯ್ಯನ ಮನಸ್ಸಿನ ಭಾವದಲ್ಲಿ ಮಾರ್ಪಾಟ ಉಂಟಾಗಲಿಕ್ಕೆ ನಾಕೆಂದು ತಾನು ತಿಳಕೊಳ್ಳುವದಾಗಿ ಭೀಮಾಜಿಯು ಉತ್ತರಕೊಟ್ಟನು. ಕೊಂಚ ಸಮಯ ದೊಡ್ಡ ಆಲೋಚನೆಯ ಸಾಗರದಲ್ಲಿ ಮುಳುಗಿ ಹೋದವನಂತೆ ಕಣ್ಣಿನ ಮತ್ತು ಮುಖದ ಅವಭಾವಗಳನ್ನು ಸ್ವಲ್ಪ ಪಲ್ಲಟ ಮಾಡಿದ ಬಳಿಕ— "ಭೀಮಾಜಿ, ನಿನ್ನ ಮಾತು ದೈವನುಡಿಯೆನ್ನಬೇಕಪ್ಪಾ. ಕೊಟ್ಟ ಭಾಷೆಗೆ ಭಂಗ ಬರಕೂಡದು. ಏನು ಹೇಳುತ್ತಿ ಕೇಳೋಣ" ಎಂದು ಕಾರಭಾರಿಯು ನಯನುಡಿಯಿಂದ ಸಂಭಾಷಣೆಗೆ ಮನಸ್ಸುಕೊಟ್ಟನು. ಮೊದಲು ಒಂದು ಲಕ್ಷ ರೂಪಾಯಿ ಪುಣ್ಯಸಂಗ್ರಹ ಭಂಡಾರಕ್ಕೆ ಸೇರಿತು. ಈಗ ನಡೆದ ದುಷ್ಕೃತ್ಯದ ಅರಿಷ್ಟ ಪರಿಹಾರಾರ್ಥವಾಗಿ ಒಟ್ಟು ಲಕ್ಷ ರೂಪಾಯಿ ಆ ಸಂಘದವರಿಗೆ ಸಲ್ಲುವದಕ್ಕೆ ಸಿದ್ಧವಾಗಿಯದೆ ಇಂಥ ಪುಣ್ಯದ ಭಾವವು ಸಾಮಾನ್ಯವಾದದ್ದಲ್ಲ. ಹೆಚ್ಚಿಗೆ ಏನು ಅರಿಕೆ ಮಾಡಲಿ ಎಂದು ಭೀಮಾಜಿಯು ಭಿನ್ನವಿಸಿದನು. ಅದಲ್ಲದೆ ಇದೊಂದು ಘೋರವಾದ ಪಾಪಕೃತ್ಯವು. ಆದರೆ ಪ್ರಾಯಶ್ಚಿತ್ತಾರ್ಥವಾಗಿ ದತ್ತವಾದ ದ್ರವ್ಯವನ್ನು ಸಂಘದ ಸಮಷ್ಟಿಯಾದ ವಿತ್ತದ ಸಂಗಡ ಇಡಬೇಕ್ಯಾಕೆ? ಪ್ರತ್ಯೇಕವಾಗಿರಲಿ. ಈ ಸಮಾಜಕ್ಕೆ ತಾವು ಹ್ಯಾಗೂ ಅಗ್ರಾಸನೀಯರು. ಸನ್ಮಾನಿತ ಕಾರ್ಯದರ್ಶಿಯು ನಾನು ತಾನೇ. ಧನಾಧಿಪನೆಂಬ ಗೌರವವನ್ನು ತಾಳಿದರೂ ಚಿಕ್ಕಾಸು ಮುಟ್ಟುವ ಸ್ವತಂತ್ರವಿಲ್ಲದ ವರುಣನಂತೆ ಬಕ್ಷಿಯು ವಿತ್ತವನ್ನು ಕಾದುಕೊಂಡಿರುವವನೇ ಸರಿ. ಮತ್ತು ಅವನು ತಮ್ಮ ನೆಂಟನಲ್ಲವೇ. ನಮಗೂ ಈ ಪಾಪದ ಸೋಂಕು ತಗಲೀತೆನ್ನುವಾ.

ದಾನವಾದ ವಿತ್ತವನ್ನು ನಿಶ್ಶೇಷವಾಗಿ ಅದರ ಪರಿಹಾರಕ್ಕೆ ವಿನಿಯೋಗಿಸಿ ಬಿಟ್ಟರೆ ಆಗಿಹೋಯಿತು. ವ್ಯರ್ಥವಾದ ಅನುಮಾನವ್ಯಾಕೆ? ಎಂದು ಭೀಮಾಜಿಯು ಹೆಚ್ಚಿಗೆಯಾಗಿ ಅರಿಕೆ ಮಾಡಿಕೊಂಡನು.

ಈ ಬುದ್ಧಿವಾದದ ಮಾತು ಕಿವಿಗೆ ಬೀಳುತ್ತಲೇ ಭೀಮಾಜಿಗೆ ಕಾರಭಾರಿಯು ಶ್ಲಾಘನೆ ಮಾಡಿ ಜಾಗ್ರತೆಯಾಗಿರೆಂದು ಎಚ್ಚರಿಕೆ ಮಾತು ನುಡಿದನು. ಶಾಬಯ್ಯನ ಮನಸ್ಸಿನ ಮರ್ಮ ಚನ್ನಾಗಿ ಗೊತ್ತಿರುವ ಭೀಮಾಜಿಯು ತನ್ನ ವಿಷಯದಲ್ಲಿ ಚಿಂತೆ ಬೇಡ; ಎಮ್ಮೆಗೆ ಕರುವನ್ನು ಈಯಲಿಕ್ಕೆ ಕಲಿಸಬೇಕೇನು? ಮುಖ್ಯ ತಮ್ಮ ಮನಸ್ಸಿಗೆ ವಿಹಿತವಾಗಬೇಕೆಂಬುದೇ ತನ್ನ ಹಟವೆಂದು ಭೀಮಾಜಿಯು ಪ್ರತ್ಯುತ್ತರ ಕೊಟ್ಟನು. “ಸದ್ದು! ಇನ್ನು ಹೆಚ್ಚು ರಾತ್ರೆ ವರೆಗೆ ಉಪದ್ರ ಕೊಡಬೇಡ; ಮುಂದಿನ ಕಾರ್ಯ ಪರಿಷ್ಕಾರವಾಗಿ ಸುಧಾರಿಸಿ ಬಿಡು; ಶವದ ವಿನಿಯೋಗ ಸೂಕ್ಷ್ಮ ರೀತಿಯಿಂದಾಗಲಿ” ಎಂದು ಶಾಬಯ್ಯನು ಸದುತ್ತರ ಕೊಟ್ಟನು. ಭೀಮಾಜಿಯು ಬೇಗ ಮಠಕ್ಕೆ ಬಂದನು. “ಬಹು ಪ್ರಯಾಸದಿಂದ ಕಾರಭಾರಿಯ ಸಿಟ್ಟು ಶಾಂತಪಡಿಸಿ ಬಂದಿರುವೆ; ಇದೇನು ಸಣ್ಣ ಕಾರ್ಯವೇ? ಮಠದ ಮೇಲೆ ಇರುವ ಶ್ರದ್ಧೆಯಿಂದ ನಾನೊಬ್ಬ ಒಗ್ಗಾಡುತ್ತೇನೆಂದು ಇನ್ನೊಬ್ಬನಿಗೆ ಏನು ಅಗತ್ಯ ಬಿದ್ದದೆ? ಮುಂದಿನ ಉಪಾಯ ಈಗಲೇ ನಡಿಸಬೇಕು; ಜಾಪ್ಯವಾಗಕೂಡದು” ಎಂದು ಭೀಮಾಜಿಯು ಹೇಳಿದನು.

ತರುವಾಯ ಪುಣ್ಯಸಂಗ್ರಹಸಂಘಕ್ಕೆ ಪ್ರಾಯಶ್ಚಿತ್ತರೂಪವಾದ ದ್ರವ್ಯಾನುಕೂಲವನ್ನು ಪಾವತಿ ಮಾಡುವ ಏರ್ಪಾಡು ನಡೆಯಿತು. ಹಾಗೆಯೇ ವಾಗ್ದೇವಿಯು ಕಾರಭಾರಿಯ ಮನೆಗೆ ಹೋಗಿ ಅವನನ್ನು ಕಂಡು ತನಗೆ ಪ್ರಾಪ್ತಿಯಾದ ವೈಧವ್ಯದ ಮತ್ತು ಸೂರ್ಯನಾರಾಯಣಗೆ ಚತುರ್ಮಠದವರು ಮಾಡಿದ ಘೋರವಾದ ಅನ್ಯಾಯದ ಪ್ರಸ್ತಾಪ ಮಾಡಿ ಧೀರ್ಘಸ್ವರದಿಂದ ಅತ್ತಳು. “ಯಾಕೆ ಹೆದರುತ್ತೀ? ಶಾಬಯ್ಯನ ಜೀವ ಒಂದಿದ್ದರೆ ಇಂಥಾ ಸಾವಿರ ಮಠಗಳನ್ನು ಒಮ್ಮೆಯೇ ನುಂಗಿಬಿಡುವನು; ಮನೆಗೆ ನಡಿ” ಎಂದು ಅವಳ ಕಣ್ಣಿನಿಂದ ಸುರಿಯುವ ಜಲವನ್ನು ತನ್ನ ಉಭಯಹಸ್ತದಿಂದ ಒರಸಿ ಕಾರಭಾರಿಯು ಅವಳನ್ನು ಸಂತೈಸಿ ಕಳುಹಿಸಿಕೊಟ್ಟನು.

ವಾಗ್ದೇವಿಯೂ ತರಾತುರಿಯಿಂದ ಮಠಕ್ಕೆ ಬಂದು ಕಾರಭಾರಿಯ ಅನುಗ್ರಹ ಪುನರಪಿ ದೊರಕಿದ ಶುಭವಾರ್ತೆಯನ್ನು ಯತಿಗಳಿಗೆ ತಿಳಿಸಿ

ಅವರ ಮನಸ್ಸಿನ ದಿಗಿಲು ಪರಿಹರಿಸಿದಳು. ಕೊತ್ವಾಲನ ಅನುಜ್ಞೆಯಂತೆ ನೇಮರಾಜನ ಶವದ ವಿನಿಯೋಗವನ್ನು ಮಾಡಲೆಸಗಿದರು. ಹೆದರಿಕೆಯಿಂದ ಕಂಗೆಟ್ಟಿರುವ ತಿಪ್ಪಾಶಾಸ್ತ್ರಿಯನ್ನು ಕೊತ್ವಾಲನು ಕರೆದು—"ನಿನ್ನ ಸೊಕ್ಕಿನಿಂದ ಆದ ಈ ದುಷ್ಕೃತ್ಯದ ನಿವಾರಣೆಯು ನಿನ್ನಿಂದಲೇ ಆಗಬೇಕು; ಹೇಳಿದಂತೆ ನಾಯಿಯ ಹಾಗೆ ಕೇಳದಿದ್ದರೆ ನಿನ್ನನ್ನು ಫಾಶಿಗೆ ಹಾಕುವದರಲ್ಲಿ ವಿಳಂಬವಾಗದು. ಮಠದ ಅನ್ನದಿಂದ ನಿನಗೆ ಏರಿದ ಮದ ಮಠದ ಮೇಲೆಯೇ ಮೆರಸಿಬಿಟ್ಟೆಯಾ ಲುಚ್ಚಾ! ಎಂದು ಗದರಿಸಿದನು. "ಪರಾಕೇ! ತಮ್ಮ ಅಪ್ಪಣೆಯಂತೆ ನಡಕೊಳ್ಳುವೆನು. ಕೆಟ್ಟ ಸಮಯದಲ್ಲಿ ಒಂದು ಪಾಪಕೃತ್ಯ ನನ್ನ ಕೈಯಿಂದ ನಡೆಯಿತು. ನನ್ನ ಪ್ರಾಣ ರಕ್ಷಿಸಿ ಮಠದ ಮರ್ಯಾದೆಯನ್ನು ಕಾಪಾಡುವ ಭಾರವು ತಮ್ಮ ಪಾದಕ್ಕೆ ಕೂಡಿಯದೆ" ಎಂದು ಕಣ್ಣೀರಿಡುತ್ತಾ ಭೀಮಾಜಿಯ ಕಾಲಿಗೆ ಬಿದ್ದನು. "ನಡುವಿರುಳು ಕಳೆಯುವ ಮೊದಲೇ ಇದರ ವ್ಯವಸ್ಥೆಯಾಗಬೇಕು. ಸಾವಕಾಶ ಮಾಡದೆ ಶವವನ್ನು ಕೊಚ್ಚಿ ಪಾತ್ರಗಳಲ್ಲಿ ತುಂಬಿಸಿ ಜನಸಂಚಾರವಿಲ್ಲದ ಕಾಡಿನಲ್ಲಿ ಹಾಳುಬಾವಿಯಿದ್ದರೆ ನೋಡಿ ಅದರಲ್ಲಿ ಹಾಕಿಬಿಡಬೇಕು. ಸ್ವಲ್ಪ ಜಾಗ್ರತೆ ಕಡಿಮೆಯಾಯಿತೋ! ಕುತ್ತಿಗೆಗೆ ಹಗ್ಗ ಬರುವದು ನೋಡಿಕೊ" ಎಂದು ಕೊತ್ವಾಲನು ಎಚ್ಚರಿಸಿದನು. ಅವನ ಅನುಜ್ಞೆಯನ್ನು ಶೀಘ್ರ ಕೈಕೊಳ್ಳೋಣಾಯಿತು. ಹೊಸ ಮಡಿಕೆಗಳಲ್ಲಿ ಗರಗಸಿನ ಹುಡಿ ಅಡಿಯಲ್ಲಿ ಚಲ್ಲಿ ಅದರ ಮೇಲೆ ನಿಶ್ಶೇಷವಾಗಿ ಕೊಚ್ಚಿದ ಹೆಣದ ಮಾಂಸವನ್ನು ತುಂಬಿ ಮೇಲ್ಗಡೆಯಲ್ಲಿಯೂ ಗರಗಸಿನ ಪುಡಿಚಲ್ಲಿ ಬಿಟ್ಟು ಮಡಿಕೆಯ ಬಾಯಿಯನ್ನು ಹಾಳೆಗಳಿಂದ ಮುಚ್ಚಿ ಘಟ್ಟಿಯಾಗೆ ಕಟ್ಟಿ ಆ ಮಡಿಕೆಗಳನ್ನು ತಲೆಯ ಮೇಲೆ ಹೊತ್ತುಕೊಂಡು ನಾಲ್ಕು ಜನ ದಾಡಿಗರು ಬೇರೆ ಬೇರೆ ದಿಕ್ಕುಗಳಿಗೆ ಹೋಗಿ ಅವರವರಿಗೆ ಗುರ್ತವಿರುವ ಹೊಟ್ಟು ಭಾವಿಗಳಲ್ಲಿ ಬಿನಾಡಿ ಬಿಟ್ಟು ಚಾಚೂ ಅನ್ನದೆ ಮರಳಿ ಬಂದು ಮಠವನ್ನು ಸೇರಿ ದ್ರವ್ಯಾನುಕೂಲವನ್ನು ಪಡಕೊಂಡು ಸ್ವಸ್ಥವಾಗಿದ್ದರು. ಒಳ್ಳೇಗುಡಿಗಾರರನ್ನು ತರಿಸಿ ರಕ್ತದ ಗುರ್ತುಗಳು ತುಂಬಿರುವ ಗೋಡೆಗಳ ಮಣ್ಣು ಕೆರಸಿ ತೆಗೆದು ಚಲೋ ಬಣ್ಣದಿಂದ ಚಿತ್ರಾದಿಗಳನ್ನು ಬಿಡಿಸಿ ಕೋಣೆಯ ನೆಲವನ್ನು ಅಗದು ಪಸಂದಾಗಿ ಗಚ್ಚಿನಿಂದ ಮುಚ್ಚಿ ಅನುಮಾನಕರ ಕುರುಹುಗಳನ್ನೆಲ್ಲಾ ಮಾಜಿಸಿ ಬಿಟ್ಟರು.

## ನಲುವತ್ತೈದು

ನಡುರಾತ್ರಿ ಪರಿಯಂತರ ನೇಮರಾಜ ಸೆಟ್ಟಿಯು ಮನೆಗೆ ಬಾರದೆ ಇರುವದರ ಕಾರಣವನ್ನು ತಿಳಿಗುದೆ ದಿಗ್ಭ್ರಾಂತಿಯಿಂದ ಅವನ ಸತಿಸುತರು ನೌಕರ ಜನರು ಖೇದಪಟ್ಟು ಊರು ಇಡೀ ಅವನನ್ನು ಹುಡುಕಿದರು. ಎಲ್ಲಿ ನೋಡಿದರೂ ಅವನು ಸಿಕ್ಕಲಿಲ್ಲ. ಯಾರ ಹತ್ತಿರ ಕೇಳಿದರೂ ತಾನರಿಯೆ ಒಂಬ ಉತ್ತರ ಸಿಕ್ಕಿತಲ್ಲದೆ ಇಂಥಾ ಸ್ಥಳಕ್ಕೆ ಹೋಗುವದು ತಾನು ಕಂಡೆ ನೆಂದು ಒಬ್ಬನಾದರೂ ಹೇಳುವವನಿರಲಿಲ್ಲ. ಇದೇನು ಪರಮಾಶ್ಚರ್ಯ! ಮನೆಯಲ್ಲಿ ತಿಳಿಸದೆ ಪರ ಊರಿಗೆ ಅವನು ಎಂದಿಗೂ ಹೋಗತಕ್ಕವನಲ್ಲ. ಎಂಥಾ ಅಗತ್ಯ ಜಂಬರವಿದ್ದರೂ ಸಕಾಲದಲ್ಲಿ ಊಟಕ್ಕೆ ಮನೆಗೆ ಬಾರದೆ ಇರುವವನಲ್ಲ. ಘಾಸಿಯಾದನೋ ಎಂಬ ಅನುಮಾನ ಹೆಂಡತಿ ಮಕ್ಕಳ ಮನಸ್ಸಿಗೆ ಸಹಜವಾಗಿ ಹೊಕ್ಕು ಅವರನ್ನು ಬಹಳವಾಗಿ ಕಳವಳಗೊಳಿಸಿತು. ಮುಂಜಾನೆ ಪರಿಯಂತರ ಊರು ಇಡೀ ಸಂಚಾರ ಮಾಡಿ ನೋಡಿದರೂ ಸಾವಕಾರನ ಇರುವಿಕೆಯ ಗೊತ್ತು ಹತ್ತದೆ ಹೋಯಿತು.

ನಡುಪ್ರಾಯದ ಸುಂದರ ಪುರುಷನಾಗಿ ವಧುನಿಕರವೆಂಬ ಸಮುದ್ರಕ್ಕೆ ಹಿಮಕರನಂತೆ ಶೋಭಿಸುತಿದ್ದ ಅವನು ಅಜಾಗ್ರತೆಯ ದ್ವಾರ ಎಲ್ಲಾದರೂ ಸಿಲುಕಿ ಬಿದ್ದನೋ ಅಥವಾ ದುರ್ವ್ಯಾಸಂಗದ ದೆಸೆಯಿಂದ ಉಂಟಾದ ಮಾತ್ಸರ್ಯಕ್ಕೆ ಬಲಿಯಾದನೋ ಎಂಬ ಶಂಕೆಯು ಕಾಲಗತಿಸುತ್ತಾ ಸ್ಥಿರವಾಯಿತು. ಕುದಪುರ ಮಠಕ್ಕೆ ಅವನು ವಿಶೇಷವಾಗಿ ಹೋಗುವದನ್ನು ಹಲವರು ಜನ ಜನಿತವಾಗಿ ನೋಡಿರುವರು. ಶೃಂಗಾರಿಯ ಹಾಗೂ ವಾಗ್ದೇವಿಯ ನಡತೆಯು ಲೋಕನಿಂದ್ಯವಾದ್ದೆಂದು ವಿಶಿಷ್ಟ ಜನರಿಗೂ ಗೊತ್ತಿರುವುದು. ಆ ಉಭಯ ಸ್ತ್ರೀಯರ ಪ್ರೇಮಿಯಾಗಿ ಸದಾಕಾಲ ಅವರ ಒಟ್ಟಿನಲ್ಲಿ ಸುಖವನ್ನು ಅನುಭವಿಸಿಕೊಂಡಿರುವನೆಂದು ಕೆಲವರು ಹೇಳುತ್ತಿರುವರು— "ಹಾಗಲ್ಲ, ಅವನು ಮಠಕ್ಕೆ ಹೆಚ್ಚುದ್ರವ್ಯವನ್ನು ಸಾಲವಾಗಿ ಕೊಟ್ಟಿರುವುದರಿಂದ ಅದನ್ನು ಬರಮಾಡಿಕೊಳ್ಳುವುದಕ್ಕೋಸ್ಕರ ವತ್ತಾಯ ಮಾಡಿದಾಗ ಮಾತಿಗೆ ಮಾತು ಬಂದುಹೋಯಿತು; ಚಂಚಲನೇತ್ರರಿಗೆ ಸಿಟ್ಟುಬಂದು ಅವರು ಕೊಟ್ಟ ಆಜ್ಞೆಯಂತೆ ಮಠದ ಚಾಕರನು ಅವನನ್ನು ಹೊಡೆದು ಕೊಂದುಹಾಕಿದನು" ಎಂದು ಬೇರೆ ಕೆಲವರು ಅಂದು ಕೊಂಡರು. ಯಾವ ಕಾರಣದಿಂದಾಗಲೀ ಯಾವವಿಧದಿಂದಲಾಗಲೀ ಅವನು ಮಠದಲ್ಲಿ ಅಥವಾ

ಮಠದವರ ಪ್ರೇರಣೆಯಿಂದ ಅವರ ಕಡೆ ಜನರಿಂದ ಹತವಾದನೆಂಬುದಕ್ಕೆ ಕೊಂಚವಾದರೂ ಅನುಮಾನವಿಲ್ಲವೆಂದು ಬಹು ಜನರು ಹೇಳುವವರಾದರು. ಅಂದು ಅವನು ಮಠಕ್ಕೆ ಹೋದದ್ದು ನೋಡಿದವರು ಕೂಡಾ ಕೇಳಲ್ಪಟ್ಟಾಗ ತಾವು ನೋಡಲಿಲ್ಲವೆಂದರು ಅವನ ನಂಬಿಗಸ್ತ ಚಾಕರರಲ್ಲಿಯೂ ನಿಜತ್ವ ಚೆನ್ನಾಗಿ ತಿಳಿದವರೂ ಎಷ್ಟು ಮಾತ್ರಕ್ಕೂ ಗುಟ್ಟು ಬಿಡುವಲ್ಲದೆ ಹೋದರು.

ನೇಮರಾಜನು ಕಾಣೆಯಾದನೆಂಬ ವರ್ತಮಾನ ಕೇಳಿದವರಾದ ಆತನ ಸ್ನೇಹಿತರು ಬಂಧುಬಾಂಧವರು ನಾಲುಗಟ್ಟೆ ಮೃತನ ಮನೆಗೆ ಬಂದು ಅವನ ವಿಧವೆಯನ್ನೂ ಮಕ್ಕಳನ್ನೂ ದುಃಖೋಪಶಮನ ಮಾಡುವುದರಲ್ಲಿ ಬಿದ್ದರು. ಅವನು ಮರಣಪಟ್ಟನೆಂದು ಸರ್ವರ ಮನಸ್ಸಿಗೂ ನಿರ್ಧರವಾದ ಮೇಲೆ ಕಾಲಹರಣ ಮಾಡದೆ ಸರ್ಕಾರಕ್ಕೆ ತಿಳಸುವದಕ್ಕೂ ಮೃತನ ಭಂಡಸಾಲೆಯ ಕಾರ್ಖೂನ ಕಚ್ಚೆತಿಪ್ಪಯ್ಯ ಶಾನಭಾಗನು ಎತ್ತುಗಡೆ ಮಾಡಿದನು. ಪ್ರಥಮತ ವರದಿಯನ್ನು ತಿಳಿಯತಕ್ಕ ಅಧಿಕಾರಿಯು ಕೊತ್ವಾಲನಲ್ಲವೇ! ಭೀಮಾಜಿಯ ಬಳಿಗೆ ಕಾರ್ಖೂನನು ಬಂದು ನೇಮರಾಜಸೆಟ್ಟಿಯು ಕಾಣದಿರುವಿಕೆಯನ್ನು ಕುರಿತು ವರ್ತಮಾನ ಬರಹ ಮೂಲಪಡಿಸಿಕೊಟ್ಟನು. ಕೊತ್ವಾಲನು ಏನೂ ಅರಿಯದವನಂತೆ ಬೆರಗಾಗಿ ಯಾಕುಬಖಾನ ಮುಂತಾದ ಪರಿವಾರ ಸಂಘವನ್ನು ಸಂಗಡತಕ್ಕೊಂಡು ಪಟ್ಟಣದಲ್ಲೆಲ್ಲಾ ಪರಿಶೀಲನ ಮಾಡುವುದರಲ್ಲಿ ಕ್ಷಣ ಸುಸ್ತಿ ಮಾಡಲಿಲ್ಲ. ಪರಂತು ಅವನು ಕುಮುದಪುರದ ಮಠದವರ ಮೇಲೆ ಅನುಮಾನಬೀಳುವ ಸಮಾಚಾರವನ್ನು ಕೇಳಿದರೂ ಕೇಳದವನಂತೆ ಸುಮ್ಮಗಿದ್ದು ಅಷ್ಟು ವಠಾರಕ್ಕೆ ಅವನು ಹೋಗಲೂ ಇಲ್ಲ. ತನ್ನ ಪೇದೆ ಒಬ್ಬನನ್ನಾದರೂ ಅಲ್ಲಿಗೆ ಕಳುಹಿಸಿಕೊಡಲೂ ಇಲ್ಲ. ಸ್ತ್ರೀ ಮೂಲಕದ ದ್ವೇಷದಿಂದ ಅವನ ಪ್ರಾಣವು ಕುಮುದಪುರದ ಮಠವಲ್ಲಿ ಹಾನಿಯಾಯಿತೆಂದು ಒಬ್ಬರಿಬ್ಬರು ಪ್ರಕಟವಾಗಿ ಆಡಿದರೂ ಮನಸ್ಸಿನಲ್ಲಿ ಹೆಚ್ಚು ಕ್ರೋಧ ಹುಟ್ಟಿದ ಭೀಮಾಜಿಯು ನಗೆಮುಖದಿಂದ —"ಆ ಹುಳಿ ರಗಳೆ ಅಂತಿರಲಿ, ನೇಮರಾಜನ ಹೆಂಡತಿಯು ದುಶ್ಶೀಲಳೆಂದು ಬಹು ಜನರು ಹೇಳುವರಷ್ಟೇ! ಅವಳ ದುರ್ನಡತೆಯ ಸಂಬಂಧ ಮೃತನಿಗೆ ಅವಳ ಮೇಲೆ ಆದದ್ವೇಷದ ಹೇತುವಿನಿಂದ ಅವಳ ಸ್ನೇಹಿತರಿಂದ ಅವನು ಮರಣಪಟ್ಟನೆಂಬದೊಂದು ಪ್ರವಾದವು ಕೇಳಬರುವುದಿಲ್ಲವೇ?" ಎಂದು ಪ್ರಶ್ನೆ ಮಾಡಿದನು.

ಅತಿ ತುಚ್ಛವಾದ ಈ ಮಾತು ಕಿವಿಗೆ ಬಿದ್ದಾಗಲೇ ಜಿನೇಶ್ವರನಾಮ ಸ್ಮರಣೆಯಿಂದ ಮೃತನ ನೆಂಟರು ಕಿವಿಯನ್ನು ಮುಚ್ಚಿಕೊಂಡರು. ಮತ್ತು ಕೊತ್ವಾಲನು ಮಠದ ಮೇಲಿನ ವಾತ್ಸಲ್ಯದಿಂದ ಖೂನಿಯನ್ನು ಅಡಗಿಸುವುದಕ್ಕೆ ಅಪರಾಧಿಗಳಿಗೆ ಸಂದರ್ಭವಾಗುವ ಹಾಗೆ ಸಮಯ ಕಳೆಯುವನೆಂಬ ಅನುಮಾನದಿಂದ ಅವನ ಮುಖಾವಲೋಕನವೇ ಮಾಡದೆ ಒಡನೆ ಕಾರಭಾರಿಯನ್ನು ಕಂಡು ನೇಮರಾಜನು ಕಾಣೆಯಾದ ವಿಷಯವನ್ನೂ ಅದನ್ನು ಕುರಿತು ಕೊತ್ವಾಲನು ಸರಿಯಾದ ಶೋಧನೆ ಮಾಡಲಿಕ್ಕೆ ಮನಸ್ಸಿಲ್ಲದವನಾಗಿರುವನೆಂಬ ದೂರನ್ನೂ ಹೇಳಿದರು.

"ಕೊತ್ವಾಲನು ಹಾಗೆ ಪಡಪೋಶಿ ಮಾಡತಕ್ಕವನಲ್ಲ. ನೀವು ಅವನ ಮೇಲೆ ನಿಷ್ಕಾರಣವಾಗಿ ತೋಹಮಾತು ಹಾಕುವದು ನಿಮ್ಮ ದುಷ್ಟಸ್ವಭಾವದ ದೃಷ್ಟಾಂತವೆಂತಲೇ ತಿಳಿಯಬೇಕು. ಪರ್ವಾಇಲ್ಲ. ನಾಳೆ ನಾವು ಸ್ವತಃ ಅನ್ವೇಶಣ ಮಾಡುವೆವು. ಮುಂಚಿತವಾಗಿ ಕೊತ್ವಾಲನನ್ನು ಕರೆಸಿ ಅವನು ನಡೆಸಿದ ತನಿಖಿಯ ಸ್ವಭಾವವನ್ನು ತಿಳಕೊಳ್ಳಬೇಕಾಗಿದೆ. ಈಗ ನೀವು ಮನೆಗೆ ಹೋಗಿ ನಾಳೆ ಪ್ರಾತಃಕಾಲಕ್ಕೆ ನಮ್ಮ ಮುಂದೆ ಹಾಜರಾದರೆ ಅಪ್ಪಣೆ ಕೊಡುವೆವು" ಎಂದು ಕಾರಬಾರಿಯು ಉತ್ತರಕೊಟ್ಟನು. ಈ ಮಾತುಗಳು ಮೃತನ ನೆಂಟರಿಷ್ಟರಿಗೆ ಅಷ್ಟು ಕರ್ಣ ಮಧುರವಾಗದಿದ್ದರೂ ಅವನು ನಿಜವಾಗಿ ಮಠದವರ ವಕೀಲಿ ಮಾಡುವನೆಂದು ಮನಸ್ಸಿಗೆ ಖಚಿತವಾಗುವ ತನಕ ಅಷ್ಟು ದೊಡ್ಡ ಅಧಿಕಾರಿಯನ್ನು ದೂರುವುದು ನ್ಯಾಯವಾಗಿ ತೋರಲಿಲ್ಲ. ಅಪ್ಪಣೆಯಂತೆ ಮರುದಿನ ಅವರು ಕಾರಭಾರಿಯ ಕಚೇರಿ ಬಾಗಲಲ್ಲಿ ಅವನ ಸವಾರಿಯನ್ನು ನಿರೀಕ್ಷಿಸುತ್ತಾ ನಿಂತುಕೊಂಡರು. ಕಾರಬಾರಿಯು ಭೀಮಾಜಿಯನ್ನು ಕರೆಸಿ, ಹುಬ್ಬು ಗಂಟುಹಾಕಿಕೊಂಡು "ಏನಯ್ಯಾ ಕೊತ್ವಾಲರೇ! ಇಷ್ಟು ಭಾರಿ ಪ್ರಕರಣದಲ್ಲಿ ನೀವು ತುಸು ತಾತ್ಪರ್ಯವಾದರೂ ಕೊಡದೆ ಕೊಲೆಪಾತಕಿಗಳು ಪಾಪಕೃತ್ಯದ ಪ್ರಮಾಣವನ್ನು ಅಡಗಿಸಿ ಬಿಡುವ ಹಾಗಿನ ಅನುಕೂಲ ಅವರಿಗೆ ಕೊಡಿಸುತ್ತಿರೇನು? ಇದು ನಮ್ಮ ಮೇಲಿನ ಅಧಿಕಾರಿಗಳ ಕಿವಿಗೆ ಬಿತ್ತೆಂದರೆ ಅವರು ರೇಗಿಬಿಟ್ಟು ನಿಮ್ಮನ್ನೂ ನಾವು ಸುಮ್ಮಗಿದ್ದುಬಿಟ್ಟರೆ ನಮ್ಮನ್ನೂ ಛಾನಾ ಹಾನಿ ಮಾಡಿಬಿಡರೇ ಎಂದು ಟೊಳ್ಳು ಜಿವರಿಸುವಿಕೆಯ ದ್ವಾರ ಕೇಳುವವರೆಲ್ಲರ ಕಿವಿಗೆ ಇಂಪಾಗುವಹಾಗಿನ ಮಾತುಗಳನ್ನಾಡಿದ ಮೇಲೆ ದೊಡ್ಡ ಸಿಟ್ಟಿನ ಭಾವವನ್ನು ತಾಳಿ ನಾವು ಸ್ವತಃ ಈ ವಿಷ

ಯನಲ್ಲಿ ಶೋಧನೆ ಮಾಡುತ್ತೇವೆ; ನಮ್ಮ ಸಂಗಡ ಬನ್ನಿರಿ" ಎಂದು ಕೊತ್ವಾಲನಿಗೂ ಕಕ್ಷಿಗಾರರಿಗೂ ಆಜ್ಞಾಪಿಸಿದರು. ಅಪ್ಪಣೆಯಾದ ಹಾಗೆ ಅವರು ನಡೆದುಕೊಂಡರು.

ಮೊದಲು ಮೃತನ ಮನೆಗೆ ಸವಾರಿ ತೆರಳಿತು. ಅವನ ಮನೆಯಲ್ಲಿ ನಾಯಿ ಬೆಕ್ಕು ಮುಂತಾದ ಪ್ರಾಣಿಗಳನ್ನು ಮಾತ್ರ ಬಿಟ್ಟು ಮನುಷ್ಯ ರೂಪ ವೃಕ್ಷ ಸರ್ವರಿಗೂ ಇಡೀ ದಿನ ನಾವಿರಾರು ಪ್ರಶ್ನೆಗಳ ಮೂಲಕ ವಿಚಾರಣೆಯಾಯಿತು. ಅವನ್ನೆಲ್ಲಾ ಬರಕೊಳ್ಳಯ್ಯಾ ಎಂದು ಕಾರಭಾರಿಯ ಅಪ್ಪಣೆಯನ್ನು ಹೊಂದಿದ ಅವನ ಕಾರಕೂನನು ಸೀಸದ ಕಡ್ಡಿಯಿಂದ ಕಾಗದದ ಮೇಲೆ ಎಡೆಬಿಡದೆ ಗೀಚಿಹಾಕಿದನು. ಅವನ ಬರಹವು ಅವನಿಂದಲೇ ಓದಲಸಾಧ್ಯವಾದದ್ದು, ಮತ್ತೆ ಕಾರಭಾರಿಯು ಅದನ್ನು ಓದಬಲ್ಲನೇ? ಅದು ಕಾಕಲಿಪಿಯೋ ಬ್ರಹ್ಮಲಿಪಿಯೋ ಪರಮಾತ್ಮನೇ ಬಲ್ಲನೆಂದು ಹಲವರು ಹೇಳುತ್ತಾ ನಗಲಿಕ್ಕೆ ಅನುಕೂಲವಾಯಿತು. ಆ ಇಡೀ ದಿನ ಮೃತನ ಮನೆಯ ನಿವಾಸಿಕರ ಚಾಕರರ ಮತ್ತು ನೆರೆಕೆರೆಯವರ ವಿಚಾರಣೆಯು ನಡೆದರೂ ಅದು ಸಂಪೂರ್ಣವಾಗದೆ ಮರುದಿನವೂ ಕೊಂಚ ಉಳಿಯಿತು. ಕಾರ್ಭಾರಿಯ ವಿಚಾರಣೆಯ ಹೊಸಪರಿಯನ್ನು ನೋಡಿ ಪುರವಾಸಿಗಳು ಅತಿ ವಿಸ್ಮಯಪಟ್ಟು—"ಇನ್ನು ಊರಲ್ಲಿ ಪ್ರಾಣವನ್ನುಳಿಸಿಕೊಂಡಿರುವದು ಹ್ಯಾಗಪ್ಪಾ!" ಅಂದರು.

ಮೃತನ ಕಾಣದಿರುವಿಕೆಯ ಸುದ್ದಿಯು ಇಡೀ ಸಂಸ್ಥಾನದಲ್ಲಿ ಹಬ್ಬಿ ನೃಸಿಂಹಪುರದಲ್ಲಿರುತಿದ್ದ ರಾಮದಾಸನಿಗೂ ತಿಳಿದು ಬಂತು. ವೇದವ್ಯಾಸನನ್ನು ಕಟ್ಟಿಕೊಂಡು ಆ ವಕೀಲನು ಕುಮುದಪುರಾಧೀಶ ಯತಿಗೇನಾದರೂ ಉಪದ್ರ ಕೊಡಬಹುದೊ? ನೋಡಿಬಿಡುವಾ ಎಂದು ಕೂಡಲೇ ಬಂದನು. ಕಾರ್ಭಾರಿಯೂ ಕೊತ್ವಾಲನೂ ಇಷ್ಟು ಭಾರಿ ಖೂನಿ ಮೊಕದ್ದಮೆಯಲ್ಲಿ ಸ್ವಲ್ಪವಾದರೂ ತಾತ್ಪರ್ಯ ಕೊಡದೆ ದಿನ ಹಾಸ್ಯಮಾಡಿ ಖೂನಿಯನ್ನು ಮರೆಪಡಿಸುವುದಕ್ಕೆ ಸಾಕಷ್ಟು ಅನುಕೂಲವನ್ನು ಕೊಡುವ ಇಚ್ಛೆಯಲ್ಲಿರುವರೆಂದು ಜನಜನಿತವಾಗಿ ತಿಳಿಯುವ ಇಂಥಾ ಪ್ರಸಕ್ತಿಯಲ್ಲಿ ತಾನು ಪ್ರವೇಶಿಸಿದರೆ ಕೈಗೆ ಎರಡು ಕಾಸು ತಗಲುವದಲ್ಲದೆ ಕಾರಭಾರಿಗೆ ಮೇಲು ಅಧಿಕಾರಿಗಳಿಂದ ಲತ್ತೆಗಳು ಬರಲಿಕ್ಕೂ ಸಾಕೆಂಬ ಧೈರ್ಯದಿಂದ ವೇದವ್ಯಾಸನನ್ನು ನೇಮರಾಜನ ಪತ್ನಿಯ ಕೂಡೆ ಮಾತನಾಡುವ ಉದ್ದಿಶ್ಯ ಕಳುಹಿಸಿ

ಕೊಟ್ಟನು. ಅವಳು ತನ್ನ ಸಂಕಷ್ಟವನ್ನೂ ಸಂತಾಪವನ್ನೂ ಉಪಾಧ್ಯಗೆ ತಿಳಿಸಿ ಸಹಾಯಹೀನಳಾದ ತನಗೆ ಕೊತ್ವಾಲನೂ ಕಾರ್ಭಾರಿಯೂ ಮಾಡುವ ಅನ್ಯಾಯದ ಸ್ಥಿತಿಯನ್ನು ವರ್ಣಿಸಿದಳು. ಒಬ್ಬ ಒಳ್ಳೇ ನ್ಯಾಯ ಶಾಲಿಯಾದ ವಕೀಲನನ್ನು ಕಟ್ಟಿಕೊಡಲೇ ಎಂದು ಉಪಾಧ್ಯನು ಕೇಳಿದನು. ಅಂಥಾದ್ದೊಂದು ಉಪಕಾರವನ್ನು ಮಾಡಿದರೆ ಸರ್ವದಾ ಕೃತಜ್ಞತೆಯುಳ್ಳವ ಳಾಗಿರುವೆನೆಂದು ಅವಳು ಉತ್ತರಕೊಟ್ಟಳು.

ಆ ಕ್ಷಣವೇ ವೇದವ್ಯಾಸನು ಓಡುತ್ತಾ ಬಂದು ರಾಮದಾಸರಾಯ ನನ್ನು ಮೃತನ ಮನೆಗೆ ಕರತಂದು ಅವನ ಪತ್ನಿಯ ಪರಿಚಯವನ್ನು ಮಾಡಿ ಸಿದನು. ಅವಳು ಇಂಥಾ ಘನ ವಕೀಲ ಸಿಕ್ಕಿದ್ದು ದೊಡ್ಡ ಅನುಕೂಲವೇ ಎಂದು ಸ್ವಸ್ಥ ಚಿತ್ತಳಾಗಿ ಪ್ರಾಸಂಗಿಕ ವರ್ತಮಾನವನ್ನೆಲ್ಲಾ ಕೂಲಂಕುಷ ವಾಗಿ ವಕೀಲಗೆ ತಿಳಿಸಿದಳು ಅದಲ್ಲದೆ ಕೊತ್ವಾಲನೂ ಕಾರ್ಭಾರಿಯೂ ಆ ದಿನ ಪರಿಯಂತರ ನಡೆಸಿದ ಪರಿಶೋಧನೆಯ ವೃತ್ತಾಂತವನ್ನು ತನಗೆ ತಿಳಿ ದಿರುವ ಮಟ್ಟಿಗೆ ಹೇಳಿದಳು. ನಾಳೆ ಬೆಳಿಗ್ಗೆ ಬರುವೆನೆಂದು ರಾಮದಾಸನು ಹೊರಟುಹೋದನು. ಹಾಗೆಯೇ ಮರದಿನ ಪ್ರಾತಃಕಾಲ ಅವನು ಅಲ್ಲಿಗೆ ಹೋದ ಸಮಯ ಕಾರ್ಭಾರಿಯೂ ಕೊತ್ವಾಲನೂ ಬರುತ್ತಾ ದೂರದಿಂದ ಕೊತ್ವಾಲನು ರಾಮದಾಸನನ್ನು ಕಾರ್ಭಾರಿಗೆ ತರ್ಜನಿ ಬೆರಳಿನಿಂದ ತೋರಿ ಸಿದನು. ಕಾರ್ಭಾರಿಯ ಮುಖವು ಸಿಟ್ಟಿನಿಂದ ರಕ್ತವರ್ಣವಾಯಿತು. ಕಣ್ಣಿ ನಿಂದ ಸಿಟ್ಟಿನ ಕಿಡಿಗಳು ಉದುರಿದುವು. ಅವನ ಕ್ರೋಧವು ಅಸಂತೋಷವೂ ಏರುವಂತೆ ಕೊತ್ವಾಲನು ತನ್ನ ಕೈಲಾಗುವ ಮಟ್ಟಿಗೆ ಚಮತ್ಕಾರದ ಚಾಡಿ ಮಾತುಗಳನ್ನು ಹದದಿಂದ ಆಡಿಬಿಟ್ಟನು. ಉಭಯ ಅಧಿಕಾರಸ್ಥರೂ ಸಮೀಪಿಸುವಾಗ ರಾಮದಾಸನು ಅವರಿಗೆ ಸಲಾಂ ಮಾಡಿ ಮೃತನ ಪತ್ನಿಯ ಕಡೆ ವಕೀಲನಾಗಿ ನೇಮಿಸಲ್ಪಟ್ಟಿದ್ದೇನೆಂದು ವಿಜ್ಞಾಪನೆ ಮಾಡಿದನು. ಕಾರ್ಭಾರಿಯ ಬಾಯಿಯಿಂದ ಒಂದು ಹುಂಕಾರ ಮಾತ್ರ ಹುಟ್ಟಿತು. ಕೊತ್ವಾಲನು ಮುಗುಳು ನಗೆಯಿಂದ ಸುಮ್ಮಗಿದ್ದನು.

ಕಾರ್ಭಾರಿಯು ಕೊಂಚ ಸಮಯ ಅತ್ತಿತ್ತ ನೋಡುತ್ತಾ ಅತಿ ಚಂಚಲ ಮನಸ್ಸಿನವನಂತೆ ಘಳಿಗೆಗೆ ಒಂದೊಂದು ವಿಧಮಾಡುತ್ತಾ ಗಪ್ಪನೆ ರಾಮದಾಸನನ್ನು ಸಮೀಪಕ್ಕೆ ಕರೆದು —"ನಿನ್ನ ಕಕ್ಷಿಗಾರಳ ಕಡೆಯಿಂದ ನೀನು ನಮಗೆ ಅರಿಕೆ ಮಾಡತಕ್ಕದ್ದೇನದೆಯೋ ಅದೆಲ್ಲಾ ಹೇಳಿಬಿಡು;

ತಡವಾಗಬಾರದು” ಎಂದು ಕಟ್ಟಾಜ್ಞೆ ಮಾಡಿದನು.

ರಾಮದಾಸ—“ಪರಾಕೆ! ತನ್ನ ಪತಿಯು ಕುಮುದಪುರದ ಮಠದಲ್ಲಿ ಘೋರವಾದ ಕೊಲೆಪಾತಕ ಮೂಲ ಪ್ರಾಣಬಿಟ್ಟನೆಂದು ನನ್ನ ಕಕ್ಷಿಗಾರಳಿಗೆ ಉಂಟಾದ ಅನುಮಾನ ನಿವೃತ್ತಿಮಾಡುವುದಕ್ಕೋಸ್ಕರ ಆ ಸ್ಥಾನಕ್ಕೆ ಸವಾರಿ ಚಿತ್ತೈಸಿ ಶೋಧನವಾಗಬೇಕೆಂಬ ನನ್ನ ಬಿನ್ನಪ ಲಾಲಿಸಬೇಕು.”

ಕಾರ್ಭಾರಿ — “ಅಂಥಾ ಅನುಮಾನಕ್ಕೆ ನ್ಯಾಯವಾದ ಕಾರಣ ಗಳಿವೆಯೋ?”

ರಾಮದಾಸ—“ಓಹೋ! ಅನೇಕ ಕಾರಣಗಳಿವೆ.”

ಕಾರ್ಭಾರಿ—“ವಿವರಿಸಿದರೆ ಆಲೋಚನೆ ಮಾಡೋಣ.”

ರಾಮದಾಸ—“ಅತಿ ಅವಶ್ಯವಾದರೆ ಕೆಲವು ಕಾರಣಗಳನ್ನು ವಿವರಿಸ ಬಹುದು. ಚಂಚಲನೇತ್ರರು ಆಗಾಗ್ಗೆ ಮೃತನಿಂದ ಹೆಚ್ಚು ದ್ರವ್ಯವನ್ನು ಸಾಲವಾಗಿ ತರಿಸಿಕೊಳ್ಳುವ ವಾಡಿಕೆಯಿತ್ತು. ಹಾಗೂ ವಾಗ್ದೇವಿಗೂ ಮೃತ ನಿಗೂ ಲೇವಾದೇವಿ ಇತ್ತು. ಬೇರೆ ಸಂಗತಿ ಹ್ಯಾಗೂ ಇರಲಿ.”

ಕಾರ್ಭಾರಿ—“ಹಾಗೆಂದರೇನು? ಗೂಡಾರ್ಥದ ಮಾತೇಕೆ? ಒದರಿ ಬಿಡಬಾರದೇ?”

ರಾಮದಾಸ—“ಲೋಕವೇ ಒದರುತ್ತದೆ. ನಾನು ಮತ್ತೆ ಪ್ರತ್ಯೇಕ ಒದರಬೇಕೆ?”

ಕಾರ್ಭಾರಿ—“ವ್ಯರ್ಥವಾಗಿ ಹರಟಬೇಡ. ಸ್ಪಷ್ಟವಾದ ಮಾತುಗಳಿಂದ ನಿನ್ನ ಮನೋಭಾವವನ್ನು ತಿಳಿಸಿ ಬಿಡು.”

ರಾಮದಾಸ—“ಅಪ್ಪಣೆಯಾದ ಮೇಲೆ ಅರಿಕೆ ಮಾಡದೆ ನಿರ್ವಾಹ ಉಂಟೇನು? ವಾಗ್ದೇವಿಯೂ ಶೃಂಗಾರಿಯೂ ತಿಲೋತ್ತಮೆ ಮೇನಕೆಯರಂತೆ ಬಂಡೆಯಂತಿರುವ ತಪಸಿಗಳ ಹೃದಯವನ್ನು ಕೂಡ ಕಡೆಗಣ್ಣ ನೋಟವೆಂಬ ಬಾಣದಿಂದ ಭೇದಿಸಿಬಿಡುವ ಚಾಪಲ್ಯ ಉಳ್ಳವರೆಂದು ಸನ್ನಿಧಾನಕ್ಕೆ ಪೂರ್ಣ ವಾಗಿ ಪರಾಂಬರಿಕೆ ಇರಬಹುದು. ನೇಮರಾಜನ ಪಾಡೇನು? ಅವನು ವಿಷಯಲಂಪಟನೆಂದೇ ಹೆಸರು ಹೊಂದಿದ್ದನು.”

ಈ ಮಾತು ಕೇಳಿದೊಡನೆ ಕಾರ್ಭಾರಿಗೂ ಕೊತ್ವಾಲನಿಗೂ ಅಂಗುಷ್ಟ ದಿಂದ ನೆತ್ತಿಯವರೆಗೂ ಸಿಟ್ಟೇರಿ ಅವರ ತನು ಕಂಪಿಸಲಿಕ್ಕೆ ಪ್ರಾರಂಭವಾ ಯಿತು. ಅಪಸ್ಮಾರ ವ್ಯಾಧಿಗ್ರಸ್ತರಂತೆ ಅವರ ಅವಸ್ಥೆ ತೋಚಿತು. ಸಿಟ್ಟಿನ

ಭರದಿಂದ ಅವರ ವಾಗ್ಬಲವೇ ಸ್ತಬ್ಧವಾಯಿತು. ಹಿಂದು ಮುಂದು ನೋಡಿ ಕೊಂಡಿದ್ದ ನೋಟಕರು ಬೆರಗಾದರು. ನಿಷ್ಪಕ್ಷಪಾತಿಗಳಾಗಿರಬೇಕಾದ ಉಭಯ ಅಧಿಕಾರಿಗಳು ವಕೀಲನು ಹೇಳಿದ ನ್ಯಾಯವಾದ ಮಾತಿಗೆ ಇಷ್ಟು ಘನ ರೋಷವನ್ನು ತಾಳತಕ್ಕ ಅಗತ್ಯವೇನಿದೆ? ಈ ವೈಪರೀತ್ಯವು ಕಾಲದ ಮಹಿಮೆಯೇ ಸರಿ ಎಂದು ಅನೇಕರು ತಮ್ಮಷ್ಟಕ್ಕೆ ಅಂದು ಕೊಂಡರು. ಕೊಂಚ ಸಮಯ ಕಳೆದ ನಂತರ ಕಂಪನ ಕಡಿಮೆಯಾದರೂ ಸಿಟ್ಟಿನ ಕಾವು ತಣಿಯಲಿಲ್ಲ— "ಎಲೇ! ಚಂದ್ರನನ್ನು ನೋಡಿ ನಾಯಿ ಬೊಗಳುವಂತೆ ಪರಸ್ತ್ರೀಯರ ಗೌರವಕ್ಕೆ ಹಾನಿಯುಂಟಾಗುವ ಕುತ್ಸಿತ ಮಾತುಗಳನ್ನು ಲಜ್ಜಾಭಂಡನಂತೆ ಆಡುತ್ತೀಯಾ? ನಿನ್ನ ಕಕ್ಷಿಗಾರಳ ಮೋಜುಗಾರಿಕೆಯ ರಭಸದಿಂದ ಪತಿಯ ಪ್ರಾಣವನ್ನು ಹೋಗಲಾಡಿಸಿಕೊಂಡಳೆಂದು ಹೇಳುವ ಲ್ಲೆಯಾ! ವಕೀಲನೆಂಬ ಹೆಸರು ತಾಳಿ ಕೊಂಡು ಪುಂಡಗಾರನಂತೆ ಗಳಹುವ ನಿನ್ನಂಥಾ ಕತ್ತೆಯನ್ನು ನಾನು ಇದುವರೆಗೂ ನೋಡಿರಲಿಲ್ಲ." ಹೀಗೆಂದು ಕಾರ್ಭಾರಿಯು ನೊರೆ ಸೂಸುವ ತುಟಿಗಳ ಮಧ್ಯದಿಂದ ರಾಮದಾಸನನ್ನು ಜರದನು. ರಾಮದಾಸನು ತನ್ನ ಸಿಟ್ಟು ತಾಳಲಾರದೆ ಭೀಕರವದನನಾಗಿ ಪ್ರತ್ಯುತ್ತರ ಕೊಟ್ಟನು. ಹ್ಯಾಗೆಂದರೆ—

"ತಮ್ಮ ಮನಸ್ಸೆಂಬ ಆಕಾಶದಲ್ಲಿ ಚಂದ್ರನಂತೆ ಶೋಭಿಸುವ ವಾಗ್ದೇವಿಯನ್ನೂ ದ್ವಿತೀಯ ಚಂದ್ರನ ಹಾಗಿರುವ ಶೃಂಗಾರಿಯನ್ನೂ ನೋಡಿ ಬಗಳುವ ನಾಯಿಗೆ ನನ್ನನ್ನು ತಾವು ಹೋಲಿಸಿದರೂ ಇಂಥಾ ಚಂದ್ರ ಮೂರುತಿಗಳಿಗೆ ಸಾವಿರಕಟ್ಟಳೆಯಲ್ಲಿ ಕಸಬರಿಕೆಗಳನ್ನು ಕೈಯಲ್ಲಿ ಹಿಡಕೊಂಡು ಅಂಗಳವನ್ನು ಗುಡಿಸಿರೆಂದು ಹೇಳುವ ಯೋಗ್ಯತೆಯುಳ್ಳ ನನ್ನ ಕಕ್ಷಿಗಾರಳಾದ ಕುಲೀನ ಸ್ತ್ರೀಯ ಸದ್ಗುಣಗಳನ್ನು ಹೊಗಳುವದರ ಬದಲಾಗಿ ಅವಳೆಂದೂ ಮಾಡದ ಪಾಪಗಳನ್ನು ಅವಳ ಮೇಲೆ ಇಂಥಾ ಕಷ್ಟಕಾಲದಲ್ಲಿ ಆರೋಪಿಸಿ ಬಹಿರಂಗವಾಗಿ ಅವಳನ್ನು ದೂಷಿಸುವ ಪಾಪಿಯು ಯಾವ ಮೃಗಕ್ಕೆ ಎಣೆಯಾಗುತ್ತಾನೆಂದು ನಾನು ಹೇಳಲಿ! ಪತಿವ್ರತಾಶಿರೋಮಣಿಯಾದ ಈ ಸ್ತ್ರೀಯನ್ನು ಮೋಜಗಾರತಿಯೆಂದು ಗಳಹಲಿಕ್ಕೆ ಒಪ್ಪದ ವಕೀಲನಾದ ನಾನು ಕತ್ತೆಯೂ ಪುಂಡುಗಾರನೂ ಎಂಬ ಉಪನಾಮುಗಳನ್ನು ಧರಿಸತಕ್ಕಂತವನಾ ವರೆ ಸಂತೆ ಸೂಳೆಯರಿಗಿಂತಲೂ ನಿಕೃಷ್ಟರೆನ್ನಿಸಿಕೊಂಡು ಕಾಕುಪೋಕರರಿಂದ ರಚಿಸಲ್ಪಟ್ಟ ಭಂಡು ಹಾಡುಗಳಿಂದ ನಿಂದಿಸಲ್ಪಟ್ಟು ಕೃಷ್ಣವದನರಾಗಿ ತಲೆ

ಯನ್ನು ಎತ್ತಲಾರದೆ ನಾಚಿಕೆಯಿಂದ ನಿಸ್ತೇಜರಾಗುವ ಸ್ತ್ರೀಯರನ್ನು ಚಂಪ್ರ ನಿಗೆ ಹೋಲಿಸಿ ಅವರ ಗೌರವದ ಉನ್ನತಿಯನ್ನು ಅಳಿಯುವ ಮಹಾಪುರುಷರಿಗೆ ಕತ್ತೆ ಮತ್ತು ನಾಯಿಯಂತೆ ಬಗಳುವ ನಾನು ಯಾವ ಹೆಸರಿನಿಂದ ಕರಿಯಬೇಕೆಂಬ ಜ್ಞಾನವುಳ್ಳವನಾಗಿರುವುದಿಲ್ಲ. ಸ್ವಾಮಿಾ! ತಾವು ದೊಡ್ಡ ಅಧಿಕಾರಸ್ಥರು. ನಾನೊಬ್ಬ ಬಡವಕೀಲನಾಗಲೀ ಪುಂಡುಗಾರನಾಗಲೀ ತಮ್ಮ ಆಶ್ರಿತನಾಗಿ ಜೀವನವನ್ನು ನಡೆಸುವ ಇಚ್ಛೆಯಿಂದ ನನ್ನ ನ್ಯಾಯವಾದ ಉದ್ಯೋಗವನ್ನು ಸರಿಯಾಗಿ ನಡೆಸುವ ವೇಳೆ ಕಂಡಾಬಟ್ಟೆ ಆಡುವ ಅಧಿಕಾರಿಯ ಸಮ್ಮುಖದಲ್ಲಿ ಇರುವದು ಮಾನುಷರೂಪಿಯಾದ ನನ್ನ ಗೌರವಕ್ಕೆ ಅನುಚಿತವಾಗಿ ತೋರುವದರಿಂದ ನನ್ನ ಕಕ್ಷಿಗಾರಳ ವಕಾಲತ್ತನ್ನು ಈಗಲೇ ರದ್ದು ಮಾಡಿ ಅವಳಿಗೆ ಮರಳಿ ಕೊಟ್ಟುಬಿಟ್ಟೆ; ಇಕೊಳ್ಳಿ ಅವ್ವಾ!" ಎಂದು ವಕಾಲತ್ತನ್ನು ವೃತನ ಪತ್ನಿಗೆ ಕೊಟ್ಟು ಹಿಂದೆ ನೋಡದೆ ರಾಮದಾಸನು ಮುಂದರಿಸಿಬಿಟ್ಟನು.

ಆಗ ಮೆಲ್ಲನೆ ಅಡಿಇಡುತ್ತಾ ಭೀಮಾಜಿಯು ಶಾಬಯ್ಯನ ಸವಿಾಪ ಬಂದು ಸ್ವಲ್ಪ ಹದ ವಿಾರಿತಲ್ಲಾ ಎಂದು ಕಿವಿಯಲ್ಲಿ ಕುಸುಗುಟ್ಟಿದನು. ಶಾಬಯ್ಯನು ತನ್ನ ನಾಲಿಗೆಯು ಮುಂದರಿಸಿದ್ದನ್ನು ಕುರಿತು ಬಹಳ ಪಶ್ಚಾತ್ತಾಪಪಟ್ಟು—"ಅಯ್ಯಾ ಪ್ರಾಣಸಖನೇ! ಬೆಂಕಿ ಚೂರಿನಂತೆ ಹಾರುವ ಆ ವೋರನನ್ನು ಹ್ಯಾಗಾದರೂ ಸಂಬಾಳಿಸಿ ಒಮ್ಮೆ ಇತ್ತ ಕರಕೊಂಡು ಬಾರಯ್ಯಾ. ಅವನಿನ್ನೆಂಥಾ ಪಿಕಲಾಟ ಮಾಡಿ ಬಿಡುತ್ತಾನೋ. ನಿನ್ನ ಬುದ್ಧಿವಂತಿಕೆ ಒಮ್ಮೆ ನೋಡಿಬಿಡೋಣ" ಎಂದು ಭೀಮಾಜಿಗೆ ಹೇಳುತ್ತಲೇ ಅವನು ರಾಮದಾಸನನ್ನು ಹಿಂಬಾಲಿಸಿ—"ಅಯ್ಯಾ, ವಕೀಲರೇ ಹಾಗೆ ಗಬಕ್ಕನೆ ಸಿಟ್ಟಿನಿಂದ ಹೋಗಿಬಿಡುವುದು ನಿಮ್ಮ ವೃತ್ತಿಗೂ ವೃದ್ಧಿಗೂ ಬಾಧಕಕರದ್ದಲ್ಲವೇ? ಬನ್ನಿ ನಾನು ಮಧ್ಯಸ್ತನಾಗಿ ನಿಮ್ಮೊಳಗಿನ ವಿರೋಧವನ್ನು ವಿವೇಕದಿಂದ ತೀರಿಸಿ ನಿಮ್ಮಲ್ಲಿ ಮಿತ್ರತ್ವವನ್ನುಂಟುಮಾಡಿಬಿಡುತ್ತೇನೆ" ಎಂದು ಎಷ್ಟು ಹೇಳಿದರೂ ರಾಮದಾಸನು ಅವನ ಮುಖವನ್ನು ತಿರುಗಿ ನೋಡದೆ ಮಹಾ ಸಿಟ್ಟಿನಿಂದ ಭೂಮಿಯು ಅದುರುವಂತೆ ಕಾಲೆತ್ತಿ ಭರದಿಂದ ಅಡಿಯಿಡುತ್ತಾ ಮುಂದೆ ನಡೆದನು. ಭೀಮಾಜಿಯು ಹಿಂತಿರುಗಿದನು. "ರಾಯರೇ! ಮಂತ್ರವಾದಿಯ ಕೈಗೆ ಸಿಕ್ಕದ ದೈವವುಂಟೇ? ಇದನಕ ಕ್ಷುದ್ರ ದೇವತೆ! ಸಣ್ಣದೊಂದು ಮಂತ್ರದ ತುಂಡಿನಿಂದ ಕಟ್ಟಿಬಿಡಬಹುದು. ಭೀಮಾಜಿಯ ಮಾಟದ ಪ್ರತಾಪ

ಮುಂದೆ ಕಂಡುಬರುವುದು. ಮನಸ್ಸಿನಲ್ಲಿ ಸಂಕೋಚಪಡತಕ್ಕ ಕೆಲಸವಿಲ್ಲ. ಆದದ್ದು ಆಗಿ ಹೋಯಿತು. ಮುಂದಿನ ಕೆಲಸ ನೋಡುವಾ" ಎಂದು ಕೊತ್ವಾಲನು ಕಾರ್ಭಾರಿಯನ್ನು ಕರಕೊಂಡು, "ಕುಮುದಪುರದ ಮಠದಲ್ಲಿ ಖೂನಿ ಆಗಿಯದೆ ಎಂಬ ಅನುಮಾನ ಆ ಹೆಂಗಸು ಹೇಳಿದ ಬಳಿಕ ನಾವು ಅಲ್ಲಿಗೆ ಹೋಗಿ ನೋಡದಿದ್ದರೆ ನಮ್ಮ ಮೇಲೆ ಅಪವಾದ ಬರಲಿಕ್ಕೆ ಆಸ್ಪದವಿದೆ" ಎಂದನು. "ಸರಿಯಾದ ಮಾತು; ಆಗಲಿ, ಆ ರಾವಿಗೆ ಹೋಗಬೇಕೆಂದು ನಮ್ಮ ಮನಸ್ಸಿನಲ್ಲಿಯೂ ಸಂಕಲ್ಪವಿದೆ; ಬರ್ರಿ" ಎಂದು ಭೀಮಾಜಿಯನ್ನು ಸಂಗಡ ಕರಕೊಂಡು ಕಾರಭಾರಿಯು ಮಠಾಭಿಮುಖನಾದನು.

## ನಲುವತ್ತಾರು

"ಆಹಾ! ಇಂಥಾ ಅನ್ಯಾಯ ಈ ಊರಲ್ಲಿ ನಡೆಯುವದಾದರೆ ನಾನು ಮತ್ಯಾವ ಊರಿಗೆ ಹೋಗಲಿ! ಜೀವಧರಿಸಿ ನನ್ನ ಗಂಡನನ್ನು ಮಠದಲ್ಲಿ ಕೊಂದ ಮಾರೆಗಾರರ ಪಕ್ಷವನ್ನೇ ಸರ್ಕಾರದ ಜನರು ಹಿಡಿದ ಮೇಲೆ ಬಡವೆಯಾದ ನನ್ನ ಸಂಕಷ್ಟ ಯಾರಿಗೆ ಹೇಳಲಿ? ಭಗವಂತನೇ! ಹೇ ಜಿನೇಶ್ವರಾ! ಹೇ ಗೋಮತೇಶ್ವರ ಸ್ವಾಮಿ!" ಎಂದು ನೇಮರಾಜನ ಪತ್ನಿಯು ನಡು ಬೀದಿಯಲ್ಲಿ ನಿಂತು ಬಾಯಿಬಡಕೊಂಡು ರೋದನ ಮಾಡಿದಳು. ಇಂಥಾ ಘೋರವಾದ ಗೋಳಾಟವನ್ನು ಕೇಳಿದ ಸಾಕ್ಷಿಕ ಜನರ ಹೃದಯ ಖೇದನವಾಯಿತು. "ಭಗವಂತನೇ! ಸತ್ಯಶಾಲಿಯೂ ಪರಾಕ್ರಮಿಯೂ ಕರುಣಾಳುವೂ ಆದ ಪಟ್ಟುರಧರಾಧಿಪನ ರಾಜ್ಯದಲ್ಲಿ ಹೀಗೊಂದು ಅನಾಹುತ ಆಯಿತೇ? ಆಯಿತೆನ್ನುವಾ. ಅದರ ವಿಚಾರವನ್ನು ನ್ಯಾಯವಾಗಿ ಮಾಡತಕ್ಕವರು ಕಪಟ ನಾಟಕವನ್ನು ಮಾಡತೊಡಗಿ ಭೂಪತಿಯ ನಿಷ್ಕಳಂಕವಾದ ಕೀರ್ತಿಗೆ ಲಾಂಛನ ತರುವ ಹಾಗಿನ ದುರ್ಬುದ್ಧಿಯ ವಶವಾದರೇ?" ಎಂದು ನಿಜವಾಗಿ ವ್ಯಸನಪಟ್ಟರು. ಇದು ಅಧಿಕಾರಿಗಳಿಬ್ಬರಿಗೂ ಆಗಲೇ ವಿದಿತವಾಗಿ ಮನಸ್ಸಿಗೆ ವ್ಯಾಕುಲಹುಟ್ಟಿತು. ಆದರೇನು ಮಾಡೋಣ. ವಾಗ್ದೇವಿಯೂ ಶೃಂಗಾರಿಯೂ ಚಂಚಲನೇತ್ರರ ಮೇಲಿನ ಕನಿಕರವೂ ಅವರಿಬ್ಬರನ್ನೂ ಕೈ ಸೆರೆ ಹಿಡಿದಾಗಿ ಹೋಗಿತ್ತು. ಮಾಯಾಪಾಶ ಬದ್ಧತೆಯಿಂದ ಸನ್ಮಾರ್ಗವನ್ನು ತ್ಯಜಿಸಿ ಕುಮಾರ್ಗವನ್ನು ಸೇರಿಹೋಯಿತು. ಇನ್ನೇನು ನಿವೃತ್ತಿಯಿದೆ? ಅನ್ಯಾಯದಿಂದ ಉಂಟಾಗುವ ಕೇಡು ಅನುಭವಿಸುವ ಬಡಬಗ್ಗರಿಗೆ ದೇವರೇ ಗತಿ.

ಶಾಬಯ್ಯನು ಜನಾಪವಾದಕ್ಕೂ ಲೋಕನಿಂದೆಗೂ ಕಡೆಯಲ್ಲಿ ರಾಜ ಕೋಪಕ್ಕೂ ದೈವಕ್ಷೋಭಕ್ಕೂ ಗುರಿಯಾಗುವ ಸಂಭವ ಒದಗಿತಲ್ಲಾ ಎಂಬ ಪಶ್ಚಾತ್ತಾಪಕ್ಕೆ ಎಡೆಕೊಡುವೆನೆಂಬ ಹಾಗಿನ ಭಾವವು ಅವನ ಮುಖದ ಮುದ್ರೆಯಿಂದ ಕಂಡುಬಂದುದರಿಂದ ಭೀಮಾಜಿಯು ಅವನ ಸಮೀಪಕ್ಕೆ ಹೋದನು.

"ಸ್ವಾಮೀ! ಎದೆ ಕಲ್ಲಿನಂತೆ ಘಟ್ಟಿ ಮಾಡಿಕೊಳ್ಳದಿದ್ದರೆ ಇಂಥಾ ಕೆಲ ಸದಲ್ಲಿ ಕೈಹಾಕಿದವನು ಪರಿಣಾಮ ಆಗುವ ಕಾಲವುಂಟೇ? ದಿನತ್ರಯದಲ್ಲಿ ಭಸ್ಮೀಭೂತನಾಗಿ ಹೋಗಬೇಕಾಗುವುದು. ಸತ್ಯಾಸತ್ಯಾ ವಿಚಾರಮಾಡುವ ಸಂದರ್ಭವು ದುರ್ಮಾರ್ಗಪ್ರವರ್ತನೆಯ ಮಧ್ಯಭಾಗದಲ್ಲಿ ಸಿಕ್ಕುವದೇನು? ಆದಿಯಲ್ಲಿಯೇ ನೋಡಿಕೋಬೇಕಿತ್ತು. ಮುಖ್ಯ ಮಾಯಾ ಚಕ್ರವನ್ನು ಗರ ಗರನೆ ತಿರುಗಿಸುವ ಜಗತ್ಪತಿಯು ಪ್ರೇರಿಸಿದ ಬುದ್ಧಿಯಂತೆ ಮನುಷ್ಯನು ನಡಕೊಳ್ಳತಕ್ಕ ಪ್ರಾಣಿಯಾಗಿರುತ್ತಾ, ತಾನು ಮಾಡಿದೆ, ತಾನು ಮುಟ್ಟಿದೆ, ಹಾಗೆ ಮಾಡಬಾರದಿತ್ತು. ಹೀಗೆ ಮಾಡಬೇಕಿತ್ತು, ಎಂಬ ಅಜ್ಞಾನವನ್ನು ಕಟ್ಟಿಕೊಂಡರೆ ಬುದ್ಧಿಯು ಕೆಟ್ಟುಹೋಗಿ ನಾನಾ ಬಾಧಕವೂ ಅಪಕೀರ್ತಿಯೂ ಉಂಟಾಗಿ ಎರಡೂ ಕೈಗಳಿಂದ ಉಣ್ಣಬೇಕಾಗುವದು. ಪರಾಕೆ! ಅಜ್ಞಾನಾಂಧ ಕಾರವನ್ನು ಮನಸ್ಸಿನಿಂದ ಓಡಿಸಿಬಿಟ್ಟು ಮೊದಲೇ ಹಾಕಿಹೋದ ಪಾಯಕ್ಕೆ ಸರಿಯಾದ ಕಟ್ಟೋಣವನ್ನು ತೊಡಗುವದೇ ಜಾಣತನ; ವಿಕಲ್ಪವನ್ನು ದೂರಮಾಡಿರಿ. ಶತ್ರುಗಳನ್ನು ನಿಪಾತ ಮಾಡುವ ವೈನ ಶೀಘ್ರುಮಾಡುವೆನು" ಎಂದು ಧೈರ್ಯಹೇಳಿ ಕಾರ್ಭಾರಿಯ ಮನಸ್ಸಿನ ಚಾಂಚಲ್ಯವನ್ನು ಕೊತ್ವಾ ಲನು ದೂರ ಅಟ್ಟಿಬಿಟ್ಟನು.

ಭೀಮಾಜಿಯ ಅಭಿನವಜ್ಞಾನೋಪದೇಶವನ್ನು ಹೊಂದಿರುವ ಸಂಧಿ ಯಲ್ಲಿಯೇ ಅವರಿಬ್ಬರ ಸವಾರಿಯು ಮಠದ ಬಾಗಲಿಗೆ ಮುಟ್ಟಿತು. ಇದೇನು! ಬಡವರ ಮನೆಗೆ ನವಸಿಧಿ ಅನಾಯಾಸನಾಗಿ ಬಂದ ಹಾಗಾಯಿತೆಂಬ ತನು ಪುಲಕದಿಂದ ವಾಗ್ದೇವಿಯು ತರುಣಿಮಣಿಯಾದ ಶೃಂಗಾರಿಯನ್ನು ಅಭ್ಯಾಗ ತರ ಮನಸ್ಸಿಗೂ ನಯನಗಳಿಗೂ ರಂಜನೆಯಾಗುವದಕ್ಕೋಸ್ಕರ ಮುಂಭಾ ಗದಲ್ಲಿ ನಿಲ್ಲಿಸಿ, ವಿಧವೆಯಾದ ತಾನು ಹಿಂಭಾಗದಲ್ಲಿ ನಿಂತುಕೊಂಡು, ಆಚೀಚೆ ನೋಡುವಷ್ಟರಲ್ಲಿ ಚಂಚಲನೇತ್ರರಿಗೆ ಈ ವರದಿ ಸಿಕ್ಕಿ, ಅವರು ತಾನೆ ಮಠದ ಬಾಗಲಿಗೆ ಬಂದು ಅಧಿಕಾರಸ್ಥರಿಬ್ಬರನ್ನು ಯಥೋಚಿತವಾಗಿ ಸನ್ಮಾನಿಸಿ

ಅವರ ಸವಾರಿಯು ಅಂದು ಮಠಕ್ಕೆ ಚಿತ್ತೈಸುವದಕ್ಕೆ ವಿಶೇಷವಾದ ಕಾರಣ ವೇನಾದರೂ ಇದೆಯೋ ಎಂಬ ಆಲೋಚನೆಯಲ್ಲಿರುವಾಗ ಯತಿಯ ಇಂಗಿತ ವನ್ನು ತಿಳಿದು ಕೊತ್ವಾಲನು ಹೆದರುವ ಅವಶ್ಯವಿಲ್ಲವೆಂದು ಅಭಯಸೂಚಕ ಸಂಜ್ಞೆಯನ್ನು ಕಣ್ಣಿನಿಂದ ತೋರಿಸಿ, ಸನ್ಯಾಸಿಯನ್ನು ಸ್ವಸ್ಥಚಿತ್ತನಾಗಿ ಮಾಡಿ, ಅಪ್ರಾಸಂಗಿಕ ಮಾತುಗಳಿಂದ ತಕ್ಕಷ್ಟು ಸಮಯವನ್ನು ಬೇಕೆಂದು ಕಳೆದನು. ಹೀಗೆ ಅವಕಾಶ ಸಿಕ್ಕಿದ ವಾಗ್ದೇವಿಯು ನಿಮಿಷಮಾತ್ರದಲ್ಲಿ ದಿವ್ಯ ಫಲಹಾರ ಸಾಮಗ್ರಿಗಳನ್ನು ಹವಣಿಸಿ, ಕಾಫಿನೀರು, ಚಾನೀರು ವಿವಿದ ರುಚಿ ಕರವಾದ ಪಾನಕಾದಿಗಳನ್ನು ಪ್ರಾಣಸಖರ ಎದುರಿನಲ್ಲಿಟ್ಟು ಅವಸರ ಮಾಡದೆ ಅದನ್ನೆಲ್ಲಾ ಭುಂಜಿಸಿಬಿಟ್ಟು, ತನ್ನ ಕೃತಾರ್ಥತೆಯನ್ನು ಹೊಂದಬೇಕೆಂದು ಸವಿನಯವಾಗಿ ಬೇಡಿಕೊಂಡಳು. ಹಸಿದು ಬಂದ ಪುರುಷರೀರ್ವರೂ ಸಮ್ಮು ಖದಲ್ಲಿರಿಸಲ್ಪಟ್ಟ ತಿಂಡಿಯ ರಾಶಿಯನ್ನು ಮೋಹನಾಂಗಿಯರ ಮಧುರ ಸಂಭಾ ಷಣೆಯ ಮಹತ್ವದಿಂದ ಹೊಟ್ಟೆತುಂಬಾ ಉಂಡು, ತೇಗಿ, ತನುಮನ ಪರಿ ತೋಷಿತರಾಗಿ, ಮಠದ ಒಳಗೆಲ್ಲಾ ತಿರುಗಾಡಿ, ಗುಡಿಗಾರರು ಚಿತ್ರಗಳನ್ನು ಭಿತ್ತಿಗಳಲ್ಲಿ ಬರೆಯುವ ಚಮತ್ಕಾರವನ್ನು ನೋಡುತ್ತಾ ಅತ್ತಿತ್ತ ಚಲಿಸಿ, ಉದರ ಲಘುತ್ವವನ್ನು ಪಡೆದು ಪೂರ್ವಾಹ್ನ ಊಟದ ಸಮಯ ಸಮೀಪಿಸು ವದೆಂಬ ನೆವನದಿಂದ ಪುಣ್ಯವಂತರಿಬ್ಬರೂ ಬೀದಿಗಿಳಿದರು.

ಭೀಮಾಜಿಯ ವಕ್ರ ಜ್ಞಾನೋಪದೇಶದಿಂದ ಪಾಪಭಯವನ್ನು ನಿಶ್ಶೇ ಷವಾಗಿ ಹೋಗಲಾಡಿಸಿಕೊಂಡ ಶಾಬಯ್ಯನು ತನ್ನ ಮನೆಗೆ ಮರಳಿ ಹೊಗುತ್ತಾ, "ಅಯ್ಯಾ ಭೀಮಾಜೀ, ಆ ತಿಗಣೆ ಮರಿಯಂತಹ ವಕೀಲನ ಉಪಟಳವಿನ್ನೆಷ್ಟಿರುವುದೋ? ಇಷ್ಟು ಹೊತ್ತು ಅವನ್ಯಾವ ಠಾವಿಗೆ ಸೇರಿ ಏನೇನು ಕೇಡು ಮಾಡಿಬಿಟ್ಟನೋ ಅರಿಯದು. ಕೊಂಚ ವಿಚಾರಿಸಿ ಸಮಾ ಚಾರವನ್ನು ಪಡೆಯುವ ಜಾಗ್ರತೆ ಇಡುವಿಯಾ?" ಎಂದು ಕೇಳಿದನು. ಅಪ್ಪ ಣೆಯಂತೆ ನಡಕೊಳ್ಳುವೆನೆಂದು ಭೀಮಾಜಿಯು ಕಾರಭಾರಿಯ ಅನುಮತಿ ಯಿಂದ ಸ್ವಗೃಹಾಭಿಮುಖವಾದನು. ಜೀರ್ಣಶಕ್ತಿಗೆ ಉತ್ತೇಜನ ಕೊಡುವ ದಕ್ಕಾಗಿ ಭೋಜನದ ತರುವಾಯ ಶಾಬಯ್ಯನು ತಕ್ಕೊಂಡ ಸಿದ್ಧಪತ್ರೆಪಾನಕ ರವಷ್ಟು ಹದ ಮೀರಿದ ದೆಸೆಯಿಂದ ನಿದ್ರಾವಸ್ಥೆಯನ್ನು ಧರಿಸಿ, ಸಾಯಂಕಾಲ ಪರಿಯಂತರ ಶಯ್ಯಾಗೃಹವನ್ನು ಬಿಟ್ಟು ಹೊರಡಲಿಕ್ಕಾಗದೆ ಹೋಯಿತು. ಭೀಮಾಜಿಯು ವಿಳಂಬ ಮಾಡದೆ ಊಟಪಾಟವನ್ನು ತೀರಿಸಿ, ತನ್ನ ಕಾಲಿನ

ಬೆರಳುಗಳ ಸಂದಿನಲ್ಲಿ ಲೇಖಣಿಯನ್ನು ಸೇರಿಸಿ, ಒಂದು ತಳ್ಳಿಯನ್ನು ಬರೆಯು ಲಿಕ್ಕೆ ಉದ್ಯುಕ್ತನಾದನು.

"ಷಟ್ಪುರಾಧಿಪತಿಗಳ ಸಂಸ್ಥಾನಕ್ಕೆ."

"ಕುಮುದಪುರದ ಅನಾಥನಾಥೆಯರು ಮಾಡುವ ವಿನಯ ಪೂರ್ವಕ ವಿನಂತಿ. ಸ್ವಾಮಿಾ, ಕುಮುದಪುರದಲ್ಲಿ ಕಾರ್ಭಾರಿಯೂ ಕೊತ್ವಾಲನೂ ನಡೆಸುವ ಅನ್ಯಾಯಗಳ ಸಂಖ್ಯೆಯನ್ನು ಬರೆದು ಪೂರೈಸದು. ಇವರಿಬ್ಬರೂ ತಿನ್ನುವ ಲಂಚವು ಮಿತಿಮಿಾರಿ ಬಡವರ ಮನೆಗಳನಕ ಹಾಳಾದವಷ್ಟೇ. ದೊಡ್ಡವರ ಮನೆಗಳೂ ಸೂರೆ ಹೋದವು. ಎಂಥಾ ಸಣ್ಣ ಪ್ರಕರಣವಾದರೂ ಸರಿ, ಹಣ ಮುಂದಾಗಿ ಕೊಡದೆ ಹೋದರೆ ಅದನ್ನು ನೋಡುವವರೇ ಇಲ್ಲ. ಸರ್ವಸಾಧಾರಣವಾದ ಅವರ ದುರ್ನಡತೆ ಹಾಗಿರಲಿ. ಪ್ರಕೃತ ಚಂಚಲನೇತ್ರ ಸನ್ಯಾಸಿಯು ಇಟ್ಟುಕೊಂಡ ವಾಗ್ದೇವಿ ಎಂಬ ಮೋಹಿನಿಯು ನಡೆಸುವ ಕಾರ್ಭಾರು ಹೇಳುವುದಕ್ಕೆ ತುದಿಯಿಲ್ಲ. ಅವಳ ದೇಹವೂ ಮಠದ ಹಣವೂ ಅವರಿಬ್ಬರಿಗೆ ಧಾರಾದತ್ತ ಮಾಡಿ ಕೊಟ್ಟದೆ. ಅವರು ಮನಸ್ಸು ಬಂದ ಹಾಗೆ ಉಪಯೋಗಿಸಿಕೊಳ್ಳುತ್ತಾರೆ. ಅವರು ಭಯತ್ರರೂ ಏಕರಥಾರೂಢರಾಗಿ ನಡೆ ಸುವ ಘೋರವಾದ ಅನ್ಯಾಯದ ಚರಿತ್ರೆಯು ವಿಮರ್ಶಾಧಿಪತಿಗೆ ಸಂಪೂರ್ಣ ವಾಗಿ ವಿದಿತವಿರುವುದಾದರೂ ಆ ಉದ್ಯೋಗಸ್ಥನು ಸದಾ ವಾಗ್ದೇವಿಯ ತಂಗಿ ಶೃಂಗಾರಿಯನ್ನು ಮೋಹಿಸಿ ಕಾರ್ಭಾರಿಯ ಸಹಾಯದಿಂದ ಅವಳನ್ನು ಬೇಕಾದಹಾಗೆ ಉಪಯೋಗಿಸಿಕೊಳ್ಳುತ್ತಾನೆ. ಇಷ್ಟು ಮಾತ್ರವಲ್ಲ. ಒಂದು ದುರಾಚಾರಕ್ಕೆ ತಾಗಿ ಮತ್ತೊಂದು ಅನಾಚಾರವು ಬರುವುದು ಏನೂ ಆಶ್ಚ ರ್ಯವಲ್ಲ. ಮಠದಲ್ಲಿ ನಡೆಯುವ ಅನ್ಯಾಯದ ವ್ಯವಹಾರಗಳನ್ನೆಲ್ಲಾ ಮಠಾ ಧಿಪತಿಯ ಗುಣಕ್ಕೆ ತೀರ್ಪುಮಾಡುವ ವಾಗ್ದತ್ತವನ್ನು ಮುಂಚಿತವಾಗಿಯೇ ಪಡಕೊಂಡು ದೇವರೂ ಭೂಮಿಯೂ ಹೊರಲಾರದ ದುಷ್ಕೃತನವನ್ನು ಮಾಡುತ್ತಾರೆ. ಅವರೇ ಹೀಗೆ ನಡಕೊಳ್ಳುವಾಗ್ಗೆ ಅವರ ದಾಸನಾಗಿ ಆಜ್ಞಾ ಧಾರಕನಾಗಿರತಕ್ಕ ಕೊತ್ವಾಲನು ಮತ್ತೇನು ಮಾಡಬಹುದು? ಅವರಿಗೆ ವಿರೋಧವಾಗಿ ನಿಷ್ಕಾಪಟ್ಯದಿಂದ ನಡಕೊಂಡರೆ ಕ್ಷಣಮಾತ್ರದಲ್ಲಿ ಅವರು ಅವನ ಮೇಲೆ ಮುನಿದು, ಬಡವನಾದ ಅವನನ್ನು ಸದೆಬಡಿಯುವರು. 'ಇಂಥಾ ಭಯದಿಂದ ಅವನು ಕೈಗೆ ಹತ್ತುವ ಕಾಸು ಮತ್ತು ವಾಗ್ದೇವಿಯ ಕಡೆಗಣ್ಣು ನೋಟ ಯಾಕೆ ಬಿಡಬೇಕು? ಹೀಗಾಗಿ ಈ ಪುರುಷ

ತ್ರಯರು ಒಟ್ಟುಗೂಡಿ ಊರನ್ನೇ ಸುಡುತ್ತಾರೆ. ದೃಷ್ಟಾಂತವಾಗಿ ಕೆಲವು ದಿವಸಗಳ ಮೊದಲು ಈ ಪಟ್ಟಣದಲ್ಲಿರುತಿದ್ದ ದೊಡ್ಡ ಸಾಹುಕಾರ ನೇಮರಾಜ ಸೆಟ್ಟಿಯು ದುರ್ನಡತೆಯಲ್ಲಿ ಖ್ಯಾತಿಹೊಂದಿರುವ ಅವನ ಹೆಂಡತಿಯ ಗುಪ್ತಸ್ನೇಹಿತರಿಂದ ಖೂನಿಮಾಡಲ್ಪಟ್ಟು ಅವನ ಹೆಣವು ಸಿಕ್ಕದೆ ಹೋಗಿದೆ. ಇವರ ತನಖಿಯು ತಕ್ಕಕಾಲದಲ್ಲಿ ಸರಿಯಾಗಿ ನಡೆಯುತಿದ್ದರೆ ಪತ್ತೆ ದೊರೆಯುತ್ತಿತ್ತು. ಹಾಗೆ ಮಾಡುವುದನ್ನು ಬಿಟ್ಟು ಅವಳಿಂದ ಎಷ್ಟೋ ಹಣವನ್ನು ಲಂಚವಾಗಿ ಈಸುಕೊಂಡು ಅವಳನ್ನು ರಕ್ಷಿಸಿಬಿಟ್ಟದ್ದಲ್ಲದೆ ಮೃತನು ವಾಗ್ದೇವಿಯ ವ್ಯಾಮೋಹದಿಂದ ಮಠಕ್ಕೆ ಹೋದಲ್ಲಿ ಅವನನ್ನು ಅಲ್ಲಿ ಯಾರೋ ಕೊಂದುಹಾಕಿದರೆಂಬ ಕಲ್ಪನೆಯ ದ್ವಾರ ಮಠದಿಂದಲೂ ಮತ್ತಷ್ಟು ದ್ರವ್ಯ ಎಳೆಯುವ ಇಚ್ಛೆಯಿಂದ ಕೊತ್ವಾಲನನ್ನು ಸಹಾ ತನಿಕಿ ಮಾಡಲಿಕ್ಕೆ ಬಿಡದೆ ವಿಮರ್ಶಾಧಿಕಾರಿಯ ನಿರೂಪಕ್ಕನುಗುಣವಾಗಿ ಕಾರಭಾರಿಯು ತಾನೇ ತುಬ್ಬುಮಾಡುವುದಕ್ಕೆ ಉದ್ಯುಕ್ತನಾಗಿ ಮಠಕ್ಕೆ ಹೋಗಿ ಹಣದ ರಾಶಿಯನ್ನು ಹಾಕಿಕೊಂಡಿರುತ್ತಾನೆ. ಇದೆಲ್ಲಾ ಸನ್ನಿಧಾನಕ್ಕೆ ತಕ್ರಾರೂಪವಾಗಿ ಬರೆದು ಇರುವದಾಗಿ ಅವಿಶ್ವಾಸದಿಂದ ತಿರಸ್ಕರಿಸಿದರೆ ದರಬಾರಿನ ತೇಜವೇ ಕಂದಿಹೋದೀತು. ಹೆಸರು ಕಾಣಿಸಿ ಮನವಿ ಮಾಡಿಕೊಂಡರೆ ಬರಕೊಂಡವನ ಜೀವಕ್ಕೆ ದುರುಳರು ಮುನಿದು ಬಿಟ್ಟಾರು ಚೆನ್ನಾಗಿ ಶೋಧನೆಮಾಡಿ ನೋಡಿದರೆ ಸಕಲ ಗುಟ್ಟುಗೊತ್ತಾಗಿ ರಾಜಾಧಿಕಾರ ಸರಿಯಾಗಿ ನಡೆದೀತು. ಇಲ್ಲವಾದರೆ ಈ ಪಾಪವೆಲ್ಲಾ ರಾಜನ ತಲೆಯ ಮೇಲೆ ಉರಿಯುವುದು."

ಈ ತಕ್ರಾರಿಯು ಅಂಚೆಯ ಮೂಲಕ ಕಳುಹಿಸೋಣ, ಅದು ವಿಳಂಬವಿಲ್ಲದೆ ಅರಮನೆಯ ಬಕ್ಷಿಯ ಕೈಗೆ ಬಂತು. ಯಾಕೆಂದರೆ ರಾಜನ ಹೆಸರಿನಲ್ಲಿ ಅವರ ಮೇಲೆ ವಿಳಾಸವಿರುತಿತ್ತು. ಇಂಥಾ ಮನವಿಗಳು ಸರ್ಕಾರಿಯಾಗಿರುವ ಪ್ರಯುಕ್ತ ಬಕ್ಷಿಯು ಅದನ್ನು ಕಿರಿದಿವಾನರ ಬಳಿಗೆ ಕಳುಹಿಸಿಕೊಟ್ಟನು. ಕಿರಿದಿವಾನನಿಗೆ ಮುನಷಿಯು ಅದನ್ನು ಓದಿ ತಿಳಿಸಿದನು. ಅವನು ಅದನ್ನು ಚೆನ್ನಾಗಿ ತಿಳಿದುಕೊಂಡು ಬೆರಗಾಗಿ ಹೇಳಿದ್ದೇನೆಂದರೆ:- "ಇದೇನು ಅಬದ್ಧವೋ ಸುಬದ್ಧವೋ ತಿಳಿಯದು! ಯಾವ ಮಹಾರಾಯ ಅದನ್ನು ಬರೆದು ಯಾರ್‍ಯಾರ ಮೇಲೆ ಅಧಿಕಾರಸ್ಥರಿಗೆ ಸಂಶಯಕ್ಕೆ ಆಸ್ಪದ ಕೊಟ್ಟು ಬಿಟ್ಟನೋ ವಿಮರ್ಶಾಧಿಕಾರಿಯು ಪೂರ್ಣವಾದ ಸತ್ಯವಂತ; ಪರದ್ರವ್ಯ ವಮನವತ್

ಪರಸ್ತ್ರೀಮಾತೆಯಂತೆ ಎಣಿಸುವಂತಾ ಜೀವ ಮಾನುಷ; ಅವನನ್ನು ದೂರು ಪವನ ಬಾಯಿಗೆ ಹುಳಬೀಳುವದು. ಕಾರ್ಭಾರಿಯ ಪಂಚಾತ್ಮ ಹೇಗಿದೆಯೋ ಹೇಳಲಾರೆ. ಆದರೆ ಅವನು ಕೆಟ್ಟ ಮನುಷ್ಯನಾಗಿರುತ್ತಿದ್ದರೆ ವಿಮರ್ಶಾಧಿಕಾರಿಯು ಅವನನ್ನು ಸುಮ್ಮಗೆ ಬಿಡುವವನಲ್ಲ. ಅವನು ಸಂಭಾವಿತನೆಂದೇ ನನ್ನ ಅಭಿಪ್ರಾಯ. ಕುಹಕ ಜನರು ತಮ್ಮ ದುರುಳತನವನ್ನು ಮೆರಸಿ ಸಂಭಾವಿತರನ್ನು ಕೆಡಿಸುವದಕ್ಕೆ ಇಂಥಾ ಮನವಿಗಳನ್ನು ಬರೆಯುವ ರೂಢಿ ಇದೆ. ಹ್ಯಾಗೂ ಸರಿ; ದುಸ್ವಪ್ನಬಿತ್ತೆಂದರೆ ಎದ್ದು ಕೂತು ಶಿವನಾಮ ಸ್ಮರಣೆ ಮಾಡಬೇಕೆಂಬ ನ್ಯಾಯಕ್ಕನುಸಾರವಾಗಿ ನಡೆಯುವದು ಕರ್ತವ್ಯ. ಈ ಬಿನ್ನಹ ಪತ್ರಿಕೆಯಲ್ಲಿ ವಿವರಿಸಿರುವ ಕೃತ್ಯಗಳು ನಡೆದಿವೆಯೋ ನಿಜನಾಗಿ ಕುಮುದ ಪುರದೊಳಗೆ ವಿಸ್ತರಿಸಕೂಡದ ಅನ್ಯಾಯಗಳು ನಡೆಯುತ್ತಿವೆಯೋ ಎಂಬ ವಿಷಯದಲ್ಲಿ ಜಾಗ್ರತೆಯಿಂದಲೂ ಸಮಾಧಾನ ಚಿತ್ತದಿಂದಲೂ ವಿಮರ್ಶೆ ಮಾಡಿ ಅಗತ್ಯಕಂಡರೆ ಹಕೀಕತ್‌ಗಳನ್ನೆಲ್ಲಾ ನಮ್ಮ ತಿಳುವಳಿಕೆಗೆ ತರುವದಕ್ಕೆ ಒಂದು ಅಪ್ಪಣೆಮಾಡಿಬಿಡಪ್ಪಾ."

ಮುನಷಿಯು ಹಾಗೆ ವರ್ತಿಸಿ ಈ ರಹಸ್ಯವನ್ನು ಒಳಗಿಂದೊಳಗೆ ತನ್ನ ಸ್ನೇಹವನ್ನು ಬೆಳಸಿದ ಕಾರ್ಭಾರಿಗೆ ತಿಳಿಯಪಡಿಸಿದನು. ಅವನು ನಕ್ಕು- "ಇದು ಆ ಕಳ್ಳ ಕೊತ್ವಾಲನ ವ್ಯಸನ! ಒಳ್ಳೆದಾಯಿತು. ವಿಮರ್ಶಾಧಿಕಾರಿಯು ತಳ್ಳಿಯನ್ನು ನೋಡಿದ ಕೂಡಲೇ ರೋಷದಿಂದ ಆ ನಾಯಿ ಮಕ್ಕಳನ್ನು ನಿರ್ಮೂಲಮಾಡದಿರನು. ಮುಂದಿನ ಕಾರ್ಯಸಾಧನೆಗೆ ಈ ಕೃತ್ಯವು ಬಹು ಉಪಯುಕ್ತವಾದದ್ದೇ. ವಾಗ್ದೇವಿಯನ್ನು ಬಿಟ್ಟುಹಾಕಿದರೆ ದೇವರ ಮುನಿಸು ಬಂದೀತು. ನಾನೇನಾದರೂ ಹಣವನ್ನು ತಿಂದುಹಾಕಲಿಲ್ಲ. ಬಂದದ್ದು ಬರಲಿ, ನೋಡಿಕೊಳ್ಳುವ. ಚತುರ್ಮಠಾಧಿಪರು ಹೊಸವಕೀಲನ ಸವಿಯಾದ ಮಾತುಗಳಿಗೆ ಕಿವಿಕೊಟ್ಟು ಹಾರಾಡುತ್ತಾರೆ. ಅವರು ಭಿಕ್ಷಾಪಾತ್ರ ತೆಕ್ಕೊಂಡು ಊರು ಊರು ತಿರುಗಿಕೊಂಡಿರುವ ಹಾಗೆ ಯುಕ್ತಿ ನಡೆಸಿ, ಸೂರ್ಯನಾರಾಯಣನ ಆಶ್ರಮವನ್ನು ಊರ್ಜಿತ ಇಡುವಂತೆ ಮಾಡಲಿಕ್ಕೆ ನನ್ನಿಂದ ಸಾಧ್ಯವಾಗಲಾರದಾದರೆ ನಾನು ಬದುಕಿ ಏನು ಪುರುಷಾರ್ಥ?" ಹೀಗೆಂದು ತನ್ನಷ್ಟಕ್ಕೆ ಪೌರುಷಪಡುತ್ತಾ ಕುಳಿತಿರುವ ವೇಳೆಗೆ ಭೀಮಾಜಿಯು ಬಂದು ಸಲಾಂ ಮಾಡಿದನು. "ಮಿತ್ರನೇ! ನಿನ್ನ ಬಾಣವು ತೀಕ್ಷ್ಣವಾದ್ದಯ್ಯಾ" ಎಂದು ಗಪ್ಪನೆ ಕಾರ್ಭಾರಿಯು ಹೇಳಿಬಿಟ್ಟನು. "ಅದೇನು ಸ್ವಾಮಿಾ?" ಎಂದು ಬೆರ

ಗಾಗಿ ಏನೂ ತಿಳಿಯದವನಂತೆ ಚಕಿತನಾದವನ ಸ್ಥಿತಿಯನ್ನನುಕರಿಸಿ ಅವನು ಮುಖವನ್ನೇ ನೋಡಿದನು. ಕಿರಿದಿವಾನರ ಮುನಷಿಯು ತಿಳಿಸಿರುವ ವರ್ತಮಾನವನ್ನು ಮೆಲ್ಲಗೆ ಕೊತ್ವಾಲನ ಕಿವಿಯಲ್ಲಿ ಶಾಬಯ್ಯನು ಹಾಕಿದನು. ಭೀಮಾಜಿಯು ಅರೆ ನೆಗೆಯ ಮುಖದಿಂದ ಮಾತಾಡದೆ ಕೂತನು.

ಈ ದಿವಾನರ ನಿರೂಪಸಹಿತ ತಳ್ಳಿಯು ವಿಮರ್ಶಾಧಿಕಾರಿಗೆ ತಲ್ಪಿತು. ಅದನ್ನು ಓದಿ ನೋಡುತ್ತಲೇ ಸತ್ಯಶೀಲನಾದ ಆ ಪ್ರಾಣಿಗೆ ಏರಿದ ಕೋಪವು ಹೇಳಿ ತುದಿಯಿಲ್ಲ. ಸಿಟ್ಟಿನ ದಳ್ಳುರಿಯಿಂದ ಅವನ ಒಡಲೇ ಸುಡುತ್ತದೆಂದು ಕಂಡಿತು. ಈ ದೆಸೆಯಿಂದ ಆದ ಮುಖವಿಕಾರವನ್ನು ಕಾಣುತ್ತಿದ್ದ ಅವನ ಪತ್ನಿಯು ಏನೋ ವೈಷಮ್ಯ ಸಂಭವಿಸಿರುವದೆಂಬ ಅನುಮಾನದಿಂದ ಸಮಯವರಿತು ಪತಿಯ ಕೂಡೆ ಊರಿನಲ್ಲಿ ಜನರು ಕೊತ್ವಾಲ ಮತ್ತು ಕಾರಭಾರಿಯನ್ನು ಕುರಿತು ಇತ್ತಲಾಗೆ ತುಂಬ ಅಸಹ್ಯಕರವಾದ ಮಾತುಗಳನ್ನಾಡುವರೆಂದು ತಿಳಿಸಿದಳು. “ಜನರು ಹಲವು ಉದ್ದೇಶಗಳಿಂದ ಬೇಕಾದ ಹಾಗೆ ಆಡುವರು. ನೀತಿವಂತನ ಮೇಲೆ ದುಷ್ಟರು ನಿರ್ನಿಮಿತ್ತವಾಗಿ ಅಪವಾದಗಳನ್ನು ಹಾಕುವ ರೂಢಿ ಇದೆ. ಹಾಗಲ್ಲವಾದರೆ ತನ್ನ ಮೇಲೆ ತಳ್ಳಿಯಲ್ಲಿ ಹೊರಿಸಿರುವ ದೋಷಾರೋಪಣೆಗೆ ಕೊಂಚವಾದರೂ ಆಧಾರವಿರುವದೇ?” ಎಂದು ಪ್ರತಿಉತ್ತರ ಕೊಟ್ಟು ಪತಿಯ ಕೂಡೆ ಅವಳು ಏಕೀಭವಿಸಿದಳು. ಜನರು ಮನಸ್ಸು ಬಂದ ಹಾಗೆ ಯುಕ್ತಾಯುಕ್ತವಾದ ಮಾತುಗಳನ್ನಾಡುವರು. ಅವುಗಳನ್ನು ಚನ್ನಾಗಿ ಶೋಧಿಸಿ ನೋಡದೆ ಒಪ್ಪಿಕೊಂಡರೆ ಅನಾಹುತಕ್ಕೆ ಕಾರಣವಾಗುವದೇ ಸರಿ ಎಂದು ಪತಿ ಪತ್ನಿಗಳು ನಿರ್ಧಾರಮಾಡಿದರು. ಇದ್ಯಾವ ದೊಡ್ಡ ಕಾರ್ಯ! ಅದನ್ನು ರವಷ್ಟು ಸಮಯದಲ್ಲಿ ಪರಿಶೋಧಿಸಿ ಸತ್ಯವನ್ನು ಹುಡುಕಿ ಅನ್ಯಾಯಗಾರರನ್ನು ತಕ್ಕವಾದ ಶಿಕ್ಷೆಗೆ ಗುರಿಪಡಿಸುವೆನೆಂದು ಶಪತಹಾಕಿಕೊಂಡು, ವಿಮರ್ಶಾಧಿಕಾರಿಯು ಮರುದಿನ ಮುಂಜಾನೆ ತನನ್ನನ್ನು ಕಂಡು ಹೋಗಬೇಕಾಗಿ ಕಾರಭಾರಿಗೆ ಹೇಳಿಕಳುಹಿಸಿದನು. ಆ ಸಮಯಕ್ಕೆ ಶಾಬಯ್ಯನು ವಿಮರ್ಶಾಧಿಕಾರಿಯ ಮನೆಯ ಬಾಗಿಲಲ್ಲಿ ಕಾದು ನಿಂತನು ಕೊಂಚ ಹೊತ್ತಿನಲ್ಲಿ ಇಬ್ಬರು ಅಧಿಕಾರಸ್ಥರು ಒಟ್ಟುಗೂಡಿ ಸಂಭಾಷಣೆ ಮಾಡಿದರು.

ವಿಮರ್ಶಾಧಿಕಾರಿ–“ಅಯ್ಯಾ ಶಾಬಯ್ಯಾ! ಇದೇನಪ್ಪಾ, ಅಲ್ಲೋಲ ಕಲ್ಲೋಲ! ನಿನ್ನ ನನ್ನ ಮೇಲೆ ಒಟ್ಟು ತಳ್ಳಿ ಅರ್ಜಿ ಬಿದ್ದಿರುವ ಸುದ್ದಿ

ಕೇಳಿಬಲ್ಲಿಯಾ?
ನನ್ನಿಬ್ಬರನ್ನೂ ಏಕಪ್ರಕಾರ ದೂರುವವರಿಗೆ ಕೊತ್ವಾಲನ ಅಂಕೆ ಉಂಟೇನು? ಅವನ ಮೇಲೆಯೂ ಅವರೊಳಗೆ ದೂರು ಬರಮುಇದೆ."

ಕಾರ್ಭಾರಿ—"ಪರಾಕೆ! ಸಾಂಪ್ರತ ಪ್ರಾಮುಖ್ಯವಾಗಿ ಸತ್ಯಸಂಧರಿಗೆ ಅಭಾನಕರವಾದ ಮಾತುಗಳಿಂದ ಕುಚ್ಛೀಕರಿಸುವದು, ಅವರನ್ನು ಘೋರ ವಾದ ಗಂಡಾಂತರದಲ್ಲಿ ಬೀಳಿಸಲಿಕ್ಕೆ ಭಗೀರಥ ಯತ್ನಗಳನ್ನು ಹೂಡುವದು, ಇವೇ ಮುಂತಾದ ದುಸ್ಸಾಧನೆಗಳ ದ್ವಾರ ಸಜ್ಜನರನ್ನು ಮರ್ದನ ಮಾಡುವ ದುರಭ್ಯಾಸಕ್ಕೆ ಬಹು ಪ್ರೋಕರಿ ಸ್ವಭಾವದ ಅನಾಮಿಕರು ಇರುವೆಗಳ ಸಾಲು ಗಳಂತೆ ಮೆರೆಯುತ್ತಾರೆ. ಸಾಧು ಸಜ್ಜನರ ಸಂತಾಪಕ್ಕೆ ಖದಿರಾಂಗಾರವನ್ನು ಹೋಲಿಸುವದಾಯಿತು. ಈಗಿನ ಕಾಲಸ್ಥಿತಿ ಆಲೋಚಿಸುವಾಗ ಖದ್ಯೋತವು ತ್ರಿಲೋಕಪ್ರಕಾಶಕನಾದ ದಿವಾಕರನ ಪ್ರಭೆಯನ್ನು ತಗ್ಗಿಸುವ ಪ್ರಯತ್ನ ಮಾಡುವಂತೆ ಆಗಿದೆ."

ವಿಮರ್ಶಾಧಿಕಾರಿ-"ಸದ್ಯೋ ನಮ್ಮ! ಅಯ್ಯಾ, ಶಾಬಯ್ಯಾ ನಿನ್ನ ಪುರಾ ಣವನ್ನು ತುಸಾ ಕಟ್ಟಿಟ್ಟು ಬಿಡು. ಅಪ್ರಾಸಂಗಿಕ ಮಾತುಗಳಿಂದ ವ್ಯರ್ಥವಾಗಿ ಸಮಯವನ್ನು ಕಳೆಯುವದರಲ್ಲಿ ಸಂತೋಷಪಡುವ ನಿನ್ನ ಚಾಲು ನನಗೇನೂ ಪರಿಷ್ಕಾರವಾಗಿ ತೋರುವದಿಲ್ಲ. ಈಗನಕ ವಿಚಾರಕ್ಕೆ ಉಪಯುಕ್ತವಾದ ಮಾತುಗಳೇ ನನಗೆ ಬೇಕಾದ್ದು. ಹಾಳು ಹರಟೆ ಹಾಗಿರಲಿ "

ಕಾರ್ಭಾರಿ—"ಅಪ್ಪಣೆಯಾದ ವಿಷಯಗಳಲ್ಲಿ ಅರಿಕೆ ಮಾಡುವದಕ್ಕೆ ಪಾದಸೇವಕನಾದ ನಾನು ಅವಕಾಶವನ್ನು ಕಾಯುತ್ತೇನೆ"

ವಿಮರ್ಶಾಧಿಕಾರಿ—"ನೇಮರಾಜನ ಮರಣವನ್ನು ಕುರಿತು ನೀನು ನಡೆಸುವ ವಿಚಾರಣೆಯು ಫಲವೇನು? ಬೇಗ ಹೇಳಿಬಿಡು. ಅದನ್ನು ಕುರಿತು ನಮಗೆ ಇದುವರೆಗೂ ಒಂದಾದರೂ ಬಿನ್ನವತ್ತಳೆಯನ್ನು ನೀನು ಬರಕೊಂಡ ದ್ದಿಲ್ಲ. ಯಾಕೋ ತಿಳಿಯದು"

ಕಾರ್ಭಾರಿ—"ಸ್ವಾಮಿಾ! ವಿಚಾರಣೆಯು ಮುಗಿಯುವದಕ್ಕೆ ಮೊದಲೇ ಬಿನ್ನವತ್ತಳೆಯನ್ನು ಬರಕೊಳ್ಳುವದು ಈಗಿನ ನಡವಳಿಕೆಗೆ ವ್ಯಾಪಿಸುವ ಚಟ್ಟ ಗಳ ನಿಬಂಧನೆಗಳಿಗೆ ವ್ಯತಿರಿಕ್ತವಾಗಿರುವದಷ್ಟೆ.

ವಿಮರ್ಶಾಧಿಕಾರಿ—"ಇದುವರೆಗೆ ವಿಚಾರಣೆಯು ಮುಗಿಯಲಿಲ್ಲವೇ, ಅಥವಾ ಪ್ರಾರಂಭವಾಗಬೇಕಷ್ಟೆಯೋ?

ಕಾರ್ಭಾರಿ—"ನನ್ನ ಬಿನ್ನಪ ಲಾಲಿಸಬೇಕೆಂಬ ಪ್ರಾರ್ಥನೆ ಚಿತ್ತಕ್ಕೆ ಹೋಗಲಿ. ನೇಮರಾಜನ ಮರಣದ ಅನುಮಾನದ ಕೌಲಿಕ ಸಿಕ್ಕಿದೊಡನೆ ಭೀಮಾಜಿಯು ವಿಚಾರಣೆ ಮಾಡತೊಡಗಿದನು. ಅವನ ಮೇಲೆ ಅಪ್ರಾಮಾಣಿಕತೆಯ ದೋಷಾರೋಪಣೆಯು ಮೃತನ ಹೆಂಡತಿಯ ಕಡೆಯಿಂದ ಮಾಡೋಣಾಯಿತು. ತತ್‍ಕ್ಷಣ ನಾನು ಸ್ವತಃ ಸ್ಥಳಕ್ಕೆ ಹೋಗಿ ಕೂಲಂಕಷವಾಗಿ ಪರಿಶೋಧನ ಮಾಡಲಾರಂಭಿಸಿದೆನು. ಘಟಿಂಗರಲ್ಲಿ ಪ್ರಥಮ ಸ್ಥಳದವನಾದ ರಾಮದಾಸನು ಮೃತನ ಹೆಂಡತಿಯ ಕಡೆಯಿಂದ ವಕೀಲನಾಗಿ ಬಂದು ಸತ್ಯತ್ವವು ಪೂರ್ಣವಾಗಿ ಅಡಗುವಂತೆ ಮೃತನ ಮರಣಕ್ಕೆ ಅಸಂಭಾವ್ಯವಾದ ಹೇತುವನ್ನು ತೋರಿಸಿ ಮೊದಲೇ ಅನುಮಾನಕ್ಕೆ ಒಳಪಟ್ಟ ಮೃತನ ಹೆಂಡತಿಯನ್ನು ಬಚಾವು ಮಾಡಲಿಕ್ಕೆ ನೋಡುವ ಸಮಯದಲ್ಲಿ ಇಂಥಾ ದೊಡ್ಡ ವಿಷಯದಲ್ಲಿ ಅವನ ಮರುಳತನವನ್ನು ಮೆರಸಿ ಇಡೀ ರಾಜ್ಯದಲ್ಲಿ ಅಪಖ್ಯಾತಿ ಬರುವ ಹಾಗೆ ನಾಲಿಗೆ ನಡಿಲ ಇಡಬಾರದಾಗಿ ನಾನು ಅವನಿಗೆ ಬುದ್ಧಿ ಹೇಳಿದೆ. ಪರಂತು ಅವನು ನನ್ನ ಮಾತು ಶುಂಠತನದಿಂದ ಧಿಕ್ಕರಿಸಿ ನಾನೊಬ್ಬ ಕುರುಬನೆಂಬ ಹಾಗೆ ಬಾಯಿಗೆಬಂದ ರೀತಿಯಲ್ಲಿ ಒದರುತ್ತಾ ನಡೆದುಬಿಟ್ಟನು. ಆದರೂ ಅವನು ಅಪವಾದ ಹಾಕಿದ ಚಂಚಲನೇತ್ರರ ಮಠಕ್ಕೆ ನಾನು ಅನ್ನ ನೀರು ಬಿಟ್ಟು ಮಧ್ಯಾಹ್ನ ಬಿಸಿಲೆಂತ ನೋಡದೆ ಫಕ್ಕನೆ ಹೋಗಿ ಭೀಮಾಜಿಯ ಸಮೇತ ಮಠವನ್ನು ಇಡೀ ಸಂಚರಿಸಿ ನೋಡಿದಲ್ಲಿ ಸಂಶಯಾಸ್ಪದವಾದ ಒಂದು ವಿದ್ಯಮಾನವಾದರೂ ಪ್ರತ್ಯಕ್ಷವಾಗದೆ ಹೋಯಿತು. ಆ ರಾಮದಾಸನು ಮೃತನ ಹೆಂಡತಿಯ ಗುಣಕರವಾದ ವ್ಯವಹರಣೆ ನಡೆಸುವ ಉದ್ದಿಶ್ಯ ಬಂದವನಲ್ಲ. ಚತುರ್ಮಠದವರಿಗೆ ಕುಮುದಪುರ ಮಠದ ಮೇಲೆ ಹುಟ್ಟಿದ ದ್ವೇಷಸಾಧನೆಗೆ ಪವಿತ್ರಕರ್ತನಾದ ನೃಸಿಂಹಪುರ ಸ್ವಾಮಿಯ ಬೋಧನೆಗನುಗುಣವಾಗಿ ಮರುಳರಂತೆ ಕುಣಿಯುವ ಬೇರೆ ಮೂವರು ಸನ್ಯಾಸಿಗಳು ಕೂಡಿ, ಒಂದು ಕೂಟು ಘಟ್ಟಿಯಾಗಿ ತುಂಟಾಟಿಕೆ ಮಾಡಲಿಕ್ಕೆ ಉದ್ಯುಕ್ತರಾಗಿರುತ್ತಾರೆ. ಅವರ ಒಟ್ಟಿನಲ್ಲಿ ಚಂಚಲನೇತ್ರರ ದೀರ್ಘದ್ವೇಷಿಯಾದ ವೇದವ್ಯಾಸನು ಒದ್ದಾಡುತ್ತಾನೆ. ರಾಮದಾಸನು ಅವರ ಕಡೆಯಿಂದ ನಾನಾ ವಿಧದಿಂದ ಕುಮುದಪುರ ಮಠದ ಮೇಲೆ ಗಂಡಾಂತರ ತರಬೇಕೆಂದು ನೋಡುತ್ತಾನೆ. ನೇಮರಾಜನ ಮರಣದ ಗುಲ್ಲು ಕೇಳಿ ಈ ಸಂದರ್ಭದಿಂದ ಲಾದರೂ ಒಂದು ಗಡಿಬಿಡಿ ಮಾಡಲಿಕ್ಕೆ ಹೊರಟಿರುವನು. ತನ್ನ ದುಸ್ಸಾಧ

ನೆಯು ನಡೆಯುವದು ಅಸಾಧ್ಯವೆಂದು ಅವನಿಗೆ ಖಚಿತವಿರುವದರಿಂದಲೇ ಬೇಕೆಂತ ಒಂದು ಕುತರ್ಕ ಮಾಡಿ ವಕಾಲತ್ತು ಬಿಟ್ಟು ಹೋಗಿಬಿಟ್ಟು ಈ ತಕ್ಕೀಯನ್ನು ಮಾಡಿಸಿದ್ದಾನೆ. ವಾಗ್ದೇವಿಯ ಮೇಲೆ ದೂರು ಹಾಕಿದರೆ ಆ ಅರ್ಜಿ ಚತುರ್ಮುಖದವರ ಕಡೆಯಿಂದ ತಾನೆ ಮಾಡಿಸಿದ್ದಾಗಿ ಸಂಶಯ ಉಂಟಾದೀತೆಂಬ ಯೋಚನೆಯಿಂದ ನೇಮುರಾಜನ ಹೆಂಡತಿಯ ಮೇಲೆ ಅನುಮಾನಸಿರುವ ಸಂಗತಿಯಲ್ಲಿ ಹಣ ಸುಲಿಯುವದಕ್ಕೋಸ್ಕರ ಕುಮುದ ಪುರ ಮಠದ ಮೇಲೆ ಜರಮು ಬಿದ್ದಿರುತ್ತೇವೆಂಬ ಹಾಗೆ ನನ್ನ ಮೇಲೂ ಕೊತ್ವಾಲನ ಮೇಲೂ ದೂರು ಕಾಣಿಸಿ, ತಮ್ಮ ಪ್ರತಿಷ್ಠೆಗೂ ಅಭಾನಕರವಾದ ವಾಚಕಗಳಿರುವ ಒಂದು ತಕ್ಕೀಯನ್ನು ಮಾಡಿಹಾಕಿದ್ದಾನೆ ಅವನಿಗೆ ಇನ್ನೊಂದು ಉದ್ದೇಶವಿದೆ ವಾಗ್ದೇವಿಯ ಹಿತಕಾರಿಗಳು ಈ ತಕ್ಕೀಯನ್ನು ಮಾಡಿಸಿರಬಹುದೆಂಬ ಸಂದೇಹಕ್ಕೆ ಆಸ್ಪದವಾದರೆ ನನಗೂ ಕೊತ್ವಾಲಸಿಗೂ ತಮಗೂ ಕುಮುದಪುರ ಮಠದ ಮೇಲೆಯೂ ಅದರಲ್ಲಿ ವಾಸವಾಗಿರುವ ಕ್ರಿಮಿಕೀಟಾದಿಗಳ ಮೇಲೆಯೂ ದ್ವೇಷ ಹುಟ್ಟಿ ಚತುರ್ಮುಖದವರ ಹಟ ಸಾಧನೆಯು ನೆರವೇರಲಿಕ್ಕೆ ಅನುಕೂಲವಾಗುವದು. ಒಂದಲ್ಲಾ ಒಂದು ಬಾಣವಾದರೂ ತಾಗಿ ಅಧಿಕ ವಕ್ಷದವರಾಗಿ ಒದ್ದಾಡುವ ನಾಲ್ಕು ಮಠದ ವರು ಐದನೇ ಮಠ ಮರ್ದನ ಮಾಡಲಿಕ್ಕೆ ಸಾನುಕೂಲ ಸಾಧನಗಳನ್ನು ರಾಮದಾಸನು ಹುಡುಕುತ್ತಾ ಇದ್ದಾನೆ. ಇನ್ನೇನು ಹೆಚ್ಚು ಅರಿಕೆ ಮಾಡಲಿ? ತಾವು ನಮ್ಮನ್ನು ನಡಸಿಕೊಂಡು ಹೋಗುವ ಯಜಮಾನರು. ನಮ್ಮ ಮನಃ ಪೂರ್ವಕವಾದ ಉದಾಸ ಅಥವಾ ಅಪರಾಧಗಳು ಇದ್ದರೆ ಕಸಿಕರಪಿಡದ ನಮ್ಮನ್ನು ಶಿಕ್ಷಿಸುವದು ತಮ್ಮ ಧರ್ಮವಾಗಿದೆ. ಬಹು ಭಾಷಣವನ್ಯಾಕ ಮಾಡಲಿ? ತಾವು ಸ್ವತಹಾ ಈ ಕೊಲೆಪಾತಕದ ವಿಚಾರಣೆ ಮಾಡಿದರ ಸರ್ವವೂ ವಿದಿತವಾಗುವದು. ಹಾಗೆಯೇ ತಮ್ಮ ಕೈ ಕೆಳಗೆ ನೌಕರಿ ಮಾಡಿ ಕೊಂಡಿರುವ ನನ್ನ ಮುಂತಾದವರ ಸ್ವರೂಪವು ತಿಳಿದು ಬರುವದು.

ವಿಮರ್ಶಾಧಿಕಾರಿ—"ತಕ್ಕೀಯ ವಿಷಯ ಹಾಗಿರಲಿ, ಸತ್ಯತ್ವ ಶೋಧನೆ ಮಾಡಲಿಕ್ಕೆ ಅಡ್ಡಲು ಯಾವುದೂ ಇಲ್ಲ. ರಾಮದಾಸನು ತಕ್ಕೀಯನ್ನು ಮಾಡಿಸಿದವನೆಂದು ನಾನು ತಿಳಕೊಳ್ಳಲಾರೆ. ವಾಗ್ದೇವಿಯ ಹಿತಕಾರಿಗಳೇ ಅದನ್ನು ಮಾಡಿಸಿರಬೇಕೆಂದು ಯಾಕೆ ಊಹಿಸಬಾರದು."

ಕಾರ್ಭಾರಿ—"ಹಾಗಾದರೆ ನಾನೂ ಕೊತ್ವಾಲನೂ ತಾವೂ ಸಹಿತ

ಪಾಗ್ಡೀವಿಯ ಪಕ್ಷದವರೆಂಬ ಅನ್ಯಾಯ ಹುಟ್ಟುವದಾಯಿತಲ್ಲ. ಇದು ನಿಜವಾಗಿರುವದಾದರೆ ಅಂಥವರ ಮೇಲೆ ದೂರು ಹಾಕಿ ಅವರ ಮನಸಿಗೆ ಪಾಗ್ಡೀವಿ ಒಳಪಡುವ ಹೇವಾಟ ಅವರ ಕಡಿಯುವರು ಮಾಡತಕ್ಕವರೇ ಬುದ್ಧೀ! ಮರದ ತುದಿಯಲ್ಲಿ ಕೂತು ಬುಡವನ್ನು ಕೊಡಲಿಯಿಂದ ಕಡಿಯುವ ಹಾಗಿನ ಅಪ್ರಬುದ್ಧತ ನಡೆಯುವದಾಗಿ ಊಹಿಸಬಹುದೇ! ನಾನೂ ಕೊತ್ವಾಲನೂ ಬಿಚ್ಚುರಲ್ಲಿ ಪ್ರಮುಖರೆನ್ನುವ ತಮ್ಮ ಮೇಲೆ ಕುಮುದಪ್ರದ ಮತದವರಾಗಲೀ ಪಾಗ್ಡೀವಿಯಾಗಲೀ ಇನ್ನಾರಾಗಲೀ ದೇವರೂ ಭೂಮಿಯೂ ಹೊರಲಾರದ ಅಪವಾದವನ್ನು ಹಾಕುವ ಹಾಗಿನ ಕೃತ್ಯ ತಮ್ಮಿಂದ ಸ್ವಪ್ನದಲ್ಲಿಯಾದರೂ ಯೋಚಿಸಲ್ಪಟ್ಟಿರುವದೇ ಸ್ವಾಮಿ? ಇದರಲ್ಲಿ ಬಹು ಶೋಧನೆ ಮಾಡುವ ಅಗತ್ಯವಿದೆ. ತನ್ನಯ ಚಮತ್ಕಾರಿಕ ರಚನೆ ನಾವು ಮೂವರೂ ಅವರ ಕೇಡು ಹಾರೈಸುವವರೆಂದು ಅವಳು ತಿಳಕೊಳ್ಳುವದಕ್ಕೆ ಆಧಾರವಾಗುವ ಹಾಗಿನ ಕೃತ್ಯ ಇದುವರೆಗೂ ನಡೆಯಲಿಲ್ಲ. ಹೀಗಿರೋಣ ನನ್ನನ್ನು ಅವಳು ದೂರಲಿಕ್ಕೆ ಕಾರಣವಿರುವದೇನು? ಸತ್ಯಾಸತ್ಯ ವಿಚಾರಮಾಡಿ ಈ ಪರಿಯಂತರ ಕೊತ್ವಾಲನ ಆದಿಯಾಗಿ ತಮ್ಮ ಸನ್ನಿಧಾನ ತನಕ ಆದ ತೀರ್ಮಾನಗಳು ಪಾಗ್ಡೀವಿಯ ಗುಣಕರವಾದವುಗಳು. ಅಂಥಾ ಅಧಿಕಾರಿಗಳನ್ನು ದೂರಿ ಅವರ ಹಗೆಯನ್ನು ಕಟ್ಟಿಕೊಂಡು ಮುಂದೆ ಗಂಡಾಂತರದಲ್ಲಿ ಬೀಳಬೇಕೆಂಬ ಹಟ ಅವಳಿಗೆ ಇರುವದಾಗಿ ನಿರೀಕ್ಷಿಸಬಹುದೇ? ನನ್ನ ಸಣ್ಣ ಬುದ್ಧಿಗೆ ತೋಚಿದ ಮಾತುಗಳನ್ನು ಆಡಿದೆ. ಬಡ ರಂಕರನ ಮೇಲೆ ಪ್ರೇಮ ನಸ್ಸಿ ತಾಳಬಾರದಾಗಿ ನನ್ನ ವಿನಂತಿ."

ವಿಮರ್ಶಾಧಿಕಾರಿ—“ರಾಬಯ್ಯಾ! ಒಳ್ಳೇದು, ಈಗ ಮನೆಗೆ ಹೋಗಬಹುದು. ನಾಳೆ ಬೆಳಗಾಗುತ ನಾವು ಸ್ಥಳಕ್ಕೆ ಬರುವೆವು. ಅಲ್ಲಿ ನೀನು ಕೊತ್ವಾಲನ ಸಮೇತ ಕಾದಿರು. ಈಗ ನಮಗೆ ಕೊಂಚ ಬೇರೆ ಕೆಲಸವಿದೆ. ನಾಳೆ ಎಲ್ಲಾ ವಿಚಾರಣೆ ತೀರಿಸಿಬಿಡೋಣ. ಪರವಾಯಿಲ್ಲ. ಬಿಚ್ಚುರು ಏನು ಹೇಳಿಕೊಂಡರೆ ನಮಗೇನು? ನಾಯಿಬೊಗಳಿದರೆ ದೇವಲೋಕ ಹಾಳಾಗುವುದೆ?”

## ನಲುವತ್ತೇಳು

ರಾಬಯನು ಮರಳಿ ಬರುವ ನಿರೀಕ್ಷಣೆಯಿಂದ ಕಾದುಕೊಂಡಿರುವ ಕೊತ್ವಾಲನು ದಾರಿಯಲ್ಲಿ ಸಿಕ್ಕಿ ಉಭಯ ಮೂರ್ತಿಗಳು ಹಾಸ್ಯವದನರಾಗಿ

ಮೆಲ್ಲಗೆ ಮಾತನಾಡುತ್ತಾ ನಡೆದರು. ರಾಬಯ್ಯನ ಮನೆಯಲ್ಲಿ ಒಂದೆರಡು ಘಳಿಗೆ ಪರಿಯಂತರ ಇದ್ದು ಕೊತ್ವಾಲನು ತನ್ನ ಮನೆಗೆ ಬಂದ ಬಳಿಕ ಯಾಕುಬಖಾನನನ್ನು ಕರೆದು ಅಂತರಂಗದಲ್ಲಿ ಅನುಜ್ಞೆಗಳನ್ನು ಕೊಟ್ಟು ಕಳುಹಿಸಿಬಿಟ್ಟನು. ಮರುದಿನ ನೇಮಿನಲ್ಲಟ್ಟ ಸಮಯಕ್ಕೆ ವಿಮರ್ಶಾಧಿಕಾರಿಯು ಮನೆಯಿಂದ ಹೊರಟು ಬರುವಾಗ ದಾರಿಯಲ್ಲಿ ಒಬ್ಬಳು ಮುದುಕಿಯು ಜರೆಯಿಂದ ನೆಲಕ್ಕೆ ಬಗ್ಗಿ ಒಂದು ದೊಣ್ಣೆಯನ್ನು ಊರಿಕೊಂಡು—"ಇನ್ನಿನ್ನು ಹಗಲು ಸಮಯವಾದರೂ ದಾರಿ ನಡೆಯುವುದು ಕಷ್ಟ. ನೇಮರಾಜನ ಗತಿಯೇ ಹಾಗಾಯಿತು. ನನ್ನಂಥಾ ಪರದೇಶಿಗೆ ನಾಯಿಯನ್ನು ಕೊಂದ ಹಾಗೆ ಕೊಂದುಬಿಟ್ಟರೆ ಕೇಳುವವರ್ಯಾರು?" ಎಂದು ತನ್ನಷ್ಟಕ್ಕೆ ಅಂದುಕೊಳ್ಳುತ್ತಾ ಅತ್ತಿತ್ತ ನೋಡದೆ ಹೋಗುವದನ್ನು ಕಂಡು, ವಿಮರ್ಶಾಧಿಕಾರಿಯು ಅವಳನ್ನು ಸಮೀಪಕ್ಕೆ ಕರೆದು ಅಂಗಿಯ ಜೇಬಿನಿಂದ ಎರಡಾಣೆ ಪಾವಲಿ ಒಂದು ತೆಗೆದು ಅವಳ ಕೈಯಲ್ಲಿ ಹಾಕಿ ಅವಳನ್ನು ಮಾತನಾಡಿಸಿದನು.

ಮುದುಕಿ—"ಯೇ ಮಗನೇ! ದೇವರು ನಿನಗೆ ವಜ್ರಾಯುಸ ಕೊಡಲಿ. ಈ ಹೊತ್ತು ಹೊಟ್ಟೆ ತುಂಬಾ ಉಂಬೋಕೆ ಆಯಿತು."

ವಿಮರ್ಶಾಧಿಕಾರಿ—"ನೇಮರಾಜನಿಗೆ ಯಾರು ಕೊಂದರಂತಿಯಾ?"

ಮುದುಕಿ—"ನಾನೇನು ನೋಡಿಯೇನೇ? ಮಗನೇ ಅವ ನತ್ತಿದ್ದು ಹೌದೇ. ಅವನ ಹೆಂಡತಿ ಸ್ವಲ್ಪ ಬುದ್ಧಿವಂತೆ. ಅವಳ ಕರ್ಮ ಅವನಿಗೆ ಬಡೀತು. ಅವಳ ದೋಸ್ತಿಗಾರ್ರು ಅವನನ್ನು ಕೊಂದರೆಂದು ಕಾಟಿ ಹೇಳ್ತಾರೆ ಮಗನೇ. ನಾನು ನಾಯಿಯೋ ಮುದುಕಿ! ನನಗ್ಯಾಕೆ ಅದೆಲ್ಲಾ ಪಾರುವತ್ತ್ಯ? ಸರ್ಕಾರದವರು ಕೇಳಿದರೆ ನನ್ನನ್ನು ತೇಕು ಮೋಕು ಮಾಡ್ತಾರು. ನನ್ನ ನಾಲಿಗೆ ಸುಮ್ಮಗಿರೋದಿಲ್ಲ. ನೀನ್ಯಾರು ಮಗನೇ? ಸರಕಾರದ ಮನಸನೋ?"

ವಿಮರ್ಶಾಧಿಕಾರಿ—"ಅಲ್ಲ, ಅಲ್ಲ, ನಾನೊಬ್ಬ ಖುಶಿವಾಶಿ ಮನುಷ್ಯ. ನೀನು ಅಂಜಬೇಡ. ಅವನ ಹೆಣವಾದರೂ ಸಿಕ್ಕಿತೇ?"

ಮುದುಕಿ—"ಹೆಣ ಸಿಕ್ಕೋಕಾಲ ಉಂಟೋ? ಪೆಟ್ಟಿಗೆಯಲ್ಲಿ ಹಾಕಿ ಬೀಗ ಬಂದೋಬಸ್ತಿ ಮಾಡಿ ಕಾಟಿ ಪಟ್ಟೆ ಅರವೆ ಗಂಟು ಅಂದಿ ಪರ ಊರಿಗೆ ಕಳಸಿ ಫಡಚಾ ಆಯಿತಂತೆ. ಇಷ್ಟೊತ್ತು ಉಳದೀತೋ ಮಗನೇ? ನಾನು ಹೋಯಿತೇನೆ. ನಂಗೆ ನಿಲ್ಲೋಕೆ ಆಗುವದಿಲ್ಲ. ಸೊಂಟ ನೋಯಿತತೆ. ಏ

ಹ್ಯಾಗುಳಿ—ಏ ಗುಳಗಜ್ಜಾ—ಪಾಪಿ ಮಕ್ಕಳು ಸತ್ತುಕೊಂಡು ಹೋಯಿಲಿ."

ವಿಮರ್ಶಾಧಿಕಾರಿ—"ಆ ಪೆಟ್ಟಿಗೆ ಹೊತ್ತವರ್ಯಾರು?"

ಮುದುಕಿ—"ನಾನು ನೋಡಿದ್ದರೆ ಹೇಳ್ತಿದ್ದೆ. ಶೆಟ್ಟರ ಜಾಗದಲ್ಲಿ ಅವರ ಮೂಲದ ಹೊಲೆಯರು ಜೀಕಟ್ಟು ಐದಾರೆ. ಜೇರೆ ಜನರು ಯಾಕೆ? ಏನನ್ನ ಹಂಜುಗುಳಿ, ನಂಗೆ ನೂರು ವರ್ಷಾಯಿತು. ಪುಣ್ಯ ಕೂಲಿ ಬಂತು."

ವಿಮರ್ಶಾಧಿಕಾರಿಯು ಈ ಮುದುಕಿಯನ್ನು ಮುಂದರಿಸಬಿಟ್ಟು ಮೆಲ್ಲಗೆ ಅಡಿ ಇಡುತ್ತಾ ಬಂದನು. ಮತ್ತಷ್ಟು ದೂರ ಒಬ್ಬ ಮುದಿ ಮಡಿವಾಳನು ದೊಡ್ಡ ವಸ್ತ್ರದ ಗಂಟನ್ನು ಹೊತ್ತು ಕೊಂಡು ದಣಿದು ನಾನೂಯೆನ್ನುತ್ತಾ ಸಾಯಲಿ ಈ ದೇಹ; ಎಷ್ಟು ಒದ್ದಾಡಿದರೂ ಹೊಟ್ಟೆಗೆ ನಾಕಷ್ಟು ಅನ್ನದ ಬಗೆಯೇ ಸಿಕ್ಕುವದಿಲ್ಲ. ಆ ನೇಮರಾಜಗೆ ಬಂದ ಮರಣ ತನಗಾದರೂ ಬಂದರೆ ಆಗುತ್ತಿತ್ತು ಎಂಬ ಹಾಗೆ ತನ್ನಷ್ಟಕ್ಕೆ ಹೇಳಿಕೊಂಡು ಹೋಗುತ್ತಿದ್ದನು ವಿಮರ್ಶಾಧಿಕಾರಿಯು ಅವನನ್ನು ಕರೆದು ಅವನ ಕೈಯಲ್ಲಿ ನಾಲ್ಕಾಣೆ ಪಾವಲಿಯನ್ನು ಇಟ್ಟು ಸಂಭಾಷಣೆ ಮಾಡಿದನು

ವಿಮರ್ಶಾಧಿಕಾರಿ—"ನೇಮರಾಜ ಏನಾಗಿ ಸತ್ತನೋ."

ಮಡಿವಾಳ—"ಹೆಂಡತಿಯೇ ಮೃತ್ಯು ಆಗಿ ಸತ್ತ"

ವಿಮರ್ಶಾಧಿಕಾರಿ—"ಹಾಗಂದರೇನು?"

ಮಡಿವಾಳ—"ಹೆಂಡತಿ ಖುಶಾಲಗಾರ್ತಿ. ಗಂಡ ಸಾಧನೆ ಮಾಡಿ ಅವಳ ಕಳ್ಳತನ ಹಿಡಿಯಲಿಕ್ಕೆ ನೋಡಿದ. ಸಿಕ್ಕಿಬಿದ್ದ ಅವಳ ದೋಸ್ತಿಗಾರರು ಕೊಂದು ಸುಧಾರಿಸಿ ಬಿಟ್ಟರು."

ವಿಮರ್ಶಾಧಿಕಾರಿ—"ಹೆಣ ಏನಾಯಿತೋ?"

ಮಡಿವಾಳ—"ಪೆಟ್ಟಿಗೆಯಲ್ಲಿ ಹಾಕಿ ಪರವೂರಿಗೆ ಹೋಗುವ ವಸ್ತ್ರದ ಗಂಟೆಂದು ಬಹಿರಂಗವಾಗಿ ಹೊತ್ತುಕೊಂಡು ಹೋದರು. ಮತ್ತೆ ಏನಾಯಿತೋ. ಅಷ್ಟು ಚಾತುರ್ಯ ಇಲ್ಲದವರು ಇಂಥಾ ಕೆಲಸದಲ್ಲಿ ಕೈ ಹಾಕುತ್ತಾರೋ ಸ್ವಾಮಿ? ತಾವು ಯಾರು ಸರ್ಕಾರದವರಲ್ಲವಷ್ಟೆ? ಸುಮ್ಮನೆ ಬಡವನಾದ ನಾನು ಸಾಕ್ಷಿಗೆ ಹೋಗಿ ಅಧ್ವಾನ ಪಡಬೇಕಾದೀತು ನನಗೇನೂ ಗೊತ್ತಿಲ್ಲಾ; ನಾನು ಹೋಗಿ ಬಿಡುತ್ತೇನೆ"

ವಿಮರ್ಶಾಧಿಕಾರಿ—"ಹಾಗೇನೂ ಹೆದರಬೇಡ, ನಾನು ಸರ್ಕಾರದವನ್ನಲ್ಲ. ಲೋಕವಾರ್ತೆಯನ್ನು ಸುಮ್ಮಗೆ ಕೇಳಿದೆ, ಪೆಟ್ಟಿಗೆ ಯಾರು ಹೊತ್ತು

ಕೊಂಡು ಹೋದರು?"

ಮಡಿವಾಳ—"ಯಾರು ಬಲ್ಲಾ. ನಾನು ನೋಡಿಲ್ಲ. ಅವನ ಮೂಲದ ಹೊಲೆಯರೇ ಹೊತ್ತುಕೊಂಡು ಹೋದರಂತ ಹೇಳೋದು ಕೇಳಿದೆ'

ಮಡಿವಾಳನು ಅಷ್ಟು ಹೇಳಿ ತಡೆಯದೆ ಮುಂದ ನಡೆದುಬಿಟ್ಟ. ವಿಮರ್ಶಾಧಿಕಾರಿಯು ಇನ್ನಷ್ಟು ದೂರ ಹೋದನು. ಮುಂದಿನಿಂದ ಒಬ್ಬ ಹೊಲೆಯನು ಬೇಗ ಬೇಗ ನಡೆಯುತ್ತಿದ್ದನು. ಅವನನ್ನು ತಡೆದು "ಎಲೇ ಎಲ್ಲಿಗೆ ಹೋಗುತ್ತೀ? ನಿಲ್ಲು" ಅಂದನು.

ಹೊಲೆಯ—"ದೇವೆರೇ (ದೇವರೇ)"

ವಿಮರ್ಶಾಧಿಕಾರಿ—"ನೀನು ಯಾರ ಮೂಲದ ಹೊಲೆಯನೊ?"

ಹೊಲೆಯ—"ತಟ್ಟಾಲಿ ಮೂಲತಾಯ್—(ಪಟ್ಟುರ ಮೂಲದವ)"

ವಿಮರ್ಶಾಧಿಕಾರಿ—ಯಾವ ಪಟ್ಟಿ? ಸೋಮರಾಜ ಪಟ್ಟಿಯೇನೊ?

ಹೊಲೆಯ—"ಓ (ಹೌದು)"

ವಿಮರ್ಶಾಧಿಕಾರಿ—"ನಿನ್ನ ಧನಿ ಎಲ್ಲಿಯೋ?"

ಹೊಲೆಯ—"ಉಳ್ಳಾಯ ಪ್ರೇತ ಪೋಯೆರ್—(ಧನಿ ಸತ್ತುಹೋದರು)"

ವಿಮರ್ಶಾಧಿಕಾರಿ—"ಹ್ಯಾಗೆ ಸತ್ತು ಹೋದರು?"

ಹೊಲೆಯ—"ಉಳ್ಳೋ ಬಿರ್ಮತ್ತಿ ಅರಸನಮಾನಿಕೆಯೆರ್ನಾಗೆ—(ಅಯ್ಯೋ! ಬ್ರಹ್ಮಹತ್ಯ; ಅವರನ್ನು ಕೊಂದು ಹಾಕಿದರಂತೆ)"

ವಿಮರ್ಶಾಧಿಕಾರಿ—"ಯಾಕೋ, ಯಾರು ಕೊಂದರು?"

ಹೊಲೆಯ—"ಉಳ್ಳೋ ದಾಯಗಂಟುನೆ, ಆ ಪೆತ್ತಿನಾ ಸಾವು ಅಡಂಡ (ಅಯ್ಯೋ ಆ ಹೆಂಗಸಿನ (ಹೆಂಡತಿಯ) ಸಾವು ಆಯಿತು)"

ವಿಮರ್ಶಾಧಿಕಾರಿ—"ಹಾಗಂದರೇನೊ?"

ಹೊಲೆಯ—"ಆ ಪೆತ್ತಿನ ಸೀಲೊವಂತೆ ಅಂಚ ಅಂಚನೇ.—(ಆ ಹೆಂಗಸಿನ ಶೀಲ ಹಾಗೆಹಾಗೆಯೇ.)"

ವಿಮರ್ಶಾಧಿಕಾರಿ—"ಅವಳೇ ಕೊಂದುಬಿಟ್ಟಳೊ?"

ಹೊಲೆಯ—"ಅತ್ತ ದೇವೆರೇ, ಪೆತ್ತಿಗ್ ಬೊಡಾಯಿನಾಕ್ಲು ಮಸ್ಲತ್ತು ಮಾಳ್ತದ ತೆಟ್ಟೈಲೆನ ಕೆರದು ಪಾಡಿಯೆರಗೆ. ಏನ್ ಹೂಯಿಜಿ ಹೂಂಬಾರೋ?—(ಅಲ್ಲ ದೇವರೇ, ಅವಳಿಗೆ ಬೇಕಾದವರು ಮಸ್ಲತ್ತು ಮಾಡಿ ಅವನನ್ನು ಕೊಂದುಹಾಕಿದರಂತೆ. ನಾನು ನೋಡ್ಲಿಲ್ಲಾ ಕೇಳಿದಿರೋ.)"

ವಿಮರ್ಶಾಧಿಕಾರಿ—"ಹೆಣ ಏನಾಯಿತೊ?"

ಹೊಲೆಯ—"ಪೆಟ್ಟಿಗೆಟ ಹಿಂಜಾದ್ ಪೋಡೇಗೊ ಕಡಪುಡಿಯೆರಗೆ. ಯೇನ ನಾನಾ ಪೊಂಜೆಲಾ ಪಿನಾಯೆ.—(ಪೆಟ್ಟಿಗೆಯಲ್ಲಿ ತುಂಬಿ ಎಲ್ಲಿಗೊ ಕಳುಹಿಸಿ ಬಿಟ್ಟರಂತೆ, ನಾನು ಇನ್ನೇನೂ ಅರಿಯೆ.)"

ವಿಮರ್ಶಾಧಿಕಾರಿ—"ಪೆಟ್ಟಿಗೆ ಹೊತ್ತದ್ದು ಯಾರು?"

ಹೊಲೆಯ--"ಯಾನ ಪೊಂಜಿಲಾ ಪಿನಾಯೆ. ಮಣ್ಣ ಪಾಡಡ.—(ನಾನೊಂದೂ ಅರಿಯೆ. ಮಣ್ಣು ಹಾಕಲಿ.)"

ಹೊಲೆಯನ ತಕ್ಕೆ ಇನ್ನು ಬೇಡವೆಂತ ವಿಮರ್ಶಾಧಿಕಾರಿಯು ಮುಂದೆ ನಡೆದನು. ಕೋನು ಕಣ್ಣ ಮಾಂಬ್ಯಾರಿಯು ಎದುರಿನಿಂದ ಬಂದು ದೊಡ್ಡ ದೊಂದು ಸಲಾಂ ಮಾಡಿ ನಿಂತುಕೊಂಡನು. "ನೀನ್ಯಾರಲೇ ಬ್ಯಾರಿ? ಎಂದೋ ನಿನ್ನ ನೋಡಿದ ಹಾಗೆ ಜ್ಞಾಪಕ ಉಂಟು" ಎಂದು ವಿಮರ್ಶಾಧಿಕಾರಿಯು ಹೇಳಿದನು.

ಮಾಂಬ್ಯಾರಿ—"ಮುತ್ತು ವರ್ಷ ಖಾವಂದರ ಸಾರಟಿನ ಉದ್ದೇಶಾ ಎರಡು ಎತ್ತು ತಂದು ಕೊಟ್ಟ ಮಾಪಳೆ ನಾನೇ ವೊಡೆಯಾ?"

ವಿಮರ್ಶಾಧಿಕಾರಿ—"ಹೌದು. ಹೌದು. ಹೌದು. ಮತ್ತೇನು ವಿಶೇಷ ವರ್ತಮಾನ?"

ಮಾಂಬ್ಯಾರಿ—"ಏನು ಅರಿಕೆ ಮಾಡಲೀ. ಬಡವರು ಇನ್ನು ಮುಂದೆ ಬದುಕಿಕೊಂಡಿರೋದು ದೊಡ್ಡ ಮುಸ್ಕಿಲ ಖಾವಂದರೇ. ಆಯಿತೋ ಪುಣ್ಯಾತ್ಮ ನೇಮರಾಜ ಸೆಟ್ಟಿಗೆ ಚಟ್ ಮಾಡಿ ಬಿಟ್ಟರು. ನಮ್ಮಂಥವರ ಬಿಸಾತ್ ಯೇನು? ಆಯಿತೊ ಕಟ್ಟೆ ಕಟ್ಟ ದೊಡ್ಡ ಕಟ್ಟ ಆಯಿತೋ"

ವಿಮರ್ಶಾಧಿಕಾರಿ—"ಅವನನ್ನು ಕೊಂದವರ್ಯಾರೊ? ಯಾಕೆ ಕೊಂದರು?"

ಮಾಂಬ್ಯಾರಿ—"ಅವನ ಹೆಂಡತಿ—ಆಯಿತೊ ಹಡಕಿ ಚಾಲಿನವಳು. ಅವಳ ಕಳ್ಳತನ ಹಿಡಿಯಲಿಕ್ಕೆ ಆಯಿತೊ, ಕಾದುಕೊಂಡು ಕೂತ. ಆ ಪಾಪದವನಿಗೆ ಆಯಿತೊ? ಹೊಂತಗಾರ ಪೋರ ಒಬ್ಬ ಹೊಡದ ಭರಕೆ ಜೀವನೇ ಆಯಿತೊ ಹಾರಿ ಹೋಯಿತು. ಮತ್ತೆ ನೋಡೋಕುಂಟೇ? ಆಯಿತೋ, ಸತ್ತವ ಸತ್ತ. ಇದ್ದವರು ಸಾಯೇಕಾಗ್ತೇತೊ? ಹೆಣ ಬೇಗ ಬೇಗ ಬೇಗ ಮುದ್ದೆ ಮಾಡಿ ಪೆಟ್ಟಿಗೆ ಒಳಗೆ ತುಂಬಿ ಮೂಲದ ಹೊಲೆಯ

ರಿಂದ ಆಯಿತೋ, ಹೊರಿಸಿ ಅರವೆಸೆಂಡಿ ಅಂದಿಕೊಂಡಿ ಯಾವ ಮನಣವಲ್ಲಿ ಹಾಕಿಬಿಟ್ಟರೊ? ಆಯಿತೊ. ಅಲ್ಲಾನೇ ಬಲ್ಲಾ. ಕೊತ್ವಾಲರೂ ಕಾರ್ಭಾರಿಗಳೂ ರಾತ್ರಿ ಹಗಲು ಪೇಚಾಡಿದರೆ ತಲಾಷ್ ಆಗುತ್ತಿತ್ತ್ತೋ? ಇಟ್ಟು ಹೊತ್ತು ಅವಳು ಹಣ ಪುಡಿಮಾಡಿ ಹೊಲೆಯುರು ಯಾರಂದಿ ಗೊತ್ತಾಗ ಬಾರದಂದಿ. ಆಯಿತೋ ಯಾವ ಊರಿಗೊ ಕಳುಹಿಸಿಬಿಟ್ಟಳು. ಆಯಿತೋ? ಹೆಣ ಸಿಕ್ಕಿದ್ರೆ ಅಷ್ಟೇ! ಆಯಿತೊ ಖೂನಿ ನಮೂದಿಗೆ ಬಂದಾತು?"

ವಿಮರ್ಶಾಧಿಕಾರಿ—"ಕುಮುದಪುರದ ಮಠದಲ್ಲಿ ಯಾರೋ ಒಬ್ಬ ಹೆಂಗಸಿನ ಸ್ನೇಹ ಮಾಡಲಿಕ್ಕೆ ತೊಡಗಿ ಅಲ್ಲಿಯೇ ಅವನು ಖೂನಿಪಟ್ಟನೆನ್ನುತ್ತಾರೆ. ಅದೇನು ಸುಳ್ಳೆ?"

ಮಾಂಬ್ಯಾರಿ—"ಸತಾ ಸುಳ್ಳು, ಸತಾ ಸುಳ್ಳು. ನನ್ನ ಕಣ್ಣಾಣೆ ಸುಳ್ಳು. ಆ ಮಠದಲ್ಲಿ ಇಬ್ಬರು ಬ್ರಾಹ್ಮಣಿತೀರು ಇರೋದು ಹೌದು. ಅವರೂ ಕೆಟ್ಟ ಚಾಳಿಯವರೇ. ಆಯಿತೋ ಆದಾಗ್ಯೂ ಅಂಥಲ್ಲಿಗೆಲ್ಲಾ ಆ ನೇಮರಾಜ ಹೋಗೊ ಮನಸಾ ಅಲ್ಲ. ಸಾಮಿರಾಯರಿಗೂ ಅವನಿಗೂ ಲೇವಾದೇವಿ ಇತ್ತು. ಅದಕ್ಕಾಗಿ ಹೋಗೋಕೆ ಸಬಬ ಉಂಟು, ನನ್ನ ಧೊರೆ! ಆಯಿತೊ ಮತ್ತೆ ಆ ಹೆಂಗಸರಿಂದ ಅವನು ಗಾಸಯಾದ್ದಲ್ಲಾ! ಸುಮ್ಮಗಾದರೂ ಹೇಳೋಕೆ ಆಗದು. ಆಯಿತೋ! ಮಠ ಮಠದವರಿಗೆ ಜಿದ್ದು ಬಂದೈತೆ. ಅವರಿಂದಾಗ ಕಾಟ ಈ ಮುದಿ ಸಾಮಿಗೂ ಅವರು ಇಟ್ಟುಕೊಂಡ ಆ ಇಬ್ಬರೂ ಬಿರಾಮಸ್ತಿರಿಗೂ, ಆಯಿತೊ ಏನಾದರೂ ಗಡಗಂಜಾಲ ಮಾಟಕೆ ಬ್ಯಾರೆ ನಾಲ್ಕುಮಠದವರು ನೋಡ್ತಾರೆ. ಅಪ್ಪಣೆಯಾದರೆ ಈಗ ಹೋಯಿತೇನೆ. ನನ್ನ ಮಗಳ ಮಗನಿಗೆ ಆಯಿತೋ ಈ ಹೊತ್ತು ಒಂದು ಮುಂಜಿ, ಆಯಿತೊ, ಮಾಡೋದೆಂತ ಸನ್ನಾಯ ಮಾಡಿದೆ. ಸ್ವಲ್ಪ ದೂರ ನಡಿಯೋಕೆ ಉಂಟು, ಆಯಿತೊ, ಸಲಾಂ."

ದಾರಿಯಲ್ಲಿ ತನಗೆ ಕಾಣಿಸಿಕೊಂಡು ಮಾತಾಡಿಸಿಕೊಂಡ ಮುದುಕಿಯು ಆದಿಯಾಗಿ ಮಾಪಳೆ ವರಿವಿಗೂ ಕೊತ್ವಾಲನು ಶಾಬಯ್ಯನ ತಿಳುವಳಿಕೆಯಿಂದ ನಡೆಸಿದ ಮೋಡಿಯೆಂಬ ಗುಟ್ಟು ತಿಳಿಯದ ವಿಮರ್ಶಾಧಿಕಾರಿಯು ಶಾಬಯ್ಯನು ಹೇಳಿದ ವೃತ್ತಾಂತ ಪೂರ್ಣವಾಗಿ ಸಿದ್ಧಾಂತವಾಯಿತೆಂಬ ಹರುಷದಿಂದ ಮುಗುಳು ನಗೆಮುಖದಿಂದ ಬಂದನು. ಆಗ ದಾರಿಯು ಬದಿಯಲ್ಲಿ ನರಿಗಳಂತೆ ಸಂದು ಮೂಲೆಯಲ್ಲಿ ನಿಂತು ಬಗ್ಗಿ ಸಲಾಂ ಮಾಡಿದ

ಆ ಉಭಯ ಮೂರ್ತಿಗಳನ್ನು ನೋಡಿ ಇವರಂಥಾ ಪ್ರಾಮಾಣಿಕತೆಯುಳ್ಳವರು ತನ್ನ ಕೈಕೆಳಗೆ ಸರ್ಕಾರದ ಕೆಲಸ ನೋಡುವವರಲ್ಲಿ ಬೇರೆ ಯಾರೂ ಇಲ್ಲ, ಸುಮ್ಮಗೆ ದುರ್ಮತಿಗಳು ಅವರನ್ನು ದೂರುವರೆಂದು ಭಾವಿಸಿ "ಯೇನಪ್ಪಾ ಯೇನಾದರೂ ಪತ್ತೆ ದೊರಿಯಿತೇ" ಎಂದು ಪ್ರಶ್ನೆ ಮಾಡಿದನು.

ಹಣವನ್ನು ಎಲ್ಲಿ ಹೆಂಗೆ ವಿನಿಯೋಗ ಪಡಿಸಿ ಬಿಟ್ರು! ಅವನ್ನು ಹೊತ್ತು ಕೊಂಡು ಹೋದ ಹೊಲೆಯರು ಯಾವ ಊರಲ್ಲಿ ಮಕ್ಕಳು ಮರಿ ಸಮೇತ ಅವಿತುಕೊಂಡು ಬಿಟ್ಟವರೆ? ಈ ಸಮಾಚಾರ ಯಂಥಾ ಪೈನ ನಡಿಸಿದರೂ ತಿಳಿದು ಬರುವದಿಲ್ಲ. ಆ ಹೆಂಗಸೂ ಅವಳ ಮಿತ್ರರೂ ಇನ್ನೆಷ್ಟು ಚಮತ್ಕಾರಿಕ ಜನರೋ ದೇವರೇ ಬಲ್ಲ. ಜಾವಂದರು ಖುದ್ದಾಗಿ ವಿಚಾರಣೆ ಮಾಡಿ ನಾವು ಕಳ್ಳರೊ ಸುಬಗರೊ? ವಾಗ್ದೇವಿಯನ್ನು ಕಾಪಾಡುವದಕ್ಕೆ ದುರಾ ಚಾರಕರಾಗಿದ್ದೇವೊ, ಮಠದಲ್ಲಿಯೇ ಮೃತನಿಗೆ ಹಾನಿ ಬಂತೂ ಎಂಬ ವಿಷಯದಲ್ಲಿ ನಿಷ್ಕರ್ಷೆ ಮಾಡಿದರೆ ಆಗುತ್ತಿತ್ತೆಂದು ಭೀಮಾಜಿಯು ಬಿನ್ನ ವಿಸಿದನು. "ನಾನೇನು ಅವಿಚಾರಿಯೇ! ನನ್ನ ಕೈಲಾಗುವ ಮಟ್ಟಿನ ಸಮಾಚಾರವನ್ನು ಪಡಕೊಳ್ಳುವದರಲ್ಲಿ ತಾತ್ಸಾರ ಮಾಡಿದವನಲ್ಲ. ನಡೆದ ವೃಂತ್ತಾಂತವೆಲ್ಲವೂ ನನ್ನ ತಿಳವಳಿಕೆಯಲ್ಲಿ ಸಂಪೂರ್ಣವಾಗಿ ಅದೆ. ಮಠ ದವರು ನಿರಾಪರಾಧಿಗಳೇ ಸರಿ. ಮೃತನ ಹೆಂಡತಿಯ ದೆಸೆಯಿಂದಲೇ ಈ ಖೂನಿಕೃತ್ಯ ನಡೆದು ಅವಳ ಮಿತ್ರರ ಆಪ್ತತೆ ಮತ್ತು ಚಮತ್ಕಾರದಿಂದ ಅದು ಅಡಗಲಿಕ್ಕೆ ಕಾರಣವಾಯಿತು. ಹಣವಿನ ವಿನಿಯೋಗ ಕುರಿತು ನಂಬಲಿಕ್ಕೆ ನಾಕಾಗುವ ವರ್ತಮಾನವು ನನಗೆ ಸಿಕ್ಕಿಯದೆ. ಇನ್ನು ಈ ವಿಚಾರದಲ್ಲಿ ಮಾಡತಕ್ಕದ್ದೇನಿಲ್ಲ. ಇಂಥಾ ಪ್ರಕರಣಗಳಲ್ಲಿ ಶವ ಸಿಕ್ಕದೆ ಇದ್ದರೆ ಶ್ರಮ ಪಡುವದು ನಿರರ್ಥಕವೇ. ನೀವು ಹೆಚ್ಚು ಪ್ರಯತ್ನಗಳನ್ನು ನಡೆಸುವದು ಇನ್ನೇನು ಅಗತ್ಯವೆಂದು ನನ್ನ ಮನಸ್ಸಿಗೆ ತೋಚುವದಿಲ್ಲ. ಸರ್ಕಾರದವರ ಕಡೆಯಿಂದ ಏನೂ ಕಸೂರಿ ನಡೆಯಲಿಲ್ಲ. ನಾನು ಒಳ ನೌಕರರ್‍ಯಾರಿಗೂ ದೂರುವುದಿಲ್ಲ." ವಿಮರ್ಶಾಧಿಕಾರಿಯು ಹೀಗೆಂದಾಗ ಸನ್ನಿಧಾನಕ್ಕೆ ಸಕಲ ವಿಷಯವೂ ಸರ್ವಜ್ಞನಂತೆ ಪರಾಂಬರಿಕೆಯಿರುವದರಿಂದ ತಮ್ಮ ಪಾದಸೇವಕರಾದ ನಮ್ಮ ಅನ್ನವೂ ಮರ್ಯಾದೆಯೂ ಉಳಿಯುವದಕ್ಕೆ ಅನುಕೂಲವಾಯಿತು. ಇನ್ನೊಬ್ಬರಾದರೆ "ಎತ್ತು ಕರುಹಾಕಿತೇ ಕೊಟ್ಟಿಗೆ ಯಲ್ಲಿ ಕಟ್ಟು" ಯೆಂತ ಹೇಳಿ ಬಿಟ್ಟು ನಮ್ಮನ್ನು ತ್ವಂಚಾ ಹಂಚ ಮಾಡಿ

ಬಿಡುತ್ತಿದ್ದರು. ಪುಣ್ಯವಂತರಾದ ಖಾವಂದರ ದಯೆಯು ಪ್ರಭಾವದಿಂದ ಹ್ಯಾಗಾದರೂ ಕಾಲಕ್ಷೇಪ ಮಾಡಿಕೊಂಡು ಇರುತ್ತೇನೆ. ಹೆಚ್ಚಿಗೆ ಅರಿಕೆ ಮಾಡಿಕೊಳ್ಳಲಿಕ್ಕೆ ಶಕ್ತನಲ್ಲವೆಂದು ಭೀಮಾಜಿಯು ಚಂದಾಗಿ ಹೊಗಳಿದ ಕೂಡಲೇ ಕೊಂಚ ಸ್ವಾತ್ರ್ಯಪ್ರಿಯನಾದ ವಿಮರ್ಶಾಧಿಕಾರಿಯು ಹೆಚ್ಚ್ತಳಪಟ್ಟು, ನೀವು ಸ್ವಸ್ಥಚಿತ್ತರಾಗಿರಿ, ಮನೆಗೆ ನಡೀರೆಂದು ಅಪ್ಪಣೆ ಕೊಟ್ಟು, ತನ್ನ ಮನೆಗೆ ಮರಳಿ ಕಿರಿದಿವಾನರ ಆನುಜ್ಞೆಗಳ ಸಮೇತ ಬಂದಿರುವ ತಖ್ಖೆಯನ್ನು ಕುರಿತು ಕೊತ್ವಾಲನನ್ನು ಕಾರಭಾರಿಯನ್ನು ಗಟ್ಟಿಯಾಗಿ ಆಘರಿಸಿ ಉತ್ತರ ಬರೆದನು.

ಆ ಜವಾಬನ್ನು ಕಿರಿದಿವಾನರಿಗೆ ಮುನಶಿಯು ಓದಿ ಹೇಳಿದನು. ನಂ ನಡಿ, ಇನ್ನೇನು ಅನುಮಾನ ಪಡತಕ್ಕ ಕಾರಣವಿಲ್ಲ. ಮೃತನ ಹೆಂಡತಿ ಕೆಟ್ಟ ಮುಂಡೆ, ಅವಳನ್ನು ಆನೆ ಕಾಲಿಗೆ ಕಟ್ಟಿ ತುಳಿಸಿ ಬಿಟ್ಟರೆ ಲೋಕದಲ್ಲಿ ಕೀರ್ತಿ ಬರುವದು. ಇರಲಿ, ಈಗಿನ ನ್ಯಾಯಶಾಸ್ತ್ರ ಬಹು ಸೂಕ್ಷ್ಮವಾಗಿರುವುದರ ದೆಶೆಯಿಂದ ಪೂರ್ವಕಾಲದ ನಡವಳಿಕೆಯು ಹಳೆದಾಗಿ ಮರ್ಯಾದೆ ಇಲ್ಲದೆ ಮೂಲೆ ಸೇರಿ ಹೋಯಿತು. ಶಿವಾ ಶಿವಾ" ಎಂದು ಕಿರಿ ದಿವಾನನು ಪಶ್ಚಾತ್ತಾಪ ಪಡುತ್ತಿರುವ ಸಮಯದಲ್ಲಿ ಶಿವನಾಮೋಚ್ಚಾರವು ಅರೆನಿದ್ರೆಗಣ್ಣಿನಿಂದ ಆಸನದಲ್ಲಿ ಕೂತಿರುತಿದ್ದ ಹಿರಿ ದಿವಾನನ ಕಿವಿಗೆ ಬಿತ್ತು. ಅವನು ಸತ್ವರ ಎರಡು ಕಿವಿಗಳಿಗೂ ಕೈ ಬೆರಳುಗಳನ್ನು ಸೇರಿಸಿ ಬಿಟ್ಟು ರಾಮನಾಮೋಚ್ಚಾರಣೆಯಿಂದ ಪ್ರಾಯಶ್ಚಿತ್ತ ಮಾಡಿಕೊಳ್ಳುವದರಲ್ಲಿ ಬಿದ್ದನು. ಅಂತೂ ಇಂತೂ ಮಠದಲ್ಲಿ ಶೃಂಗಾರಿಯ ದೆಸೆಯಿಂದ ನಡೆದ ಖೂನಿಯೊಂದು ದಕ್ಕಿಯೇ ಹೋಯಿತು. ನಿರಪರಾಧಿಯಾಗಿ ಪತಿಯ ದುರ್ಮರಣದ ಕಾರಣದಿಂದ ದುಃಖದಲ್ಲಿ ಮುಳುಗಿ ಕಷ್ಟ ಪಡುವ ಮೃತನ ಹೆಂಡತಿಯ ಮೇಲೆ ಮಿಥ್ಯಾಪವಾದ ಬಿದ್ದು ಅವಳಿಗೆ ದಪ್ಕೀರ್ತಿ ಬರುವದಾಯಿತು. ಇದೊಂದು ಪಟ್ಟಪುರರಾಜ್ಯಕ್ಕೆ ಬಂದ ಅರಿಷ್ಟವೆನ್ನಬೇಕೆಂದು ಸಂಭಾವಿತರನೇಕರು ತಮ್ಮಿಷ್ಟಕ್ಕೆ ಹೇಳಿಕೊಂಡರು. ತಖ್ಖೆಯ ಉದ್ದೇಶವು ನೆರವೇರಿತು. ಚತುರ್ಮಠದವರ ಮೇಲೆ ವಿಮರ್ಶಾಧಿಕಾರಿಗೆ ವೈರಭಾವ ಹೆಚ್ಚಾಗಿ ಮುಂದೆ ಅವರ ಕಾರ್ಯಗಳೆಲ್ಲಾ ಹಾನಿಯಾಗಲಿಕ್ಕೂ ಕುಮುದಪುರ ಮಠಾಧಿಪತಿಯ ಹಟವು ನಡೆಯುವದಕ್ಕೆ ಸರ್ವಾನುಕೂಲ ಸಿಕ್ಕುವದಕ್ಕೂ ಸುಲಭವಾಯಿತು.

ರಾಮದಾಸರಾಯನು ಶಾಬಯ್ಯನ ದುರ್ಭಾಷೆಯಿಂದ ಪ್ರಕೋಪ

ವೆಬ್ಬಿಸಲ್ಪಟ್ಟವನಾಗಿ ಕೊತ್ವಾಲನ ಮಧ್ಯಸ್ತಿಕೆಯನ್ನು ನಡೆಯಬಿಡದೆ ನೇಮ ರಾಜನ ಖೂನಿಯನ್ನು ಕುರಿತು ಮೃತನ ಹೆಂಡತಿಯಿಂದ ಹೊಂದಿದ ವಕಾಲತ್ತನ್ನು ಬಿಸುಟು ಹೋದನೆಂದು ಹಿಂದೆ ಹೇಳಿಯದೆ. ಈ ವಕೀಲನು ತಡೆಯದೆ ನೃಸಿಂಹಪುರಕ್ಕೆ ಹೋದನು. ಅಲ್ಲಿರುವ ಇಷ್ಟ ಮಿತ್ರರಿಗೂ ಮಠಾಧಿಪತಿಗೂ ನೇಮರಾಜನ ಮರಣದ ಸಮಾಚಾರವನ್ನೂ ಕುಮುದ ಪುರದಲ್ಲಿ ವಾಗ್ದೇವಿಯ ಪಕ್ಷವಾಗಿ ಮುಖ್ಯಾಧಿಕಾರಿಗಳು ನಡೆಸುವ ವಿಚಾ ರಣೆಯ ಚರಿತ್ರೆಯನ್ನೂ ವರ್ಣಿಸಿ ಬಳಿಕ ತನಗೆ ಶಾಬಯ್ಯನಿಂದ ಆದ ಅವಮರ್ಯಾದೆಯ ವಿಷಯದಲ್ಲಿ ಮುಯ್ಯಿಗೆಮುಯ್ಯಿ ತೀರಿಸಿಕೊಳ್ಳಲಿಕ್ಕೆ ಪ್ರತಿಜ್ಞೆ ಮಾಡಿಕೊಂಡಿರುವೆನೆಂದು ಪಟ್ಟಾಂಗ ಕೊಚ್ಚಿದನು. ಕಾರಭಾರಿಯ ದೂರು ಕಾಣಿಸಿ ಒಂದು ದೊಡ್ಡ ಮನವಿಯನ್ನುಬರೆದು ರಾಜದ್ವಾರಕ್ಕೆ ತಾನೇ ಹೋಗಿ ಅದನ್ನು ಕೊಟ್ಟುಬರುವೆನೆಂದು ಹೊರಟು ಖರ್ಚಿಗೆ ಕೊಂಚ ದ್ರವ್ಯಸಹಾಯವನ್ನು ಅಪೇಕ್ಷಿಸುವದಕ್ಕೆ ನೃಸಿಂಹ ಮಠಾಧಿಪತಿಗಳ ಮುಂದೆ ದಂಡಪ್ರಣಾಮ ಮಾಡಿ ನಿಂತುಕೊಂಡನು.

ಅವರು ಸಮಗ್ರ ಪೂರ್ವೋತ್ತರವನ್ನು ವಿಚಾರಿಸಿ ತಿಳಕೊಂಡು "ಅಯ್ಯಾ, ಹುಡುಗನೇ, ಅವಸರ ಮಾಡಿ ಸಿಕ್ಕಿಬೀಳಬೇಡಾ. ರಾಜಸೇವಕ ರು ವಿಷಜಂತುಗಳಂತೆ ತುಂಬಾ ನಂಜುಳ್ಳವರು. ಅವರ ಕೂಡೆ ಸೆಣಸಾಟ ಸಲ್ಲದು. ನಿನ್ನ ಉಪಜೀವನವೂ ಅವರ ಕೂಡೆ ಅನುನಯವಾಗಿ ನಡ ಕೊಳ್ಳುವ ಸುಗುಣದ ಮೇಲೆ ಪೂರ್ಣವಾಗಿ ಆಧರಿಕೊಂಡಿರುತ್ತಾ ಉನ್ಮಾದ ದಿಂದ ಪತಂಗದಂತೆ ಬೆಂಕಿಯಲ್ಲಿ ಬಿದ್ದು ಹಾನಿ ಪಡಬೇಡ. ಸಂದರ್ಭ ಮುಂದೆ ಸಿಕ್ಕಲಾರದೆನ್ನಬಹುದೇ? ಆಗ ದ್ವಿಗುಣವಾಗಿ ಮುಯ್ಯಿಗೆ ಮುಯ್ಯಿ ತೀರಿಸಿಕೋ ಬಹುದು. ತಾಳಿದವ ಬಾಳ್ಯಾನೆಂಬ ಅನುಭವಸಿದ್ಧವಾದ ವಚನ ಕೇಳರಿಯೆಯಾ?" ಎಂದು ಸನ್ಯಾಸಿಗಳು ರಾಮದಾಸನಿಗೆ ಬುದ್ಧಿ ಹೇಳಿದರು.

ಅವರ ಮುಖ್ಯ ಉದ್ದೇಶವು ರಾಮದಾಸನು ಕೇಳುವ ದ್ರವ್ಯವನ್ನು ಉಳಿಸಿಕೊಳ್ಳಬೇಕೆಂಬದಾದರೂ ಅವರು ಹೇಳಿದ ಬುದ್ಧಿಯು ಯಾರೂ ಸಮ್ಮತಿಸತಕ್ಕದ್ದಾದುದರಿಂದ ಅದನ್ನು ಅನುಸರಿಸುವದು ಉತ್ತಮವೆಂದು ರಾಮದಾಸನಿಗೆ ಹಲವರು ಹೇಳಿದರು. ಪರಂತು ಅವನು ಕೇಳದೆ ಉಳಿದ ಮೂವರು ಮಠಾಧಿಪತಿಗಳನ್ನು ಕಾಡುವುದಕ್ಕೆ ಹೋದ ವರ್ತಮಾನವನ್ನು

ತಿಳಿದು, ಅವರೆಲ್ಲರಿಗೂ ಅಂತರಂಗದಿಂದ ತಮ್ಮ ಮನೋಗತವನ್ನು ನೃಸಿಂಹದ ಮಠದ ಅಧಿಪತಿಗಳು ತಿಳಿಸಿದ ದೆಸೆಯಿಂದ ಅವರ್‍ಯಾರೂ ಇವನ ಹುಳಿ ರಗಳೆಗೆ ಕಿವಿಕೊಡದೆ ಹೋದರು. ವಕೀಲನು ಕುದಿಯುವ ಕ್ರೋಧದಿಂದ ಮರಳಿ ಮನೆ ಸೇರಿ ಕುಮುದಪುರದ ಸನ್ಯಾಸಿಯು ಪಕ್ಷಕ್ಕೆ ಸೇರಿ ಚತುರ್ಮಠದವರನ್ನು ಕುಣಿಸಿ ಬಿಡುವೆನೆಂದು ಶಪಥ ಹಾಕಿಕೊಂಡನು. ಇದು ಆ ಮಠದವರ ಕಿವಿಗೆ ಬಿತ್ತು. ಅವರೆಲ್ಲರೂ ಒಟ್ಟುಗೂಡಿ ಅವನನ್ನು ಜಾತಿಯಿಂದ ತೆಗೆದಿಡಲಿಕ್ಕೆ ಉದ್ಯುಕ್ತರಾದರು.

ಉತಾವಳಿಯಲ್ಲಿ ಪ್ರಥಮವೀಳ್ಯದವನಾದ ರಾಮದಾಸನ ಪ್ರತಿಷ್ಠೆಯು ವ್ಯರ್ಥವಾಗಿ ಕೆಟ್ಟು ಇವನ ಭವಿಷ್ಯವೇ ಹಾಳಾಗುವದೆಂಬ ಹೆದರಿಕೆಯಿಂದ ಮುದುಕನಾದ ಅವನ ತಂದೆಯು ಮಗನನ್ನು ಸಂಗಡ ಕಟ್ಟಿಕೊಂಡು ಅವನ ಮೇಲೆ ಮುನಿದ ಸನ್ಯಾಸಿಗಳಿಗೆ ಪಾದಾಕ್ರಾಂತನಾಗಿ ತನ್ನ ವೃದ್ಧಾಪ್ಯವನ್ನು ಲಕ್ಷಿಸಿ ಅವನನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಕೂಂಚ ವಾಘಾಟವಾದ ಮೇಲೆ ಇನ್ನು ಮುಂದೆ ನಾಲ್ಕು ಮಠದವರ ಮೇಲೆ ಭಕ್ತಿಯಿಂದ ನಡಕೊಂಡರೆ ಶ್ರೇಯಸ್ಸೂ ಧನ ಲಾಭವೂ ದೊರೆಯುವದು. ಅಡ್ಡಾದಿಡ್ಡಿಯಾಗಿ ನಡಕೊಂಡರೆ ತೀರಾ ತ್ಯಜಿಸಿ ಬಿಡೋಣಾದೀತೆಂದು ಅವರು ಎಚ್ಚರಿಸಿ ಬಿಟ್ಟರು. ಆದರೆ ಅವನ ಮೇಲೆ ಅವರಿಗೆ ವಿಶ್ವಾಸವು ಸಹಜವಾಗಿ ಕಡಿಮೆಯಾಯಿತು. ಮುಖ್ಯತ ಉಪದ್ರಕಾರಿ ಮಾತ್ರವಲ್ಲ, ತಮ್ಮ ಗುಟ್ಟು ಸ್ವಲ್ಪವಾದರೂ ತಿಳಿದಿರುವವನಾದುದರಿಂದ ಅವನು ತಮ್ಮ ಎದುರುವಾದಿಯ ಪಕ್ಷಕ್ಕೆ ಸೇರುವದು ಪ್ರಶಸ್ತವಲ್ಲವೆಂದು ತೋರಿದ ಕಾರಣ ಅವರು ಅವನನ್ನು ತಮ್ಮ ಕಡೆಯ ವಕೀಲನೆಂದು ಹೇಳಿಕೊಳ್ಳಲಿಕ್ಕೆ ಬಿಟ್ಟರೂ ಮುಂದೆ ನಡಿಯಲಿಕ್ಕಿರುವ ದೊಡ್ಡ ದೊಡ್ಡ ವ್ಯವಹರಣೆಗಳಲ್ಲಿ ಈ ಕೊರಳು ಕೊಯ್ಕನೊಬ್ಬನನ್ನೇ ನಂಬಿದರೆ ತಮ್ಮ ಕಾರ್ಯಗಳೆಲ್ಲಾ ಕಾಕತ್ರವಾಗಿ ಹೋಗುವವೆಂಬ ಭಯದಿಂದ ಕುಮುದಪುರದಲ್ಲಿ ವಾಸವಾಗಿರುವ ಹೆಸರುಹೋದ ವಕೀಲ ಕೋದಂಡಪಾಣಿರಾಯನನ್ನು ತಮ್ಮ ಕಡೆಯಿಂದ ವ್ಯವಹರಿಸಲಿಕ್ಕೆ ನೇಮಿಸಿ ಅವನ ಸಂಗಡ ರಾಮದಾಸನು ಕೂಡಿ ನಡೆಯಬೇಕೆಂದು ಆಜ್ಞಾಪಿಸಿದರು.

ಇಲ್ಲಿ ವಿವರಿಸುವ ಚರಿತ್ರೆಯ ಮುಂದಿನ ಅನುಸಂಧಾನವನ್ನು ವಾಚಕರು ಚೆನ್ನಾಗಿ ತಿಳಿಯುವದಕ್ಕೆ ಸಂದರ್ಭವಾಗುವಂತೆ ಇದರ ಮೊದಲೇ

ಪ್ರಸ್ತಾಪಿಸಲ್ಪಟ್ಟ ಪಂಚಮುಠಗಳ ಉತ್ಪತ್ತಿಯನ್ನು ಕುರಿತು ಐತಿಹ್ಯವನ್ನು ಸಂಕ್ಷೇಪವಾಗಿ ತಿಳಿಸುವ ಅಗತ್ಯವಿದೆ.

ಪ್ರಾಚೀನ ಕಾಲದಲ್ಲಿ ವಸಂತನಗರದ ಮೃದಂಗವೇಟಿ ಎಂಬ ಉಪ ನಗರದಲ್ಲಿ ಶ್ರೀಧರಭಟ್ಟನೆಂಬ ಪರಮಭಕ್ತನಾದ ಗೀರ್ವಾಣ ಪಂಡಿತ ನೊಬ್ಬನು ಖ್ಯಾತಿವಂತನಾಗಿ ಬದುಕಿಕೊಂಡಿದ್ದನು. ಅವನಿಗೆ ಹುಟ್ಟಿದ ಗಂಡು ಮಕ್ಕಳಲ್ಲಿ ಚೊಚ್ಚಲ ಮಗ ಶಾರ್ಙ್ಗಪಾಣಿ ಎಂಬ ಯೌವನಸ್ಥನು ಕಡುಮೂರ್ಖನಾಗಿದ್ದನು. ಅವನು ಹೆತ್ತವರ ಮಾತನ್ನು ಒಂದು ಸಲವಾದರೂ ಮನ್ನಿಸದೆ ಒಬ್ಬನಿಂದಾದರೂ ಒಳ್ಳೆಯವನೆನ್ನಿಸಿಕೊಳ್ಳದೆ ಸಹಿಸ ಕೂಡದ ಲೂಟಿಯಲ್ಲಿ ಅಮರಿಕೊಂಡು ಕಾಲ ಕಳೆಯುತ್ತಿದ್ದನು ಅವನ ಬುದ್ಧಿಯನ್ನು ತಿದ್ದುವದಕ್ಕೆ ತಂದೆಯು ನಡೆಸಿದ ಹಲವು ಯುಕ್ತಿಗಳು ನಿರರ್ಥಕವಾದ ದೆಸೆಯಿಂದ ಅವನು ಮಗನ ಗೊಡವೆಯನ್ನು ಬಿಟ್ಟು ಸುಮ್ಮಗಾದನು.

ಈ ಹುಡುಗನಿಗೆ ಷೋಡಶ ವರ್ಷ ಪ್ರಾಯ ತುಂಬುವ ಸಮಯ ಅವನು ಮಿತಿಮೀರಿ ಉಪದ್ರವಕಾರಿಯಾದುದರಿಂದ ಅವನನ್ನು ಆ ಊರಿನಿಂದ ಹೇಗೆ ಹೊರಡಿಸಿಬಿಡೋಣ ಎಂಬ ವಿಚಾರವು ಅಲ್ಲಿಯ ನಿವಾಸಕರಿಗೆ ಗಲಿಬಿಲಿಯನ್ನು ಹುಟ್ಟಿಸಲಿಕ್ಕೆ ಹತ್ತಿತು. ಒಂದಾನೊಂದು ದಿನ ಅಕಸ್ಮಾತ್ತಾಗಿ ಶಾರ್ಙ್ಗಪಾಣಿಯು ವಿಹಾರಾರ್ಥವಾಗಿ ಸಣ್ಣದೊಂದು ವನವನ್ನು ಪ್ರವೇಶಿಸಿ ತನ್ನ ಚಂಚಲವಾದ ಕೈಗಳಿಗೆ ಯಾವ ಉದ್ಯೋಗವನ್ನು ಕೊಡುವದೆಂದು ತಿಳಿಯದೆ ಅತ್ತಿತ್ತ ನೋಡಿಕೊಂಡಿದ್ದನು. ಒಂದು ಮರದ ಕೊಂಬೆಯಲ್ಲಿ ಚಲೋದಾದ ಪಕ್ಷಿಗಳ ಗೂಡೊಂದು ಅವನ ದೃಷ್ಟಿಗೆ ಬಿತ್ತೇಬಿತ್ತು. ಆಗ ಅವನ ದುಸ್ವಭಾವವು ಅವನನ್ನು ಸುಮ್ಮಗಿರಬಿಡಲಿಲ್ಲ.

ಅರೆ ಘಳಿಗೆ ತಾಮಸ ಮಾಡದೆ ಅವನು ಆ ಗೂಡನ್ನು ಎಳೆದು ಕೆಳಗೆ ಬಿಸುಟು ಅದರ ಶೋಧವನ್ನು ಮಾಡಲಾರಂಭಿಸಿದನು. ಅದರೊಳಗೆ ಇರುತ್ತಿದ್ದ ಹೆಣ್ಣು ಗಂಡು ಪಕ್ಷಿಗಳು ಜೀವದಾಶೆಯಿಂದ ಹಾರಿಹೋದುವು. ಸಂಪೂರ್ಣವಾಗಿ ಬೆಳೆದ ಮೊಟ್ಟೆಗಳು ಅದರಲ್ಲಿಯೇ ಇದ್ದವು. ಅವುಗಳೆಲ್ಲಾ ಕಲ್ಲಿನ ಮೇಲೆ ಬಿದ್ದು ಚಾನಾಹಾನಿಯಾದವು ನಾಶವಾದ ಮೊಟ್ಟೆಗಳನ್ನು ನೋಡಿ ಮೂಕ ಪ್ರಾಣಿಗಳಾದ ಉಭಯ ಪಕ್ಷಿಗಳು ಪಡುವ ಶೋಕವಹ್ನಿಯು ಒಡನೆ ಅವನ ಜ್ಞಾನಚಕ್ಷುವನ್ನು ತೆರೆಯಿತು. ವೈರಾಗ್ಯವು ಪೂರ್ಣವಾಗಿ

ಅವನ ಮನಸ್ಸಿನಲ್ಲಿ ನೆಲೆಯಾಯಿತು. ಇನ್ನು ಧ್ಯಾನಸ ಮಾಡದೆ ಮನೆಗೆ ಮರಳಿ ಮಾತಾಪಿತೃಗಳ ಸನ್ನಿಧಿಯಲ್ಲಿ ನಿಂತು ತೀರ್ಥಾಟಣೆಗೆ ಅಪ್ಪಣೆಯನ್ನು ಬೇಡಿಕೊಂಡನು. ವಿನೋದಕರವಾಗಿ ಏನೋ ಅಂದುಕೋಧಾನೆ ಎಂಬ ಊಹೆಯಿಂದ "ಸರಿ ಸರಿ ಒಳ್ಳೇ ಮಾತು" ಎಂದು ಹಾಸ್ಯಕರವಾಗಿ ಒಂದು ಉತ್ತರವು ತಂದೆಯ ಬಾಯಿಯಿಂದ ಹೊರಟಿತು. ತಾಯಿಯು ಮೌನ ತಾಳಿದಳು.

"ಅಪ್ಪಣೆ" ಎಂದು ಶಾರ್ಙ್ಗಪಾಣಿಯು ಹೆತ್ತವರಿಗೆ ಭಕ್ತಿಯಿಂದ ಅಡ್ಡ ಬಿದ್ದು ಮನೆಗೆ ಬೆನ್ನುಹಾಕಿದನು. ಅವನು ಊರಿನಲ್ಲೆಲ್ಲಿಯೂ ನಿಲ್ಲದೆ ಅರಣ್ಯಗಳನ್ನು ಹೊಕ್ಕು ಕಂದಮೂಲಾದಿಗಳಿಂದಲೂ ಹಣ್ಣು ಹಂಪಲು ಗಳಿಂದಲೂ ಕ್ಷುಧೆಯನ್ನು ನಿವಾರಣೆ ಮಾಡಿಕೊಳ್ಳುತ್ತಾ ನಾನಾ ತೀರ್ಥ ಯಾತ್ರೆಗಳನ್ನು ಮಾಡಿ ಬದರಿಕಾಶ್ರಮಕ್ಕೆ ತಲಪಿದನು. ಬದರಿ ನಾರಾಯಣ ದೇವರ ಸನ್ನಿಧಿಯಲ್ಲಿ ಏಕಾಗ್ರಚಿತ್ತದಿಂದ ಉಗ್ರತಪಸ್ಸನ್ನು ಮಾಡುವ ಕಾಲ ದಲ್ಲಿ ಅವನ ಭಕ್ತಿಗೆ ನಾರಾಯಣಮೂರ್ತಿಯು ಒಬ್ಬ ವ್ಯಾಧನ ರೂಪವನ್ನು ಧರಿಸಿ ಬೇಟೆಯಾಡುವ ರಭಸಕ್ಕೆ ತಪಸ್ವಿಯು ಒಮ್ಮಿಂದೊಮ್ಮೆ ಕಣ್ಣು ತೆರೆದು ನೋಡಿದನು. ವ್ಯಾಧನು ಕೈಯಲ್ಲಿ ಒಂದು ಚಿಕ್ಕ ಪಕ್ಷಿಯನ್ನು ಹಿಡಿದುಕೊಂಡು ಅದರ ಕೊರಳನ್ನು ಕ್ರೂರವಾಗಿ ಅಮುಕುವದಕ್ಕೆ ಹತ್ತಿದನು. "ಏನಿಷ್ಕರುಣಿ! ನನ್ನ ಕಣ್ಣು ಮುಂದೆ ನಿಲ್ಲದೆ ನಡೆದು ಬಿಡು. ಇಲ್ಲವಾದರೆ ನಿನ್ನನ್ನು ಈಗಲೇ ಶಪಿಸಿಬಿಡುವೆನು" ಎಂದು ಮಹಾ ಸಿಟ್ಟಿನಿಂದ ಬ್ರಾಹ್ಮಣನು ಗರ್ಜಿಸಿದನು. ನಾರಾಯಣನು ತನ್ನ ದಿವ್ಯ ರೂಪವನ್ನು ತೋರಿಸಿ ನಸುನಗೆಯಿಂದ--"ಇಗೋ ಪ್ರಸನ್ನನಾದೆ" ಎಂದು ನುಡಿದನು. ಶಾರ್ಙ್ಗಪಾಣಿ ಸಾಷ್ಟಾಂಗವೆರಗಿ ತಾನು ಸಿಟ್ಟಿನ ವಶವಾದ ಅಪರಾಧವನ್ನು ಕ್ಷಮಿಸಬೇಕೆಂದು ಪಾದಾಕ್ರಾಂತನಾದನು. ನಾರಾಯಣನು ಏನು ಅಪ್ಪಣೆ ಕೊಟ್ಟನೆಂದರೆ:—

"ಶಾರ್ಙ್ಗಪಾಣಿಯೇ! ನಿನ್ನ ತಪಸ್ಸಿಗೆ ಮೆಚ್ಚಿರುವೆನು. ಪರಂತು ಷಡ್ವೈರಿಗಳಲ್ಲಿ ಕ್ರೋಧಒಂದನ್ನಲ್ಲದೆ ಉಳಿದವುಗಳನ್ನು ಜಯಿಸಿದೆ. ನಿನ್ನ ಪೂರ್ವಜನ್ಮ ಕೃತಪಾಪವು ಬಲಿತ ಕಾರಣ ಕ್ರೋಧವು ನಿರ್ಗತವಾಗಲಿಲ್ಲ. ಇದಕ್ಕಾಗಿ ಇನ್ನು ಸಂತಪ್ತನಾಗದಿರು ಈಗಲೇ ಈ ಸ್ಥಳವನ್ನು ಬಿಟ್ಟು ನೈಮಿಷಾರಣ್ಯಕ್ಕೆ ನಡೆ. ಅಲ್ಲಿ ಸಮಸ್ತ ಋಷಿಗಳ ದರ್ಶನವು ದೊರೆಯುವುದು. ಅಲ್ಲಿಯೇ ನಿನಗೆ ಸನ್ಯಾಸವೂ ಪ್ರಾಪ್ತಿಯಾಗುವದು. ಬಳಿಕ ಷಟ್ಪುರನಗರಕ್ಕೆ

ಮರಳು. ಅಲ್ಲಿ ನೀನು ಮಾಡತಕ್ಕ ಕಾರ್ಯವಾವುದೆಂದು ಕೇಳು ಪಂಚ ವೈರಿಗಳನ್ನು ನೀನು ಸಂಪೂರ್ಣವಾಗಿ ದಮನ ಮಾಡಿದ ತಾರ್ಕಣೆಗಾಗಿ ಐದು ಮಠಗಳನ್ನು ಸ್ಥಾಪಿಸು. ಪ್ರತಿ ಒಂದು ಮಠಕ್ಕೆ ಒಂದು ಆಶ್ರಮವನ್ನು ಕೊಡು; ಅವುಗಳ ವೃದ್ಧಿಯ ಉಪಾಯವನ್ನು ಜಾಗ್ರತೆಯಿಂದ ನಡಿಸು. ನನ್ನ ಪ್ರೀತ್ಯರ್ಥವಾಗಿ ಒಂದು ದೇವಾಲಯವನ್ನು ಕಟ್ಟಿ ಅದರ ವಿನಿಯೋಗ ಕ್ಕೋಸ್ಕರ ಶಾಶ್ವತವಾದ ಅಚ್ಚುಕಟ್ಟು ಮಾಡಿ ಬಿಡು. ಈ ದೇವಾಲಯವನ್ನು ಪಂಚ ಮಠದವರು ತಮ್ಮ ಮೂಲಾಧಾರವೆಂದು ತಿಳಕೊಂಡು ನಡಕೊಳ್ಳಲಿ. ನನ್ನ ಆಜ್ಞೆಯನ್ನು ಅನುವರ್ತಿಸಿ ಷಡ್ವೈರಿ ದಮನಾಚಾರ್ಯನೆಂಬ ನಾಮ ವನ್ನು ಧರಿಸಿ ಸ್ವಮತಾಭಿಮಾನಭರಿತನಾಗಿ ಕೀರ್ತಿಯನ್ನು ಗಳಿಸಿ ಅಂತ್ಯದಲ್ಲಿ ನನ್ನಲ್ಲಿ ಐಕ್ಯತೆಯನ್ನು ಹೊಂದುವಿ.” ಹೀಗೆಂದು ನಾರಾಯಣನು ಅಂತ ರ್ಧಾನನಾದನು.

ಶ್ರೀಮನ್ನಾರಾಯಣನ ಅಪ್ಪಣೆಯನ್ನು ಪೂರ್ಣವಾಗಿ ಅನುಸರಿಸಿ ಸನ್ಯಾಸವನ್ನು ಹೊಂದಿದ ತಪಸ್ವಿಯು ಷಡ್ವೈರಿ ದಮನಾಚಾರ್ಯನೆಂಬ ಹೆಸರಿನಿಂದ ಷಟ್ಪುರ ನಗರವನ್ನು ಪ್ರವೇಶಿಸಿ ಪಂಚಮಠಗಳನ್ನು ಸ್ಥಾಪಿಸಿ ದನು. ಅವುಗಳ ಅಭಿವೃದ್ಧಿಗೋಸ್ಕರ ಬಹು ಜಾಗ್ರತೆಯಿಂದ ಸೂತ್ರಗಳನ್ನು ರಚಿಸಿ ಕಾಳಿಕಾನದಿಯ ಸಂಬಂಧ ಪುಣ್ಯಕ್ಷೇತ್ರವಾದ ಕುಮುದಪುರದಲ್ಲಿ ಆದಿನಾರಾಯಣ ಮೂರ್ತಿಯನ್ನು ಪ್ರತಿಷ್ಠೆಮಾಡಿ ಆ ಹೆಸರಿನ ದೇವಾಲಯ ವನ್ನು ಕಟ್ಟಿಸಿ ಅಮಿತ ಕೀರ್ತಿಯನ್ನು ಪಡೆದನು. ಈ ಆಚಾರ್ಯನಿಂದ ಏರ್ಪಡಿಸೋಣಾದ ಅನೇಕ ವಿಧಿಗಳಲ್ಲಿ ಪ್ರಕೃತದ ಅನುಸಂಧಾನಕ್ಕೆ ಪ್ರಾಸಂಗಿಕವಾಗಿರುವದೊಂದನ್ನು ಇಲ್ಲಿ ವಿವರಿಸೋಣ.

ಪ್ರತಿ ಒಂದು ಮಠದಿಂದ ಆಶ್ರಮಹೊಂದಿದ ಶಿಷ್ಯನು ಗುರುಮಠದಲ್ಲಿ ಗುರುವಿನಾಜ್ಞೆಗನುಸಾರವಾಗಿ ಶಿಕ್ಷಣವನ್ನು ಹೊಂದಿದ ತರುವಾಯ ದಿಗ್ವಿ ಜಯಕ್ಕೆ ಹೊರಡುವ ಮುಂಚೆ ಆದಿನಾರಾಯಣ ದೇವಾಲಯಕ್ಕೆ ಚಂದ್ರ ತಾರಾಬಲನೋಡಿ ಉತ್ತರಾಯಣ ಪ್ರಾರಂಭದಲ್ಲಿ ಆಡಂಬರದಿಂದ ಪ್ರವೇಶಿಸ ಬೇಕು. ಮಹೋತ್ಸವಗಳನ್ನು ನಿಯಮಿತ ಕಾಲಾಂತರಗಳಲ್ಲಿ ನಡೆಸಿ ಅಲ್ಲಿ ಒಂಭತ್ತುಮಾಸಗಳ ಪರಿಯಂತರ ದೇವರ ಸನ್ನಿಧಿಯಲ್ಲಿ ನೇಮಮಾಡಿ ಕೊಂಡಿದ್ದ ಬಳಿಕ ಒಂದು ವರ್ಷದೊಳಗೆ ದಿಗ್ವಿಜಯವನ್ನು ಮಾಡಿ ಮರಳಿ ಮಠವನ್ನು ಪ್ರವೇಶಿಸಿ ಶಿಷ್ಯ ಸಮೂಹದ ಮೇಲೆ ವಿಚಾರಸಚಾರ ನಡೆಸ

ಬಹುದು.

ಈ ವಿಧಿಯನ್ನು ಕೈಕೊಳ್ಳದ ಸನ್ಯಾಸಿಯು ಮಠಾಧಿಪನಾಗಿ ಆಳುವುದಕ್ಕೆ ಸರ್ವಥಾ ಅರ್ಹನಾಗನು. ಇಂಥ ದೊಡ್ಡ ಇಕ್ಕಟ್ಟಿನಿಂದ ಪಾರಾಗುವ ಮೊದಲು ಒಬ್ಬ ಸನ್ಯಾಸಿಯು ತನ್ನ ಗುರುವಿನ ಉತ್ತರಾಧಿಕಾರಿಯಾಗಲಿಕ್ಕೆ ಸಂದರ್ಭವಿಲ್ಲವಷ್ಟೆ. ಹೀಗಾಗಿ ಸೂರ್ಯನಾರಾಯಣನನ್ನು ದಣಿಸಲಿಕ್ಕೆ ಶತ್ರುಗಳಿಗೆ ಪರಮೋತ್ತಮವಾದ ಅನುಕೂಲ ಸಿಕ್ಕಿತು.

ಸೂರ್ಯನಾರಾಯಣನ ಆಶ್ರಮವನ್ನು ವಿರೋಧಿಸುವ ನಾಲ್ಕು ಮಠದವರು ಅದನ್ನು ಸಮ್ಮತಿಸದೆ ಹೊಸ ಆಶ್ರಮವನ್ನು ಕೊಡಿಸಿರುವ ಪ್ರಯುಕ್ತ ಸೂರ್ಯನಾರಾಯಣನನ್ನು ಗುರುಗಳ ಸಂಗಡವಾಗಲೀ ಪ್ರತ್ಯೇಕವಾಗಿಯಾಗಲೀ ಆ ದೇವಸ್ಥಾನ ಪ್ರವೇಶಿಸಲಿಕ್ಕೆ ಯತ್ನಿಸುವ ಕಾಲದಲ್ಲಿ ದೊಡ್ಡದೊಂದು ಜಗಳ ಹತ್ತುವ ಸಂಭವವು ಒದಗದೇ ಇರದು. ಅದರ ನಿವಾರಣೆಯ ಹಾಗೂ ತಮ್ಮ ತಮ್ಮ ಹಟ ನಡಿಯುವ ಉಪಾಯವನ್ನು ಮಾಡುವದಕ್ಕೆ ಉಭಯಪಕ್ಷದವರು ಪವಿತ್ರಕರ್ತರಾದರು. ಯಾಕೆಂದರೆ ಕುಮುದಪುರದ ಮಠದ ಶಿಷ್ಯನು ಆದಿನಾರಾಯಣಾಲಯವನ್ನು ಪ್ರವೇಶಿಸಬೇಕಾದ ಕಾಲವು ಬಹಳ ದೂರವಿರಲಿಲ್ಲ. ಇತ್ತಂಡದವರು ತಮ್ಮ ಪಂಥವನ್ನು ನಡೆಸುವುದಕ್ಕೆ ನಾನಾ ಉಪಾಯಗಳನ್ನು ರಚಿಸುವುದರಲ್ಲಿ ಬಿದ್ದರು. ಆದರೆ ಚಂಚಲನೇತ್ರರಿಗೆ ಯಾವ ಭಯವೂ ಇರಲಿಲ್ಲ. ಕಾರಭಾರಿಯೂ ಕೊತ್ವಾಲನೂ ಸೂರ್ಯಚಂದ್ರರಂತೆ ತಮ್ಮ ಒತ್ತಾಸೆಯ ಕಾಂತಿಯನ್ನು ಸಂಪೂರ್ಣವಾಗಿ ಕುಮುದಪುರದ ಮಠದ ಮೇಲೆಯೇ ಪಸರಿಸುತಿದ್ದರು.

## ನಲುವತ್ತೆಂಟು

ದೇವಾಲಯದ ಪ್ರವೇಶವು ಚಂಚಲನೇತ್ರರು ಚಾಕರರ ಪರಿಮುಖ ತನ್ನ ಕಡೆಯಿಂದ ಆಗ ಬೇಕಾಗಿರುವ ಸಾಹಿತ್ಯಗಳನ್ನು ಒದಗಿಸಿ ದೇವಾಲಯದ ಆಯಾ ಠಾವಿನಲ್ಲಿ ಇರಿಸುವುದಕ್ಕೆ ಪೂರ್ವಾರಭ್ಯ ನಡೆದು ಬಂದ ಪದ್ಧತಿಗನುಗುಣವಾಗಿ ಪ್ರಾರಂಭಮಾಡೋಣಾಯಿತು. ಅದನ್ನು ವಿರೋಧಿಸಬೇಕೆಂದು ಶತ್ರು ಪಕ್ಷದವರು ದೇವಾಲಯದ ಭಂಡಾರಿಗೆ ಬೋಧಿಸಿ ಎಷ್ಟು ಪ್ರಯತ್ನಮಾಡಿದರೂ ಭೀಮಾಜಿಯ ಮತ್ತು ಕಾರಭಾರಿಯ ಹೆದರಿಕೆಯಿಂದಲೂ ಕುಮುದಪುರದ ಮಠಾಧೀಶರ ಹಣದ ಬಲದಿಂದಲೂ ಜಯ

ಪ್ರಾಪ್ತಿಯಾಗಲಿಲ್ಲ. ಮುಂದಾದರೂ ಜಯ ಸಿಕ್ಕುವುದಕ್ಕೋಸ್ಕರ ಆಲೋಚನೆ ಮಾಡುವುದಕ್ಕೆ ವಕೀಲ ಕೋದಂಡಪಾಣಿರಾಯನನ್ನು ನೃಸಿಂಹಪುರದ ಮಠದಲ್ಲಿ ಬೇರೆ ಮೂರು ಮಠದವರು ಒಟ್ಟುಕೂಡಿ ಕರಸಿದರು. ರಾಮದಾಸನು ಹೊಸವಕೀಲನಾಗಿ ಚುರುಕು ಬುದ್ಧಿಯುಳ್ಳ ಯೌವನಸ್ಥನಷ್ಟೇ. ಅವನ ಆಲೋಚನೆ ಮುನ್ನಾ ಕೇಳಿಬಿಡುವುದಕ್ಕೆ ಕೋದಂಡಪಾಣಿರಾಯಗೆ ತುಂಬಾ ಮನಸ್ಸಿತ್ತು. ರಾಮದಾಸನು ಹಾಗೆಯೇ ಆಸೆಪಡುತ್ತಿದ್ದನು. ನಿನ್ನ ಅಭಿಪ್ರಾಯ ಹ್ಯಾಗಯ್ಯಾ ಎಂದು ಕೋದಂಡಪಾಣಿಯು ಪ್ರಶ್ನೆಮಾಡೋಣ ಚಂಚಲನೇತ್ರರಾಗಲೀ ಅವರ ಶಿಷ್ಯನಾಗಲೀ ಆದಿನಾರಾಯಣಾಲಯ ಪ್ರವೇಶವಾಗದಂತೆ ಹುಕುಂ ಮಾಡಬೇಕಾಗಿ ರಾಜಾಸ್ಥಾನದಲ್ಲಿಯೇ ಪ್ರಥಮತಾ ದಾವಾ ಹಾಕಿಬಿಡಬೇಕೆಂದನು.

ಈ ಪ್ರಬೋಧವು ಹಿರೇ ವಕೀಲನಿಗೆ ಒಡಂಬಡಿಕೆಯಾಗಲಿಲ್ಲ. ಒಂದು ವೇಳೆ ಭೀಮಾಜಿಯೂ ಶಾಬಯ್ಯನೂ ಜನಜನಿತವಾಗಿ ವಾಗ್ದೇವಿಯ ಪಕ್ಷವನ್ನು ಹಿಡಿದು ನೀತಿಯನ್ನು ಮಾಡವಲ್ಲರೆಂದು ತಿಳಕೊಳ್ಳುವದಕ್ಕೆ ಆಧಾರವಿರುವದೆಂದು ತಿಳಕೊಂಡರೂ ನೀತಿಶೀಲನಾದ ವಿಮರ್ಶಾಧಿಕಾರಿಯ ಮೇಲೆ ಯಾರೊಬ್ಬರೂ ಒಂದು ಅಪವಾದವನ್ನು ಹಾಕುವದು ತೀರಾ ಪೋಕಾಟಿಕೆಯೆನ್ನಬೇಕು. ಅವನ ಮೇಲೂ ನಿರ್ನಿಮಿತ್ತವಾಗಿ ದೋಷಕರವಾದ ಮಾತುಗಳನ್ನು ಆಡಲಿಕ್ಕೆ ಸಂಭಾವಿತನಾದ ಯಾವನೂ ಒಪ್ಪಲಾರನು. ಆದಕಾರಣ ಚಂಚಲನೇತ್ರರು ವಾಗ್ದೇವಿಯ ಮಾಯಾಜಾಲದಲ್ಲಿ ಸಿಲುಕಿ ಬಿದ್ದ ಬಳಿಕ ಇದುವರೆಗೆ ವೈಷ್ಣವ ಮಂಡಲಿಯ ಮತಾಭಿಮಾನಕ್ಕೆ ವಟ್ಟ ತರುವ ಹಾಗಿನ ದುರಾಚಾರದಲ್ಲಿ ನಡೆದು ಲೋಕನಿಂದೆಗೆ ಪಾತ್ರರಾದ ಪ್ರಸಂಗ ಹಾಗಿರಲಿ. ವಾಗ್ದೇವಿಯಲ್ಲಿ ತನಗೆ ಹುಟ್ಟಿದ ಹುಡುಗನನ್ನೇ ತನ್ನ ಉತ್ತರಾಧಿಕಾರಿಯಾಗಿ ಆರಿಸಿ ಅವನಿಗೆ ಆಶ್ರಮ ಕೊಟ್ಟ ದುಷ್ಕೃತ್ಯಕಿಂತ ಘೋರವಾದ ಪಾಪವು ಮತ್ತಾವುದು? ಈ ದೆಸೆಯಿಂದ ಆ ಪತಿತ ಸನ್ಯಾಸಿಯು ಶಿಷ್ಯನ ಸಮೇತ ಅಥವಾ ವಿರಹಿತವಾಗಿ ದೇವಾಲಯವನ್ನು ಪ್ರವೇಶಿಸುವದಕ್ಕೆ ಪ್ರಯತ್ನಿಸಿದರೆ ಅಂಥಾ ಕಾಲದಲ್ಲಿ ವೈಷ್ಣವಪರರಾದ ಸಕಲ ಜನ ಸಮೂಹವು ತಮ್ಮ ಮತದ ಮೋಹದಿಂದ ಅಡ್ಡ ತಡಿಯುವದಕ್ಕೆ ಭೀತಿ ಪಡಲಾರರು. ಕುಮುದಪುರದಲ್ಲಿ ಯೋಚಿಸಕೂಡದಾದ ಜಗಳವಾಗಿ ದೊಡ್ಡ ಅನರ್ಥವಾಗದೆ ಇರದು. ಅವರು ದೇವಸ್ಥಾನವನ್ನು ಪ್ರವೇಶಿಸದಂತೆ ಅವರಿಗೆ ತಡೆಪಡಿಸುವ

ದಕ್ಕೆ ಸರ್ಕಾರದವರು ಏರ್ಪಾಟು ಮಾಡಬೇಕೆಂದು ಎದುರು ಪಕ್ಷದ ಮಠಾಧಿಪತಿಗಳ ಕಡೆಯಿಂದ ವಿಮರ್ಶಾಧಿಕಾರಿಯ ಮುಂದೆ ಮನವಿಯನ್ನು ಕೊಟ್ಟು ತಮ್ಮ ಮತಕ್ಕೇನೇ ಬಂದಿರುವ ಸಂಕಷ್ಟಗಳ ವರ್ಣನೆಯಿಂದ ಅವರ ಮನಸ್ಸಿಗೆ ಈ ವ್ಯಾಜ್ಯದ ಅನುಭವ ಸರಿಯಾಗಿ ಹೊಗ್ಗುವಂತೆ ಮಾಡುವದು ನ್ಯಾಯವಾದ ಮಾರ್ಗ. ಹೀಗೆಂದು ಕೋದಂಡಪಾಣಿಯು ಕೊಟ್ಟ ಆಲೋಚನೆಯು ಸಮಂಚಿತವಾದ್ದೆಂದು ಸರ್ವರೂ ಒಪ್ಪಿಕೊಂಡು ಹಾಗೆ ಪ್ರವರ್ತಿಸಬೇಕೆಂದು ವಕೀಲನಿಗೆ ಆಜ್ಞಾಪಿಸಿದರು. ಅವನು ಹಾಗಾಗಲೆಂದು ಹೊರಟು ಮನವಿಯನ್ನು ಬರೆದುಕೊಟ್ಟನು.

ಮನವಿಯನ್ನು ವಿಮರ್ಶಾಧಿಕಾರಿಯ ಕಚೇರಿಯಲ್ಲಿ ತನ್ನ ಮತ್ತು ರಾಮದಾಸನ ಜತೆ ವಕಾಲತಿನ ಸಮೇತ ಅರ್ಪಿಸಿದನು. ವಾಡಿಕೆಯಂತೆ ಅದನ್ನು ಪರಾಂಬರಿಸಿ ಪ್ರಥಮ ವಿಚಾರಣೆಗೋಸ್ಕರ ಕಾರಭಾರಿಯ ಬಳಿಗೆ ಕಳುಹಿಸುವದಾಗಿ ವಿಮರ್ಶಾಧಿಕಾರಿಯ ಅಪ್ಪಣೆಯಾಯಿತು. ಅದಕ್ಕೆ ತನ್ನ ಕಕ್ಷಿಗಾರರ ಕಡೆಯಿಂದ ಆಕ್ಷೇಪವದೆ ಎಂದು ಕೋದಂಡಪಾಣಿರಾಯನು ಬಿನ್ನವಿಸಿದನು. ಗಪಕ್ಕನೆ ವಿಮರ್ಶಾಧಿಕಾರಿಗೆ ದೊಡ್ಡ ಸಿಟ್ಟುಬಂತು. ಆಕ್ಷೇಪವೆಂತಾದ್ದು ಬೇಗ ಹೇಳೆಂದು ದೊಡ್ಡ ಸ್ವರದಿಂದ ಅಧಿಕಾರಿಯು ಕೇಳಲು ಕಾರಭಾರಿಯು— "ಕುಮುದಪುರ ಮಠದ ಪಕ್ಷವನ್ನು ಅವಲಂಬಿಸಿರುವದಾಗಿ ತನ್ನ ಕಕ್ಷಿಗಾರರು ತಿಳಕೊಳ್ಳುವದರಿಂದ ಅವನು ಅದರ ವಿಚಾರಣೆಯಲ್ಲಿ ಪ್ರವೇಶಿಸಬಾರದಾಗಿ ಅವರ ಅಪೇಕ್ಷೆ ಇದೆ ಎಂದು ಅರಿಕೆ ಮಾಡಿದ ವಕೀಲನ ಮೇಲೆ ಅಧಿಕಾರಿಯು ಇನ್ನೊಮ್ಮೆ ಸಿಟ್ಟುತಾಳಿ ನಿಷ್ಕಾರಣವಾಗಿ ದೊಡ್ಡ ಅಧಿಕಾರಸ್ಥರ ಮೇಲೆ ದೂರು ಹೇಳುವ ಕಕ್ಷಿಗಾರರ ಮಾತು ಕಿವಿಗೆ ಹಾಕಿ ಕೊಳ್ಳುವದು ಬರೇ ಅನುಚಿತ. ಹಾಗೆಯೇ ಕಕ್ಷಿಗಾರ ಹೇಳಿದಂತೆ ವಿವೇಕಹೀನನಾಗಿ ಕುಣಿಯುವ ವಕೀಲನು ಆ ಹೆಸರು ತಾಳಿಕೊಳ್ಳಲಿಕ್ಕೆ ಅಯೋಗ್ಯ. ಕುತಂತ್ರದಲ್ಲಿ ಪ್ರವೀಣನಾದ ರಾಮದಾಸನನ್ನು ಜತೆಗೆತಕ್ಕೊಂಡು ಮರ್ಯಾದೆಯನ್ನು ಕಳಕೊಳ್ಳಲಿಕ್ಕೆ ಹೊರಟ ನಿನ್ನ ಮುಖವನ್ನು ನೋಡುವದೇ ಅಸಹ್ಯಕರವೆಂದು ಕಠೋರ ವಾಕ್ಯಗಳಿಂದ ತನ್ನ ಅಸಂತೋಷವನ್ನು ಪ್ರತ್ಯಕ್ಷತೆಗೆ ತಂದರು.

ಕೋದಂಡಪಾಣಿಗೆ ಬಹಳ ದುಮ್ಮಾನವಾಯಿತು. ತಾನು ದೀರ್ಘ ಕಾಲದಿಂದ ಒಬ್ಬ ಮರ್ಯಾದೆವಂತನೆನ್ನಿಸಿಕೊಂಡು 'ವಕೀಲಿ ಉದ್ಯೋಗದಲ್ಲಿ

ನ್ಯಾಯಾಧಿಕಾರಿಗಳ ಪ್ರೀತಿಯನ್ನು ಗಳಿಸಿ ಅವರ ಮುಂದೆ ವರ್ತನೆಯನ್ನು ನಡಿಸಿ ಬರುವಲ್ಲಿ ಇಂದಿನ ವರೆಗೂ ಇಂಥಾ ಧಿಕ್ಕಾರಕ್ಕೆ ಒಳಪಡಲಿಲ್ಲವಾಗಿತ್ತು. ರಾಮದಾಸನನ್ನು ಸಂಗತ ಕಟ್ಟಿಕೊಂಡುದರಿಂದಲೂ ಚತುರ್ಮಠದವರ ಮೇಲೆ ಅಧಿಕಾರಿಗೆ ವೈರ ಹುಟ್ಟಿರುವ ಗುಟ್ಟು ತಿಳಿಯದೆ ತಾನು ಅವರ ಕಡೆಯಿಂದ ವಕಾಲತು ತಕ್ಕೊಂಡ ದೆಸೆಯಿಂದಲೂ ಈ ಅವಮರ್ಯಾದೆ ಪಡುವದಾಯಿತೆಂದು ಅವನ ಮನಸ್ಸಿಗೆ ಮುಂದಟ್ಟಾಯಿತು. ಈಗಲೇ ವಕಾಲತು ಬಿಟ್ಟುಬಿಡುವದು ಹೇಡಿತನ; ಅದರಲ್ಲಿ ಪ್ರವರ್ತಿಸಿಕೊಂಡಿದ್ದರಿಂದ ತನಗೂ ಅಧಿಕಾರಿಗೂ ಮುಂದೆ ಕಲಹದ ಬುನಾದಿ ಬಿತ್ತಿನ್ನಬೇಕು. ಇಂಥಾ ಉಭಯ ಸಂಕಟದಲ್ಲಿ ಸಿಲುಕಿದೆನಷ್ಟೇ. ಹೇಗೆ ತಪ್ಪಿಸಿಕೊಳ್ಳುವದೆಂಬ ಯೋಚನೆಯಲ್ಲಿ ಬಿದ್ದು ಕೋದಂಡಪಾಣಿರಾಯನು ಮನವಿಯ ಪ್ರಸಂಗವನ್ನು ಮರೆತೇ ಬಿಟ್ಟನು. ವಿಮರ್ಶಾಧಿಕಾರಿಯು ಮನವಿಯನ್ನು ಪ್ರಥಮ ವಿಚಾರಣೆಗೋಸ್ಕರ ಶಾಬಯ್ಯನ ಬಳಿಗೆ ಕಳುಹಿಸಿಕೊಟ್ಟನು. ರಾಮದಾಸ ರಾಯನಿಗೂ ಕೋದಂಡಪಾಣಿಗೂ ಕಚೇರಿಯ ಹೊರಗೆ ಸಣ್ಣದೊಂದು ಜಗಳಹತ್ತಿತು.

ರಾಮದಾಸ—"ರಾಯರೇ! ಕೋ ಎಂಬ ಅಕ್ಷರ ತಮ್ಮ ಹೆಸರಿನ ಅರ್ಧಾಂಶದ ಪೂರ್ವಭಾಗ. ಅದನ್ನು ಲೋಪಿಸಿದರೆ ಇಂದಿನ ಪ್ರಸಂಗಕ್ಕೆ ಸರಿಯಾಗುವದು. ಇಷ್ಟು ಸಣ್ಣ ಪ್ರಮೇಯದಲ್ಲಿ ತಮ್ಮ ಸ್ಥಿತಿ ಹೀಗಾದರೆ ಮುಂದೆ ದೊಡ್ಡ ದೊಡ್ಡ ವಿಷಯಗಳು ಹಾಗೆಯೇ ಬಿದ್ದವೆ. ಅವುಗಳಲ್ಲಿ ತಮ್ಮನ್ನು ಚತುರ್ಮಠದವರು ನೆಚ್ಚಿಬಿಟ್ಟರೆ ಮೊದಲೇ ಬೋಳಿಸಿರುವ ಅವರ ತಲೆಗಳನ್ನು ಇನ್ನೊಮ್ಮೆ ನುಣ್ಣಗೆ ಮಾಡಿದ ಹಾಗೆ ಆಗುವದೇ ಸರಿ."

ಕೋದಂಡಪಾಣಿ—"ಫಸಾದ ಖೋರನೇ ಕೇಳು, ಶುನಕನಂತೆ ಗಳಹಬೇಡಾ. ನಿನಗಿನ್ನು ಮಿಾಶೆಯೇ ಚಂದಾಗಿ ಹುಟ್ಟಲಿಲ್ಲ. ಕೂದಲುಗಳು ನೆರೆದ ನನಗೆ ಚಾಳಿಸುತ್ತೀಯಾ? ಯಾವ ದೊಡ್ಡ ನ್ಯಾಯಸ್ಥಾನದಲ್ಲಿ ನೀನು ಗೆದ್ದವನೋ ಅರಿಯೆ. ಒಬ್ಬನ ಪ್ರಾಯಕ್ಕಾದರೂ ಮರ್ಯಾದೆ ಕೊಡವಲ್ಲದ ನಾಯಿಯ ಮುಖಾವಲೋಕನವೇ ನಕರ್ತವ್ಯ "

ರಾಮದಾಸ —"ನಾಯಿಗೆ ಪ್ರಾಯವಾದರೆ ಅಜ್ಜನೆಂದು ಕರಿಯಬಹುದೆ?"

ಕೋದಂಡಪಾಣಿ—"ಹಾಗಾದರೆ ನಾನೊಂದು ನಾಯಿ, ನೀನೊಬ್ಬ

ನಾಯಿ ಪಾಲಕ. ನಿನ್ನ ಉದ್ವೇಗದಿಂದ ಇನ್ನೇನೆಲ್ಲ ಆಗುವದುಂಟೋ? ಅಲ್ಪರ ಸಂಗ ಅಭಿಮಾನಭಂಗವೆಂಬ ಗತಿ ನಾನೇ ವಿಚಾರಹೀನನಾಗಿ ಮಾಡಿ ಕೊಂಡ ಮೇಲೆ ಈಗ ವ್ಯಸನಪಟ್ಟು ಪ್ರಯೋಜನವದೆಯೇ?"

ರಾಮದಾಸ—"ಶೆಟ್ಟಿಗಳ ಮಕ್ಕಳು ಕೊಳೆತು ಹೋದ ಕುಂಬಳ ಕಾಯಿ ಕೋಣಗಳು ತಿನ್ನುವದಿಲ್ಲವಾದರೆ 'ಜಿತ್ತಾರಿ ಬಿರಾರುಗೆ' ದಾನ ಮಾಡಿ ಅವರ ಬೀಜಗಳನ್ನು ತಿರಿಗಿ ಕೊಡೆಂದು ಹೇಳುವ ಸಂಪ್ರದಾಯ ಉಂಟಂತೆ. ಚತುರ್ಮಠದವರು ಕಾಸು ಬಿಚ್ಚುವವರಲ್ಲ. ಕಲಿತಿಯಿಂದ ವ್ಯಾಜ್ಯ ಸಾಧಿಸುವದಕ್ಕೆ ಜಬ್ಬು ವಕೀಲನ್ಯಾರು ಸಿಕ್ಕುವನೆಂದು ಬಾಯಿ ತೆರೆಕೊಂಡಿ ರುವಾಗ ತಮ್ಮ ಸಮಾಗಮವು ಅವರಿಗಾಗಿ ಈ ಹೊತ್ತು ಪರಾಜಯವಾ ಯಿತಲ್ಲಾ. ಶುನಕನಂತೆ ಗಳಹುವ ನಾನಾದರೂ ನಾಲ್ಕು ಮಾತು ಆಡಿದರ ವಿಮರ್ಶಾಧಿಕಾರಿಯ ಸಿಟ್ಟು ತಣಿದು ಹೋಗುತ್ತಿತ್ತು. ಘನವತ್ತಾರರಾದ ತಮ್ಮ ಬಾಯಿಗೆ ಜೋಡು ಇಕ್ಕಳ ಹಾಕಿದರೂ ಒಂದೇ ಒಂದು ಶಬ್ದ ಹೊರ ಡದು. ಮಠದಲ್ಲಿ ಕಂಠ ಪೂರ್ಣ ಹೋಳಿಗೆ ಜಿಲೇಬಿ ಲಾಡು ಡೊಳ್ಳೊಟ್ಟೆ ಯಲ್ಲಿ ತುಂಬಿದ ತಮ್ಮ ಪ್ರತಾಪವು ಮೆರೆಯುವ ಸ್ಥಳವು ಸ್ವಗೃಹವೇ ಸರಿ; ಕಚೇರಿಯಲ್ಲ.

ರಾಮದಾಸರಾಯನ ತೀಕ್ಷ್ಣವಾದ ಪ್ರತಿ ವಚನಗಳಿಂದ ಕೋದಂಡ ಪಾಣಿರಾಯನು ಅತ್ಯಧಿಕ ಸಿಟ್ಟಿನಿಂದ ನಡುಗುತ್ತಾ ಬಾಯಿಯಿಂದ ಬಂದ ಹಾಗೆ ಬಗುಳಿದಿಯಾ ಕತ್ತೆ ಎಂದು ಹೀಯಾಳಿಸೋಣ ತಾವು ಅದೇ ಮೃಗದ ಸಾಲಿನವರೆ ಎಂದು ರಾಮದಾಸನು ವಿಳಂಬವಿಲ್ಲದೆ ಉತ್ತರ ಕೊಟ್ಟು ತೀರಿತು. ಸಿಟ್ಟಿನ ಕಾವು ತಲೆಗೆ ಏರಿ ಉಭಯತ್ರರೂ ಮುಷ್ಟಿ ಯುದ್ಧಕ್ಕೆ ಸನ್ನದ್ಧರಾಗಿ ನಿಂತು ಒಂದೆರಡು ಗುದ್ದುಗಳು ಆಚೆಗೆ ಈಚೆಗೆ ಬಿದ್ದವೆನ್ನುವಷ್ಟರಲ್ಲಿ ಸಂಗಡ ಇದ್ದ ಮಠದ ಸೇವಕರು ಇಬ್ಬರಿಗೂ ಸಮಾಧಾನ ಪಡಿಸಿದರು. ಕೊಂಚ ಸಮ ಯದಲ್ಲಿ ಅವರಿಬ್ಬರೂ ವಿವೇಕದಿಂದ ಜಗಳವನ್ನು ತೀರಿಸಿಕೊಂಡು ಒಂದು ಬಿಡಾರದಲ್ಲಿ ಊಟವಾಟ ಮಾಡಿ ಮರುದಿವಸ ಕುಮುದಪುರಕ್ಕೆ ಹೋಗಿ ಕಾರಭಾರಿಗಳ ಮುಂದೆ ನಿಂತು ವಿಮರ್ಶಾಧಿಕಾರಿಯಿಂದ ಅವರ ಬಳಿಗೆ ಕಳುಹಿಸಿಕೊಡಲ್ಪಟ್ಟಿರುವ ಮನವಿಯ ಪ್ರಥಮ ವಿಚಾರಣೆಯ ಕಾಲದಲ್ಲಿ ತಮ್ಮ ಕಕ್ಷಿಗಾರರ ಕಡೆಯಿಂದ ಇದ್ದು ವ್ಯವಹರಿಸುವದಕ್ಕೋಸ್ಕರ ತಾವಿ ಬ್ಬರೂ ಬಂದಿರುವದಾಗಿ ಬಿನ್ನವಿಸಿಕೊಂಡರು. "ಸರಿ ಸರಿ ಬೇಕಾದಾಗ

ನಿಮಗೆ ಜವಾಬನ್ನಾಗಲೀ ತಾಕೀದಿಯನ್ನಾಗಲೀ ಕೊಟ್ಟು ಕರಸಿಕೋಥೇವು. ಈಗ ಹೋಗಬಹುದು ಎಂದು ಕಾರಭಾರಿಗಳ ಅಪ್ಪಣೆಯಾಯಿತು. ವಕೀಲ ರಿಬ್ಬರೂ ಅಂಜನೇಯಾಲದ ಅರ್ಚಕನಲ್ಲಿ ಉಳಕೊಂಡು ಅವನ ಅಂತರ್ಯವು ವಾಗ್ದೇವಿಯ ಪಕ್ಷಕ್ಕಿರುವ ವಿಷ್ಯವಾನವನ್ನು ಅರಿಯದೆ ಅವನ ಎದುರಿನಲ್ಲಿ ಉಭಯತ್ರರೂ ಆಡಿದ ಗುಟ್ಟಿನ ಮಾತುಗಳನ್ನು ಅವನು ಕಿವಿಕೊಟ್ಟು ಕೇಳಿ ವಾಗ್ದೇವಿಗೆ ತಿಳಸಿದ ದೆಸೆಯಿಂದ ಚತುರ್ಮಠದವರ ಕಾರ್ಯಕ್ಕೆ ಹಾನಿಯೂ ಅವಳ ಹಟ ಸಾಧನೆಗೆ ಬಲವೂ ಉಂಟಾದ ಹಾಗಾಯಿತು.

ಚತುರ್ಮಠದವರು ಮನವಿಯ ಪ್ರಥಮ ನಿರ್ಮಯನ್ನು ತಮಗೆ ಮುಂದಾಗಿ ತಿಳಸದೆ ಕಾರಭಾರಿಯು ಮಾಡನೆಂಬ ಭರವಸೆಯಿಂದ ರಾಮ ದಾಸನೂ ಕೊದಂಡಪಾಣಿರಾಯನೂ ಅಂಜನೇಯಾಲಯದಲ್ಲಿ ಉಂಡು ಸುಖದಲ್ಲಿ ಇದ್ದರು. ಕಾರಭಾರಿಯು ತಡೆಯದೆ ಕೊತ್ವಾಲನಿಂದ ಕುಮುದ ಪುರದ ಮುಖ್ಯ ನಿವಾಸಿಕರ ಒಂದು ಮಹಾಜರು ತರಿಸಿಕೊಂಡು ತನ್ನ ವಿಚಾ ರಣೆಯ ಫಲವನ್ನು ಬರಹ ಮೂಲಕವಡಿಸಿದನು. ಹ್ಯಾಗೆಂದರೆ ವಾಗ್ದೇವಿಯು ದೀರ್ಘಕಾಲದಿಂದ ಗಂಡನ ಸಂಗಡ ಚಂಚಲನೇತ್ರರ ಮಠದಲ್ಲಿ ವಾಸವಾ ಗಿದ್ದು ಈಗ ಆಶ್ರಮ ಹೊಂದಿದ ಸೂರ್ಯನಾರಾಯಣನನ್ನು ಹಡೆದಳು. ಅವನ ಉಪನಯನವನ್ನು ಅವನ ತಂದೆ ಆಬಾಚಾರ್ಯನು ವಿಧಿಯುಕ್ತ ವಾಗಿ ಯಾರೊಬ್ಬರ ಆಕ್ಷೇಪವಿಲ್ಲದೆ ಮಾಡಿದನು. ಹಾಗೆಯೇ ಆ ಹುಡುಗ ನಿಗೆ ಆಶ್ರಮವಾಗುವಾಗ್ಗೆ ಒಬ್ಬನಾದರೂ ಜಿಜ್ಞಾಸ ಮಾಡಲಿಲ್ಲ. ಅವನ ಪೂರ್ವಾಶ್ರಮದ ತಂದೆಯು ತೀರಿಹೋದಬಳಿಕ ನೃಸಿಂಹಪುರ ಮಠದ ಸ್ವಾಮಿ ಯವರಿಗೂ ಚಂಚಲನೇತ್ರರಿಗೂ ಭೂಸಂಬಂಧವಾದ ವಿವಾದವು ಹುಟ್ಟಿ ಸರ್ಕಾರದವರಿಗೆ ದೂರು ಹೋಗಿ ಕುಮುದಪುರ ಮಠಕ್ಕೆ ಜಯವಾದ ತರು ವಾಯ ಹೊಟ್ಟೆಕಿಚ್ಚಿನಿಂದಲೂ ಹಗೆಯಿಂದಲೂ ನೃಸಿಂಹಪುರಾಧೀಶರು ಬೇರೆ ಮೂರು ಮಠದವರನ್ನು ಪುಸಲಾಯಿಸಿ ತಮ್ಮ ಕಡೆಗೆ ಎಳಕೊಂಡು ಸೂರ್ಯ ನಾರಾಯಣನ ಆಶ್ರಮಕ್ಕೆ ಆಕ್ಷೇಪಿಸಿ ದ್ವಂದ್ವ ಮಠದಿಂದ ಹೊಸ ಆಶ್ರಮ ವಾಯಿತೆಂಬ ಒಂದು ಕಲಹದ ಬೀಜವನ್ನು ನೆಟ್ಟು ತಮ್ಮ ದುಸ್ಸಾಧನೆಯಲ್ಲಿ ಗೆಲ್ಲಬೇಕೆಂದು ಹಟದಿಂದ ವದ್ದಾಡುತ್ತಾರೆ. ಪ್ರಥಮದ ಆಶ್ರಮವೂ ಆಕ್ಷೇಪ ಕರದ್ದು. ದ್ವಂದ್ವ ಮಠದಿಂದ ಆದ ಆಶ್ರಮವು ಸಿಂಧುವಾದ್ದೆಂಬ ವಿವಾದಾಂಶವು ಇನ್ನೂ ಇತ್ಯರ್ಥವಾಗಲಿಲ್ಲ. ತಕ್ಕ ಅಧಿಕಾರಸ್ಥರ ಮುಂದೆ ಅಂಥಾ

ವ್ಯಾಜ್ಯ ಇಮುವರಿಗೂ ತಿರ್ಮಾಣಾಗಲೇ ಇಲ್ಲ. ಹೀಗಿರುತ್ತಾ ನ್ಯಾಯವಾಗಿ ಚಂಚಲನೇತ್ರರ ಶಿಷ್ಯನು ಪೂರ್ವಪದ್ಧತಿಯನ್ನನುಸರಿಸಿ ಆದಿನಾರಾಯಣಾಲಯುವಲ್ಲಿ ದಿಗ್ವಿಜಯಾರಾಧನೆಗೋಸ್ಕರ ಪ್ರವೇಶಮಾಡುವ ಮತ್ತು ಅದರ ಮುಂಚಿತವಾಗಿಯೇ ಅವರ ಕಡೆಯಿಂದ ಆ ದೇವಾಲಯದಲ್ಲಿ ಸನ್ನಾಹಗಳು ಆಗುವ ಸಮಯದಲ್ಲಿ ಎದ್ರಿಗಳು ತಡಿಯಲಿಕ್ಕೆ ಸ್ವತಂತ್ರವುಳ್ಳವರಲ್ಲಾ. ಪರಂತು ಅರ್ಥ ಬಲವೂ ಜನಬಲವೂ ತುಂಬಾ ಉಳ್ಳ ಜತುರ್ಮಠಾಧಿಪತಿಗಳು ಅಪಾರ್ಪೋಲಿ ಜನರ ಕೂಟವನ್ನು ಕೂಡಿಸಿ ನ್ಯಾಯವಾಗಿ ಚಂಚಲನೇತ್ರರ ಕಡೆಯಿಂದ ಉತ್ಸವಾದಿ ವಿಲಯ ನಡೆಯುವಾಗ ಬೇಕೆಂತ ಜಗಳವನ್ನು ಹುಟ್ಟಿಸಿದರೆ ಜನರ ನೆಮ್ಮದಿಗೆ ಭಂಗಬರುವ ಸಂಭವವಿರುವುದು. ಅದರ ಉಪಶಾಂತಿಗೆ ಮಾತ್ರ ಅಗತ್ಯವುಳ್ಳ ಉಪಾಯಗಳನ್ನು ಸರ್ಕಾರದವರು ಮಾಡಿದರೆ ಯಥೇಷ್ಟವಾಗುವದು. ಸೂರ್ಯನಾರಾಯಣನ ಆಶ್ರಮವನ್ನು ಎದುರುಪಕ್ಷದವರು ಅದಾಲತಿನಲ್ಲಿ ವ್ಯವಹರಿಸಿ ರದ್ದುಮಾಡಿಸಿಕೊಳ್ಳುವ ಪರಿಯಂತರ ಸಾಂಪ್ರದಾಯಪ್ರಕಾರ ನಡೆಯುವ ಯಾವದೊಂದು ಕಟ್ಟಳೆಯನ್ನು ತಡೆಯುವದು ಫೌಜದಾರಿ ಅಧಿಕಾರಸ್ಥರ ಧರ್ಮವಾಗಿರುವದಿಲ್ಲ. ಆದಕಾರಣ ಈಗ ಬಂದಿರುವ ಮನವಿಯನ್ನು ತಳ್ಳಿಹಾಕಬಹುದು.

ಹೀಗೆಂಬ ಅನ್ವಯವಾಗುವ ವಿಜ್ಞಾಪನಾ ಪತ್ರವನ್ನು ಕಾರಭಾರಿಯು ವ್ಯವಧಾನ ಮಾಡದೆ ಮಿಮುರ್ಶಾಧಿಕಾರಿಗೆ ಕಳುಹಿಸಿಕೊಟ್ಟನು. ಆ ಅಧಿಕಾರಿಯು ಅದನ್ನು ಓದಿ ನೋಡಿ ಕಾರಭಾರಿಯ ಅಭಿಪ್ರಾಯದಲ್ಲಿ ಏಕೀಭವಿಸಿ ನೆಮ್ಮದಿಗೆ ಭಂಗ ಉಂಟಾಗದ ರೀತಿಯಲ್ಲಿ ಕೊತ್ವಾಲನ ಮುಖೇನ ಸಮುಚಿತ ವ್ಯವಹರಣೆಯನ್ನು ಸ್ವತಹ ನಡಿಸುವ ಜಾಗ್ರತೆ ಇಡಬೇಕೆಂದು ಹುಕುಂ ಮಾಡಿ ಮನವಿಯನ್ನು ತಳ್ಳಿಹಾಕಿದನು. ಹೀಗೆ ಮಂಗಳಪದವಾಗುವ ಪರಿಯಂತ್ರವೂ ವಕೀಲರಿಬ್ಬರೂ ತಮಗೆ ಕರೆ ಬರುವದೆಂಬ ಆಶೆಯಿಂದ ಅಂಜನೇಯಾಲಯದಲ್ಲಿ ಕೂಳುತಿನ್ನುತ್ತಾ ಇದ್ದದ್ದೇ ಸರಿ. ಮನವಿ ತಳ್ಳಿಹಾಕಿರುವ ಕೌಲಕವು ಊರಲ್ಲಿ ಮುಕ್ಕಾಲುವಾಸಿ ಜನರಿಗೆ ಸಿಕ್ಕುವ ವರೆಗೂ ಇವರಿಗೆ ತಿಳಿದು ಬರಲೇ ಇಲ್ಲಾ.

"ಈ ಮಠದವರ ಗಲಾಟೆಯಲ್ಲಿ ತಾನು ಕೈಹಾಕಲೇ ಬಾರದಿತ್ತು. ಅವರು ಕೊಟ್ಟ ಪ್ರತಿಫಲಕ್ಕಿಂತಲೂ ಹೆಚ್ಚಿಗೆ ಸಾಹಸಮಾಡಿದೆ, ಅಪಜಯವಾಯಿತು. ಏನು ಮಾಡೋಣ? ಅವರ ಪುಣ್ಯ. ಇನ್ನು ಅವರ ಸಿಡುಮೋರೆ

ಗಳನ್ನು ಕಾಣಬೇಕ್ಯಾಕೆ? ಅವಶ್ಯವಿದ್ದರೆ ಕರೆ ಬಂದಾಗ ಹೋಗಬಹುದು" ಎಂದು ಕೋದಂಡಪಾಣಿಯು ತನ್ನ ಊರಿಗೆ ನಡೆದುಬಿಟ್ಟನು. ರಾಮ ದಾಸನು ಮಠದವರಿಗೆ ಕೊಂಚ ಬುದ್ಧಿ ಕಲಿಸುವ ಸಮಯವು ಇದೇ. ಜತೆ ವಕೀಲನು ಮಾಡಿದ ಬುದ್ಧಿವಂತಿಕೆಯೇ ಲೇಸೆಂದು ಮನೆಗೆ ಅಭಿಮುಖ ವಾದನು. ಇತ್ತಲು ನೃಸಿಂಹಪುರಾದಿ ನಾಲ್ಕು ಮಠದವರಿಗೆ ವಿಮರ್ಶಾಧಿ ಕಾರಿಯು ಮಾಡಿದ ತೀರ್ಮಾನದ ವೃತ್ತಾಂತ ಪರಸ್ಪರವಾಗಿ ತಿಳಿದುಬಂತು. ವಕೀಲರು ಏನು ಬರಲಿಲ್ಲವೆಂದು ಎದುರು ನೋಡುತ್ತಾ ಇರುವಾಗ ಅವರು ತಮ್ಮ ತಮ್ಮ ಮನೆಗೆ ನಡೆದುಬಿಟ್ಟರೆಂದು ಮಠದ ಚಾಕರರಿಂದ ಗೊತ್ತಾಗಿ ಅವರೆಲ್ಲರೂ ಬೆರಗಾದರು. ರಾಮದಾಸರಾಯನನ್ನಾದರೂ ಕರೆಸಿ ನೋಡ ಬೇಕೆಂಬ ಯೋಚನೆಯಲ್ಲಿರುವ ವೇಳೆ ಆ ಮಠದ ಪಾರುಪತ್ಯಗಾರನ ಸೋದ ರನ ಅಳಿಯ ರಘುವೀರರಾಯನು ಬಹುಕಾಲದಿಂದ ವಕಾಲತ್ತು ನಡೆಸಿ ಕೊಂಡು ವಾಸವಾಗಿರುತ್ತಿದ್ದ ಕೊನೇರಿಪುರದ ಹವೆಯು ದೇಹಪ್ರಕೃತಿಗೆ ಒಪ್ಪುವುದಿಲ್ಲವೆಂಬ ಅನುಮಾನದ ಮೇಲೆ ಕುಟುಂಬ ಸಮೇತ ಆ ಊರನ್ನೇ ಬಿಟ್ಟು ಕುಮುದಪುರದಲ್ಲಿ ವಾಸ್ತವಿಸಿಕೊಂಡಿರುವುದಕ್ಕೆ ಬಂದು ಒಂದು ಮನೆ ಯನ್ನು ಮಾಡಿಕೊಂಡಿದ್ದಾಗ ಪಂಚಮಠಗಳಲ್ಲಿ ಇತ್ತಂಡಗಳು ಆದ ಸಮಾ ಚಾರವನ್ನು ವೇದವ್ಯಾಸ ಉಪಾಧ್ಯನಿಂದ ತಿಳಿದು ರವಷ್ಟು ದ್ರವ್ಯ ಸಂಪಾದಿ ಸುವುದಕ್ಕೆ ಒಳ್ಳೇ ಸಮಯ ಬಂದಿದೆಯೋ ನೋಡಿಬಿಡೋಣ ಎಂದು ಮೆಲ್ಲಗೆ ನೃಸಿಂಹಪುರಕ್ಕೆ ಹೋದನು. ಅಲ್ಲಿ ಅವನು ಪ್ರಥಮದಲ್ಲಿ ಪಾರುಪತ್ಯ ಗಾರನನ್ನು ತರುವಾಯ ಶ್ರೀಪಾದಂಗಳವರನ್ನೂ ಕಂಡು ತಾನು ಕುಮುದ ಪುರದಲ್ಲಿಯೇ ವಾಸ್ತವ್ಯ ಮಾಡಿಕೊಂಡಿರುವದಾಗಿ ತಿಳಿಸಿದನು. ಶ್ರೀಪಾದಂಗ ಳಿಗೆ ಬಹು ಆನಂದವಾಯಿತು. ರಘುವೀರರಾಯರಿಗೆ ದಿವ್ಯ ಔತಣವೂ ಉಡುಗೊರೆಯೂ ಆಯಿತು. ನಾಲ್ಕು ಮಠದವರ ಕಡೆ ಮುಖ್ತಾರಿಕನಾಗಿ ಎಲ್ಲಾ ವ್ಯವಹರಣೆಗಳನ್ನು ನಡೆಸೆಂದು ಅವನಿಗೆ ನಿರೂಪವಾಗಿ ಮುಂಗಡ ವಾಗಿ ಸಾಕಷ್ಟು ಹಣವೂ ಕೊಡೋಣಾಯಿತು. ಇನ್ನು ಬೇಕಾದ ಹಾಗೆ ಖರ್ಚಿಗೆ ಹಣ ಬರೆದು ತರಿಸಿಕೊಳ್ಳಬಹುದೆಂದು ಪಾರುಪತ್ಯಗಾರನು ಅಂತ ರಂಗದಲ್ಲಿ ತಿಳಿಸಿದನು. ಇಷ್ಟು ದೊಡ್ಡ ಪ್ರಕರಣದಲ್ಲಿ ಒಬ್ಬ ಸಹಾಯಕನು ಇರಬೇಕಾದ್ದು ಅಗತ್ಯವೆಂದು ರಘುವೀರರಾಯನು ಅರಿಕೆ ಮಾಡಿಕೊಂಡಲ್ಲಿ ಶ್ರೀಪಾದಂಗಳು ಹೆಚ್ಚು ಸಮಯ ಆಲೋಚನೆಮಾಡಿ ರಾಮದಾಸನನ್ನು

ಬಿಟ್ಟುಬಿಟ್ಟರೆ ಅವನು ಎದುರು ಪಕ್ಷಕ್ಕೆ ನೇರಿ ತಿಗಡಿ ಬಿಗಡಿ ಮಾಡಿಹಾಕುವ ನೆಂಬ ಹೆದರಿಕೆಯಿಂದ ಅವನನ್ನು ಸಹಾಯಕ್ಕೆ ಕರಕೊಳ್ಳಲಿಕ್ಕೆ ಅನುಮತಿ ಕೊಟ್ಟರು. ಆಗಲೆಂಮ ಪ್ರಣಾಮಮಾಡಿ ಈ ವಕೀಲನು ಕುಮುದಪುರಕ್ಕೆ ಮರಳಿ ರಾಮದಾಸನನ್ನು ಕರೆಸಿಕೊಂಡು ಆದ್ಯಂತ ಚರಿತ್ರೆಯನ್ನು ತಿಳು ಕೊಂಡು ಸೂಕ್ಷ್ಮರೀತಿಯಲ್ಲಿ ಗ್ರಹಿಸಿನೋಡಿದನು. ಇದ್ಯಾವ ದೊಡ್ಡ ಪ್ರಕ ರಣ? ಇದಕ್ಕಿಂತಲೂ ಹೆಚ್ಚು ಗಲಿಬಿಲಿಯುಳ್ಳ ವ್ಯವಹಾರಗಳಲ್ಲಿ ನಾನು ಕ್ಷಣಾರ್ಧದಲ್ಲಿ ಫೌಜದಾರಿಯಲ್ಲಿಯೂ ಅದಾಲತಿನಲ್ಲಿಯೂ ಗೆದ್ದು ಗಡ್ಡವೆಲ್ಲಾ ಹಣ್ಣಾಯಿತು. ಚಂಚಲನೇತ್ರರಾಗಲೀ ಅವರ ಶಿಷ್ಯರಾಗಲೀ ಆದಿನಾರಾಯ ಣನ ಹೊಸ್ತಿಲು ದಾಟಿ ನೋಡಬಲ್ಲರೇ ಎಂದು ಮೀಶೆಯ ಕೊನೆಯನ್ನು ಉಭಯ ಹಸ್ತಗಳಿಂದಲೂ ತಿರುಹಿದನು. ರಾಮದಾಸನು ಇದನ್ನು ನೋಡಿ ಇವನ ಅಹಂಕಾರವು ಕಾರಭಾರಿಯಿಂದ ಒಂದೇ ನಿಮಿಷದಲ್ಲಿ ಮರ್ಧನ ವಾಗುವದು. ಕ್ರಮೇಣ ಆ ವಿನೋದ ನೋಡಬಹುದೆಂದು ಸುಮ್ಮಗಾಗಿ ಹೌದುರಾಯರೇ! ತಮ್ಮ ಅಭಿಪ್ರಾಯ ಬರಾಬರಿ ಎಂದು ಹೊಗಳಿದನು.

## ನಲುವತ್ತೊಂಭತ್ತು

ಕಟ್ಟಳೆಗನುಸಾರವಾಗಿ ಪ್ರಥಮತಃ ಮಾಡಬೇಕಾದ ಅಕ್ಷಿ ಮುಹೂ ರ್ತಕ್ಕೆ ದಿನ ನೋಡಬೇಕೆಂದು ಚಂಚಲನೇತ್ರರಿಂದ ಆಜ್ಞಾಪಿಸಲ್ಪಟ್ಟ ಮಠದ ಸೇವಕರೆಲ್ಲರೂ ಸಕಲ ಸಾಮಗ್ರಿಗಳನ್ನು ಸಂಗ್ರಹಿಸುವುದರಲ್ಲಿ ಅಮರಿದರು. ಒಮ್ಮೆ ಅವರನ್ನು ಪ್ರವೇಶವಾಗಲಿಕ್ಕೆ ಬಿಟ್ಟರೆ ಮುಂದೆ ಅವರನ್ನು ತಡಿಯು ವದು ಪ್ರಯಾಸಕರವಾದ್ದೆಂಬ ಯೋಚನೆಯು ರಘುವೀರರಾಯರಿಗೆ ಹತ್ತಿ ಕೊಂಡಿತು. ರಾಮದಾಸನ ಕೂಡೆ ಆಲೋಚನೆ ಮಾಡಿದಾಗ ಅವನು ತನ್ನ ಅಭಿಪ್ರಾಯ ಹಾಗೆಯೇ ಸರಿ ಎಂದನು. ಶಾಬಯ್ಯನೂ ಭೀಮಾಜಿಯೂ ಚಂಚಲನೇತ್ರರ ಹಿತಚಿಂತಕರೆಂದು ಎಲ್ಲರಿಗೆ ಗೊತ್ತದೆ. ಮನವಿ ಮೊದ ಲಾದ ವ್ಯವಹರಣೆ ಉದ್ಯಮಿಸಿದರೆ ಜಯ ದೊರೆಯದು. ನಾಲ್ಕು ಮಠದವ ರಿಗೆ ಜನಬಲವೇನಾದರೂ ಕಡಿಮೆ ಅದೆಯೇ? ಹತ್ತು ಐವತ್ತು ಅಥವಾ ನೂರು ದಾಂಡಿಗರನ್ನು ಕಟ್ಟಿಕೊಂಡು ದೇವಸ್ಥಾನದ ಎದುರು ಸಾಲಾಗಿ ನಿಂತುಕೊಂಡು ಒಳಗೆ ಹೊಕ್ಕರೆ ಸೊಂಟಮುರಿದು ಹಾಕುವೆವೆಂದು ದಿಗಿಲು ಹತ್ತಿಸಿಬಿಡೋಣ. ಚಂಚಲನೇತ್ರರು ಬಿಡು ಅವರ ಅಜ್ಜನೂ ಓಡಿ

ಹೋಗನೇ? ಏನಯ್ಯಾ ರಾಮದಾಸ ಹೇಳೆನಲಾಗಿ ಪಾಸ್ತವ್ಯವೆಂದು ರಾಮ ದಾಸನು ಶಿರ ಸಂಕೇತಮಾಡಿದನು. “ಬೇರೆ ಉಪಾಯವೇನಾದರೂ ಇದ್ದರೆ ಹೇಳಿಬಿಡು. ನೀನು ಸಣ್ಣವನಾದರೂ ನಿನ್ನ ಬುದ್ಧಿ ಸಣ್ಣದೇನಯ್ಯಾ” ಎಂದು ರಘುವೀರನು ಪುನಃ ಪ್ರಶ್ನೆಮಾಡಲಾಗಿ ತಮ್ಮದು ತೈಲ ಬುದ್ಧಿ ಸ್ವಾಮಿಾ; ಇನ್ನೊಂದು ಯೋಚನೆ ನನ್ನ ಬುದ್ಧಿಗೆ ತೋಚದೆಂದು ರಾಮದಾಸನು ಪ್ರತ್ಯುತ್ತರಕೊಟ್ಟು ಮೌನವಾದನು.

ನೃಸಿಂಹಪುರದ ಮಠಾಧಿಪತಿಗಳು ಹೇಳಿದಂತೆ ಉಳಿಕೆ ಮೂರು ಮಠ ದವರು ನಡೆಯುವವರಾದ ಕಾರಣ ವಕೀಲನಿಗೆ ಅಗತ್ಯಬೀಳುವ ಅನುಜ್ಞೆ ಗಳೆಲ್ಲಾ ಅವರೊಬ್ಬರಿಂದಲೇ ಸಿಕ್ಕುವದಾಯಿತು. ತನ್ನ ಆಲೋಚನೆಯನ್ನು ಆ ಮಠಾಧಿಪತಿಗಳಿಗೆ ಬರೆದು ತಿಳಿಸಿದರು. ಅದು ಅವರಿಗೆ ಒಡಂಬಡಿಕೆ ಯಾಯಿತು. ಇಂಥವನೊಬ್ಬ ಮುಂಚೆಯೇ ನಮಗೆ ಆಲೋಚನೆ ಕೊಡ ಲಿಕ್ಕೆ ದೊರಕುತಿದ್ದರೆ ಇಷ್ಟು ಕಷ್ಟಗಳು ಉಂಟಾಗುತಿದ್ದಿಲ್ಲವೆಂಬ ಪಶ್ಚಾತ್ತಾ ಪವು ಅವರಿಗೆ ಹುಟ್ಟುವದಾಯಿತು. ತಾಮಸವಿಲ್ಲದೆ ನೂರಾರು ದಾಂಡಿಗ ರಾದ ಪಕ್ಕಗಳು ರಘುವೀರರಾಯನ ಆಜ್ಞೆಯಂತೆ ನಡಕೊಳ್ಳಬೇಕೆಂಬ ಸಿರೂಪವು ಮಠದಿಂದ ಆಯಾವ ಮುತ್ತಾಲಿಕ ಜನರಿಗೆ ನಕಾಲವಲ್ಲಿ ಕಳುಹಿ ಸೋಣಾಯಿತು. ರಘುವೀರನು ಆ ಪ್ರಕಾರ ಕೈವಶಮಾಡಿಕೊಂಡ ಜನರಲ್ಲಿ ತಾನು ನೆನಸಿದ ಕಾರ್ಯಕ್ಕೆ ಉಪಯುಕ್ತರಾದವರನ್ನು ಆರಿಸಿ, ಅವರು ಮಾಡಬೇಕಾದ ಕೆಲಸವನ್ನು ಕುರಿತು ಅವರಿಗೆ ಪ್ರಥಮತಾ ಬೋಧನೆ ಕೊಟ್ಟು, ಗುಟ್ಟು ಯಾರೊಬ್ಬರಿಗೂ ಸಿಕ್ಕದಹಾಗೆ ಬಹು ರಹಸ್ಯವಾಗಿ ವಿಶಿಷ್ಟ ಮುಂಜಾಗ್ರತೆ ತಕ್ಕೊಂಡನು. ಮತ್ತು ಈ ಉಪಾಯವು ಉತ್ಕೃಷ್ಟ ವಾದಕಾರಣ ಅದರಿಂದ ಚತುರ್ಮಠದವರು ಗೆಲ್ಲುವರೆಂಬ ಭರವಸೆಯಲ್ಲಿ ಇದ್ದನು. ಇಂಥಾದ್ದೊಂದು ವ್ಯಸನ ನಡಿಸುವುದಕ್ಕೆ ಈ ವಕೀಲನು ಉದ್ಯುಕ್ತ ನಾಗಿರುವನೆಂಬ ಮರ್ಮವು ಭೀಮಾಜಿಗೆ ತಿಳಿಯದೆ ಹೋಗಿರಲಿಲ್ಲ. ಅವನ ಪರಿಮುಖ ಶಾಬಯ್ಯನೂ ಅದನ್ನು ಅರಿತವನಾಗಿದ್ದನು.

ಅಕ್ಕಿಯ ಮುಹೂರ್ತಕ್ಕೆ ನಿಶ್ಚಯಿಸಿದ ದಿನವು ಸಮಿಾಪಿಸಿತು. ಭೀಮಾ ಜಿಯು ಮುಂದಾಗಿ ತಿಳಿಸಿದ ಪ್ರಕಾರ ಏನಾದರೂ ತಂಟೆ ನಡೆಯದಂತೆ ಸರ್ಕಾರದವರು ಎಚ್ಚರದಿಂದಿರಬೇಕಾಗಿ ಚಂಚಲನೇತ್ರರ ಕಡೆಯಿಂದ ಕಾರ ಭಾರಿಯ ಮುಂದೆ ಒಂದು ಮನವಿಯು ಕೊಡಲ್ಪಟ್ಟಿತು. ಸರಿ ಸರಿ ಬೇಕಾದ

ಮುಂಜಾಗ್ರತೆ ತಕ್ಕೊಳುವ ಹಾಗೆ ಕೊತ್ವಾಲನಿಗೆ ತಾಕೀದು ಕಳುಹಿಸೋಣಾಗುವದೆಂಬ ಅಭಯವಾಯಿತು. ಹಾಗೆಯೇ ಕೊತ್ವಾಲನಿಗೆ ನಿರೂಪವೂ ಬಂತು. ಅದು ತಲ್ಪಿದ ಕೂಡಲೇ ಅವನು ಜವಾನರ ಸಹಿತ ಅಸುವಾದನು. ರಾಮದಾಸನು ಚಂಚಲನೇತ್ರರನ್ನು ತಡೆಯುವದಕ್ಕೆ ಕೂಡಿದ ಗುಂಪಿನಲ್ಲಿ ತಾನು ಸೇರಿದರೆ ಇಲಿಯು ಕತ್ರಿಯಲ್ಲಿ ಬೀಳುವಂತೆ ಸಿಕ್ಕಿಬಿದ್ದು ನಷ್ಟ ಭ್ರಷ್ಟ ಕಷ್ಟ ಪಡೆಯ ಬೇಕಾಗುವದು. ಹಿಂದೆ ಒಮ್ಮೆ ಅಜಾಗ್ರತೆಯಿಂದ ಪಟ್ಟ ವ್ಯಾಕುಲವೂ ದ್ರವ್ಯ ನಷ್ಟವೂ ಮರಿಯಲೇ ಇಲ್ಲವೆಂದು ಶ್ವಶುರಗೃಹಕ್ಕೆ ಅವನು ಏನೋ ಪ್ರಸ್ತದ ನೆವನದಿಂದ ತೆರಳಿದನು. ರವಷ್ಟಾವರೂ ಧೈರ್ಯವಿಲ್ಲದ ಇಂಥಾ ಬಾಯಿಬಡಕನು ಇದ್ದರೂ ಸವು, ಇಲ್ಲದಿದ್ದರೂ ಲೇಸೆಂದು ರಘುವೀರರಾಯನು ರಾಮದಾಸನ ಮೇಲೆ ಸಿಟ್ಟಿನಿಂದ ಹಲ್ಲುಕಡಿಯುತ್ತಾ, ಸಿಪಾಯರಿಗೆ ಕವಾತು ಆಡಿಸುವ ಹಾಗೆ ತಾನು ಕೂಡಿಸಿದ ಅಕ್ರಮ ಕೂಟದವರನ್ನು ದೇವಾಲಯದ ಬಾಗಲಿನ ಒಳಗೂ ಹೊರಗೂ ಸಂದು ಮೂಲೆಯಲ್ಲಿಯೂ ನಾಲಾಗಿ ನಿಲ್ಲಿಸಿ, ಜಯದ್ರಥನು ಚಕ್ರಬಿಂಬ ಕೋಟೆಯ ಬಾಗಿಲಲ್ಲಿ ನಿಂತಂತೆ ಎದುರು ಬಾಗಿಲ ಮುಂಭಾಗದಲ್ಲಿ ಮೀಶೆ ಮೇಲೆ ಕೈ ಆಡಿಸುತ್ತಾ ಅಲೆದಾಡಿಕೊಂಡಿದ್ದನು.

ವಾದ್ಯ ಘೋಷದಿಂದ ಕುಮುದಪುರದ ಮಠದ ಕಡೆಯಿಂದ ದೊಡ್ಡ ಸ್ತೋಮವು ಬರುವದಾಯಿತು. ಒಳಹೊಕ್ಕರೆ ಸೊಂಟ ಮುರಿದು ಹಾಕುವೆನೆಂದು ರಘುವೀರನು ಬೆದರಿಸಿದರೂ ಕೇಳದೆ, ಕೆಲವು ಕಟ್ಟಾಳುಗಳು ಒಳಗೆ ನುಗ್ಗಲಿಕ್ಕೆ ನೋಡುವಾಗ ಎದುರು ಪಕ್ಷದ ಕೂಟದವರಲ್ಲಿ ಒಬ್ಬರಿಬ್ಬರು ಅವರನ್ನ ದೂಡಲಿಕ್ಕೆ ಸನ್ನದ್ಧರಾದರು. ಕೂಡಲೇ ದೂರದಲ್ಲಿ ನಿಂತುಕೊಂಡಿದ್ದ ಭೀಮಾಜಿಯು ಸನ್ನೆಮಾಡಿದನು. ಯಾಕುಬಖಾನನು ಬೇರೆ ಜವಾನರ ಗುಂಪಿನ ಸಂಗಡ ತೀವ್ರವಾಗಿ ಕಲಹದ ಜಾಗಕ್ಕೆ ತಲಪಿ, ರಘುವೀರರಾಯನನ್ನು ಆದಿಯಲ್ಲಿ ಹಿಡಿದು, ಚತುರ್ಭುಜಾಕಾರವಾಗಿ ಬಿಗಿದು ಬಿಟ್ಟನು ಒಳಗೆ ನಿಂತುಕೊಂಡಿರುವ ನೂರಾರು ಮಂದಿ ಕಲಹಪ್ರಿಯರು ಬಡಿಗೆ ಕೋಲು ಮುಂತಾದ ಆಯುಧಗಳ ಸಮೇತ ದಿಕ್ಕಾಪಾಲಾಗಿ ಹಿಂಬಾಗಲಿನಿಂದ ಓಡಿದರು. ಮೂಡು ಪಡು ದಿಡ್ಡಿ ಬಾಗಲುಗಳಿಂದ ಬೇರೆ ಕೆಲವರು ಭಯದಿಂದ ನಡುಗಿ ಹಿಂದೆ ನೋಡುತ್ತಾ ಓಟಹಾಕಿದರು. ಬಲಿಷ್ಠರು ಬಲಹೀನರ ಗುಂಪನ್ನುಬಾಗಲಿನಿಂದ ಚದರಿಸಿ

ಪಲಾಯನ ಮಾಡಿದರು. ಆ ಗೌಜಿಯಲ್ಲಿ ಹಲವರು ಬಿದ್ದು, ಮೂಗು ತುಟಿಗಳನ್ನು ಒಡಕೊಂಡು, ಕೈಗಳಿಂದ ರಕ್ತ ಪ್ರವಾಹವನ್ನು ಒರಸಿಕೊಳ್ಳುತ್ತಾ ದೇಶಭ್ರಷ್ಟರಾದರು.

ಅಂದು ರಘುವೀರರಾಯನಲ್ಲಿ ಆದ ಔತಣವನ್ನು ಚಂದಾಗಿ ಉಂಡು ಡೊಳ್ಳು ಉಬ್ಬಿಸಿಕೊಂಡು ಸರಿಯಾಗಿ ಉಸುರು ಬಿಡಲಿಕ್ಕೆ ಪ್ರಯಾಸವಾಗಿ ದೂರದಲ್ಲಿ ತಮ್ಮಷ್ಟಕ್ಕೆ ನಿಂತುಕೊಂಡಿರುವ ಕೆಲವು ಆಚಾರ್ಯರ ಮೇಲೆ ಭೀಮಾಜಿಯ ದೃಷ್ಟಿಯು ಬಿತ್ತು. ಅವನು ಅವರನ್ನು ಹಿಡಿಸಿದನು. ಒಬ್ಬೊಬ್ಬನ ಬೆನ್ನಿಗೆ ಒಂದೊಂದು ಮುಷ್ಟಿ ಪ್ರಹಾರ ಹದವಾಗಿ ಬೀಳುತ್ತಲೇ ಮಧ್ಯಾಹ್ನದಲ್ಲಿ ಉಂಡ ಮುಷ್ಟಿನೊಡೆ ಅಂಬೊಡೆ ಇತ್ಯಾದಿ ಭಕ್ಷ್ಯಗಳ ತುಂಡು ಗಳು ಪಾಯಸಪ ಸಮೇತ ಒಕ್ಕನೆ ವಮನರೂಪವಾಗಿ ಆಚಾರ್ಯರ ಬಾಯಿಗಳಿಂದ ಹೊರಟು, ಅವರ ಮೈ ಮೇಲೂ ಉಡುಪಿನ ಮೇಲೂ ಬಿದ್ದುವು. ಈ ವಿಚಿತ್ರವನ್ನು ನೋಡುವವರು ಚೆನ್ನಾಗಿ ನಕ್ಕರು. ಜಗಳ ಗಂಟರ ಕೂಟವನ್ನು ಕೊತ್ವಾಲನ ಪೇದೇರು ಮಾನಭಂಗ ಪಡಿಸಿ, ಅವರಿಗೆ ಬೀದಿ ಮೆರವಣಿಗೆಯಾಗುವ ರೀತಿಯಲ್ಲಿ ಕುಮುದಪುರದ ಮಠದ ಬಾಗಲಿ ಗಾಗಿ ಕೊತ್ವಾಲ ಚಾವಡಿಗೆ ಕೊಂಡುಹೋಗಿ ಅಲ್ಲಿ ಅವರ ಹೆಸರು ವಾಸ ಸ್ಥಾನಾದಿ ವಿವರಗಳನ್ನು ಬರಕೊಂಡು, ಅವರ ಹೇಳಿಕೆಗಳನ್ನು ಬರದಾದ ತರುವಾಯ ಅವರ ಮೇಲೆ ದೋಷಾರೋಪಣೆ ಪತ್ರವನ್ನು ಬರೆದು, ತ್ವರೆ ಯಾಗಿ ಕಾರಭಾರಿಯ ಸಮ್ಮುಖದಲ್ಲಿ ನಾಲಾಗಿ ನಿಲ್ಲಿಸಿ, ವಿಚಾರಣೆಯನ್ನು ಪೂರ್ಣ ಮಾಡುವ ಪರಿಯಂತರ ಅವರನ್ನು ಜಾಮೀನಿನ ಮೇಲೆ ಬಿಡಲೇ ಕೈದಿನಲ್ಲಿ ಇಡಲೇ ಎಂದು ಕೊತ್ವಾಲನು ಅಪ್ಪಣೆಯನ್ನು ಕೇಳಿದನು. ಕೈದಿನಲ್ಲಿರಿಸೆಂದು ಆಜ್ಞೆ ಮಾಡಿದರೆ ದೊಡ್ಡದೊಂದು ಪುಕಾರೆಯಾಗುವದು; ವಿಮರ್ಶಾಧಿಕಾರಿಗೆ ದೂರು ಕೊಡಲಿಕ್ಕೆ ಮನಸ್ಸಿರುವ ಈ ಉಪದ್ರಕಾರಕ ಜನರನ್ನು ವೈನದಿಂದ ಸಿಕ್ಕಿಸಿ ಹಾಕುವದೇ ಲೇಸೆಂದು ಯೋಚಿಸಿ,—ಪರ್ವಾ ಯಿಲ್ಲ; ತಕ್ಕ ಜಾಮೀನು ಕೊಟ್ಟರೆ ಬಿಡದೆ ಇರಬೇಕ್ಯಾಕೆ? ಅಪರಾಧ ಸ್ಥಾಪನೆಯಾಗುವ ಪರಿಯಂತರ ಒಬ್ಬನನ್ನು ನಿರಾಪರಾಧಿಯಂತೆ ಭಾವಿಸ ಬೇಕಲ್ಲವೇ? ಎಂದು ಅರೆ ನಗೆಯಿಂದ ಕಾರಭಾರಿಯು ಕೊತ್ವಾಲನಿಗೆ ಆಜ್ಞಾ ಪತ್ರವನ್ನು ಕಳುಹಿಸಿದನು. ಭೀಮಾಜಿಯು ಎಲ್ಲರಿಗೂ ಜಾಮೀನು ತಕ್ಕೊಂಡು, ಮನೆಗೆ ಹೋಗಗೊಟ್ಟನು. ಮರುದಿವಸ ಕೊತ್ವಾಲನ

ವಿಚಾರಣೆಗೆ ನೇಮಿಸಲ್ಪಟ್ಟಿತು.

ಈ ವದಂತಿಯು ಊರಿನಲ್ಲಿಯೂ ಪರ ಊರಿನಲ್ಲಿಯೂ ತುಂಬಿ, ಪ್ರತಿ ಒಬ್ಬನೂ ಬೇರೆ ಪ್ರಸ್ತಾಪ ಮಾಡದೆ, ಈ ಸುವಿಶೇಷವನ್ನೇ ಚರ್ಚೆ ಮಾಡು ವವರಲ್ಲಿ ಬಿದ್ದರು. ಚತುರ್ಮಠಾಧಿಪತಿಗಳು ಅದನ್ನು ಕೇಳುವಾಗಲೇ ಮ್ಲಾನವದನರಾದರು. ಅವರಿಗೆ ಚೆನ್ನಾಗಿ ದಿಗಿಲು ಹುಟ್ಟಿ, ಮುಂದೇನು ಉಪಾಯ ಮಾಡುವದೆಂಬ ಯೋಚನೆ ಹಿಡಿಯಿತು. ಮತಾಭಿಮಾನದಿಂದ ಮುಖ್ಯವಾಗಿ ಒದ್ದಾಡುವ ರಘುವೀರರಾಯನ ಅವಸ್ಥೆಯು ಅವರಿಗೆ ಹೆಚ್ಚು ವ್ಯಾಕುಲವನ್ನುಂಟು ಮಾಡಿತು. ಅವನನಕ ಮೋರೆಯನ್ನೇ ತೋರಿಸಿ ಕೊಳ್ಳಲಿಕ್ಕೆ ನಾಚಿ, ತಾನು ಇಂಥಾ ನಿಂದೆಗೆ ಒಳಗಾದೆನೆಂಬ ಘೋರವಾದ ಚಿಂತಾವರ್ಣವದಲ್ಲಿ ಮುಳುಗಿದನು. ರಾಮದಾಸನು ಈ ಅಪಜಯದ ವಾರ್ತೆಯನ್ನು ಶ್ವಶುರ ಗೃಹದಲ್ಲಿ ಕೇಳಿ, ಬೇಗ ಓಡಿ ಬಂದನು. ಅವನಿಗೆ ಹೆಚ್ಚು ಸಂತಾಪ ಹುಟ್ಟಿರಲಿಲ್ಲ. ರಘುವೀರನ ಮೇಲೆ ಅವನಿಗೆ ಅಂತರ್ಯ ಶುದ್ಧವಿರಲಿಲ್ಲ. ಹಾಗೆಯೇ ಮಠದವರ ಮೇಲೆಯೂ ಅವನಿಗೆ ವಿಶ್ವಾಸ ಕಡಿಮೆಯಾಗಿತ್ತು. ತನ್ನೊಬ್ಬನನ್ನೇ ಮುಖ್ಯ ಮುತ್ಸಾಲಿಕನಾಗಿ ನೇಮಿಸಿ, ಸಾಕಷ್ಟು ದ್ರವ್ಯ ಸಹಾಯ ಕೊಡಲಿಕ್ಕೆ ಮಠದವರು ಅಂಜುವದ್ಯಾಕೆಂತ ಅವನಿಗೆ ತಿಳಿಯದೆ, ಅವರ ಮೇಲೆ ತಾಳಿಕೊಂಡ ವೈಮನಸ್ಸನ್ನು ಅವನು ಪ್ರಕಟವಾಗಿ ಕಾಣಿಸಿಕೊಳ್ಳುತ್ತಿದ್ದಿಲ್ಲ. ಒಟ್ಟಿನ ಮೇಲೆ ಹಲವು ಜನ ಸಮ ಗಾರರು ಕೂಡಿ ತೊಗಲಿನ ಹದ ಕೆಡಿಸಿದರೆಂಬ ಗಾದೆಯಂತೆ ಚತುರ್ಮಠದ ಕಡೆಯ ಪರಿವಾರದವರು ಹಿತಾಹಿತವನ್ನು ಯಥಾಯೋಗ್ಯವಾಗಿ ಗ್ರಹಿಸಿ ನೋಡದೆ, ಪೂರ್ವಾಪರ ತಿಳಿಯದೆ, ಸರಕಾರದ ಉದ್ಯೋಗಸ್ತರ ಮೇಲೆ ಅಪವಾದ ಹಾಕಿಬಿಟ್ಟು, ಸಕಲ ವಿಷಯಗಳಲ್ಲಿಯೂ ನಡೆಸಿದ ಸಾಧನೆ ಯಲ್ಲಿಯೇ ದೋಷ ಬಂದುದರಿಂದ ದುರ್ವ್ಯಾಜ್ಯ ಪ್ರಿಯರೆಂಬ ದುರ್ನಾಮಕ್ಕೆ ತಮ್ಮ ಯಜಮಾನರನ್ನು ಯೋಗ್ಯರಾಗಿ ಮಾಡಿದರು.

ಭೀಮಾಜಿಯು ತನಗೆ ಒಪ್ಪಿದ ಪ್ರಥಮ ವಿಚಾರಣೆಯ ಕೆಲಸವನ್ನು ಪೂರ್ಣಮಾಡಿ, ಅಪರಾಧಿಗಳಲ್ಲಿ ರಘುವೀರರಾಯನನ್ನು ಪ್ರಥಮ ಸ್ಥಾನಕ್ಕೆ ಹಾಕಿಬಿಟ್ಟು ಉಳಿಕೆ ಜನರಲ್ಲಿ ಅವನ ಕರುಣಾವೃತವನ್ನು ಬೇಡಿಕೊಂಡ ವರಿಗೆ ತುಂಟರಿಗೆ ತಡದಿಟ್ಟು, ಬಡಜನರ ಹೆಸರುಗಳನ್ನು ಪಾಪವೆಂದು ಬರಕೊಳ್ಳದೆ, ಮುಖ್ಯಸ್ಥರೆಂಬ ೪೦—೫೦ ಮಂದಿಯ ಮೇಲೆ ದೋಷಾ

ರೋಪಣಾ ಪತ್ರವನ್ನು ಕಳುಹಿಸಿದನು. ಕಾರಭಾರಿಯು ಕಛೇರಿಗೆ ಅದು ತಲುಪಿದೊಡನೆ ಅವನು ವಿಚಾರಣೆಯಾಗುವದಕ್ಕೋಸ್ಕರ ದಿನ ನಿಶ್ಚೈಸಿ ಅಜ್ಞಾಪತ್ರಗಳನ್ನು ಕೊಟ್ಟನು.

ತನ್ಮಧ್ಯ ಚಂಚಲನೇತ್ರರ ಕಡೆಯಿಂದ ಕೊಡಲ್ಪಟ್ಟ ಅಕ್ಕಿ ಮುಹೂರ್ತ ಮುಂತಾದ ವಿಶಿಷ್ಟ ಕಾರ್ಯವು ಸಂಭ್ರಮದಿಂದ ನಿರ್ವಿಘ್ನವಾಗಿ ನಡೆಯಿತು. ಭೀಮಾಜಿಗೂ ಕಾರಭಾರಿಗೂ ವಿವಿಧ ಭಕ್ಷ ಬೋಜ್ಯಗಳನ್ನು ಹರವಿಗಳಲ್ಲಿ ತುಂಬಿ ಕಳುಹಿಸಿಕೊಡೋಣಾಯಿತು. ಆ ಕಾಲದ ನ್ಯಾಯ ವಿಧಾಯಕ ಸಭೆಯುವರ ಕಾನೂನಿಗೆ ಅಸಮ್ಮತವಲ್ಲದ ವಸ್ತ್ರಾಭರಣ ಇತ್ಯಾದಿ ಉಚಿತವು ಕೊಡಲ್ಪಟ್ಟಿತು. ವಾಗ್ದೇವಿಯು ಆನಂದದಿಂದ ಉಬ್ಬಿದಳು. ಸೂರ್ಯ ನಾರಾಯಣನು ತಾಯಿಯ ದುರ್ನಡತೆಯ ಫಲವನ್ನು ಬಹು ಬೇಗ ತಾನೇ ಉಣ್ಣಬೇಕಾಯಿತೆಂಬ ವ್ಯಸನವನ್ನು ಆಶ್ರಮವಾದಂದಿನಿಂದ ತಾಳಿಕೊಂಡಿದ್ದಾಗ್ಯೂ ಅದನ್ನು ಪ್ರಕಟವಾಗಲಿಕ್ಕೆ ಬಿಡದೆ, ಮನಸ್ಸಿನಲ್ಲಿಯೇ ಇರಿಸಿಕೊಂಡಿದ್ದನು. "ಜಗಳವು ಆದಿಭಾಗದಲ್ಲಿಯೇ ತಲೆದೋರಿಯದೆ. ಮುಂದೆ ಏನೇನು ನಡೆಯಲಿಕ್ಕದೆಯೋ? ತನ್ನನ್ನು ದೇವರು ಯಾಕೆ ಸೃಷ್ಟಿಸಿದನಪ್ಪಾ!" ಎಂಬ ಘೋರವಾದ ವ್ಯಾಕುಲದಿಂದ ಅವನು ದಿನೇ ದಿನೇ ಕ್ಷೀಣವಾಗುತ್ತಾ ಬಂದನು. ಇವನ ದೇಹಸ್ಥಿತಿಯನ್ನು ನೋಡಿ, ಹಲವರು ಹಲವು ವಿಧವಲ್ಲಿ ಮಾತನಾಡಿಕೊಂಡರು. ಅದರ ಕಾರಣವು ವ್ಯಾಕುಲವೇ ಎಂಬ ಮರ್ಮವು ಅವನ ತಾಯಿಗೆ ಮಾತ್ರ ತಿಳಿಯಲಿಕ್ಕೆ ಸಂದರ್ಭವಿತ್ತು. ಚಂಚಲನೇತ್ರರಿಗೂ ಅದರ ಗುಟ್ಟು ತಿಳಿಯದೆ ವೈದ್ಯರನ್ನು ಕರಿಸಿ, ಅವನಿಗೆ ಪುಷ್ಟಿಯಾಗುವ ಮದ್ದು ಕೊಡಿಸಲಿಕ್ಕೆ ಏರ್ಪಾಡು ಮಾಡಿದರು.

ಹಣವಿನ ಮೇಲಿನ ಮೋಹದಿಂದ ಇನ್ನೂ ಹಿಂಜರಿದರೆ ಲೋಕಾಪವಾದಕ್ಕೆ ಬೀಳುವದಾಗುವದೆಂಬ ಭಯದಿಂದಲೂ ತನ್ನ ಪಾರುಪತ್ಯಗಾರನ ಅಳಿಯನಾಗಿ ಭೋಜನಾಲಯದಲ್ಲಿ ಶ್ರೀಪಾದಂಗಳ ಪಂಕ್ತಿಯಲ್ಲಿ ಮರ್ಯಾದೆ ಉಳ್ಳ ಪ್ರಥಮ ಎಡೆಯಲ್ಲಿ ಕೂತುಕೊಂಡು ಉಣ್ಣುವ ಯೋಗ್ಯತೆಯುಳ್ಳವನಾದ ರಘುವೀರರಾಯನೇ ಸಿಕ್ಕಿಬಿದ್ದಿರುವುದರಿಂದಲೂ ಬೇರೆ ಮಠದವರು ಈ ವಿವಾದದಲ್ಲಿ ಜಯ ಹೊಂದುವದಕ್ಕೆ ತನ್ನಷ್ಟು ಆತುರವುಳ್ಳವರಾಗಿರುವದಿಲ್ಲವಾದರೂ ಚಿಂತೆ ಇಲ್ಲ. ತಾನು ಅವರಂತೆ ಹೇಡಿತನ ಮಾಡಲಾಗದೆಂದು ನೃಸಿಂಹಪುರದ ಮಠಾಧಿಪತಿಗಳು ಬೇಕಾದಷ್ಟು ದ್ರವ್ಯಾನುಕೂಲವನ್ನು

ಒದಗಿಸಿಕೊಟ್ಟು, ತನ್ನ ವಾರುಪತ್ಯಗಾರನೇ ಸ್ವತಹ ಶತಪ್ರಯತ್ನಮಾಡಿ ಅಪರಾಧಿಗಳನ್ನು ವಿಮುಕ್ತರಾಗಿಮಾಡಬೇಕೆಂದು ಆಜ್ಞಾಪಿಸಿ, ವಿಚಾರಣೆಯ ಫಲವು ದಿನವಹಿ ತರಿಸಿಕೊಳ್ಳುವ ಹಾಗಿನ ಜಾಗ್ರತ ತಕ್ಕೊಂಡರು. ವಾರು ಪತ್ಯಗಾರನು ಕುಮುದಪುರಕ್ಕೆ ಹೊರಟನು. ಒಂದೊಂದು ಪ್ರಕರಣಕ್ಕೆ ಒಬ್ಬೊಬ್ಬ ವಕೀಲನನ್ನು ನೇಮಿಸುವದು ಮಠದ ಘನತೆಗೆ ಅಯೋಗ್ಯವಾದು ದರಿಂದ ಮುಖ್ಯ ವಿವಾದದ ಅನುಭವ ಚಂದಾಗಿ ಉಳ್ಳವನಾದ ಕೋದಂಡ ಪಾಣಿರಾಯನನ್ನೇ ಮರಳಿ ಅರಿಸುವ ಯೋಚನೆಯಿಂದ ಅವನನ್ನು ಕಂಡು ಪ್ರಕೃತದ ವಿಚಾರದಲ್ಲಿ ಹ್ಯಾಗೆ ನಡಕೊಳ್ಳಬೇಕೆಂದು ಬುದ್ಧಿ ಮಾರ್ಗ ಕೇಳಿ ದಾಗ ಮುಂಚಿತವಾಗಿ ತನ್ನ ಆಲೋಚನೆ ಸಾಮ್ಯವನ್ನು ಮಡಗಬೇಕೆಂದನು

ಸ್ವಾಮಿಗಳು ಫಲಮಂತ್ರಾಕ್ಷತೆಯನ್ನು ಪ್ರೀತಿಯಿಂದ ಆಶೀರ್ವಾದ ಪೂರ್ವಕವಾಗಿ ಕಳುಹಿಸಿಕೊಟ್ಟಿರುವರೆಂದು ವಾರುಪತ್ಯಗಾರನು ಹೇಳಿದನು. "ಆಚಾರ್ಯರೇ! ಚಿನ್ನದ ಮಂತ್ರಾಕ್ಷತೆ ಮುಷ್ಟಿ, ತುಂಬಾ ಕೊಡುವ ಕಾಲ ಇದೇ ಅಂಸಿನ ಹಚ್ಚಿದ ಅಕ್ಕಿ ಕಾಳು ಕೊಡುವದರಿಂದ ತೃಪ್ತಿಯಾಗದು. ಅದು ಹ್ಯಾಗಿದ್ದರೂ ನಾನೇನಾದರೂ ಇಷ್ಟಿಷ್ಟು ಕೊಡಬೇಕೆಂದು ವಾಚಾಟ ಮಾಡುವವನಲ್ಲ. ನನಗೆ ಬೇರೆ ಯಥೇಷ್ಟ ಕೆಲಸವಿರುವದರಿಂದ ಆಲೋ ಚನೆ ಸಾಮ್ಯ ಕೇಳಿಬಿಟ್ಟರೆ ಸ್ವತೇವ ತಮಗೆ ನನ್ನ ಮೇಲೆ ಉದಾಸೀನವಾಗಿ ಇನ್ನೊಬ್ಬ ವಕೀಲನ ಮನೆಗೆ ಹೋಗುವಿರೆಂದು ತಿಳಕೊಂಡೆನು." ಹೀಗೆಂದು ಕೋದಂಡಪಾಣಿಯು ಉತ್ತರ ಕೊಟ್ಟನು. ಮರುದಿನ ವಾರುಪತ್ಯಗಾರನು ಬಿಡಾರಕ್ಕೆ ಹೋಗಿ ವಕೀಲನಿಗೆ ಮನೋಲ್ಲಾಸವಾಗುವ ಹಾಗೆ ಹಣ ತುಂಬಿದ ಚೀಲ ಅವನ ಮುಂಭಾಗದಲ್ಲಿ ಇಟ್ಟನು. ಆಗ ಅವನ ಕಣ್ಣು ಕೋರವಿಸಿದವು. ಬೇರೆ ವಕೀಲನನ್ನು ಹುಡುಕುವದಕ್ಕೆ ಇನ್ನೊಮ್ಮೆ ಹೇಳಿಬಿಟ್ಟರೆ ದ್ರವ್ಯ ನಷ್ಟಕ್ಕೆ ಕಾರಣವಾಗುವದೆಂಬ ಭಯದಿಂದ ವಕೀಲನು ಪ್ರಕರಣದ ಪೂರ್ವಾಪರವನ್ನು ಚನ್ನಾಗಿ ಗ್ರಹಿಸಿ ನೋಡಿ, ಏನಂದನೆಂದರೆ– "ವಕೀಲನಾದ ರಘುವೀರನು ಕಲಹದ ಕಾಲದಲ್ಲಿ ಜಗಳಗಂಟರ ಕೂಟದ ನಾಯಕನಾಗಿ ಎಲ್ಲಗಿಂತಲೂ ಮುಂದೆ ನಿಂತು ಕಲಹವನ್ನು ಆರಂಭಿಸಿದ್ದು ದೊಡ್ಡ ಹುಚ್ಚು ತನವೇ. ಅವನ ಮೇಲೆ ಅಪರಾಧದ ಭಾರವು ಘೋರ ವಾಗಿರುವಂತೆ ತೋಚುತ್ತೆ. ವಕೀಲನಾಗಿ ಅಂಥ ಅಕ್ರಮ ಕೂಟದಲ್ಲಿ ಕೂಡಿದೆನೆಂದು ಅವನು ಒಪ್ಪಿಕೊಂಡರೆ ಸಿಕ್ಕಿಬೀಳುವನು. ತಾನಲ್ಲಿರಲಿಲ್ಲ

ನೆಂಬ ಸುಳ್ಳು ಸಾಧನೆಯಿಂದ ಕಾರ್ಯ ಮತ್ತಷ್ಟು ಕೆಡುವದು. ಆದಕಾರಣ ವಣ್ಣದೊಂದು ಬುದ್ಧಿವಂತಿಗೆ ಮಾಡಬೇಕು. ನೃಸಿಂಹಪುರದ ಮಠವಲ್ಲಿ ಆತನಿಗೊಂದು ಉದ್ಯೋಗವಿರುವದರಿಂದ ಅವನು ಆ ಮಠದ ಕಡೆಯಿಂದ ನ್ಯಾಯವಾಗಿ ನಡೆಯಬೇಕಾದ ಕೆಲಸದಲ್ಲಿ ಅವರಿರುವುದರಿಂದ ಬಂದವನಲ್ಲದೆ ಜನರರನ್ನು ಕೂಡಿಸಿ, ಜಗಳ ಮಾಡುವದಕ್ಕೆ ಉದ್ಯುಕ್ತವಾಗಿದ್ದವನಲ್ಲ. ಬೇರೆ ಬೇರೆ ಮಠದವರ ಕಡೆಯಿಂದ ಕೆಲವರು ಚಂಚಲನೇತ್ರರನ್ನು ತಡೆಯು ಲಿಕ್ಕೆ ಬಂದಿರಬಹುದು, ಅದು ಅವರಿಗೆ ಸಹಜವಾಗಿ ಒಪ್ಪಿದ ಧರ್ಮವಾಗಿರುವ ಪೆಸಯಿಂದ ಅವರಿಗೆ ಸಹಾಯಕನಾಗಿ ಒಬ್ಬನು ಬೇಕೇ? ಇಂಥಾದೊಂದು ಸಾಧನೆ ಮಾಡುವವರ ದ್ವಾರ ರಘುವೀರನನ್ನು ಅವನ ಅಪ್ರಬುದ್ಧತೆಯ ಬಾಧಕದಿಂದ ತಪ್ಪಿಸಲಿಕ್ಕೆ ಅನುಕೂಲವಿದೆ. ಬೇರೆ ಎಲ್ಲಾ ವಿಷಯಗಳಲ್ಲಿಯೂ ಆವಾವ ಕಾಲಕ್ಕೆ ಯುಕ್ತ ತೋರುವ ಸಾಧನೆಯನ್ನು ಮಾಡೋಣ." ಈ ಸೂಚನೆಗಳೆಲ್ಲವೂ ಪಾರುಪತ್ಯಗಾರಗೆ ಸರಿಯಾಗಿ ತೋರಿ ಬಂದುದರಿಂದ ಹಾಗೆಯೇ ವರ್ತಿಸಿ ರಘುವೀರರಾಯನನ್ನು ನೃಸಿಂಹಪುರದ ಮಠದಲ್ಲಿ ಕಾರ್ಯಸ್ತನೆಂಬ ದೊಡ್ಡ ಸ್ವತಂತ್ರ ಕರ್ತನಾಗಿ ನೇಮಿಸೋಣಾಯಿತು.

ವಿಚಾರಣೆಗೆ ನೇಮಿಸಿದ ದಿನವು ಬಂದೇ ಬಂತು. ಅಂದು ಅಪರಾಧಿಗಳ ನ್ನೆಲ್ಲಾ ಸಾಲಾಗಿ ಕಾರಭಾರಿಯ ಸಮ್ಮುಖ ನಿಲ್ಲಿಸಿದರು. ಅವರ ಸಂಖ್ಯೆ ಯನ್ನೂ ಅವರ ಕಡೆಯ ವಕೀಲರ ವಿಡಂಬನವನ್ನೂ ರಘುವೀರರಾಯನ ಬಡಾಯಿಯನ್ನೂ ರಾಮದಾಸರಾಯನ ಉತಾವಳಿಯನ್ನೂ ನೋಡುವದ ಕ್ಕಾಗಿ ಬಹು ಮಂದಿ ಸಂದಣಿಸಿದರು. ಇಂಥಾ ಪ್ರಕರಣದಲ್ಲಿ ಸರ್ಕಾರವೇ ವಾದಿಯಾಗಿ ವ್ಯವಹರಿಸುವ ಪದ್ಧತಿಗನುಸಾರವಾಗಿ ಯಾಕುಬಖಾನನನ್ನು ಪ್ರಮಾಣಮಾಡಿಸಿ, ಸಾಕ್ಷಿಗಾರನಾಗಿ ವಿಚಾರಣೆಗೆ ನಿಲ್ಲಿಸೋಣಾಯಿತು. ಅವನು ಸಾಕ್ಷಿ ನುಡಿದ ಬಳಿಕ ಅಡ್ಡ ವಿಚಾರಣೆಗೆ ಅಪರಾಧಿಗಳ ಕಡೆ ವಕೀ ಲನು ತೊಡಗಿದಾಗಲೇ ಶಾಬಯ್ಯನು ಮೂಗಿನ ಸೊಳ್ಳೆಗಳನ್ನು ಉಬ್ಬಿಸಿ, ಹುಬ್ಬುಗಳನ್ನು ಗಂಟು ಹಾಕಿ, ಕಣ್ಣುಗಳನ್ನು ಕವಣೆ ಕಲ್ಲುಗಳಂತೆ ತಿರುಗಿ ಸಿಕೊಳ್ಳುತ್ತಾ, ನಿಷ್ಠುರವಾದ ವಾಕ್ಕುಗಳಿಂದ ಕೋದಂಡಪಾಣಿಯನ್ನು ಗದರಿಸಿದನು. ವಕೀಲನು ಅದಕ್ಕೆಲ್ಲಾ ಗಣ್ಯಮಾಡದೆ, ತನ್ನ ಧರ್ಮವನ್ನು ತ್ಯಜಿಸಲಾರೆನೆಂದು ಹೆದರದೆ ಪ್ರಶ್ನೆಗಳನ್ನು ಮಾಡುತ್ತಾ ಇದ್ದನು. ಇವನ ಪ್ರಶ್ನೆಗಳು ಬಹು ಜಾಗ್ರತೆಯಿಂದಲೂ ಕೌಶಲ ಪೂರ್ವಕವಾಗಿಯೂ ಕೇಳೋ

ಣಾಗುವ ದೆಸೆಯಿಂದ ಸಾಕ್ಷಿಗಾರರು ಕೊಂಚ ತಪ್ಪಿ ಬೀಳಲಿಕ್ಕೆ ಕಾರಣವಾಗಿ ಕಾರಭಾರಿಗೆ ಸಿಟ್ಟೇರಿ ಮಿತಿಮೀರಿ ಕುತ್ಸಿತ ಮಾತುಗಳಾಡಿದನು.

ಕೋದಂಡಪಾಣಿರಾಯನು ಬಹಳ ಕೋಪದಿಂದ ಈ ಮೊಕದ್ದಮೆಯನ್ನು ಕಾರಭಾರಿಯು ವಿಚಾರಣೆ ಮಾಡದಂತೆ ಆಜ್ಞೆಯಾಗಬೇಕಾಗಿ ಮೇಲಧಿಕಾರಸ್ಥರಿಗೆ ಮನವಿ ಮಾಡುವೆನೆಂಮ ತಿಳಿಸಿ, ಮೊಕದ್ದಮೆಯನ್ನು ತತ್ಕಾಲಕ್ಕೆ ಬಾಕಿಯಲ್ಲಿಡಬೇಕೆಂದು ಬೇಡಿಕೊಂಡನು. ಇದಕ್ಕಾಗಿ ಒಂದು ವಾರದ ವ್ಯವಧಾನ ಸಿಕ್ಕಿತು. ಕಾರಭಾರಿಯ ಮೇಲೆ ಹೆಚ್ಚು ದೂರು ಕಾಣಿಸಿ ಕೋದಂಡಪಾಣಿಯು ಮನವಿಯನ್ನು ಬರೆದು, ವಿಮರ್ಶಾಧಿಕಾರಿಯ ಮುಂದೆ ಇರಿಸಿದನು. ಅವನು ಮೊಕದ್ದಮೆಯ ಲವಾಜಮೆಗಳನ್ನು ಕಾರಭಾರಿಯ ಕಚೇರಿಯಿಂದ ತರಿಸಿಕೊಂಡು, ಚನ್ನಾಗಿ ಪರಾಂಬರಿಸಿ, ಉಭಯ ಕಡೆ ವಕೀಲರ ಚರ್ಚೆಗಳನ್ನು ಕೇಳಿದ ಮೇಲೆ ಪ್ರಕರಣವನ್ನು ಕಾರಭಾರಿಯ ಕಚೇರಿಯಿಂದ ವರ್ಗಮಾಡುವದಕ್ಕೆ ಸಾಕಾದ ಕಾರಣಗಳ್ಯಾವದೂ ಕಂಡುಬರಲಿಲ್ಲವಾಗಿ ತೀರಿಸಿಬಿಟ್ಟನು. ಆಯಿತೇ! ಕೋದಂಡಪಾಣಿಯು ತಲೆಯಮೇಲೆ ಕೈ ಇಟ್ಟುಕೊಂಡು ತ್ವರೆಯಾಗಿ ಮನೆಗೆ ಬಂದು. ಇಂಥಾ ಹೇಸಿಕೆಯಲ್ಲಿ ಯಾಕೆ ಕೈ ಹಾಕಿದನೆಂಬ ಯೋಚನೆಯಲ್ಲಿ ರವಷ್ಟು ಖೇದಪಟ್ಟರು. "ಆದಷ್ಟು ಪ್ರಯತ್ನ ಮಾಡೋಣ; ಜಯಾಪಜಯವು ಕಕ್ಷಿಗಾರರ ಪುಣ್ಯದ ಮೇಲೆ ಹೊಂದಿಯದಲ್ಲವೇ" ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡನು ಮತ್ತು ಯಥಾ ಪ್ರಕಾರ ಕಾರಭಾರಿಯ ಮುಂದೆ ವ್ಯವಹರಿಸಲಿಕ್ಕೆ ಬಂದನು.

ಕಾರಭಾರಿಯು ತನ್ನ ಹಟವೇ ಮೆರೆಯಿತೆಂಬ ಹೆಗ್ಗಳಿಕೆಯಿಂದ ತುಚ್ಛಯುಕ್ತವಾದ ಮುಗುಳು ನಗೆಯಿಂದ ಕೋದಂಡಪಾಣಿಯನ್ನು ಕಡೆಗಣ್ಣಿನಿಂದ ನೋಡುತ್ತಾ, ಆವಾವ ಸಂದರ್ಭದಲ್ಲಿ ಅವನನ್ನು ಜರಿಯುತ್ತಾ ವಿಚಾರಣೆಯನ್ನು ನಡಿಸಿದನು. ರಾಮದಾಸನು ಆಗಾಗ್ಗೆ ಕೋಪದಿಂದ ನಡುಗಿದರೂ ಅನುತ್ತರತೆಯೇ ಭದ್ರವೆಂದು ಮರವೆಯಲ್ಲಿದ್ದವನಂತೆ ಕಾಣಿಸಿಕೊಂಡನು. ವಾದಿಯ ಕಡೆಯ ಸಾಕ್ಷಿಯೆಲ್ಲಾ ತಕ್ಕೊಂಡು ಉಭಯ ಕಡೆ ವಕೀಲರ ಚರ್ಚೆಗಳನ್ನು ಕೇಳಿದ ಮೇಲೆ ಕಾರಭಾರಿಯು ಅಪರಾಧಿಗಳೆಲ್ಲರ ಮೇಲೂ ಆಪಾದನ ಪತ್ರವನ್ನು ಬರೆದು ಓದಿ ಹೇಳಿದನು. ಅವರ ವಾಜ್ಮೂಲಗಳನ್ನು ಬರಸಿಕೊಂಡನು. ಎದುರು ಸಾಕ್ಷಿಗಳಿದ್ದರೆ ತರಬೇಕೆಂದು ಅಪ್ಪಣೆ ಕೊಟ್ಟನು. ನೂರಾರು ಜನರ ಸಾಕ್ಷಿಯನ್ನು ಅಪರಾಧಿಗಳು ಅಪೇಕ್ಷಿಸಿದರು.

ಸಾಕ್ಷಿಗಾರರ ಪಟ್ಟಿಯಲ್ಲಿ ಬಿಕ್ಷುಕನ ಮೊದಲುಗೊಂಡು ಧಾರಾಧಿಪತಿಗಳ ಪರಿಯಂತರ ಹೆಸರುಗಳು ಬರೆದು ಇದ್ದುವು. ಅನಾವಶ್ಯಕವಾಗಿ ಕಾಲಹರಣೆ ಮಾಡಿ ಪ್ರಕರಣದ ವಿನಿಯೋಗವನ್ನು ತಡೆಯುವದಕ್ಕೋಸ್ಕರ ಬರಿಸಲ್ಪಟ್ಟ ಸಾಕ್ಷಿಗಾರರನ್ನು ಕರಸಿಕೊಳ್ಳಲಿಕ್ಕೆ ಕಾರಭಾರಿಯು ಒಪ್ಪಲಿಲ್ಲ. ಕೆಲವರನ್ನು ಕರೆಸಿ ಅವರ ಸಾಕ್ಷಿಯನ್ನು ತಕ್ಕೊಂಡರೂ ಅದು ನಿಸ್ಸಾರವೆಂಬಂತೆ ತೋರಿ ಬಂತು. ಹೀಗಾಗಿ ರಘುವೀರಸಿಗೆ ಇನ್ನೂರು ರುಪಾಯಿ, ಬೇರೆಯವರಿಗೆ ತಾರತಮ್ಯಾನುಸಾರ ನೂರರಿಂದ ಇಪ್ಪತ್ತು ರೂಪಾಯಿ ವರೆಗೆ ಅಪರಾಧ ಹಾಕಲ್ಪಟ್ಟಿತು. ಅದಲ್ಲದೆ ಈ ಘೋರವಾದ ಅನ್ಯಾಯ ಕೃತ್ಯವನ್ನು ಚತುರ್ಮಠದವರು ತೆರೆಯ ಹಿಂದೆ ನಿಂತು ನಡಿಸಿದರೆನ್ನಬಹುದಾದ ಪ್ರಯುಕ್ತ ಸಹಕಾರಿಗಳಾದ ಅವರ ಮೇಲೆ ಕೊತ್ವಾಲನು ದೋಷಾರೋಪಣೆ ಪತ್ರವನ್ನು ಬರೆದು, ಸಾಕ್ಷಿಯನ್ನು ಸಂಗ್ರಹಿಸಿ, ವ್ಯವಹರಿಸಬೇಕಾಗಿ ಅಪ್ಪಣೆ ಆಯಿತು. ಪಶ್ಚಾತ್ತಾಪಕರವಾದ ಈ ಸಮಾಚಾರವನ್ನು ಕೇಳಿದ ಚತುರ್ಮಠದವರಿಗೆ ದಿಗ್ಭ್ರಮೆ ಹಿಡಿಯಿತು. ತಮ್ಮ ಮೇಲೆ ಈಗ ಗ್ರಹಣ ಬಂತಷ್ಟೇ; ಇದರಿಂದ ತಪ್ಪುವ ದಾರಿ ಯಾವದು? ಯಾರ ಮರೆಹೋಗುವದೆಂಬ ಚಿಂತೆಯು ಅವರಿಗೆ ತಗಲಿತು. ಚಂಚಲನೇತ್ರರಿಗೂ ನೃಸಿಂಹಪುರದ ಸನ್ಯಾಸಿಗಳಿಗೂ ಬಂದ ಮನಃಕ್ಲೇಶದಿಂದ ಹುಟ್ಟಿದ ವಿವಾದದಲ್ಲಿ ಉಳಿದ ಮೂರು ಮಠಾಧಿಪತಿಗಳು ಸವ್ಯಾಪಸವ್ಯ ನೋಡದೆ, ಸೇರಿಕೊಂಡ ಕಾರಣ ಅಪಮಾನವೂ ನಷ್ಟವೂ ವ್ಯಥೆಯೂ ಬರುವದಾಯಿತೆಂದು ಗುಣುಗುಟ್ಟಿದರು.

## ಐವತ್ತು

ದುಷ್ಕಾನರು ಅಪಜಯ ಹೊಂದಿ, ಶಿಕ್ಷೆಗೆ ಪಾತ್ರರಾದರೆಂಬ ಆಹ್ಲಾದಕರವಾದ ವಾರ್ತೆಯು ಕಿವಿಗೆ ಬೀಳುತ್ತಲೇ ವಾಗ್ದೇವಿಯೂ ಚಂಚನೇತ್ರರೂ ಪುಳಕಿತರಾದರು. ಭೀಮಾಜಿಗೂ ಶಾಬಯ್ಯಗೂ ಸದೃಶರಾದ ಗಂಡುಗಲಿಗಳು ಹುಟ್ಟಲೇ ಇಲ್ಲವೆಂದರು. ಸಕ್ರೆ ಪಂಚಕಜ್ಜಾಯ ದೊಡ್ಡ ದೊಡ್ಡ ದೋಣಿಗಳಲ್ಲಿ ಕಲಸಿ, ಊರೆಲ್ಲಾ ಹಂಚಿದರು. ಕೊತ್ವಾಲನ ಮತ್ತು ಕಾರಭಾರಿಯು ಜವಾನರಿಗೆ ಉಡುಗೊರೆಗಳಿಂದ ಸಾಕು ಸಾಕೆನ್ನಿಸಿದರು. ಅಂದು ಸಾಯಂಕಾಲ ಭೀಮಾಜಿಯು ಮಠದಲ್ಲಿ ವಾಗ್ದೇವಿಯನ್ನು ಕಂಡು —"ಈಗಲಾದರೂ ನಿನ್ನ ಮನಸ್ಸು ತೃಪ್ತಿಯಾಯಿತೇ?" ಎಂದು ಕೇಳಿದನು.

ನಾಲ್ಕು ಮಠಾಧಿಪತಿಗಳು ಬಿಟ್ಟ ಮಂಡೆಯಲ್ಲಿ ಕಚೇರಿ ಹತ್ತಿದ್ದು ನೋಡ ಬೇಕೆಂಬ ಆಶೆಯೊಂದು ತುಂಬಾ ಅದೆ. ಅಂದಾಗ ಶೀಘ್ರವಲ್ಲಿ ಅಂಥಾ ದ್ದೊಂದು ವಿನೋದವಾಗುವ ಸಂಭವ ಉಂಟು; ನಟಿಯುಲ್ಲವೆಂದು ಅವಳಿಗೆ ಭರವಸೆ ಕೊಟ್ಟನು.

ರಘುವೀರರಾಯನೂ ಅವನ ಜೊತೆಯಲ್ಲಿ ಅಪರಾಧ ಹಾಕಲ್ಪಟ್ಟ ವರೂ ಅವಮರ್ಯಾದೆಯನ್ನು ಸಹಿಸಕೂಡದೆ ದೊಡ್ಡ ಒಬ್ಬ ವಕೀಲನನ್ನು ಹಿಡಿದು ವಿಮರ್ಶಾಧಿಕಾರಿಯ ಮುಂದೆ ತಮ್ಮ ಮೇಲೆ ಅನ್ಯಾಯವಾಗಿ ಕಾರಭಾರಿಯು ಕೊಟ್ಟ ಪಕ್ಷಪಾತದ ವಿಧಿಯನ್ನು ತಿರುಗಿಸಬೇಕೆಂದು ವಿಮರ್ಶೆ ಮನವಿಯನ್ನು ಕೊಟ್ಟರು. ಮೊಕದ್ದಮೆಯ ಲವಾಜಮೆಗಳನ್ನು ತರಿಸಿ ಕೊಂಡು, ಆ ಅಧಿಕಾರಿಯು ಬಹು ತಾಳ್ಮೆಯಿಂದ ಓದಿ ನೋಡಿ, ಉಭಯ ಕಡೆ ವಕೀಲರ ಚರ್ಚೆಯನ್ನು ಎರಡು ದಿವಸಗಳವರೆಗೆ ಕೇಳಿದ ಬಳಿಕ ಕಾರಭಾರಿಯು ಮಾಡಿದ ತೀರ್ಮಾನವು ಸತ್ಯಕ್ಕೂ ನ್ಯಾಯಕ್ಕೂ ಅನುಗುಣ ವಾಗಿಯೇ ಇರುವದಾಗಿ ಮನಸ್ಸಿಗೆ ತೋರಿಬಂದುದರಿಂದ ಮೂಲ ತೀರ್ಪು ಸ್ಥಿರಪಡಿಸಿದನು. ಹೀಗಾಗಿ ಕುಮುದಪುರದ ಮಠದಲ್ಲಿ ಮತ್ತಷ್ಟು ಪ್ರಮೋದ ವಾಯಿತು. ದ್ವೇಷಿಕರಾದ ಚತುರ್ಮಠದವರನ್ನು ಜಯಶ್ರೀ ಕೈಬಿಟ್ಟಳೆಂದು ಚಂಚಲನೇತ್ರರೂ ವಾಗ್ದೇವಿಯೂ ಉಬ್ಬೇರಿದರು.

ಶಾಬಯ್ಯನು ವಿಧಿಸಿದ ತೀರ್ಪು ಸ್ಥಿರವಾದ ಕಾರಣ ನೃಸಿಂಹಪುರಾದಿ ನಾಲ್ಕು ಮಠದ ಸನ್ಯಾಸಿಗಳ ಮೇಲೆ ಕೊತ್ವಾಲನು ಕಲಹಕ್ಕೆ ಸಹಕರಿಸಿದ ದೋಷ ಆರೋಪಿಸಿ, ಅಪರಾಧ ಪತ್ರವನ್ನು ಶಾಬಯ್ಯನ ಬಳಿಗೆ ಕಳುಹಿಸಿ ಕೊಟ್ಟನು. ವಿಚಾರಣೆಗೆ ದಿನ ನಿಶ್ಚೈಸಿ, ಕಾರಭಾರಿಯು ಆಜ್ಞಾ ಪತ್ರಗಳನ್ನು ಚತುರ್ಮಠದ ಯತಿಗಳಿಗೆ ಕಳುಹಿಸಿಕೊಟ್ಟನು. ಅವುಗಳನ್ನು ನೋಡಿ ಸನ್ಯಾಸಿಗಳು ನಾಲ್ವರಿಗೂ ದಿಗಿಲು ಹತ್ತಿತು. ರಘುವೀರರಾಯನನ್ನೂ ರಾಮದಾಸರಾಯನನ್ನೂ ಕರಿಸಿ, ಒಂದೆರಡು ದಿವಸ ಮಾತನಾಡಿಸಿ ನೋಡಿ ದ್ದಲ್ಲಿ ಸುಸೂತ್ರವಾದ ಆಲೋಚನೆ ಹತ್ತದೆ ಇದ್ದುದರಿಂದ ಕೋದಂಡಪಾಣಿ ರಾಯನನ್ನು ಕುದುರೆಯ ಬಂಡಿಯಲ್ಲಿ ಕೂರಿಸಿ, ನೃಸಿಂಹಪುರದ ಮಠಕ್ಕೆ ಕರಿಸಿಕೊಂಡು, ಮಠಾಧಿಪತಿಗಳು ಕಣ್ಣೀರಿಟ್ಟು ಅವನ ಕೂಡೆ ಆಲೋಚನೆ ಕೇಳಿದರು. "ವಿಮರ್ಶಾಧಿಕಾರಿಯು ಸತ್ಯವಂತನೂ, ನಿಷ್ಪಕ್ಷಪಾತಿಯೂ, ದುರಪೇಕ್ಷೆಯಿಲ್ಲದವನೇ ಸರಿ. ಅವನನ್ನೇ ಮಠಾಧಿಪತಿಗಳ ಹುಚ್ಚುತನದ

ದೆಸೆಯಿಂದ ಅವರಮೇಲೆ ವಿಮುಖನಾದ ಕಾರಭಾರಿಯು ಮಂಕುಗೊಳಿಸಿ, ಮಂಗನನ್ನು ಗಾರಡಿಗನು ಆಡಿಸುವಂತೆ ಕುಣಿಸುವದು ನೋಡುವಾಗ್ಗೆ ಮಠದವರಿಗೆ ಏನೋ ದುರ್ದಶೆ ಬಂದಿದೆ. ಯತಿಗಳಿಲ್ಲದೂ ಕಚೇರಿಗೆ ಹಾಜರಾಗಬೇಕೆಂದು ಅವನು ಒತ್ತಾಯ ಮಾಡದಿರನು. ಹಾಗೆಂತ ನಾವು ಸುಮ್ಮಗಿರಬಾರದು. ಆಗುವಷ್ಟು ಪೇಚಾಡಿ ನೋಡಬೇಕು. ರಾಜರ ಸಮ್ಮುಖಕ್ಕೆ ಹೋಗಿ ದೂರು ಹೇಳುವಷ್ಟರ ಪ್ರಯತ್ನವನ್ನು ನಡಿಸಬೇಕು. ದೇವರ ಚಿತ್ತವಿದ್ದ ರೀತಿ ಆಗುವದು.” ಹೀಗೆಂದು ವಕೀಲನು ತನ್ನ ಅಭಿಪ್ರಾಯವನ್ನು ತಿಳಿಸಿದಾಗ—“ಅದೆಲ್ಲಾ ಹಾಳಾಗಲೀ, ನಾವೇ ಊರುಬಿಟ್ಟು ಓಡಿಹೋದರೇನಾಗುತ್ತೆ?” ಎಂದು ಮಠಾಧಿಪತಿಗಳು ಕೇಳಿದರು. ಅಂಥಾ ಹೇಡಿತನದಿಂದ ಮುಖ್ಯ ಕಾರ್ಯವೇ ಕೆಟ್ಟುಹೋಗಿ ನಿರಾಯಾಸವಾಗಿ ಚಂಚಲನೇತ್ರರ ಮನೋರಥವು ಈಡೇರುವದು. ಇಂಥಾ ಅಭಾಸವಾಗುವದಕ್ಕಿಂತ ಮರಣವೇ ಲೇಸೆಂದು ತೋರುತ್ತದೆ” ಎಂದು ರಘುವೀರನೂ ರಾಮದಾಸನೂ ಏಕಮತ್ಯವಾದ ಆಲೋಚನೆಯನ್ನು ಕೊಟ್ಟರು. “ಇಡೀ ಮಠವೇ ಹಾರಿಹೋಗಿ ನಾನು ದೇಶಾಂತರ ಹೋದರೂ ಚಿಂತೆಯಿಲ್ಲ; ಹಟ ಮುರಿಯುವ ಸಾಧನ ನಡೆಸಬೇಕಲ್ಲದೆ ಓಡಿಹೋಗಲ್ಯಾಕೆ? ಶತ್ರುಗಳ ಪ್ರತಾಪ ಹಾಗಿರಲಿ; ಹುಚ್ಚುಮುಂಡೇ ಗಂಡರ ಬಿನಾತೇನದ?” ಎಂದು ನೃಸಿಂಹಪುರಾಧೀಶರು ಪೌರುಷ ಮಾತಾಡಿದರು. ಬೇರೆ ಕೆಲವರು ಪನ್ನಿ ಕೊಚ್ಚಿದರು. ಚತುರ್ಮಠದವರಿಗೂ ಕಾರಭಾರಿಗೂ ತುಂಬಾ ಮನಃಕ್ಲೇಶ ಇರುವ ದೆಸೆಯಿಂದ ತಮ್ಮ ಮೇಲಿನ ಪ್ರಕರಣವನ್ನು ಅವನು ಹಿಡಿಯಕೂಡದಾಗಿ ರಾಜದ್ವಾರದ ತನಕ ಮನವಿಗಳನ್ನು ಮಾಡಲಿಕ್ಕೆ ನಿಶ್ಚೈಸಲಾಯಿತು.

ರಘುವೀರರಾಯನ ಮೇಲೆ ಸ್ಥಾಪನೆಯಾದ ಅಪರಾಧದ ದೆಸೆಯಿಂದ ಅವನು ವಕೀಲಿ ಕೆಲಸ ನೋಡಲಿಕ್ಕೆ ಅಯೋಗ್ಯನೆನ್ನಿಸಲ್ಪಡುವನೆಂಬ ಹೆದರಿಕೆಯಿಂದ ಅವನು ಕಿರಿ ದಿವಾನರ ಮುಂದೆ ವಿಶೇಷ ವಿಮರ್ಶೆ ಮನವಿಯನ್ನು ಕೊಟ್ಟು ಭಗೀರಥ ಪ್ರಯತ್ನ ಮಾಡಿದನು. ಅವನು ಅಪರಾಧಿಗಳ ಕೂಟವಲ್ಲಿ ಸೇರಿದವನೆಂಬುದು ಮನಸ್ಸಿಗೆ ನಿರ್ಧರವಾಗುವ ಹಾಗಿನ ನಿರನುಮಾನವಾದ ಸಾಕ್ಷಿಯು ಮೊಕದ್ದಮೆಯಲ್ಲಿ ಕಂಡುಬರುವದಿಲ್ಲವಾದ ಕಾರಣ ಅವನಿಗೆ ಅನುಮಾನದ ಫಲವನ್ನು ಕೊಟ್ಟು ವಿಮೋಚನೆ ಮಾಡಿಯದೆ ಎಂದು ಕಿರಿ ದಿವಾನರ ತೀರ್ಪಾಯಿತು. ಬೇರೆ ಅಪರಾಧಿಗಳ ಮೇಲೆ ವಿಧಿಸಿದ ಶಿಕ್ಷೆಯು

ಸ್ಥಿರಪಟ್ಟಿತು. ರಘುವೀರನು ಹ್ಯಾಗಾದರೂ ಮರ್ಯಾದೆ ಉಳಿಸಿಕೊಂಡನೆಂಬ ಸಂತೋಷವು ಮಠಾಧಿಪತಿಗಳಿಗೆ ಹೊಸ ಯೌವನ ಉಂಟುಮಾಡಿತೆನ್ನಬಹುದು. ಹಾಗೆಯೇ ತಮ್ಮ ಮೇಲಿನ ಪ್ರಕರಣವನ್ನು ಕಾರಭಾರಿಯು ವಿಚಾರಣೆ ಮಾಡದ ಹಾಗೂ ತಮ್ಮನ್ನು ಕಚೇರಿಗೆ ಬರುವುದಕ್ಕೆ ಬಲತ್ಕಾರಿಸದ ಹಾಗೂ ಹುಕುಂ ಅಪೇಕ್ಷಿಸಿ, ಅವರ ಕಡೆಯಿಂದ ಒಂದು ಅರ್ಜಿಯು ಕಿರಿದಿವಾನರ ಬಳಿಗೆ ಹೋಯಿತು. ಅದರಲ್ಲಿ ತಾವು ಪ್ರವೇಶಿಸಲಿಕ್ಕಾಗುವದಿಲ್ಲ. ವಿಮರ್ಶಾಧಿಕಾರಿಗೆ ಅದನ್ನು ಕೊಟ್ಟು ನಿವೃತ್ತಿ ಪಡೆದುಕೊಳ್ಳಬೇಕೆಂದು ವಿಧಿಸೋಣಾಯಿತು. ವಿಮರ್ಶಾಧಿಕಾರಿಯು ಕೂಡೆ ಮನವಿ ಮಾಡಿಕೊಂಡಲ್ಲಿ ಅವನು ಅದನ್ನು ಮನ್ನಿಸದೆ ತೆಗೆದು ಹಾಕಿದನು. ಶಾಬಯ್ಯನು ಈ ಸಮಾಚಾರವನ್ನು ಕೇಳಿ ಹೆಚ್ಚಳಿಸಿದನು. ಭೀಮಾಜಿಯ ಉಲ್ಲಾಸಕ್ಕೆ ಪಾರವೇ ಇರಲಿಲ್ಲ. ತಾವು ಕಚೇರಿಗೆ ಹಾಜರಾಗುವವರಲ್ಲ. ವಕೀಲನ ಪರಿಮುಖ ವ್ಯವಹರಿಸಿಕೊಳ್ಳುವಂತೆ ತಮಗೆ ಅಪ್ಪಣೆಯಾಗಬೇಕೆಂದು ಚತುರ್ಮಠಾಧಿಪರು ಕೇಳಿದ್ದಲ್ಲಿ ಶಾಬಯ್ಯನು ಅವರ ಅರಿಕೆಯನ್ನು ನಿರಾಕರಿಸಿ ಬಿಟ್ಟನು. ಈ ಸಂಬಂಧ ದೊಡ್ಡ ಗಾಬರಿಯಾಯಿತು. ಮರ್ಯಾದೆ ಹೋಗುವ ಕಾಲ ಸಮೀಪಿಸಿತೆಂದು ಅವರು ಬಹಳವಾಗಿ ಉಪತಾಪ ಪಟ್ಟರು.

ಕುಮುದಪುರದ ಮಠಾಧಿಪತಿಯು ದ್ರವ್ಯಬಲದಿಂದ ತಮ್ಮ ಅಭಿಮಾನವನ್ನು ಭಂಗಿಸಿ ಜಯಹೊಂದಿದರಲ್ಲವೇ? ಕೊತ್ವಾಲನೂ ಅಧಿಕಾರಿಯೂ ದ್ರವ್ಯಾಭಿಲಾಷಿಗಳಾಗಿರುವದಾದರೆ ನಾಲ್ಕು ಮಠದವರು ಯಥೇಷ್ಟ ಹಣ ಕೊಟ್ಟರಾದರೂ ಅವರ ಮೇಲೆ ಕನಿಕರ ಪಡಲಿಕ್ಕೆ ಸಾಕೆಂಬ ಕೋರಿಕೆಯಿಂದ ಶಾಬಯ್ಯನ ಆಪ್ತರ್‍ಯಾರಾದರೂ ದೊರಕಿದರೆ ಮಾತನಾಡಿಸಿ ನೋಡಬಹುದಿತ್ತೆಂಬ ಯೋಚನೆಯಲ್ಲಿರುವಾಗ-- ಅದರ ಯೋಚನೆ ಬೇಡ, ತಾನು ಆ ಕೆಲಸ ಸುಧಾರಿಸುವವರನ್ನು ಹುಡುಕಿ ತರುವೆನೆಂದು ರಘುವೀರನು ವೇದವ್ಯಾಸ ಉಪಾಧ್ಯನನ್ನು ಕಟ್ಟಿಕೊಂಡು ಹೊರಟನು. ಇವರಿಬ್ಬರೂ ಪಟ್ಟಣವೆಲ್ಲಾ ತಿರುಗಾಡಿ ತಮಗೆ ಯುಕ್ತಕಂಡ ಜನರ ಪರಿಮುಖ ಯದ್ವಾ ತದ್ವಾ ಪ್ರಸ್ತಾಪ ಮಾಡಿರುವ ವರ್ತಮಾನವು ಶಾಬಯ್ಯನ ತಿಳುವಳಿಕೆಗೆ ಬಂದು ಕಾರ್ಯಸಾಧನೆಯು ಅಂದವೇ ಪೂರ್ಣವಾಗಿ ಕೆಟ್ಟುಹೋಗಿ ಚತುರ್ಮಠದವರು ಮತ್ತಷ್ಟೂ ವ್ಯಸನಪಡುವದಾಯಿತು. ಇಂಥಾ ದೊಡ್ಡ ಇಕ್ಕಟ್ಟಿನಿಂದ ತಪ್ಪಿಸಿಕೊಳ್ಳುವ ಉಪಾಯವೇ ತೋರದೆ ಒಬ್ಬೊಬ್ಬರು ಒಂದೊಂದು ವಿಧವಾಗಿ ಯೋಚನೆ

ಮಾಡುತ್ತಿರುವಷ್ಟರಲ್ಲಿ ಯತಿಗಳು ಕಾರಭಾರಿಯ ಮುಂದೆ ಹಾಜರಾಗ ಬೇಕಾದ ದಿವಸವು ಬಂದೇ ಬಂತು. ಅಂದು ಆದುದಾಗಲೆಂದು ಅವರ್‍ಯಾರೊಬ್ಬರೂ ಕಚೇರಿಯ ಮುಂದೆ ಬರಲಿಲ್ಲ. ಒಬ್ಬರು ಅಸ್ವಸ್ಥದಲ್ಲಿರುವದಾಗಿ ವೈದ್ಯನ ದೃಢ ಪತ್ರಿಕೆಯನ್ನು ಕಳುಹಿಸಿಕೊಟ್ಟರು. ಇನ್ನೊಬ್ಬರು ಬೇರೊಂದು ಕಡೆಗೆ ಮತ ಸಂಬಂಧವಾದ ವಿವಾದದ ನಿವೃತ್ತಿಗೋಸ್ಕರ ಹೋಗದಿರಕೂಡ ದೆಂಬ ನೆವನದ ಮೇಲೆ ವ್ಯವಧಾನವನ್ನು ಅಪೇಕ್ಷಿಸಿದರು. ಇನ್ನೊಬ್ಬರು ಮಠದಲ್ಲಿ ವಿಶೇಷವಾದ ದೇವರಾರಾಧನೆ ನಲುವಾಗಿ ಸಮಯ ಕೊಡಬೇಕಾಗಿ ಬೇಡಿಕೊಂಡರು. ನಾಲ್ಕನೆಯವರು ಅಕಸ್ಮಾತ್ತಾಗಿ ಪರ ಊರಿಗೆ ಹೋಗುವ ಅಗತ್ಯವಿದೆ; ಕೊಂಚ ಸಮಯದ ವರೆಗೆ ಪ್ರಕರಣವನ್ನು ಮುಂವರಿಸಿಡಬೇಕೆಂದು ಮನವಿ ಮಾಡಿಕೊಂಡರು ಕಾರಭಾರಿಯು ಆ ನೆವನಗಳ್ಯಾವದನ್ನೂ ತಾನು ಅಂಗೀಕರಿಸುವದಿಲ್ಲವೆಂದು ಪ್ರಥಮತಃ ಹೇಳಿದನು. ತರುವಾಯ ವಕೀಲನು ಕಠಿಣವಾದ ರೀತಿಯಲ್ಲಿ ಪ್ರತಿವಾದ ಮಾಡಿದಾಗ ಅವಸರ ಮಾಡುವದರಿಂದ ಕೆಲಸ ಕೆಟ್ಟು ಹೋಗುವುದೆಂಬ ಗ್ರಹಿಕೆಯಿಂದ ಒಂದು ತಿಂಗಳಿನಷ್ಟು ವ್ಯವಧಾನ ಕೊಡುವುದಕ್ಕೆ ಅಪ್ಪಣೆ ಮಾಡಿದನು. ಏತನ್ಮಧ್ಯೆ ರಘುವೀರರಾಯನು ಬುದ್ಧಿವಂತ ವಕೀಲರ ಕೂಡೆ ಆಲೋಚಿಸಿ ಯತಿಗಳನ್ನು ಮುತ್ತಾಲಿಕರ ಪರಿಮುಖ ಹಾಜರಾಗುವಂತೆ ಸಮ್ಮತಿಕೊಡಲಿಕ್ಕೆ ನಿರಾಕರಿಸಿದ ಕಾರಭಾರಿಯ ಹುಕುಮ್ಮಿನ ಮೇಲೆ ವಿಮರ್ಶೆ ಕ್ರಮವಾಗಿ ಇನ್ನೊಮ್ಮೆ ಮಾಡಿ ನೋಡಲಿಕ್ಕೆ ಬೇಕಾದ ಉಪಾಯಗಳನ್ನು ನಡಿಸಿದನು. ವಿಮರ್ಶಾಧಿಕಾರಿಯ ಮುಂದೆ ಮೊದಲು ಒಂದು ಬಿನ್ನಹವನ್ನು ಮಾಡಲು, ಅವನು ಅದನ್ನು ಧಿಕ್ಕರಿಸಿಬಿಟ್ಟನು.

ಆ ಅಪ್ಪಣೆಯ ಮೇಲೆ ಕಿರಿದಿವಾನರ ಮುಂದೆ ಮನವಿಯಾಯಿತು. ಅವರು ಅದನ್ನು ತಿರಸ್ಕರಿಸಿದರು. ಇವರು ಕಡು ಶೈವರಾಗಿ ವೈಷ್ಣವ ಮತ ದ್ವೇಷಿಯಾಗಿರುವ ದೆಸೆಯಿಂದ ವಿಹಿತವಾದ ಆಜ್ಞೆಯನ್ನು ಮಾಡಲಿಕ್ಕೆ ಮನಸ್ಸಿಲ್ಲವಾದ ಕಾರಣ ಇದನ್ನು ಚನ್ನಾಗಿ ಶೋಧಿಸಿ ನೋಡಿ ಯತಿಗಳಿಗೆ ಅನಾವಶ್ಯಕವಾದ ಅವಮರ್ಯಾದೆ ಆಗದ ಹಾಗೆ ಅನುಜ್ಞೆಯಾಗಬೇಕೆಂದು ರಾಜರ ಮುಂದೆ ಮನವಿ ಮಾಡೋಣಾಯಿತು ಅವರು ಅದನ್ನು ಹಿರೇ ದಿವಾನರ ಬಳಿಗೆ ತೀರ್ಮಾನಕ್ಕೋಸ್ಕರ ಕಳುಹಿಸಿಕೊಟ್ಟರು. ಆ ಉದ್ಯೋಗಸ್ಥರು ತಾನೇ ವೈಷ್ಣವ ಮತಾಭಿಮಾನಿಯಾದರೂ ನ್ಯಾಯವಾದ ಅಪ್ಪಣೆಯನ್ನು

ಮಾಡಿದರೆ ದೂರಿಗೆ ಗುರಿಯಾಗವಲ್ಲೆನೆಂಬ ಭರವಸೆಯಿಂದ ಮನವಿದಾರರ ಕಡೆ ವಕೀಲನು ಮಾಡಿದ ಚರ್ಚೆಗಳನ್ನು ಲಾಲಿಸಿ ವಿಹಿತವಾದ ಆಜ್ಞೆಯನ್ನು ಮಾಡಿದನು. ಹ್ಯಾಗೆಂದರೆ--"ಒಂದು ಪ್ರಕರಣದ ಕಕ್ಷಿಗಾರರಲ್ಲಿ ಅಪರಾಧಿಗಳು ಪ್ರತಿ ಒಂದು ಸಂಗತಿಯಲ್ಲಿಯೂ ಸ್ವತಃ ಕಚೇರಿಗೆ ಹಾಜರಾಗಬೇಕೆಂದು ಒಬ್ಬ ಅಧಿಕಾರಿಯು ಬಲತ್ಕಾರಿಸತಕ್ಕ ಅಗತ್ಯವೇನೆಂದು ನಮಗೆ ತಿಳಿಯಲಿಕ್ಕಾಗುವದಿಲ್ಲ. ಹಾಗೆಯೇ ಒಬ್ಬ ಅಪರಾಧಿಯು ಸರ್ವಥಾ ಕಚೇರಿಗೆ ಬರಲಾರೆನೆಂದು ಹಟ ಮಾಡುವದಕ್ಕೆ ಸ್ವತಂತ್ರ ಉಳ್ಳವನಾಗಿರುವದಿಲ್ಲ. ಮುಖ್ಯತಃ ಇಂಥಾ ವಿಷಯಗಳಲ್ಲಿ ಒಂದು ಖಂಡಿತವಾದ ಕ್ರಮವನ್ನು ನಿರ್ಧರಿಸಲಾಗದು. ಆಯಾ ಮೊಕದ್ದಮೆಯ ಸ್ಥಿತಿಗನುಸಾರವಾಗಿ ಅಪರಾಧಿಗಳ ಅಪೇಕ್ಷೆಯನ್ನು ಪೂರೈಸುವದಾಗಲೀ ನಿರಾಕರಿಸುವದಾಗಲೀ ಯುಕ್ತವಾಗುವದು. ಪ್ರಕೃತದ ಸಂಗತಿಯಲ್ಲಿ ಸನ್ಯಾಸಿಗಳನ್ನು ಸಂದರ್ಭವಿರುವ ಮಟ್ಟಿಗೆ ಮರ್ಯಾದೆಯಿಂದ ನಡೆಸಬಹುದು. ಅಪರಾಧಿಗಳೆಂಬ ಒಂದೇ ಕಾರಣದಿಂದ ಅವರ ಮೇಲೆ ಅಪರಾಧ ಸ್ಥಾಪನೆ ಆಗುವ ಮೊದಲೇ ಜರದು ಬೀಳತಕ್ಕ ಅಗತ್ಯವಿಲ್ಲ. ಅತಿ ಅವಶ್ಯವಾದಾಗ ಅವರು ಕಾರಭಾರಿಯ ಮುಂದೆ ಹಾಜರಾಗುವದಕ್ಕೆ ಬದ್ಧರಾಗಿರುತ್ತಾರೆ. ನೀತಿಯನ್ನು ಮಾಡಲಿಕ್ಕೆ ಕೂತ ಅಧಿಕಾರಿಗೆ ಸನ್ಯಾಸಿಯಾಗಲೀ ಅರಸನಾಗಲೀ ಭಿಕ್ಷುಕನಾಗಲೀ ಸಮಾನರೆಂತಲೇ ಕಾಣುವದು ಧರ್ಮಶಾಸ್ತ್ರಕ್ಕೆ ವ್ಯತಿರಿಕ್ತವಾದ್ದಲ್ಲ. ಇದಕ್ಕಿಂತಲೂ ಹೆಚ್ಚು ಸ್ಪಷ್ಟವಾದ ಅನುಜ್ಞೆಗಳನ್ನು ಅನುಭವಸ್ಥ ಮತ್ತು ನಿಷ್ಪಕ್ಷಪಾತಿಯಾದ ಒಬ್ಬ ಉದ್ಯೋಗಸ್ಥನ ನಡವಳಿಕೆಗೋಸ್ಕರ ನಿರ್ಧರಿಸುವದು ಅನಾವಶ್ಯಕವೆಂತ ನಮಗೆ ತೋರುತ್ತದೆ" ಈ ಅಪ್ಪಣೆಯು ವಿಮರ್ಶಾಧಿಕಾರಿಯ ಪರಿಮುಖ ಕಾರಭಾರಿಗೆ ಕಳುಹಿಸೋಣಾಯಿತು.

ಚಮತ್ಕಾರಿಕ ಒಕ್ಕಣೆಯುಳ್ಳ ಈ ಅಪ್ಪಣೆಯನ್ನು ನೋಡಿ ವಿಮರ್ಶಾಧಿಕಾರಿಯು ದಿವಾನನ ಬುದ್ಧಿವಂತಿಕೆಗೆ ಮೆಚ್ಚಿ ಅವನನ್ನು ಹೊಗಳಿದನು. ಆದರೆ ಕಾರಭಾರಿಯು ಅದನ್ನು ನೋಡಿದೊಡನೆ ಕೊಂಚ ಚಕಿತನಾಗಿ ಸಂದರ್ಭ ಸಿಕ್ಕಿದರೆ ಹಿರೀ ದಿವಾನನು ತನ್ನನ್ನು ನೆಲಕ್ಕೆ ಬಡಿಯಲಿಕ್ಕೆ ಅನುಮಾನಪಡಲಾರನೆಂದು ಧೈರ್ಯದಲ್ಲಿ ಸಂಕುಚಿತನಾದನು. ಆದಿನಾರಾಯಣಾಲಯದ ಆಪಳಿತೆಯ ಸರದಿಯು ಚಂಚಲನೇತ್ರರಿಗೆ ಸಿಕ್ಕುವದಕ್ಕೆ ವಿಘ್ನ ಬಾರದಂತೆ ನೋಡಿಕೊಳ್ಳುವದೇ ಅತಿ ಅವಶ್ಯ. ಆ ಕಾರ್ಯ ಕೈಗೂಡಿತೇ ಬೇರೆ

ಎಲ್ಲಾ ವಿಷಯಗಳನ್ನೂ ಸರಿಪಡಿಸಬಹುದು. ಹೀಗೆಂದು ಚತುರ್ಮುಖದವರ ಮೇಲಿನ ಪ್ರಕರಣವನ್ನು ಮೂರು ತಿಂಗಳವರೆಗೆ ಮುಂದರಿಸಿ ಇಡುವದಕ್ಕೆ ಸಮ್ಮತಿಸಿ ಕಾರಭಾರಿಯು ಸ್ವಸ್ಥಚಿತ್ತನಾದನು. ವ್ಯವಧಾನ ಹ್ಯಾಗೂ ತಮ್ಮ ತಮ್ಮ ಅಪೇಕ್ಷೆಯಂತೆ ದೊರಕಿತು. ಮುಂದಿನ ಸ್ಥಿತಿ ನೋಡಲಿಕ್ಕುಂಟು. ಆದರೂ ಅವಸರವ್ಯಾಕೆ? ದೇವರು ಇಟ್ಟ ಹಾಗೆ ಆಗಲೆಂದು ಸನ್ಯಾಸಿಗಳು ಕೊಂಚ ಉತ್ಕರ್ಷತಾಳಿದರು.

## ಐವತ್ತೊಂದು

ದೇವಾಲಯದ ಪ್ರವೇಶಕ್ಕೆ ಒಂದು ತಿಂಗಳುಂಟೆಂದಾಗ ಒಂದು ರಾತ್ರೆ ಚಂಚಲನೇತ್ರರಿಗೆ ಅಕಸ್ಮಾತ್ತಾಗಿ ಅಪಸ್ಮಾರ ರೋಗ ತೊಡಗಿ ಚಿಕಿತ್ಸೆಗೆ ಅವಕಾಶವಿಲ್ಲದೆ ಗತರಾದರು. ವಾಗ್ದೇವಿಗೂ ಅವಳ ಪಕ್ಷದವರಿಗೂ ಸಿಡಿಲು ಬಡಿದಂತಾಯಿತು. ಕಟ್ಟಳೆಗನುಗುಣವಾಗಿ ವೃಂದಾವನವನ್ನು ಮಾಡಿ, ಮುಕ್ತರಾದ ಸನ್ಯಾಸಿಗಳಿಗೆ ಗತಿ ಕಾಣಿಸಿ ಆಯಿತು. ತದುಪರಿ ವಾಗ್ದೇವಿಯು ಶೃಂಗಾರಿಯನ್ನು ಸಂಗಡ ಕರಕೊಂಡು ಕಾರಭಾರಿಯ ಮನೆಗೆ ಹೋಗಿ– "ಇನ್ನು ಮುಂದೆ ಯಾರಿಗೂ ಮುಖ ತೋರಿಸಲಾರೆ. ನನ್ನ ಮಗನ ಭವಿಷ್ಯ ವನ್ನು ಉಳಿಸುವ ಬಹುಭಾರ ತಮ್ಮದು. ಶೃಂಗಾರಿಯನ್ನು ಪಾದಕ್ಕೆ ಒಪ್ಪಿ ಸಿದ್ದೇನೆ. ಇವಳು ಸಮಯ ಬಿದ್ದಾಗ್ಗೆ ನನ್ನ ಕಡೆಯಿಂದ ಬಂದರೆ ಅವಳನ್ನು ಮನ್ನಿಸಬೇಕು" ಎಂದು ಬೇಡಿಕೊಂಡು ಮೂರನೇ ಸಲ ಕಾರಭಾರಿಯಿಂದ ಅಭಯವನ್ನು ಪಡದು ಮರಳಿದಳು. ಚಂಚಲನೇತ್ರರು ಮುಕ್ತರಾದ ಸುದ್ದಿ ಯು ಊರಲ್ಲಿ ಆಗಲೇ ತುಂಬಿತು. ನೃಸಿಂಹಪುರಾದಿ ಮಠಾಧಿಕಾರಿಗಳು ತುಂಬಾ ಸಂತೋಷಪಟ್ಟು, ರಘುವೀರರಾಯನನ್ನು ಕರಸಿ ಸೂರ್ಯನಾರಾ ಯಣನನ್ನು ದೇವಸ್ಥಾನ ಸುಗ್ಗದಂತೆ ಯಾವ ಉಪಾಯ ಮಾಡಬೇಕೆಂದು ಯೋಚನೆ ಗೈಯುವದರಲ್ಲಿ ಬಿದ್ದರು. ಹೆಚ್ಚು ಸಮಯದ ವರೆಗೆ ಚನ್ನಾಗಿ ಆಲೋಚನೆಯಿಂದ ರಾಮದಾಸನ ಕೂಡೆ ವಾದಮಾಡಿ–"ರಾಜದ್ವಾರದಲ್ಲಿ ಏನೊಂದು ವ್ಯವಹರಣೆ ನಡಿಸಿದರೆ ಕೊತ್ವಾಲನ ಆದಿಯಾಗಿ ವಿಮರ್ಶಾಧಿಕಾರಿ ಪರಿಯಂತರ ಜಯ ನಮಗೆ ಸಿಕ್ಕಲಾರದು. ಎದೆ ಘಟ್ಟಿಮಾಡಿಕೋಬೇಕು. ಸ್ವಂದ್ವ ಮಠದಿಂದ ನೇಮಕವಾದ ಶಿಷ್ಯನನ್ನು ಯಾರೊಬ್ಬರಿಗೂ ತಿಳಿಯ ದಂತೆ ಮುಂಚೆಯೇ ದೇವಸ್ಥಾನಕ್ಕೆ ಸಂಬಂಧಿ ಮಠದಲ್ಲಿ ಇರಿಸಿಬಿಟ್ಟು

ದೇವಸ್ಥಾನದ ಎಲ್ಲಾ ಬಾಗಲುಗಳನ್ನೂ ಮುಚ್ಚಿ ಬೀಗ ಹಾಕಿ ಗುಪ್ತವಾದ ರಾವುಗಳಲ್ಲಿ ಸೈನ್ಯಕ್ಕೆ ಸದೃಶವಾದ ಜನಸಂಖ್ಯೆಯನ್ನು ಅಡಗಿಸಿ ಇಟ್ಟು, ನಮ್ಮ ಕಾರ್ಯಹಾನಿ ಮಾಡಲಿಕ್ಕೆ ಬರುವವರನ್ನು ಯಮಪುರಕ್ಕೆ ಕಳುಹಿಸಿಕೊಡುವ ಹಾಗಿನ ಏರ್ಪಾಟು ಬಹು ಜಾಗ್ರತೆಯಿಂದ ಮಾಡಿದರೆ ಸೂರ್ಯನಾರಾಯಣನ ಗತಿಯು ನಗೆ ಗೀಡಾಗುವದು" ಎಂದು ರಘುವೀರರಾಯನು ತನ್ನ ಅಭಿಪ್ರಾಯವನ್ನು ತಿಳಿಸಿದನು. "ಸರಿ, ಹಾಗೆಯೇ ಮಾಡಿಬಿಡುವ" ಎಂದು ನಾಲ್ಕು ಮಂದಿ ಸನ್ಯಾಸಿಗಳೂ ಐಕಮತ್ಯವಾದರು.

ಭೀಮಾಜಿಯೂ ಕಾರಭಾರಿಯೂ ಒಂದು ದಿನ ಒಟ್ಟುಗೂಡಿ ಸಂಭಾಷಣೆ ಮಾಡಲೆಸಗಿದರು:–"ನಮ್ಮ ಶಪತವನ್ನು ತೀರಿಸಿಕೊಳ್ಳುವದಕ್ಕೆ ಹಲವು ವಿಘ್ನಗಳು ಬಾರದಿರಲಾರವು. ಸೂರ್ಯನಾರಾಯಣನನ್ನು ದೇವಾಲಯದೊಳಗೆ ಪ್ರವೇಶಮಾಡಿಸಲಿಕ್ಕೆ ನಮ್ಮಿಂದ ಆಗದೆ ಹೋದರೆ ನಾವು ಮಿಾಸೆ ಬೋಳಿಸಿಕೊಂಡು ದೇಶಾಂತರ ಹೋಗುವದೇ ಲೇಸು" ಹೀಗೆ ಕಾರಭಾರಿಯು ಅಂದಾಗ—"ಸೂರ್ಯನಾರಾಯಣನಿಗೆ ಜಯ ಸಿಕ್ಕುವದು ಯಾವ ದೊಡ್ಡ ಮಾತು? ಕಠಿಣವಾದ ಕೆಲಸದಲ್ಲಿ ಧೈರ್ಯವೇ ಪ್ರಧಾನ, ಪ್ರಾಣತ್ಯಾಗ ಮಾಡಿಯಾದರೂ ಅವನನ್ನು ನುಗ್ಗಿಸಿಬಿಡುವಾ. ತಾವು ಅನುಮಾನದಲ್ಲಿ ಬೀಳಬಾರದು" ಎಂದು ಭೀಮಾಜಿಯು ಕಾರಭಾರಿಗೆ ಉತ್ತೇಜನ ಕೊಟ್ಟು, ಅವನ ಮನಸ್ಸಿನ ಚಾಂಚಲ್ಯವನ್ನು ಪರಿಹರಿಸಿದನು. "ಎದುರಾಳಿಗಳು ಸ್ತಂಭೀಭೂತರಾಗಿರುವಂತೆ ತೋರುವದು. ಏನೋ ಗುಟ್ಟಿನ ಆಲೋಚನೆಯಲ್ಲಿರುವ ಹಾಗೆ ಕಾಣಿಸುತ್ತದೆ. ಸೋವು ತಿಳಿಯುವ ಪ್ರಯತ್ನ ಮಾಡಿಲ್ಲವೇ" ಎಂದು ಶಾಬಯ್ಯನು ಭೀಮಾಜಿಯನ್ನು ಕೇಳಿದನು. ತನ್ನ ಮನಸ್ಸಿಗೂ ಸಂದೇಹ ಹೊಕ್ಕಿರುವ ಪ್ರಯುಕ್ತ ವರ್ತಮಾನ ಸಂಗ್ರಹ ಮಾಡುವದರಲ್ಲಿ ಅಮರಿ ಇದ್ದೇನೆ. ಪ್ರಾಮಾಣಿಕವಾದ ಸಮಾಚಾರ ದೊರಿಯಲಿಲ್ಲ. ಬೇಗನೇ ದೊರಕದೆ ಹೋಗದು. ಕ್ರಮೇಣ ಅರಿಕೆ ಮಾಡದೆ ಇರುವೆನೇನೆಂದು ಉತ್ತರ ಕೊಟ್ಟು ಮನೆಗೆ ನಡೆದನು. ಹಾಗೆಯೇ ಯಾಕುಬಖಾನನನ್ನು ಕರದು ಎದುರು ವಾದಿಗಳ ಮುಂಜಾಗ್ರತೆಯ ಸ್ವಭಾವವನ್ನು ತಿಳುಕೊಳ್ಳುವ ಪ್ರಯತ್ನಮಾಡುವದಕ್ಕೆ ನೇಮಿಸಿದನು. ಅವನು ಒಳ್ಳೇಯುಕ್ತಿವಂತನೇ. ತನಗೂ ಕಾರಭಾರಿಗೂ ಅವಿವೇಕ ಹುಟ್ಟಿಯದೆಂಬ ಅನ್ವಯ ಹುಟ್ಟುವ ಮಾತುಗಳನ್ನು ಆಡುವವರ ದ್ವಾರ ಚತುರ್ಮಠದವರ ಮೇಲೆ ಅತಃಕರುಣ

ವಿದ್ದವನಂತೆ ತೋರಿಸಿ ಕೊಂಡು, ಕೊಂಚ ಕೊಂಚ ಸಮಾಚಾರವನ್ನು ಸಂಗ್ರಹಿಸಿ, ಭೀಮಾಜಿಗೆ ತಿಳಿಸುತ್ತಾ ಬಂದನು. ಕಾರಭಾರಿಗೆ ಅದೇ ಪ್ರಕಾರ ವರ್ತಮಾನವೆಲ್ಲಾ ಸರಿಯಾಗಿ ಸಕಾಲದಲ್ಲಿಯೇ ಸಿಕ್ಕುವದಾಯಿತು.

ಏನೂ ತಿಳಿಯದವರಂತೆ ಕೊತ್ವಾಲನೂ ಕಾರಭಾರಿಯೂ ಇದ್ದು ಕೊಂಡರು. ತಮ್ಮ ಗುಪ್ತವಾದ ಆಲೋಚನೆಯೂ ಯಾರಿಗೂ ಗೊತ್ತಿಲ್ಲವೆಂಬ ಹೆಮ್ಮೆಯನ್ನು ತಾಳಿ, ಎದುರು ವಾದಿಗಳು ಮನಸ್ಸಿನಲ್ಲಿ ಮಂಡಿಗೆ ತಿಂದರು. ವಾಗ್ದೇವಿಗೆ ಹೆಚ್ಚು ಅನುಮಾನವೂ ಭಯವೂ ಇದ್ದಾಗ್ಯೂ ಭೀಮಾಜಿಯು ಅದನ್ನೆಲ್ಲಾ ನಿರಸನ ಮಾಡುವದರಲ್ಲಿ ಉದಾಸೀನ ಮಾಡಲಿಲ್ಲ. ಶೃಂಗಾರಿಯು ಸಮಯವರಿತು ಕಾರಭಾರಿಯನ್ನು ತಾನೇ ಕಂಡು, ವಾಗ್ದೇವಿಯ ಪ್ರತಿನಿಧಿಯಾಗಿ ಅವಳ ಸಂಕಷ್ಟಗಳನ್ನು ನಯನುಡಿಯಿಂದ ಅರುಹಿ, ಇಂಥ ಸಂಧಿಯಲ್ಲಿ ನಡಿಯಬೇಕಾದ ಕ್ರಮವನ್ನು ತಿಳುಕೊಂಡು ಅವಳಿಗೆ ಹೇಳುತ್ತಿರುವಳು. ಸೂರ್ಯನಾರಾಯಣನು ಸಹಜವಾಗಿ ತಾಯಿಯ ಮಾತಿನಂತೆ ನಡಕೊಳ್ಳುವದು ಧರ್ಮವೆಂದು ತಿಳುಕೊಂಡನು ತನ್ನ ಅಂತರ್ಭಾವವನ್ನು ಯಾರಿಗೂ ತಿಳಿಯಗೊಡಲಿಲ್ಲ. ಕುಮುದಪುರದ ಮಠದಲ್ಲಿದ್ದ ಹಣ ಕಾಸು ವಸ್ತು ಒಡವೆಗಳು ಚಿನ್ನಚಿಗರೆಲ್ಲ ದಿಕ್ಪಾಲಾಗಿ ಹೋಯಿತು. ಘಟ್ಟಿ ಘಟ್ಟಿ ವಸ್ತುಗಳೂ ಥೈಲಿ ಥೈಲಿ ಹಣವೂ ಪುಣ್ಯ ಸಂಗ್ರಹ ಸಂಗದ ಪೆಟ್ಟಿಗೆಗಳಿಗೆ ದಾರಿ ಹಿಡಿದುವು. ಅಲ್ಪ ಸ್ವಲ್ಪ ಬೇರೆ ವಿಧವಾಗಿ ಯಾರ್ಯಾರ ಜೊಕ್ಕಸದಲ್ಲಿ ಬಿತ್ತು. “ನಂದಾರಾಯನ ಬದುಕು ನಾಯಿನರಿ ತಿಂದು ಹೋಯಿತು” ಎಂಬ ಗಾದೆಯಂತೆ ಕುಮುದಪುರದ ಮಠದ ದ್ರವ್ಯದ ಗತಿಯಾಯಿತು. ಸಾಲಮಾಡುವ ಅಗತ್ಯವು ವಾಗ್ದೇವಿಗೆ ಬಿತ್ತು. ಮಠದ ಸ್ಥಿರಾಸ್ತಿಗಳನ್ನು ಈಡುಕೊಟ್ಟು, ಸೂರ್ಯನಾರಾಯಣನ ಕೈಯಿಂದ ದಸ್ತಾವೇಜುಗಳನ್ನು ಬರೆಸಿ ಕೊಡುವದರ ಮೂಲವಾಗಿಯೂ ಕೈಕಾಗದಗಳ ಮೇಲೂ ಬೇಕುಬೇಕಾದ ಹಾಗೆ ಸಾಹುಕಾರ ಫುತುಹುಲ್ಲಾಖಾನ, ದಿಗಂಬರ ಶೆಟ್ಟಿ, ಗಲ್ಲಮಿಾಸೆ ಸುಬ್ಬಯ್ಯ ಶೆಟ್ಟಿ, ವಾಂತಸೀನಭಟ್ಟ, ಇವರಿಂದ ಹಣವನ್ನು ಈಸುಕೊಂಡು, ವ್ಯಾಜ್ಯ ವ್ಯವಹಾರಗಳ ಉದ್ದಿಶ್ಯ ಬೇರೆ ಅನುಪತ್ಯ ಸುದಾರಿಸಿಕೊಳ್ಳುವದಕ್ಕೋಸ್ಕರವೂ ಉಪಯೋಗಿಸಲಾಯಿತು. ಹಣದ ಮುಖ ನೋಡಿದರೆ ಪಂಥ ಗೆಲ್ಲುವದು ಹ್ಯಾಗೆ? ಸೂರ್ಯನಾರಾಯಣನು ಆದಿನಾರಾಯಣಾಲಯ ಪ್ರವೇಶವಾಗಲಿಕ್ಕೆ ಮೂರೇ ದಿವಸ ಉಳಿದವು. ಕಿರಿ ದಿವಾನರಿಂದ

ತಲಪಿರುವ ಗುಪ್ತಾನುಜ್ಞೆಗೆ ವಿಧೇಯನಾಗಿ ವಿಮರ್ಶಾಧಿಕಾರಿಯು ಫಕ್ಕನೆ ಬಂದು ಕುಮುದಪುರದಲ್ಲಿ ಉಳುಕೊಂಡನು.

## ಐವತ್ತೆರಡು

ದೇವಾಲಯ ಪ್ರವೇಶಕ್ಕೆ ಉಭಯ ಕಡೆಯಿಂದಲೂ ನಿಶ್ಚಯಿಸಲ್ಪಟ್ಟ ಮುಹೂರ್ತವು ರಾತ್ರಿ ಕಾಲವಾಗಿತ್ತು. ಇದು ಪುಂಡಾಟಿಕೆ ನಡೆಸಲಿಕ್ಕೆ ಹೆಚ್ಚು ಅನುಕೂಲವಾದ ಸಮಯವಾದುದರಿಂದ ಉಭಯ ಪಕ್ಷದವರು ತಮ್ಮ ಪಂಥ ಕೈಗೂಡುವದಕ್ಕೆ ಹೆಚ್ಚು ಅಭ್ಯಂತರವಿರದೆಂದು ಗ್ರಹಿಸಿಕೊಂಡರು. ಭೀಮಾಜಿಯೂ ಶಾಬಯ್ಯನೂ ಶಾನೆ ಹೊತ್ತು ಆಲೋಚನೆ ಮಾಡಿದರು. ರಾತ್ರಿ ಕಾಲದಲ್ಲಿ ತಮಗೆ ಪ್ರಾಣಭಯವೇ ಉಂಟಾಗಲಿಕ್ಕೆ ಕಾರಣವಿರುವದು. ಮಾನಹಾನಿಯ ಹೆದರಿಕೆ ಹಾಗಿರಲಿ; ಕೈ ಹಾಕಿದ ಕೆಲಸದಲ್ಲಿ ಜಯ ಹೊಂದದಿದ್ದರೆ ತಾವಿಬ್ಬರೂ ಬದುಕಿ ಪುರುಷಾರ್ಥವಿಲ್ಲ. ಪ್ರಾಣ ಹೋದರೆ ಸಂಸಾರ ಪಾಶದಿಂದ ವಿಮುಕ್ತರಾಗುವೆವು. ಬದುಕಿದರೆ ತಮ್ಮ ಕೀರ್ತಿಯು ಆಚಂದ್ರಾರ್ಕ ಸ್ಥಿರವಾಗುವದು; ಧೈರ್ಯ ಸರ್ವಥಾ ಬಿಡಕೂಡದು. ಹೀಗೆ ನೆನದು ವೀರರಿಬ್ಬರೂ ಬಾರ್ಮಾಡಿದ ಪಿಸ್ತೂಲುಗಳನ್ನು ಸೊಂಟದಲ್ಲಿ ಅಡಗಿಸಿಟ್ಟುಕೊಂಡು, ದೇವಸ್ಥಾನದ ಬಾಗಿಲಿಗೆ ಹೋದರು. ವಿಮರ್ಶಾಧಿಕಾರಿಯು ಪ್ರಯಾಣಸ್ಥರ ಛತ್ರದಲ್ಲಿಯೇ ಉಳಕೊಂಡಿದ್ದನು. ಯಾವದೊಂದು ಅತಿಶಯವಾದ ಕಲಹವಾಗಲೀ ತಂಟೆಯಾಗಲೀ ನಡೆಯಲಿಕ್ಕಿಲ್ಲವೆಂದು ಕೊತ್ವಾಲನೂ ಕಾರಭಾರಿಯೂ ಕೊಟ್ಟ ಧೈರ್ಯದ ಮೇಲೆ ನಂಬಿಗೆ ಇಟ್ಟು, ಅವನು ರಾತ್ರಿ ಕಾಲ ಹೊರಗೆ ಹೊರಡಲಿಲ್ಲ. ದೇವಸ್ಥಾನದ ಬಾಗಿಲಿಗೆ ಬಂದ ಸಮಯದಲ್ಲಿ ಪ್ರಥಮತಾ ದೃಷ್ಟಿಗೆ ಗೋಚರವಾದ ವಿಶೇಷವು ಯಾವದಾಗಿತ್ತೆಂದರೆ—ಯಾರೂ ಒಳಗೆ ನುಗ್ಗದಂತೆ ಹೊರ ಬಾಗಿಲು ಮುಚ್ಚಿರುತ್ತಿತ್ತು. ಬೀದಿಯಲ್ಲಿ ಜನರು ದೂರದಿಂದ ಅತ್ತಿತ್ತ ಅಲೆದಾಡುತ್ತಾ ಇದ್ದರು. ಮುಂಚೆಯೇ ಸೂಚನೆ ಕೊಡಲ್ಪಟ್ಟಿರುವ ಪ್ರಕಾರ ಕುಮುದಪುರ ಮಠದ ಪಕ್ಷದ ಕೆಲವು ಭಿಕಾರಿಗಳು—"ಸ್ವಾಮಿ! ನಾವು ಪರದೇಶದಿಂದ ದೇವರ ದರ್ಶನ ಪಡಕೊಂಡು, ಹೋಗಲಿಕ್ಕೆ ಬಂದವರು. ಒಳಗೆ ಪ್ರವೇಶವಾಗದಂತೆ ಬಾಗಿಲನ್ನೇ ಮುಚ್ಚಿ ಬಿಟ್ಟಿದ್ದಾರೆ. ತೆರೆಯುವಂತೆ ಅಜ್ಞೆಯಾಗಲಿ" ಎಂದು ಕಾರಭಾರಿಯ ಕೂಡೆ ಹೇಳಿಕೊಂಡರು. "ಒಡನೆ ಬಾಗಿಲು ತೆರೆಯದಿದ್ದರೆ

ಅದನ್ನು ಒಡಿಯು ಬೇಕಾಗುವದು. ನೋಡಿಕೊಳ್ಳಿ” ಎಂತ ಕೊತ್ವಾಲನು ಹೊರಗಿನಿಂದಲೇ ಬೆದರಿಸಿದಾಗ ಹೊರಗಿನ ಬಾಗಿಲಿನ ಕೀಲು ಒಳಗಿನಿಂದ ತೆಗೆದರು.

ಪರಂತು ಒಳಗೆ ಎದುರು ಕಡಿಯುವರು ಪ್ರವೇಶಿಸದಂತೆ ತಡೆಯುವದಕ್ಕೆ ಬಾಗಿಲ ಸಂದುಗಳಲ್ಲಿ ದೊಡ್ಡ ಗುಂಪು ನಿಂತುಕೊಂಡಿರುವದು ಕಾರಭಾರಿಯ ಕಣ್ಣಿಗೆ ಬಿತ್ತು. ನಾಲ್ಕು ಜನಕ್ಕಿಂತ ಹೆಚ್ಚು ಜನರು ಒಟ್ಟು ಕೂಡಿಕೊಂಡಿರುವದು ರಾಜ್ಯದಲ್ಲಿ ಊರ್ಜಿತವಾಗಿರುವ ನ್ಯಾಯ ಶಾಸ್ತ್ರಕ್ಕೆ ವಿರೋಧವಾದ ದೆಶೆಯಿಂದ ಕೂಡಲೇ ಚದರದಿದ್ದರೆ ಅವರನ್ನು ಸೆರೆಮನೆಗೆ ಕಳುಹಿಸಿಕೊಡ ಬೇಕಾದೀತೆಂದು ಎಚ್ಚರಿಸೋಣಾಯಿತು. ಆ ಜನರು ತಕ್ಷಣ ಪ್ರತ್ಯೇಕವಾಗಿ ಒಳಗಿನ ಭಾಗದಲ್ಲಿಯೇ ಅವಿತುಕೊಂಡಿರುವದಕ್ಕೆ ಪ್ರಯತ್ನ ಮಾಡಿದರು. ಕೊತ್ವಾಲನ ಜವಾನರು ಅವರನ್ನು ಬಿಡದೆ, ಹೊರಗೆ ಬೀದಿಗೆ ದಬ್ಬಿದರು. ಬೀದಿಯಲ್ಲಿ ಇದ್ದ ಬೇರೆ ಜವಾನರು ಅವರನ್ನು ಓಡಿಸಿಬಿಟ್ಟರು. ಹೀಗಾದುದರಿಂದ ಮುಂದೆ ಆಗಲಿಕ್ಕಿರುವ ದೊಡ್ಡ ಸಂಕಟದಿಂದ ತಪ್ಪಿದ ಹಾಗಾಯಿತೆಂದು ಸಂತೋಷದಿಂದ ಅವರು ಅಲ್ಲಿ ನಿಲ್ಲದೆ, ತಮ್ಮ ತಮ್ಮ ಮನೆಗಳಿಗೆ ನಡೆದರು. ಬೀದಿ ಕಡೆ ಬಾಗಿಲನ್ನು ಪ್ರಯಾಸವಿಲ್ಲದೆ ತೆರೆದಿಡುವದಕ್ಕೆ ಅನುಕೂಲವಾದರೂ ಒಳಗೆ ಹೋಗಲಿಕ್ಕಿರುವ ಇನ್ನೊಂದು ಮುಖ್ಯ ಬಾಗಿಲನ್ನು ತೆರಿಸದಿದ್ದರೆ ಸೂರ್ಯನಾರಾಯಣನು ಒಳಗೆ ಹೋಗಲಿಕ್ಕೆ ಸಂದರ್ಭವೇ ಇಲ್ಲ. ಈ ಇಕ್ಕಟ್ಟಿನಿಂದ ಪಾರಾಗುವ ಯೋಚನೆಯು ಕಾರಭಾರಿಗೆ ಹತ್ತಿಕೊಂಡು, ಅವನ ಮನಸ್ಸಿನಲ್ಲಿ ದೊಡ್ಡ ಉಮ್ಮಳ ಉಂಟುಮಾಡಿತು. ಪರಂತು ಭೀಮಾಜಿಯು ಧೈರ್ಯಗೆಡಲಿಲ್ಲ. ಅವನು ಒಂದು ಒಳ್ಳೆ ಹಿಕಮತ್ತು ನಡಿಸಿದನು. ಯಾವದೆಂದರೆ—ಯಾಕುಬಖಾನನು ಬಂದು ಕಾರಭಾರಿಯ ಮುಂದೆ ನಿಂತು–“ಒಂದು ವರ್ದಿ ಇದೆ” ಅಂದನು. ಹೇಳೆಂದು ಅಪ್ಪಣೆಯಾಯಿತು. ಜವಾನ ನಾಗಪ್ಪ ಅಕ್ರಮ ಕೂಟದವರನ್ನು ಚದರಿಸಲಿಕ್ಕೆ ಬಾಗಿಲ ಒಳಗಡೆ ಇದ್ದವನು ಕಾಣೆಯಾಗಿದ್ದಾನೆ. ಎಲ್ಲಿ ಹುಡುಕಿದರೂ ಸಿಕ್ಕುವದಿಲ್ಲ. ಅವನನ್ನು ಒಳಗಿನ ಜನರು ಬಂದಿಯಲ್ಲಿ ಇಟ್ಟಿದ್ದಾರೋ ಅಥವಾ ಅವನು ಉದ್ದನಾಲಿಗೆಯವನಾದ ಕಾರಣ ಜಗಳದಲ್ಲಿ ಪ್ರವರ್ತಿಸಿದ ದೆಸೆಯಿಂದ ಘಾಸಿಯಾದನೋ ತಿಳಿಯುವದಿಲ್ಲ. ಹೀಗೆ ಅವನು ತನ್ನ ಅನುಮಾನವನ್ನು ನಿವೇದಿಸಿದನು. ಈ ಯುಕ್ತಿ ಪರಿಷ್ಕಾರವಾಗುವದಕ್ಕೆ

ಕಾರಭಾರಿಗೆ ತೋರಿ, ಅವನು ನಸುನಗುತ್ತಾ ಭೀಮಾಜಿಯ ಮುಖವನ್ನು ನೋಡಿ, ಈ ವರದಿಯಲ್ಲಿ ವಿಶ್ವಾಸವಿಡಬಹುವೇ ಎಂದು ಕೇಳಿದನು. ಅಡ್ಡಿ ಏನು? ನಿಜವಾಗಿ ಆ ಜವಾನನಿಗೆ ಏನೋ ಮೋಸ ನಡೆಯಿತೆಂಬ ಸಂದೇಹ ತನ್ನ ಮನಸ್ಸಿಗೂ ಹೊಕ್ಕಿದೆ ಎಂದು ಕೊತ್ವಾಲನು ಅರಿಕೆ ಮಾಡಿಕೊಂಡನು.

ಬಾಗಿಲು ತೆರೆಯುವಂತೆ ಸಾರಿ ಹೇಳಿ, ಅಂಥಾ ಅಪ್ಪಣೆಯನ್ನು ಉಲ್ಲಂಘಿಸಿದರೆ ಛಾಸನಮಾಡದೆ ಬೀಗವನ್ನು ಮುರಿದು ಜವಾನನನ್ನು ಒಳಗೆ ನುಗ್ಗಿಸಿ, ಕಾಣೆಯಾದ ಜವಾನನನ್ನು ಚನ್ನಾಗಿ ಪರಿಶೋಧಿಸಬೇಕೆಂದು ಕಾರಭಾರಿಯು ಕೊಟ್ಟ ನಿರೂಪಕ್ಕನುಸಾರವಾಗಿ ಕೊತ್ವಾಲನು ಬಾಗಿಲು ತೆರೆಯಬೇಕಾಗಿ ಅದಕ್ಕೆ ವಿಧೇಯವಾಗಿ ನಡಕೊಳ್ಳಲಿಕ್ಕೆ ಎದುರಾಳಿಗಳು ತಪ್ಪಿದ ಕಾರಣ ಬೀಗವನ್ನು ಮುರಿದು, ಕೊತ್ವಾಲನು ಒಳಗೆ ಪ್ರವೇಶಿಸಿ, ಪ್ರತಿ ಒಂದು ಸಂದು ಮೂಲೆಯನ್ನು ಬಿಡದೆ ನೋಡಿ, ಅಲ್ಲಿ ಇರುತ್ತಿದ್ದ ವಿಶಿಷ್ಟ ಜನರಲ್ಲಿ ಒಬ್ಬೊಬ್ಬನಿಗೆ ಒಂದೊಂದು ಗುದ್ದು, ಒಂದೊಂದು ಲತ್ತೆಯನ್ನು ಕೊಟ್ಟು ಹೊರಗೆ ದಬ್ಬಿಸಿಬಿಟ್ಟನು. ಗುದ್ದು ಮತ್ತು ಲತ್ತಾಪ್ರಹಾರ ತಡೆಯ ಕೂಡದೆ ಬಲಿಷ್ಠರು ಸಹಾ "ನಾರಾಯಣ! ನಾರಾಯಣ!" ಎಂದು ಹರಿನಾಮ ಉಚ್ಚರಿಸುತ್ತಾ ದೇವಸ್ಥಾನದಿಂದ ಹೊರಗೆ ಓಡಿಹೋಗಿ ದೇಶ ಭ್ರಷ್ಟರಾದರು. ನೃಸಿಂಹಪುರದ ಸ್ವಾಮಿಯವರಿಂದ ಹೊಸ ಆಶ್ರಮ ಹೊಂದಿದ ಹುಡುಗನು ದೇವಸ್ಥಾನದ ಒಂದು ಕೋಣೆಯಲ್ಲಿ ಅಡಗಿ ಕೂತುಕೊಂಡಿರುವದು ಕೊತ್ವಾಲನ ಕಣ್ಣಿಗೆ ಬಿತ್ತು. ಆವನನ್ನೂ ಅವನ ಸಂಗಡಿಗರನ್ನೂ ಉಂಡ ಅನ್ನ ಕಾರಿ ಹಾಕುವ ವರೆಗೆ ಹೊಡದು, ಕುತ್ತಿಗೆಗೆ ಕೈಹಾಕಿ ಹೊರಗೆ ದೂಡಿಬಿಟ್ಟ ಭರಕ್ಕೆ "ಇನ್ನು ಮುಂದೆ ಈ ದೇವಸ್ಥಾನದ ಕಡೆಗೆ ತಲೆಹಾಕಿ ಮಲಗುವದಿಲ್ಲವಪ್ಪಾ! ತಾಯಿಯ ಮೊಲೆಯ ಹಾಲೂ ಹೊಟ್ಟೆಯೊಳಗಿಂದ ಕಾರಿಹೋಯಿತು! ಶ್ರೀಹರಿ! ನೀನೇ ನೋಡಿಕೋ!" ಎಂದು ಹಲಬುತ್ತಾ ಅವರೆಲ್ಲರೂ ಓಡಿಹೋಗಿ ಜೀವದಾಶೆಗೆ ಎಲ್ಲಿ ಅಡಗಿಕೊಂಡರೆಂತಲೂ ತಿಳಿಯಲಿಲ್ಲ. ಸೂರ್ಯನಾರಾಯಣನು ಒಳಗೆ ಹೋಗಲಿಕ್ಕೆ ಮಾರ್ಗ ಸರಾಗವಾಯಿತಲ್ಲ. ಯಾಕುಬಖಾನನು ಸೂಚನೆ ಕಳುಹಿಸಿದಾಗಲೇ ಕುಮುದಪುರಕ್ಕೆ ಚಂಚಲನೇತ್ರರಿಂದ ಆಶ್ರಮ ಹೊಂದಿದ ವಾಗ್ದೇವೀ ಪುತ್ರನೇ ಬಿರುದು ಬಾವಲಿ ಸಮೇತ ವಾದ್ಯ ಘೋಷದಿಂದ ಆದಿನಾರಾಯಣಾಲಯವನ್ನು ಸುಮುಹೂರ್ತದಲ್ಲಿ ಪ್ರವೇಶಮಾಡಿದನು.

ಇದಕ್ಕಿಂತ ದೊಡ್ಡ ಪ್ರಮೋದವು ವಾಗ್ದೇವಿಗೆ ಅವಳ ಜೀವಕಾಲದಲ್ಲಿ ಒದಗಲಿಕ್ಕೆ ಇರುವದೇ? ದೇವರು ತನ್ನ ಮನಸಾಭೀಷ್ಟವನ್ನು ಪರಿಪೂರ್ಣ ವಾಗಿ ಸಲ್ಲಿಸಿದನೆಂಬ ಹದನವು ಸ್ವಪ್ನಾವಸ್ಥೆಯಲ್ಲವಷ್ಟೇ. ತನಗೆ ಕನಸು ಕಟ್ಟಿಲ್ಲವಲ್ಲ! ನಿಜವಾಗಿ ಜಾಗರಾವಸ್ಥೆಯಲ್ಲಿ ತಾನಿರುವಾಗ ಇಂಥಾ ಭ್ರಮೆಯು ಎಲ್ಲಿಂದ ವ್ಯಾಪಿಸಿಬಿಟ್ಟಿತು? ಪೂರ್ವಪುಣ್ಯದ ಪ್ರಭಾವದಿಂದ ಭೀಮಾಜಿ ಮತ್ತು ಶಾಬಯ್ಯ ಎಂಬ ಬಲಿಷ್ಠರಾದ ಉದ್ಯೋಗಸ್ಥರ ಪ್ರೀತಿಯು ದೊರಕಿತು. ಆ ಉಭಯ ಪುರುಷರ ಸಾಹಸದಿಂದ ಅನುಪಮವಾದ ಜಯವು ಮಗನಿಗೆ ಸಿಕ್ಕಿತು. ಅವರ ಕಡೆಗೆ ತನ್ನ ಕೃತಜ್ಞತೆಯು ಪ್ರಾಣಾಂತ್ಯ ಪರಿಯಂತರ ಸ್ಥಿರವಾಗಿರಬೇಕು. ಅವರಿಗೆ ಆದಿನಾರಾಯಣ ಸರ್ವದಾ ಶುಭದಾಯಕನಾಗಿ ಅವರ ಅಭಿಮಾನವನ್ನು ಕಾಯಲೆಂದು ವಾಗ್ದೇಯು ಉಕ್ಕಿ ಬರುವ ಆಹ್ಲಾದದಿಂದ ರೋಮಾಂಚವನ್ನು ತಾಳಿದಳು. ಹಾಗೆಯೇ ಕಾರಭಾರಿಯೂ ಕೊತ್ವಾಲನೂ ಹರುಷಭರಿತರಾಗಿ, "ದೇವರು ನಮ್ಮ ಮರ್ಯಾದೆಯನ್ನು ಕಾದನು. ಬಡ ವಾಗ್ದೇವಿಗೆ ಕೊಟ್ಟ ವಾಗ್ದಾನವು ನೆರವೇರಿತು. ಇನ್ನಾದರೂ ಜೀವಾಂತ್ಯದ ಪರಿಯಂತರ ಅವಳ ಪಕ್ಷವನ್ನು ಬಿಡಲಾಗದು. ಚತುರ್ಮಠದ ಶುಂಠರು ಇನ್ನು ಕೆಲವು ತೃಣಸಮಾನವಾದ ಜೀವಿಗಳೇ. ಅವರನ್ನು ಇನ್ನು ಹ್ಯಾಗೆ ಕುಣಿಸಿದರೂ ಕೇಳುವವರ್‍ಯಾರಿಲ್ಲ. ವಿಮರ್ಶಾಧಿಕಾರಿಯು ಇಂದು ಇಲ್ಲಿಗೆ ದಯಮಾಡಿದ್ದು ದೈವಾನುಕೂಲ ವಲ್ಲವೇ? ಅಲ್ಲವಾದರೆ ಶತ್ರುಗಳು ಮನಸ್ವಿ ತಮ್ಮ ಮೇಲೆ ದೂರು ಹೇಳಿ ಕೊಳ್ಳಲಿಕ್ಕೆ ಸಂದರ್ಭವಾಗುತ್ತಿತ್ತು. ದೇವರೇ! ನಮ್ಮ ಪಂಥ ಗೆಲ್ಲುವಂತೆ ನೀನು ಬಡವರಾದ ನಮ್ಮ ಮೇಲೆ ಕನಿಕರವಿಟ್ಟೆ!" ಎಂದು ಭಗವಂತನನ್ನು ಜ್ಞಾಪಕಕ್ಕೆ ತಂದರು. ಜವಾನ ನಾಗಪ್ಪನು ಯೇನಾದನೆಂದು ತಿಳಿಯ ಬೇಕಲ್ಲವೇ? ಅವನನ್ನು ಯಾರು ಎಲ್ಲಿಗೂ ಕರಕೊಂಡು ಹೋಗಿರಲಿಲ್ಲ. ಗಡಿಬಿಡಿ ತೀರುವವರೆಗೆ ಅವನು ಒತ್ತಟ್ಟು ಯಾರೂ ಕಾಣದಂತೆ ಕೂತು ಕೊಂಡಿದ್ದವನು ಸೂರ್ಯನಾರಾಯಣನು ದೇವಾಲಯ ಹೊಕ್ಕಿದೊಡನೆ ಕೊತ್ವಾಲನನ್ನು ಕಂಡು, ಸಲಾಂ ಮಾಡಿ, ಹೊಟ್ಟೆ ನೋವಿನಿಂದ ಕೊಂಚ ಸಮಯ ಒಂದು ಅಂಗಡಿ ಜಗಲಿಗೆಯ ಮೇಲೆ ಬಿದ್ದುಕೊಂಡಿದ್ದೆನೆಂದು ವಿಜ್ಞಾಪಿಸಿದನು.

ವಿಮರ್ಶಾಧಿಕಾರಿಯು ರಾತ್ರೆ ಏನಾದರೂ ಭಾರೀಕಲಹ ನಡೆದು

ಉಭಯ ಪಕ್ಷದವರಲ್ಲಿ ಹೊಡೆದಾಟವಾಗುವದೊ ಎಂಬ ಸಂದೇಹ ಉಳ್ಳವನಾಗಿ ಗುಡಾರದಲ್ಲಿ ಮಲಗಿ ಕೊಂಡಿದ್ದನು. ಇದೊಂದು ದೊಡ್ಡ ಪ್ರಕರಣವಾದುದರಿಂದ ಅತಿಶಯವಾದ ಜಗಳ ನಡದರೆ ಜಾಗ್ರತೆಸಾಕಾಗಲಿಲ್ಲವೆಂಬ ಅಪವಾದ ಬರುವದೆಂಬ ಭಯವು ಅವನಿಗೆ ಚೆನ್ನಾಗಿ ಇತ್ತು. ಆದಕಾರಣ ಸ್ವಲ್ಪಶಬ್ದವಾದರೆ ಎಚ್ಚೆತ್ತು ಕಿವಿ ಗೊಡುತ್ತಿದ್ದನು. ಪರಂತು ದೇವಾಲಯದ ಕಡೆಗೆ ಹೋಗಲಿಕ್ಕೆ ಅವನಿಗೆ ಮನಸ್ಸಿರಲಿಲ್ಲ. ಮಧ್ಯರಾತ್ರಿಕಳೆದ ಮೇಲೆ ಕೊತ್ವಾಲನೂ ಕಾರಭಾರಿಯೂ ಮೆಲ್ಲನೆ ಅವನ ಗುಡಾರದ ಸಮೀಪ ನಿಂತು ನೋಡಿದರು. ಒಳಗೆ ಅವನು ನಿದ್ರೆಯಲ್ಲಿ ಇದ್ದಹಾಗೆ ಕಂಡು ಬಂತು. ಹರಿಕಾರರ್‍ಯಾರೂ ಎಚ್ಚರವಾಗಿದ್ದ ಹಾಗೆ ಕಾಣಲಿಲ್ಲ. ಆದುದರಿಂದ ಅವರು ತಿರುಗಿ ದೇವಸ್ಥಾನಕ್ಕೆ ಹೋಗಿ ಪುನಹ ಏನಾದರೂ ತಂಟೆನಡಿಯುವ ಹಾಗಿನ ಚಿಹ್ನೆಗಳು ಇವೆಯೋ ಎಂಬುದನ್ನು ಚನ್ನಾಗಿ ನೋಡಿದರು. ಎಲ್ಲವೂ ಶಾಂತವಾಗಿ ಸೋತುಹೋದ ಪಕ್ಷದವರು ಪಲಾಯನ ಮಾಡಿದ ಹಾಗೆಯೇ ತೋರಿತು. ವಿಶೇಷ ಏನಾದರೂ ನಡೆದರೆ ಜಾಪ್ಯ ಮಾಡದೆ ವರದಿಕೊಡಬೇಕಾಗಿ ಜವಾನರಿಗೆ ಅಪ್ಪಣೆಕೊಟ್ಟು ಸಾಕಷ್ಟು ಪಹರೆಯವರನ್ನು ದೇವಸ್ಥಾನದ ಒಳಗೂ ಹೊರಗೂ ಇರಿಸಿಬಿಟ್ಟು ಮನೆಗಳಿಗೆ ಬಂದು "ಹೌದೇನೆ! ಪ್ರಾಣ ಉಳಿಸಿಕೊಂಡೇ ಬಂದಿರುವೆವೆಂದು" ಮುಂಚೆ ಅನುಮಾನಗ್ರಸ್ತರಾಗಿದ್ದ ತಮ್ಮ ಹೆಂಡಂದಿರಿಗೆ ತಿಳಿಸಿ, ಅವರನ್ನು ನಿಶ್ಚಿಂತರಾಗಿಮಾಡಿದರು. ಮರುದಿನ ಬೆಳಿಗ್ಗೆ ಉಭಯ ಉದ್ಯೋಗಸ್ಥರು ವಿಮರ್ಶಾಧಿಕಾರಿಯನ್ನು ಕಂಡು, ಮುಂಚಿನ ರಾತ್ರಿಯಲ್ಲಿ ಕುಮುದಪುರದ ಮಠದ ಪ್ರಕೃತದ ಸನ್ಯಾಸಿಯು ನಿರ್ವಿಘ್ನವಾಗಿ ದೇವಾಲಯ ಪ್ರವೇಶವಾದನು. ಎದುರು ಪಕ್ಷದವರು ಗುಪ್ತತಾವುಗಳಿಗೆ ಕೆಲವು ಪೋಕರಿ ಜನರನ್ನು ಕೂಡಿಸಿಕೊಂಡಿದ್ದರೂ ಅವರು ಮುಂದೆ ಬೀಳಲಿಕ್ಕೆ ಹೆದರಿ ಸುಮ್ಮಗಾದರೆಂದು ವರದಿಕೊಟ್ಟರು. ವಿಮರ್ಶಾಧಿಕಾರಿಯು ಇಷ್ಟು ಒಳ್ಳೇ ವರ್ತಮಾನವನ್ನು ಕೇಳಿ, ಹರ್ಷಿತನಾಗಿ ತನ್ನ ಒಳ ಉದ್ಯೋಗಸ್ತರು ತಕ್ಕೊಂಡ ಮುಂಜಾಗ್ರತೆ ಮತ್ತು ಅವರ ಬುದ್ಧಿವಂತಿಕೆಯನ್ನು ಕುರಿತು ಅವರನ್ನು ಶ್ಲಾಘನೆ ಮಾಡಿದನು. ಕಿರಿ ದಿವಾನರಿಗೆ ತಾಮಸಮಾಡದೆ —ಕುಮುದಪುರದಲ್ಲಿ ಸಕಲ ವಿಷಯದಲ್ಲಿ ಶಾಂತಿಯೇ ಪ್ರಬಲವಾಗಿರುವದು. ಕಲಹವೇನೂ ನಡಿಯಲಿಲ್ಲವೆಂದು ಅಂತರಂಗದಿಂದ ಲೇಖನವನ್ನು ಕಳುಹಿಸಿದನು. ಆ ಮೇಲೆ ಅವನು ತನ್ನ ಮುಖ್ಯ

ವಾಸ್ತವ್ಯಕ್ಕೆ ನಡದುಬಿಟ್ಟನು.

ಚತುರ್ಮಠದವರಿಗೆ ಸೂರ್ಯನಾರಾಯಣನ ವಿಜಯವನ್ನು ಕೇಳಿದಾಗ ತಲೆಯ ಮೇಲೆ ಪರ್ವತ ಜರಿದು ಬಿದ್ದಂತಾಯಿತು. ತಾನು ಹೊಸ ಆಶ್ರಮ ಕೊಟ್ಟ ಹುಡುಗನ ದುರವಸ್ಥೆಯನ್ನು ರಾತಾರಾತ್ರೆ ಓಡಿ ಬಂದ ಆವನ ಬಾಯಿಯಿಂದಲೇ ತಿಳದು ನೃಸಿಂಹಪುರಸ್ವಾಮಿಗಳು ಅಶ್ರುಜಲವನ್ನು ಶಾನೇ ಹೊತ್ತು ಸುರಿಸಿದರು. ಬೇರ ಮೂರು ಮಠಗಳ ಸನ್ಯಾಸಿಗಳೂ ತಮಗೆ ಉಂಟಾದ ಅಪಜಯವನ್ನು ಕುರಿತು ನಾಚಿಕೆಯನ್ನೂ ಶೋಕವನ್ನೂ ತಾಳಿ ಇನ್ನು ಮುಂದೆ ಶತ್ರುಗಳ ಬಾಯಿಯಲ್ಲಿ ಮರ್ಯಾದೆ ಉಳಿಸಿಕೊಂಡು ಜೀವಿಸುವ ಉಪಾಯ ಕಾಣದೆ, ಮತಿಭ್ರಷ್ಟರಾದರೆನ್ನಬಹುದು. ಅವರಿಗೆ ಬೇರೆ ಯಾವ ಹೆದರಿಕೆಯೂ ಇರಲಿಲ್ಲ. ಯಾಕಂದರೆ ಅವರು ಇರುವ ಊರುಗಳು ಕುಮುದಪುರದ ಕಾರಭಾರಿಯ ಅಧಿಕಾರಕ್ಕೆ ಒಳಪಟ್ಟವುಗಳಲ್ಲ. ಆದರೆ ರಘುವೀರರಾಯನು ಕೂಡಿಸಿದ ಕೂಟವನ್ನು ಕುರಿತು ಸಹಕಾರಿಗಳಾದರೆಂಬ ಒಂದು ದೋಷಾರೋಪಣೆಯು ಅವರ ಮೇಲೆ ಇರುವದರಿಂದ ಆ ಉದ್ಯೋಗಸ್ಥನು ತಮ್ಮನ್ನು ಈಗ ಏನೂ ಅಂಕೆಯಿಲ್ಲದೆ ಮಾನಭಂಗಕ್ಕೂ ದ್ರವ್ಯನಷ್ಟಕ್ಕೂ ಗುರಿಮಾಡದಿರನೆಂಬ ಘೋರ ಚಿಂತೆಯಲ್ಲಿ ಅವರು ಮುಣುಗಿದರು. ಇಡೀ ನಗರದಲ್ಲಿ ದೊಡ್ಡ ಗುಬಾರು ಹುಟ್ಟಿತು.

ಶಾಬಯ್ಯನ ಮತ್ತು ಭೀಮಾಜಿಯ ಪ್ರತಾಪವು ವಿಮರ್ಶಾಧಿಕಾರಿಯ ದಯದಿಂದ ದಿನೇ ದಿನೇ ಏರುತ್ತಾ ಬರುವ ಕಾರಣದಿಂದ ಚತುರ್ಮಠದವರ ಹೆದರಿಕೆಯು ಮಿತಿಮೀರಿತು. ಅವರು ಒಂದು ವ್ಯಾಜ್ಯ ಮಾಡಿಯಾದರೂ ನೋಡುವದಕ್ಕೆ ಬುದ್ಧಿವಂತ ವಕೀಲರ ಆಲೋಚನೆಯನ್ನು ರಘುವೀರರಾಯನ ಪರಿಮುಖ ಪಡಕೊಂಡು, ನೃಸಿಂಹಪುರಾಧೀಶರಿಂದ ಆಶ್ರಮ ಹೊಂದಿದ ಸನ್ಯಾಸಿಯಿಂದ ಸೂರ್ಯನಾರಾಯಣನನ್ನು ಹೊರಪಡಿಸುವದಕ್ಕೂ ಚಂಚಲನೇತ್ರರ ಉತ್ತರಾಧಿಕಾರಿಗಳಾಗಿ ತನ್ನನ್ನು ಅಂಗೀಕರಿಸಿಕೊಳ್ಳಲಿಕ್ಕೂ ಫೈಸಲಾಗಬೇಕಾಗಿ ಒಂದು ದಾವೆಯನ್ನು ಮಾಡಲಾಯಿತು. ಅಷ್ಟಾಗುವಾಗ್ಗೆ ನಾಲ್ಕು ಮಠದ ಸನ್ಯಾಸಿಗಳೊಬ್ಬೊಬ್ಬನ ಮೇಲೆ ಎದುರು ಪಕ್ಷದಿಂದ ಫಿರ್ಯಾದುಗಳು ಶಾಬಯ್ಯನ ಮುಂದೆ ಬರಲಿಕ್ಕಾದವು. ಇನ್ನು ತಮ್ಮನ್ನು ಕಾರಭಾರಿಯು ಸಃಪಾತ ಮಾಡುವನೆಂಬ ಹೆದರಿಕೆಯಿಂದ ಪ್ರತಿ ಒಬ್ಬ ಸನ್ಯಾಸಿಯು ಮಠವನ್ನು ಬಿಟ್ಟು. ಅನ್ಯರಾಜ್ಯದಲ್ಲಿ ಸಂಚಾರ

ಮಾಡಿಕೊಂಡು ಇರುವ ರಕ್ಷಣೋಪಾಯವನ್ನು ಹುಡುಕಿದರು. ನೃಸಿಂಹ ಪುರ ಸನ್ಯಾಸಿಗಳು ಊರುಬಿಟ್ಟು ಹೋಗುತ್ತಾ ಅದಾಲತ್ತಿನ ವ್ಯಾಜ್ಯದ ಖರ್ಚಿಗೆ ಬೇಕಾಗುವಷ್ಟು ದ್ರವ್ಯಾನುಕೂಲವನ್ನು ರಘುವೀರನ ಸ್ವಾಧೀನ ಒಪ್ಪಿಸಿದರು. ಅದು ಸಾಲದಿದ್ದರೆ ಹೆಚ್ಚಿಗೆ ಹಣವನ್ನು ಅವನು ದೊರಕಿಸಿ ಕೊಳ್ಳುವದಕ್ಕೆ ಏರ್ಪಾಡು ಮಾಡಿದರು. ರಘುವೀರನ ದರಬಾರು ಮತ್ತೆ ನೋಡಬೇಕೇ? ಕಡಿವಾಣವಿಲ್ಲದ ಕುದುರೆಯ ಗತಿಯಾಯಿತು. ಅವನು ಕೈಗೆ ಸಿಕ್ಕಿದ ಹಣವನ್ನು ದಿಕ್ಕಾಪಾಲಾಗಿ ಅನಾವ್ರಯ ಮಾಡುತ್ತಾ ನಾಗವೇಣಿ ಯೆಂಬ ವಾರಾಂಗನೆಯ ಸ್ನೇಹವನ್ನು ಬೆಳೆಸಿ ಅವಳ ಮನೆಯಲ್ಲಿ ಅಹರ್ನಿಶಿ ಬಿದ್ದು ಕೊಂಡು, ದುರ್ನಾಮವನ್ನು ಬೇಗನೇ ಪಡೆದು, ಸರ್ವರಿಗೂ ಅವಿ ಶ್ವಾಸಿಯಾದನು.

ವ್ಯಾಜ್ಯದ ಗತಿ ಹೇಳಲ್ಯಾಕೆ? ವಾದೀ ಕಡೆಯ ಸಾಹಸವು ಕಡಿಮೆ. ವಾಗ್ದೇವಿಯ ಪಕ್ಷಕ್ಕೆ ವ್ಯವಹಾರ ತೀರ್ಮಾನವಾಯಿತು. ಕುಮುದಪುರ ಮಠಕ್ಕೆ ಈ ಸುದ್ದಿ ಸಿಕ್ಕಿದಾಕ್ಷಣ ಸಕ್ಕರೆ ಪಂಚಕಜ್ಜಾಯ ಊರಲ್ಲೆಲ್ಲಾ ಹಂಚಲಿಕ್ಕೆ ತಾಮಸವಾಗಲಿಲ್ಲ. ಆದರೂ ಎದುರಾಳಿಗಳು ಸುಮ್ಮನಿರವಲ್ಲರು. ಮೂಲ ಅದಾಲತಿನಲ್ಲಿ ಆದ ತೀರ್ಪಿನ ಮೇಲೆ ಮಧ್ಯ ಅದಾಲತಿನ ನ್ಯಾಯಾ ಧಿಪತಿಯ ಮುಂದೆ ವಿಮರ್ಶೆ ಮನವಿ ಕೊಡೋಣಾಯಿತು. ಅವನು ಅದನ್ನು ತಾಳ್ಮೆಯಿಂದ ಪರಾಂಬರಿಸಿ, ಮೂಲ ಲವಾಜಮೆಗಳನ್ನು ತರಿಸಿಕೊಂಡು ಎದುರು ಪಕ್ಷದವರಿಗೆ ಇಸ್ತಿಹಾರು ಆಗಬೇಕಂದು ಅಪ್ಪಣೆಮಾಡಿ ಕಡೇ ತೀರ್ಮಾನಕ್ಕೆ ದಿನ ನೇಮಿಸಿದನು. ವಾದಿ ಕಡೆಯಿಂದ ಘನ ಪಂಡಿತ ಹಳೇ ಕೋಟೆ ಮನಮೋಹನಯ್ಯನು ವಕೀಲನಾಗಿ ವ್ಯವಹರಿಸುವದಕ್ಕೆ ನಿಂತನು. ನ್ಯಾಯ ಶಾಸ್ತ್ರದ ಪುಸ್ತಕಗಳ ಒಂದು ದೊಡ್ಡ ಗುಪ್ಪೆಯನ್ನು ಹೊತ್ತುಕೊಂಡು ವೇದವ್ಯಾಸ ಉಪಾಧ್ಯನು ಅವನ ಬೆನ್ನ ಹಿಂದೆಯೇ ಇದ್ದನು. ಹಲವು ಪುಸ್ತ ಕಗಳನ್ನು ಮಗಚಿ ಅಸಂಖ್ಯಾತ ಆಧಾರಗಳನ್ನೆಲ್ಲಾ ನ್ಯಾಯಾಧಿಪತಿಗೆ ತೋರಿಸಿ, ಅವನು ಪ್ರಸಂಗ ಮಾಡಿ ಸೋತು ಹೋದನು. ಪಂಡಿತನ ಸಾಹ ಸವು ನಿರರ್ಥಕವಾಯಿತು. ನ್ಯಾಯಾಧಿಪತಿಯ ಮನಸ್ಸು ಪ್ರತಿವಾದಿಯ ಗುಣಕ್ಕೆ ಮಾಲುತ್ತಾ ಇತ್ತು. ಕಟ್ಟಕಡೆಯಲ್ಲಿ ಮೂಲ ತೀರ್ಪು ಸ್ಥಿರ ಪಡಿ ಸಿರುವದಾಗಿ ನಿರೂಪವಾಯಿತು. “ಮಠಾಧಿಪತಿಗಳಿಗೆ ಏನು ದುರ್ದಶೆ ಕಾಡುತ್ತೆ? ಎಷ್ಟು ಬಲವಾದ ವ್ಯಾಜ್ಯ! ಅವರಿಗೆ ಅವಗುಣವಾಯಿತು! ವ್ಯರ್ಥ

ವಾಗಿ ನ್ಯಾಯಾಧಿಪತಿಯ ಕೂಡೆ ಶಾನೆ ಹೊತ್ತು ವಾಗ್ವಾದ ಮಾಡಿದೆನು. ಸದರಿ ಅದಾಲತ್ತ ಎಲ್ಲಿ ಅದೆ? ಅಲ್ಲಿ ಮತ್ತೆ ನೋಡಿಕೋಬಹುದು" ಎಂದು ಪಂಡಿತನು ಮರಳಿದನು. ವೇದವ್ಯಾಸನು ಅವನ ಪುಸ್ತಕಗಳ ಹೊರೆಯನ್ನು ಹೊತ್ತು ಅನುಭವಿಸಿದ ತಲೆನೋವು ವಾಸಿ ಆಗಬೇಕಾದರೆ ಹದಿನೈದು ದಿವಸಗಳ ವರಿಗೆ ತೈಲಾಭ್ಯಂಗ ಮಾಡಿಕೊಳ್ಳಬೇಕಾಯಿತು.

ನಾಲ್ಕು ಮಠಾಧಿಪತಿಗಳು ಕಾರಭಾರಿಯ ಭೀತಿಯಿಂದ ಪ್ರವಾಸವನ್ನು ಬಿಟ್ಟು ಮೂಲಸ್ಥಾನಕ್ಕೆ ಬರಲಿಕ್ಕೆ ಮನಸ್ಸಿಲ್ಲದವರಾದರು; ತಮ್ಮ ಅಭಿಮಾನಕ್ಕೆ ವಟ್ಟ ಬಂದು ಹೋಯಿತೆಂಬ ಚಿಂತೆಯಲ್ಲಿ ಕರಗುತ್ತಾ ಇರುವ ಸಂಧಿಯಲ್ಲಿ ಮಧ್ಯ ಅದಾಲತ್ತಿನಲ್ಲಿ ಅಪಜಯವಾದ ಸಮಾಚಾರವು ಸಿಕ್ಕಿತು. ಉರಿಯುವ ಬೆಂಕಿಯ ಮೇಲೆ ಎಣ್ಣೆ ಹೊಯ್ದಂತಾಯಿತು. ಹ್ಯಾಗೂ ಆಗಲಿ ಸದರಿ ಅದಾಲತ್ತಿನಲ್ಲಿ ವಿಮರ್ಶೆ ಬಿನ್ನಪವನ್ನು ಕೊಡದೆ ನಿರ್ವಾಹವಿಲ್ಲವೆಂದು ಖಂಡಿತವಾಗಿ ರಘುವೀರರಾಯಗೆ ರಾಯಸ ಬಂತು. ಅವನು ಅದರ ಆಶಯವನ್ನು ಘನ ಪಂಡಿತಗೆ ತಿಳಿಸಿ, ಅಗತ್ಯವಿರುವ ಹಣವನ್ನು ಕೊಟ್ಟು ಪಂಡಿತನಿಂದ ವಿಮರ್ಶೆ ಪತ್ರವನ್ನು ಬರಸಿ ಕಳುಹಿಸಿಕೊಟ್ಟನು. ಅದು ಅವಧಿ ದಾಟುವ ಒಂದು ದಿನದ ಮುಂಚೆ ಸದರಿ ಅದಾಲತ್ತಿನಲ್ಲಿ ದಾಖಲಾಗಿ ಲವಾಜಮೆಗಳನ್ನು ತರಿಸಿಕೊಳ್ಳುವದಕ್ಕೆ ಅಪ್ಪಣೆಯಾಯಿತು. ಇತ್ತಲು ರಾಮದಾಸರಾಯನು ಸುಮ್ಮಗಿರಲಿಲ್ಲ. ಕೊತ್ವಾಲ ಮತ್ತು ಕಾರಭಾರಿಯ ಮೇಲೆ ದೊಡ್ಡದೊಂದು ತಳ್ಳಿಯನ್ನು ಬರದು ಅಂಚೆಯ ದ್ವಾರ ನೆಟ್ಟನೆ ರಾಜರ ಸನ್ನಿಧಿಗೆ ಕಳುಹಿಸಿ ಬಿಟ್ಟನು. ರಾಜನು ಅದನ್ನು ಪದೇ ಪದೇ ಓದಿ ನೋಡಿ ರವಷ್ಟು ಬೆರಗಾದನು. ತನ್ನ ರಾಜ್ಯದಲ್ಲಿ ಇಂಥಾ ದುರಾಚಾರ ನಡಿಯುವಾಗ್ಗೆ ದಿವಾನರಾದರೂ ಅದರ ವಿಚಾರ ತಕ್ಕೊಳ್ಳದೆ ಕುರುಡರಂತೆ ಸುಮ್ಮಗಾದರೇ ಎಂದು ಕೊಂಚ ಸಿಟ್ಟು ತಾಳಿದನು. ಒಂದು ನೆವನದ ಮೇಲೆ ಹಿರಿ ದಿವಾನನನ್ನು ಕರಸಿ ಆ ತಳ್ಳಿಯನ್ನು ಓದಿ ನೋಡೆಂದನು. ದಿವಾನನು ಅದನ್ನು ಓದಿ ಮೌನತಾಳಿದನು. "ಇದು ಬರೇ ತಳ್ಳಿಯೋ? ಏನಾದರೂ ನಡದದೆಯೋ?" ಎಂದು ರಾಜನು ಪ್ರಶ್ನೆ ಮಾಡಿದನು. ದಿವಾನನು ಇಂತೆಂದನು—"ಮಹಾಸ್ವಾಮಿ ಬೆಂಕಿಯಿಲ್ಲದೆ ಹೊಗೆ ಬಂದೀತೇ? ಕುಮುದಪುರ ಮಠದಲ್ಲಿ ಅನಾಚಾರ ಹೆಚ್ಚಾಗಿ ಲೋಕನಿಂದೆಗೆ ಆಸ್ಪದವಾಯಿತು. ವಿಮರ್ಶಾಧಿಕಾರಿಯು ನಿಷ್ಕಪಟ ಸಾಭ್ಯಸ್ಥ ಮತ್ತು ನಿರಪೇಕ್ಷಿಯಾದರೂ ಹಟದಲ್ಲಿಯೂ ಮರುಳು

ತನವಲ್ಲಿಯೂ ಅಪ್ರತಿಮನಾದ ಕಾರಭಾರಿಯು ಗುಣಗಳನ್ನು ತಿಳಿಯದೆ, ಅನ್ಯಾಯವಾಗಗೊಟ್ಟನೋ ಎಂಬ ಅನುಮಾನ ಹುಟ್ಟುತ್ತದೆ. ಮಠಾಧಿಪತಿಗಳು ಕಡಿಮೆ ಮರುಳುತನದವರಲ್ಲವಷ್ಟೆ. ಹೋರಾಡುವ ಉಭಯ ಕಡೆಯವರು ಮರುಳುಮೂರ್ತಿಗಳಾದರೆ ಬೇರೆ ಎಂಥಾ ಅವಸ್ಥೆಯಾಗಬಹುದು? ಕಿರಿ ದಿವಾನರು ಇವನ್ನೆಲ್ಲಾ ನೋಡಬೇಕಾದದ್ದು. ಆದರೆ ಅವರು ವಿಮರ್ಶಾಧಿಕಾರಿಯ ಮೇಲಿನ ವಿಶ್ವಾಸದಿಂದ ಸುಷುಪ್ತಾವಸ್ಥೆಯಲ್ಲಿದ್ದುಕೊಂಡರೇ ಹೊರ್ತು ಬೇಕೆಂತ ಅವರು ತಾತ್ಸಾರ ಮಾಡಲಿಲ್ಲ.”

ಹಿರಿ ದಿವಾನನ ಪ್ರತ್ಯುತ್ತರವನ್ನು ಕೇಳಿ, ರಾಜನಿಗೆ ಮತ್ತಷ್ಟು ಕೋಪೋದ್ರೇಕವಾಯಿತು. “ವಿಮರ್ಶಾಧಿಕಾರಿಯೂ ಕಿರಿದಿವಾನನೂ ಕುರುಡರಾದರೆ ನೀನೂ ಕಣ್ಣುಮುಚ್ಚಿಕೊಂಡು ನಮ್ಮ ರಾಜ್ಯಕ್ಕೆ ಅಪಕೀರ್ತಿ ಬರುವ ಹಾಗಿನ ಕೃತ್ಯಗಳು ನಡಿಯುವಾಗ್ಗೆ ನಮ್ಮ ತಿಳುವಳಿಕೆಗೆ ಒಂದಿಷ್ಟಾದರೂ ತಾರದೆ ಸುಮ್ಮಗಿದ್ದ ಬುದ್ಧಿವಂತಿಗೆಗೆ ಬಹಳವಾಗಿ ಮೆಚ್ಚಿದೆನು” ಎಂದು ರಾಜರು ಹೇಳಿದರು. ಹಿರಿ ದಿವಾನನು ನಮ್ರಭಾವದಿಂದ ಸರಿಯಾದ ಉತ್ತರವನ್ನು ಕೊಟ್ಟನು. ಹ್ಯಾಗಂದರೆ:–“ಮಹಾ ಸ್ವಾಮಿ! ನಾನು ನಿಷ್ಪಕ್ಷಪಾತಿ; ವಾದಿ ಪ್ರತಿವಾದಿಗಳು ಉಭಯ ಕಡೆಯವರೂ ನನ್ನ ಮತಸ್ಥರು. ನಾನು ಸಹಜವಾಗಿ ಕುಮುದಪುರದ ಮಠಾಧಿಪತಿಯ ವಿರೋಧಿಯಾಗಿರುತ್ತೇನೆ. ಎದುರಾಳಿಗಳ ಸಾಧನೆಯು ನ್ಯಾಯವೆಂದು ನನ್ನ ಅಭಿಪ್ರಾಯ; ಪರಂತು ಅವರ ಅವಸರ ಮತ್ತು ಬುದ್ಧಿನಿರ್ಬಲತೆಯಿಂದ ಕುಮುದಪುರದ ಕಾರಭಾರಿಯೂ ಕೊತ್ವಾಲನೂ ಅವರ ಮೇಲೆ ವೈಮನಸ್ಸುತಾಳಿ, ಚಂಚಲನೇತ್ರರ ಮೇಲೆ ಕನಿಕರಪಟ್ಟು, ಎದುರು ಕಡೆಯ ಮಠದವರ ಮೇಲೆ ಮುನಿದು, ಅನಾಹುತಗಳನ್ನು ಮಾಡಿದ್ದು ಜನಜನಿತವೆಂದು ಈಗ ಹಲವರು ಹೇಳುವರು ವಿನಹ ಆವಾವ ಕಾಲದಲ್ಲಿ ಅದೆಲ್ಲಾ ಖಂಡಿತವಾಗಿ ತಿಳಿಯಲಿಲ್ಲ. ಕೃತ್ಯಗಳಲ್ಲಿ ಅನುಮಾನಕ್ಕೆ ಕಾರಣ ತೋರಿಬರದೆ, ಅವರ ಮೇಲೆ ಸಂದೇಹ ಹುಟ್ಟಲಿಲ್ಲ. ಹಾಗಲ್ಲದಿದ್ದರೆ ಅವರ ಮೇಲೆ ನೆಟ್ಟಗೆ ಮೇಲ್ವಿಚಾರ ನಡಿಸತಕ್ಕ ಅಧಿಕಾರಸ್ಥರಾದ ಕಿರಿದಿವಾನರು ನಿಃಶಂಕಿತರಾಗಿರುತ್ತಿದ್ದಿಲ್ಲ. ನಿವೃತ್ತಿಪೂರ್ವಕವಾಗಿ ಯಾವ ವಿಷಯವನ್ನೂ ಸನ್ನಿಧಾನದ ತಿಳುವಳಿಕೆಯಿಂದ ಮರೆಮಾಡಿದವನಲ್ಲ. ಹೆಚ್ಚಿಗೆ ಏನು ಅರಿಕೆ ಮಾಡಲಿ?”

ರಾಜರು ನಕ್ಕರು. “ಕಿರಿ ದಿವಾನನೂ ವಿಮರ್ಶಾಧಿಕಾರಿಯೂ ಇಬ್ಬರೂ

ಮಂದ ಬುದ್ಧಿಯುಳ್ಳವರಾದುದರಿಂದ ಇಂಥಾ ದುರ್ನೀತಿಯು ನಮ್ಮ ರಾಜ್ಯ ದಲ್ಲಿ ನಡದುಹೋಯಿತು. ಅಹಲ್ಲೇಕಾರರ ನೇಮಕ, ವರ್ಗಾವರ್ಗಿ ಇತ್ಯಾದಿ ಕಾರಭಾರು ನಿನ್ನ ಸ್ವತಂತ್ರದಲ್ಲಿರುವದರಿಂದ ಈಗಲಾದರೂ ಆ ಇಬ್ಬರು ಹಟ ವಾದಿಗಳನ್ನು ಕುಮುದಪುರದಿಂದ ವರ್ಗಮಾಡು. ವಿಮರ್ಶಾಧಿಕಾರಿಗೆ ಇಂಥಾ ಕಪಟನಾಟಕದಲ್ಲಿ ಇನ್ನು ಮುಂದಾದರೂ ಸಿಕ್ಕಿಬೀಳಬೇಡವೆಂದು ಎಚ್ಚರಿಸು. ಕಿರಿ ದಿವಾನನು ಮುದಿಕಾಗೆ! ಅವನಿಗೆ ಬುದ್ಧಿಹೇಳುವದೂ ಕೋಣನ ಬೆನ್ನಿನ ಮೇಲೆ ಮಳೆಬೀಳುವದೂ ಏಕರೀತಿಯೇ. ನೀನೂಸುವೇ ಆಲಸ್ಯ ಕೊಂಚಕಡಿಮೆ ಮಾಡಿಬಿಡು. ಇನ್ನೊಮ್ಮೆ ಇಂಥಾ ಘೋರ ಪಾತಕ ನಮ್ಮ ರಾಜ್ಯದಲ್ಲಿ ನಡೆದರೆ ನಿನ್ನ ವಿಷಯದಲ್ಲಿಯೂ ನಾವು ಅನುಮಾನಪಡ ಬೇಕಾಗುವದು." ಹೀಗೆಂದು ರಾಜನು ಹಿರೇ ದಿವಾನನನ್ನು ನಡುಗಿಸಿಬಿಟ್ಟನು. ಅಂದು ಸೂರ್ಯಾಸ್ತಮಯವಾಗಬೇಕಾದರೆ ಶಾಬಯನಿಗೂ ಭೀಮಾಜಿಗೂ ಶಾಂತಿಪುರಕ್ಕೆ ವರ್ಗವಾಯಿತು. ವಿಮರ್ಶಾಧಿಕಾರಿಯನ್ನು ಕರಸಿ ಹಿರೇ ದಿವಾನನು ರಾಜರ ಅವಕೃಪೆಯ ವೃತ್ತಾಂತವನ್ನು ತಿಳಿಸಿ ಇನ್ನು ಮುಂದಾ ದರೂ ಮಹಿಷನೆನ್ನಿಸಿಕೋಬ್ಯಾಡವೆಂದು ಚೆನ್ನಾಗಿ ಎಚ್ಚರಿಸಿ ಬಿಟ್ಟನು. ಕಿರಿ ದಿವಾನನಿಗೆ ರಾಜನು ತಾನೇ ಕರಸಿ ಗದರಿಸಿದ ಭರಕ್ಕೆ ಅವನ ಕರುಳುಗಳು ಸಹಾ ನಡುಗಿದುವು. ಸದರ ಅದಾಲತಿನಲ್ಲಿ ಮಾಡಲ್ಪಟ್ಟ ವಿಮರ್ಶೆಯ ವ್ಯವಸ್ಥೆ ಹ್ಯಾಗಾಗುತ್ತದೆಂದು ತನಗೆ ಕ್ರಮೇಣ ತಿಳಿಸಬೇಕಾಗಿ ರಾಜನು ಹಿರೇ ದಿವಾನನಿಗೆ ಗುಪ್ತ ಅನುಜ್ಞೆಯನ್ನು ಕೊಟ್ಟನು.

ಶಾಬಯನ ಮತ್ತು ಭೀಮಾಜಿಯ ವರ್ಗಾವರ್ಗಿಯ ಒಸಗೆಯು ಊರಲ್ಲೆಲ್ಲಾ ಹಬ್ಬಿ, ಕುಮುದಪುರದ ವಿಶಿಷ್ಟ ನಿವಾಸಿಗಳಿಗೆ ಆನಂದವ ನ್ನುಂಟುಮಾಡಿತು ವಾಗ್ದೇವಿಗೂ ಅವಳ ಕಡೆಯವರಿಗೂ ಮಾತ್ರ ಖೇದ ವಾಯಿತು. ಆದರೂ ತನ್ನ ಪಂಥ ಹ್ಯಾಗೂ ಗೆದ್ದಿತು. ಮುಂದಿನ ಗತಿ ದೇವರು ಮಾಡಿದ ಹಾಗಾಗಲೆಂದು ಸ್ವಸ್ಥವಾದಳು. ಪ್ರವಾಸದಲ್ಲಿರುವ ನೃಸಿಂಹಪುರ ಸ್ವಾಮಿಗಳಿಗೆ ಶತ್ರುಗಳ ಉಚ್ಚಾಟನೆಯ ವಾರ್ತೆಸಿಕ್ಕಿದರೂ ಅದನ್ನು ಕುರಿತು ಉತ್ಕರ್ಷಪಡಲಿಕ್ಕೆ ದೇಹದಲ್ಲಿ ಗಪ್ಪನೆ ಒಂದು ರೋಗ ಪ್ರಾಪ್ತಿಸಿದ್ದರಿಂದ ಅಸಂದರ್ಭವಾಯಿತು. ತನ್ನ ಜೀವ ಹೆಚ್ಚು ದಿವಸ ಉಳಿಯಲಾರದೆಂದು ಖಚಿತವಾಗಿ, ಊರಿಗೆ ಬೇಗನೇ ಬಂದು, ಪಾರುಪತ್ಯಗಾರನ ದ್ವಿತೀಯ ಪುತ್ರ ನಿಗೆ ಆಶ್ರಮ ಕೊಟ್ಟು ಗತವಾದರು. ಉಳಿದ ಮೂವರು ಸನ್ಯಾಸಿಗಳು

ಸಂತೋಷಚಿತ್ತರಾಗಿ ತಮ್ಮ ಮಠಗಳಿಗೆ ಮರಳಿದರು. ಕುಮುದಪುರಕ್ಕೆ ಶಾಂತಿಪುರದಿಂದ ವರ್ಗವಾಗಿ ಬಂದ ಕಾರಭಾರಿಯೂ ಕೊತ್ವಾಲನೂ ಒಳ್ಳೇ ಸದ್ಗುಣವಂತರಾಗಿರುವುದರಿಂದ ಅವರ ಮೇಲೆ ರಹಿತರಿಗೆಲ್ಲಾ ಹೆಚ್ಚು ವಿಶ್ವಾಸ ಉಂಟಾಯಿತು. ವಾಗ್ದೇವಿಯ ಕಾರಭಾರು ಪೂರ್ಣವಾಗಿ ನಿಂತು ಹೋಯಿತು.

## ಐವತ್ತಮೂರು

ಕಾರಭಾರಿಯ ಮುಂದೆ ಚತುರ್ಮಠದವರ ಮೇಲೆ ತರಲ್ಪಟ್ಟಿರುತ್ತಿದ್ದ ಮುದ್ದತಿನ ಮೊಕದ್ದಮೆಯನ್ನು ಹೊಸಕಾರಭಾರಿಯು ಅವರನ್ನು ಕಚೇರಿಗೆ ಬರಬೇಕೆಂದು ಬಲಾತ್ಕರಿಸದೆ, ಅವರ ಗುಣಕ್ಕೆ ತೀರ್ಮಾನ ಮಾಡಿ, ಇಡೀ ಊರಿನಲ್ಲಿ ಶ್ಲಾಘ್ಯನಾದನು. ವಿಮರ್ಶಾಧಿಕಾರಿಯ ಮನಸ್ಸಿನಲ್ಲಿ ಚತುರ್ಮಠದವರ ಮೇಲೆ ಉಂಟಾಗಿರುತ್ತಿದ್ದ ದ್ವೇಷವು ಕಡಿಮೆಯಾಗಿರಲಿಲ್ಲ. ಆದರೆ ರಾಜನ ಕೋಪಕ್ಕೆ ಗುರಿಯಾಗಿ ಉದ್ಯೋಗವೇ ಕಳಕೊಳ್ಳುವ ಗಂಡಾಂತರದಲ್ಲಿ ಸಿಲುಕದಂತೆ ಬಹುಜಾಗ್ರತೆಯಿಂದ ನಡಕೊಳ್ಳುವ ಅಗತ್ಯವಾಯಿತು. ಅವನ ಮುಂದೆ ಮಠಗಳಿಗೆ ಸಂಬಂಧವಾದ ಪ್ರಸಕ್ತಿಯು ಶಾಬಯ್ಯನ ವರ್ಗದ ನಂತರ ಬರಲಿಲ್ಲ. ಯಾಕೆಂದರೆ ಹೊಸ ಕಾರಭಾರಿಯು ಕಾಲದಲ್ಲಿ ಅವರ ಮೇಲೆ ಯಾವುದೊಂದೂ ಅತಿಶಯವು ಬರುವಹಾಗಿರಲಿಲ್ಲ.

ಸದರ ಅದಾಲತ್ತಿನಲ್ಲಿ ವಿಮರ್ಶೆಯಲ್ಲಿರುವ ವ್ಯಾಜ್ಯವನ್ನು ನ್ಯಾಯಾಧಿಪತಿಗಳು ಸೂಕ್ಷ್ಮವಾಗಿ ನೋಡಿದರು. ಕೆಪ್ಪಮಾಣಿಯ ಪ್ರಸ್ತಾಪ ಅವಾಜಮೆಗಳಲ್ಲಿ ಕಂಡುಬಂದುದರಿಂದ ಅವನನ್ನು ಕರೆಸಿಕೊಂಡು ಅವನ ಸಾಕ್ಷಿಯನ್ನು ದೊರಕಿಸಿಕೊಂಡರೆ ಸತ್ಯಶೋಧನೆಗೆ ಹೆಚ್ಚು ಅನುಕೂಲವಾಗುವುದೆಂಬ ತಾತ್ಪರ್ಯದಿಂದ ಅವನೆಲ್ಲಿರುವನೆಂದು ವಿಚಾರಿಸಿ ಅವನನ್ನು ತಮ್ಮ ಮುಂದೆ ಬರಮಾಡಬೇಕೆಂದು ಆಜ್ಞೆಮಾಡಿದರು. ಇಡೀ ರಾಜ್ಯದಲ್ಲಿ ಇರುವ ಬೇರೆ ಬೇರೆ ಪಟ್ಟಣಗಳ ಉದ್ಯೋಗಸ್ಥರಿಗೆ ಅವನ ಶೋಧನವನ್ನು ಮಾಡುವುದಕ್ಕೋಸ್ಕರ ನಿರೂಪಗಳು ಹೋದವು. ಅವನನ್ನು ಹುಡುಕುವದು ಹೆಚ್ಚು ಪ್ರಯಾಸಕರವೆಂದು ಪ್ರತಿ ಒಬ್ಬ ಉದ್ಯೋಗಸ್ಥನೂ ಬಿನ್ನವಿಸಿಕೊಂಡರೂ ಚೆನ್ನಾಗಿ ಹುಡುಕಬೇಕಾಗಿ ನ್ಯಾಯಾಧಿಪತಿಗಳು ಹಟಹಿಡಿದರು. ಅವನು ಸಿಕ್ಕದಂತೆ ಪ್ರಯತ್ನಿಸುವ ಅವಶ್ಯವು ವಾಗ್ದೇವಿಗೆ ಬಿತ್ತು. ಅವಳ ಕಡೆಯಿಂದ

ತಿಪ್ಪಾಶಾಸ್ತ್ರಿಯು ಈ ಕಾರ್ಯವನ್ನು ಜಯಪ್ರದ ಮಾಡಿಕೊಡುವದಾಗಿ ನಂಬಿಸಿ, ಅವಳಿಂದ ಕೊಂಚ ಹಣವನ್ನು ಪಡಕೊಂಡು ಪರ್ಯಟನ ಮಾಡಿಕೊಂಡಿರುವಾಗ ಅವನು ಶಾಂತಿಪುರದಲ್ಲಿಯೇ ಒಬ್ಬಳು ನಾಯಕನಾಸಿಯ ಮನೆಯಲ್ಲಿ ಅವಳ ಹೇರಳ ಆಸ್ತಿಯ ಆಡಳಿತೆಯನ್ನು ನೋಡುವ ಕೆಲಸದಲ್ಲಿ ಇರುತ್ತಾನೆಂದು ತಿಳಿದು ಸಂತೋಷಪಟ್ಟನು. ಯಾಕೆಂದರೆ ಶಾಬಯ್ಯನು ಆ ಪಟ್ಟಣದ ಕಾರಭಾರಿಯಾದ ಕಾರಣ ವಾಗ್ದೇವಿಯ ಪರಮಮಿತ್ರನಾದ ಅವನೂ ಕೊತ್ವಾಲ ಭೀಮಾಜಿಯೂ ತನ್ನ ಉದ್ದೇಶವನ್ನು ನೆರವೇರಿಸುವರೆಂಬ ಧೈರ್ಯವು ಅವನಿಗೆ ಪೂರ್ಣವಾಗಿ ಇತ್ತು.

ನಜರು ಕಾಣಿಕೆಯನ್ನು ಹಿಡಿಸಿಕೊಂಡು, ತಿಪ್ಪಾಶಾಸ್ತ್ರಿಯು ಶಾಬಯ್ಯನ ಬಿಡಾರಕ್ಕೆ ಹೋಗಿ ಕಂಡಾಗ ಅವನಿಗೆ ಹರುಷವಾಗಿ, ಆಗಮನದ ಕಾರಣ ವಿಚಾರಿಸಿದನು. ತಾನು ಬಂದ ಕಾರ್ಯವನ್ನು ಕುರಿತು ಅವನು ಪ್ರಸ್ತಾಪ ಮಾಡಿದನು. ವಾಗ್ದೇವಿಯ ಶುಭ ಚಿಂತಕನಾದ ಮೇಲೆ ಇಷ್ಟು ಸಣ್ಣ ಕೆಲಸದಲ್ಲಿ ಹಿಂಜರಿಯುವದುಂಟೇ! ಅದನ್ನು ಕೈಗೂಡಿಸಿ ಕೊಡುವದು ಏನು ದೊಡ್ಡದೆಂದು ಮೀಸೆಗಳನ್ನು ಎಳಿಯುತ್ತಾ, ಶಾಬಯ್ಯನು ಭೀಮಾಜಿಯನ್ನು ಕರೆಸಿಕೊಂಡನು. ಅವನೂ ತಿಪ್ಪಾಶಾಸ್ತ್ರಿಯನ್ನು ನೋಡಿ ಸಂತೋಷಪಟ್ಟು, ಇಷ್ಟು ಸಣ್ಣ ಕೆಲಸ ಕೈಗೂಡುವಲ್ಲಿ ಏನೂ ಪ್ರಯಾಸವಿರಲಾರದು. ಆಗುವಷ್ಟು ಪ್ರಯತ್ನಮಾಡಿ ಅರಿಕೆ ಮಾಡುವೆನೆಂದು ಹೊರಟು, ಆ ನಾಯಕನಾಸಿಯ ಮನೆಗೆ ಹೋದನು. ಅವಳ ಕೆಲಸದ ಮೇಲೆ ಕೆಪ್ಪಮಾಣಿಯು ಕೊಂಚದೂರವಿರುವ ಹಳ್ಳಿಗೆ ಆ ದಿನವೇ ಹೊರಟು ಹೋಗಿರುತ್ತಿದ್ದನು. ಕೊತ್ವಾಲನು ತನ್ನ ಮನೆಗೆ ಬಂದದ್ದು ನೋಡಿ, ಅವಳು ಬಹು ಪ್ರೇಮದಿಂದ ಅವನಿಗೆ ವಿಶೇಷವಾದ ಸಾಭಿಮಾನ ಮಾಡಿ, ತನ್ನಿಂದಾಗಬೇಕಾದ ಸೇವೆ ಯಾವುದು, ಅಪ್ಪಣೆಯಾಗಬೇಕೆಂದು ಮುಕುಳಿತ ಹಸ್ತಗಳಿಂದ ಬೇಡಿಕೊಂಡಳು. ಬೇರೆಯಾರಿಗೂ ಅರಿಯದಂತೆ ರಹಸ್ಯವಾಗಿ ಅವಳ ಕೂಡೆ ತನ್ನ ಉದ್ದೇಶವನ್ನು ತಿಳಿಸಿದನು. "ಅದರ ಚಿಂತೆ ಬಿಡಿ; ಅವನು ಎರಡು ಮೂರು ದಿವಸಗಳಲ್ಲಿ ಮರಳುವನು. ಅವನಿಂದಾಗಬೇಕಾದ ಕೆಲಸವನ್ನು ಅಡ್ಡಿ ಇಲ್ಲವೆ ಮಾಡಿಸಿಕೊಡದೆ ಇದ್ದರೆ ನಾನು ತಮ್ಮ ದಾಸಿಯೇ, ಸ್ವಾಮೀ?" ಎಂದು ಭೀಮಾಜಿಗೆ ಕರ್ಣಮಧುರವಾದ ಮಾತುಗಳಿಂದ ಮೆಚ್ಚಿಸಿಬಿಟ್ಟಳು.

ಭೀಮಾಜಿಯು ಹರ್ಷಾಬ್ಧಿಯಲ್ಲಿ ಮುಳುಗಿ ನಾಯಕನಾಸಿಯ ಕೂಡೆ

ಸಂಭಾಷಣೆಯ ಸುಖವನ್ನು ಅನುಭವಿಸುತ್ತಿರುವಾಗ ಬಹು ಚಪಲೆಯಾದ ಆ ವಾರಾಂಗನೆಯು ಕ್ಷಣಾರ್ಧದಲ್ಲಿ ಉಂಟಾದ ಬಳಕೆಯಿಂದ ಭೀಮಾಜಿಯ ಮೈ ಮೇಲೆ ತನ್ನ ಕೋಮಲ ಹಸ್ತವನ್ನಾಡಿಸಿ ಅವನ ಅಮೂಲ್ಯವಾದ ಗಡಿಯಾರವನ್ನು ಅದರ ಚಿನ್ನದ ಸರಪಣಿ ಸಹಿತ ಮೆಲ್ಲ ಮೆಲ್ಲನೆ ತೆಗೆದು ಧರಿಸಿಕೊಂಡು—"ಸ್ವಾಮಿ! ಈ ದಾಗಿನೆಯು ನನಗೆ ಒಪ್ಪುತ್ತದೆಯೇ?" ಎಂದು ಹಾಸ್ಯ ವದನದಿಂದ ಕೇಳಿದಳು. ಹೌದೆನ್ನದೆ ನಿರ್ವಾಹವಿಲ್ಲ. ಕೊತ್ವಾಲನು ಸೋತನು. ಆದರೂ ಕೊಂಚಹೊತ್ತಿನ ಮೇಲಾದರೂ ಆವಳು ಅದನ್ನು ತಿರುಗಿಕೊಡದಿರಲಾರಳೆಂಬ ಬಯಲು ಕೋರಿಕೆಯಿಂದ ಅಲ್ಲಿಯೇ ಕುಂತನು. ಅವಳು ತಾಂಬೂಲಾದಿ ಉಪಚಾರಗಳಿಂದ ಅವನನ್ನು ಸುಖಪಡಿಸಿ, ಇನ್ನು ಶಾನೆ ಹೊತ್ತು ಅಲ್ಲಿಯೇ ಇದ್ದುಕೊಂಡರೆ ಕಿವಿಯ ಒಂಟಿಯ ಮೇಲೆ ಅವಳ ದೃಷ್ಟಿ ಬೀಳುವದೆಂಬ ಹೆದರಿಕೆಯಿಂದ ಬೇಗನೇ ಹೊರಟನು. ಜೀವಕಾಲದಲ್ಲಿ ಅವನಿಗೆ ಇಂಥಾ ಸೋಲಾಗಲಿಲ್ಲ. ಇಂದು ಇವಳು ಬಹು ಚಳಕದಿಂದ ಗಡಿಯಾರವನ್ನು ಅಪಹಸಿರಿಕೊಂಡಳಷ್ಟೆ. ಅದು ಪುನಃ ಸಿಕ್ಕುವದು ಹ್ಯಾಗೊ. ಕೃಷ್ಣಾರ್ಪಣವೇ ಸರಿ. ವ್ಯರ್ಥವಾಗಿ ಹೆಚ್ಚು ಮೌಲ್ಯದ ವಸ್ತುವನ್ನು ದಾಕ್ಷಿಣ್ಯದಿಂದ ಕಳಕೊಂಡೆನೆಂಬ ಪಶ್ಚಾತ್ತಾಪ ಹಾಗೂ ನಾಚಿಕೆಯಿಂದ ಮನೆಗೆ ಬಂದು, ಊಟವನ್ನು ಸಹಾ ಸರಿಯಾಗಿ ಮಾಡದೆ, ಬೇಗನೆ ಮಲಗಿದನು! ನಿದ್ರೆಯೇ ಸರಿಯಾಗಿ ಬರಲಿಲ್ಲ. ತಿಪ್ಪಾ ಶಾಸ್ತ್ರಿಯು ಮರು ದಿನ ಬೆಳಿಗ್ಗೆ ಬಂದು, ಶಾಬಯ್ಯನ ಮನೆಗೆ ಭೀಮಾಜಿ ಯನ್ನು ಕರಕೊಂಡು ಹೋದ ಸಮಯ ಭೀಮಾಜಿಯ ಮುಖದ ಮೇಲೆ ಖಿನ್ನತೆಯ ಚಿಹ್ನೆಯು ತೋರಿ ಬಂದ ಸಂಬಂಧ—"ಇದೇನಯ್ಯಾ, ನೀನು ವ್ಯಾಕುಲಸ್ತನಾಗಿರುವಂತೆ ಕಾಣಿಸಿಕೋಥೀ?" ಎಂದು ಶಾಬಯ್ಯನು ಪ್ರಶ್ನೆ ಮಾಡಿದನು. "ಅಯ್ಯಾ, ನನಗೆ ತುಸಾ ವಾಯು ಉಪದ್ರದಿಂದ ಅನಾ ರೋಗ್ಯ ಉಂಟಾಗಿಯದೆ. ಹೇಳಿದ ಕೆಲಸ ಸರಿಯಾಗಿ ನಡಿಯುವ ಉಪಾಯು ಮಾಡಿದ್ದೇನೆ" ಎಂದು ಕೆಪ್ಪಮಾಣಿಯನ್ನು ಕುರಿತು ಪ್ರಸ್ತಾಪವನ್ನು ಬಿನ್ನವಿಸಿದನು.

ಗಡಿಯಾರ ಕಳಕೊಂಡ ಕೊತ್ವಾಲನು ಪುನಃ ನಾಯಕಸಾನಿಯ ಮನೆಗೆ ಹೋಗಲಿಕ್ಕೆ ಭಯಪಟ್ಟನು. ಹೇಳಿ ಕಳುಹಿಸಿದರೆ ಅವಳು ಅದನ್ನು ತಿರಿಗಿ ಕೊಡಲಿಕ್ಕೆ ಸಾಕೆಂಬ ಭ್ರಮೆಯಿಂದ ಒಬ್ಬ ಜವಾನನನ್ನು ಅವಳ ಬಳಿಗೆ

ಕಳುಹಿಸಿ ಕೊಟ್ಟನು. "ಒಮ್ಮೆ ಉಗುಳಿದ ಎಂಜಲು ಪುನರಪಿ ಬಾಯಿಗೆ ಹಾಕಿಕೊಳ್ಳಬಹುದೇ? ಕೊಟ್ಟುಹೋದ ಗಡಿಯಾರ ಮರಳಿ ಕೇಳಲಿಕ್ಕೆ ನಾಚಿಕೆಯಾಗುವುದಿಲ್ಲವೇ?" ಎಂಬ ಉತ್ತರವು ಸಿಕ್ಕಿತು. ಕೊತ್ವಾಲಗೆ ಇನ್ನಷ್ಟು ನಾಚಿಕೆಯಾಯಿತು. ಹ್ಯಾಗೋ ಈ ವರ್ತಮಾನ ಹೆಂಡತಿಯ ಕಿವಿಗೆ ಬಿದ್ದು, ಗಂಡನನ್ನು ಅದನ್ನು ಕುರಿತು ಕೇಳಿದಳು. ಅವನು ನಿರುತ್ತರನಾಗಿರಲು, ಅವಳು ಸಿಟ್ಟು ತಡಕೊಳ್ಳಲಿಕ್ಕಾಗದೆ, ಅವನನ್ನು ಕಂಡಾಬಟ್ಟೆ ಬೈದು ಇನ್ನು ಮುಂದೆ ವಾರಾಂಗನೆಯರ ಮನೆಯನ್ನು ಕಣ್ಣೆತ್ತಿ ನೋಡೆನೆಂದು ಪ್ರಮಾಣ ಮಾಡದಿದ್ದರೆ ಅನ್ನ ಹಾಕಲಾರೆನೆಂದು ಖಂಡಿತ ವಿಧಿಸಿ ಎಚ್ಚರಿಸಿದಳು. ನಿರ್ವಾಹವಿಲ್ಲದೆ ತುಳಸಿಕಟ್ಟೆಯ ಎದುರು ನಿಂತು, ಹೆಂಡತಿಯು ನಿರ್ದೇಶಿಸಿದ ಪ್ರಮಾಣ ವಾಕ್ಯವನ್ನು ಮೂರಾವರ್ತಿ ಉಚ್ಚರಿಸಿದ ಮೇಲೆ ಅವಳು ಬಡಿಸಿದ ಅನ್ನವನ್ನು ತಲೆ ಬಗ್ಗಿಸಿ ಹ್ಯಾಗೂ ಉಂಡನು. ಈ ವಾರ್ತೆಯು ಗುಟ್ಟಿನಲ್ಲಿ ಉಳಿಯಲಿಲ್ಲ. ಕ್ರಮೇಣ ಶಾಬಯ್ಯನಿಗೂ ಗೊತ್ತಾಗಿ ಅವನು ಗಹಗಹಿಸಿ, ಭೀಮಾಜಿಯನ್ನು ಬರ ಮಾಡಿ, ಕುಚೋದ್ಯ ಮಾಡಲಿಕ್ಕೆ ತೊಡಗಿದನು. ಭೀಮಾಜಿಯು ಮೃತಪ್ರಾಯನಾದನು. ಮತ್ತು ಹಲವು ದಿವಸಗಳ ಪರಿಯಂತರ ಅಸ್ವಸ್ಥವೆಂಬ ನೆವನ ಕಲ್ಪಿಸಿ, ಮುಖ ತೋರಿಸದೆ ಮನೆಯಲ್ಲಿಯೇ ಇದ್ದುಕೊಂಡನು.

ತಿಪ್ಪಾಶಾಸ್ತ್ರಿಯು ಶಾಬಯ್ಯನ ಮೇಲೂ ಭೀಮಾಜಿಯ ಮೇಲೂ ಪೂರ್ಣ ಭರವಸೆ ಇಟ್ಟು, ವಹಿಸಿಕೊಂಡ ಬಹು ದೊಡ್ಡ ಕಾರ್ಯದ ಗೊಡವೆಯೇ ಬಿಟ್ಟು, ಬೀದಿ ಬೀದಿ ತಿರುಗಾಡುವದರಲ್ಲಿ ಬಿದ್ದನು. ತನ್ಮಧ್ಯ ರಘುವೀರರಾಯನು ತಾನೇ ಶಾಂತಿಪುರಕ್ಕೆ ಹೋದರೆ ತನ್ನ ಕೇವಲ ಹಗೆಗಾರರಾದ ಕಾರಭಾರಿಯೂ ಕೊತ್ವಾಲನೂ ತನ್ನನ್ನು ಸೆರೆಮನೆಯಲ್ಲಿ ಹಾಕಿಬಿಡುವರೆಂಬ ಭಯದಿಂದ ಕಾಗದಪರಿಮುಖ ಶಾಂತಿಪುರ ಮಠದ ಸ್ವಾಮಿಗಳಿಗೆ ಕೆಪ್ಪಮಾಣಿಯನ್ನು ಕುರಿತು ಅವಶ್ಯವಾಗಿ ಜಾಗ್ರತೆ ಇಡಬೇಕೆಂದು ಬೇಡಿಕೊಂಡನು. ಅವರು ಕೊತ್ವಾಲನ ಗಡಿಯಾರ ಸೆಳಕೊಂಡ ನಾಯಕಸಾನಿಯ ಪರಿಮುಖವೇ ಕೆಪ್ಪಮಾಣಿಯನ್ನು ಕೈವಶ ಮಾಡಿ, ಯಾರಿಗೂ ತಿಳಿಯದಂತೆ ರಾತಾರಾತ್ರಿ ಅವನನ್ನು ತನ್ನ ಜನರ ಸಂಗಡ ಕುಮುದಪುರಕ್ಕೆ ಕಳುಹಿಸಿ ಬಿಟ್ಟರು. ತಿಪ್ಪಾಶಾಸ್ತ್ರಿಯು ಶ್ವಾನದಂತೆ ತಿರುಗಾಡುತ್ತಲೇ ಇದ್ದನು. ಕೆಪ್ಪಮಾಣಿಯು ಸದರ ಅದಾಲತಿನ ಮುಂದೆ

ನಿಲ್ಲಿಸಲ್ಪಟ್ಟನೆಂಬ ಸಮಾಚಾರ ಅವನಿಗೆ ತಿಳಿಯಲೇ ಇಲ್ಲಿ. ಪರಸ್ಪರವಾಗಿ ಅದು ಶಾಬಯ್ಯನಿಗೆ ಗೊತ್ತಾಗಿ ಭೀಮಾಜಿಯು ನಾಯಕಸಾನಿಯಿಂದ ನೋಸಪಟ್ಟನೆಂದು ಪಶ್ಚಾತ್ತಾಪಪಟ್ಟು, ತಿಪ್ಪನನ್ನು ಕರಸಿ–"ಇಗೋ, ಕಾರ್ಯ ಕೆಟ್ಟಿತು. ಯಾರಿಗೂ ತಿಳಿಯದ ಹಾಗೆ ಕೆಪ್ಪಮಾಣಿಯನ್ನು ಕುಮುದ ಪುರಕ್ಕೆ ಒಯಿದರಂತೆ. ಬೇಗ ಹೋಗಿ ನೋಡಿಕೋ" ಎಂದು ಹೇಳಿದನು. ಅವನು ತರಹರಿಸಿ ಊಟವನ್ನು ಬಿಟ್ಟು ಹಿಂತಿರುಗಿದನು.

ಶಾಸ್ತ್ರಿಯು ಕುಮುದಪುರಕ್ಕೆ ಬಂದಲ್ಲಿ ಕೆಪ್ಪಮಾಣಿಯು ಸದರ ಅದಾಲತಿನಲ್ಲಿ ಮೂರು ದಿವಸಗಳಿಂದ ವಿಚಾರ ಮಾಡಲ್ಪಡುತ್ತಿದ್ದಾನೆಂಬ ವದಂತಿಯನ್ನು ಕೇಳಿ, ವಾಗ್ದೇವಿಗೆ ಮುಖ ತೋರಿಸಲಿಕ್ಕೆ ನಾಚಿ, ತರಾತುರಿಯಿಂದ ಸದರ ಅದಾಲತ ಇರುವ ಪಟ್ಟಣಕ್ಕೆ ಹೋಗಿ ನೋಡಿದನು. ಕೆಪ್ಪಮಾಣಿಯು ಸಾಕ್ಷಿಯನ್ನು ಕೊಡುವದು ಪ್ರತ್ಯಕ್ಷವಾಯಿತು. ಅವನು ಆದ್ಯಂತ ವೃತ್ತಾಂತವನ್ನು ಒಂದು ಅಕ್ಷರವನ್ನಾದರೂ ಲೋಪಮಾಡದೆ ವಿಸ್ತಾರವಾಗಿ ಹೇಳುತ್ತಾ ನಿಂತಿರುವುದು ನೋಡಿ ವಾಗ್ದೇವಿಯ ಭವಿಷ್ಯವೇ ಹೋಯಿತೆಂದು ತಿಪ್ಪಾಶಾಸ್ತ್ರಿಯು ಖಚಿತವಾಗಿ ಶಾನೆ ಅನುತಾಪ ಪಡುವ ಸಂಭವ ಒದಗಿತು. ಹತ್ತು ದಿವಸಗಳ ಪರಿಯಂತರ ಅವನು ಸಾಕ್ಷಿಯನ್ನು ನುಡಿದನು. ಅದನ್ನು ಕೇಳುವುದಕ್ಕೆ ಹಿರಿ ಮತ್ತು ಕಿರಿ ದಿವಾನರು ಸದರ ಅದಾಲತ ನ್ಯಾಯಸ್ಥಾನದಲ್ಲಿ ಕುಳಿತು ಕೊಂಡಿದ್ದರು. ಅವನ ಸಾಕ್ಷಿಯು ಅಂತ್ಯವಾದ ಬಳಿಕ ವಾದಿ ಪ್ರತಿವಾದಿಗಳ ಕಡೆ ವಕೀಲರ ಚರ್ಚೆಗಳನ್ನು ಮೂರು ದಿವಸಗಳ ವರೆಗೂ ನ್ಯಾಯಾಧಿಪತಿಗಳು ಸಮಾಧಾನ ಚಿತ್ತದಿಂದ ಅವಧರಿಸಿದರು. ಬಳಿಕ ವ್ಯಾಜ್ಯದ ಉಭಯ ಪಕ್ಷಕರ ಬಲಾಬಲಗಳನ್ನು ಲವಾಜಮೆಗಳಿಂದ ಹುಡುಕಿ ತೆಗೆದು ಹಿರಿ ನ್ಯಾಯಾಧಿಪತಿಯು ತೀರ್ಪು ಬರೆಯಲಿಕ್ಕೆ ಉಪಕ್ರಮಿಸಿದನು. ಅದನ್ನು ಸಂಪೂರ್ಣ ಮಾಡುವದಕ್ಕೆ ಅವನಿಗೆ ಮೂರು ವಾರಗಳು ತಗಲಿದವು. ವಿಚಕ್ಷಣನಾದ ಆ ನ್ಯಾಯಾಧಿಪತಿಯು ಬರೆದ ತೀರ್ಪು ವ್ಯಾಜ್ಯದ ಸ್ಥಿತಿಗೆ ತಾಳಿ ಬೀಳುವದೆಂದು ಇತರ ನ್ಯಾಯಾಧಿಪತಿಗಳು ಒಡಂಬಟ್ಟು ರುಜು ಹಾಕಿದರು.

ಆ ತೀರ್ಪಿನ ಮುಖ್ಯ ತಾತ್ಪರ್ಯವು ಹ್ಯಾಗಿತ್ತೆಂದರೆ:–

ವಾಗ್ದೇವಿಯು ತನ್ನ ಗಂಡನ ಮತ್ತು ತಂದೆ ತಾಯಿಗಳ ಸಮೇತ ಕುಮುದಪುರದ ಮಠದಲ್ಲಿ ವೆಂಕಟಪತಿ ಆಚಾರ್ಯನ ಪರಿಮುಖ ತರಿಸಲ್ಪಟ್ಟು

ಎಲ್ಲರ ತಿಳುವಳಿಕೆಯಿಂದಲೇ ಬಹಿರಂಗವಾಗಿ ಚಂಚಲನೇತ್ರರ ಸಂಗಡ ಇದ್ದು ಅವರಿಂದ ಗರ್ಭವಾಗಿ ಸೂರ್ಯನಾರಾಯಣನನ್ನು ಪಡೆದಳು. ಅಂಥಾ ಪಿಂಡವು ಸನ್ಯಾಸ ಮಠಕ್ಕೆ ಅಯೋಗ್ಯವಾಗಿರುವುದರಿಂದ ಚಂಚಲನೇತ್ರರು ಅವನಿಗೆ ಕೊಟ್ಟ ಆಶ್ರಮವು ಎಂದಿಗೂ ಸಿಂಧುವಾಗಕೂಡದು. ದ್ವಂದ್ವ ಮಠದವರಾದ ನೃಸಿಂಹಪುರಾಧೀಶರು ಕೊಟ್ಟ ಹೊಸ ಆಶ್ರಮವು ನ್ಯಾಯ ವಾದದ್ದು. ಹಾಗೆ ಆಶ್ರಮ ಕೊಡಲಿಕ್ಕೆ ಅವರಿಗೆ ಅಧಿಕಾರವಿರುವದು. ಆದ ಕಾರಣ ಸೂರ್ಯನಾರಾಯಣನಿಂದ ಕುಮುದಪುರದ ಮಠವನ್ನು ಅದರ ವಿಶಿಷ್ಟಸ್ಥಿರ ಚರ ಸೊತ್ತುಗಳ ಸಮೇತ ಸ್ವಾಧೀನ ಪಡಕೊಂಡು, ಆದಿನಾರಾಯಣ ದೇವಸ್ಥಾನದಲ್ಲಿ ಕಟ್ಟಳೆಗನುಸರಿಸಿ, ದಿಗ್ವಿಜಯರಾಧನೆಯನ್ನು ನಡೆಸುವದಕ್ಕೆ ನವೀನ ಆಶ್ರಮ ಹೊಂದಿದವನೇ ಅರ್ಹನಾಗಿರುತ್ತಾನೆ."

ಈ ತೀರ್ಪು ಆಗುವ ಮೊದಲೇ ಸೂರ್ಯನಾರಾಯಣನ ದಿಗ್ವಿಜಯವು ಮುಗಿದಿತ್ತು. ಇನ್ನು ಮಠದಲ್ಲಿ ಉಳುಕೊಳ್ಳುವದು ಸರಿಯಲ್ಲವೆಂದು ವಾಗ್ದೇವಿಯೂ ಶೃಂಗಾರಿಯೂ ಸೂರ್ಯನಾರಾಯಣನನ್ನು ಕರಕೊಂಡು ತಿಪ್ಪಾಶಾಸ್ತ್ರಿಯ ಯಜಮಾನಿಕೆಯಲ್ಲಿ ಕಳ್ಳರಂತೆ ಮಠದಲ್ಲಿದ್ದ ಒಡವೆಗಳನ್ನೆಲ್ಲಾ ಬಾಚಿಕೊಂಡು ಪಲಾಯನ ಮಾಡಿದರು. ನ್ಯಾಯವಾದ ಉತ್ತರಾಧಿಕಾರಿಯು ಚಂಚಲನೇತ್ರರ ಮಠಪ್ರವೇಶವನ್ನು ಮಾಡಿದನು. ಆದರೆ ಮಠವೆಲ್ಲಾ ಬೋಳಾಗಿತ್ತು. ಒಂದು ಕಾಸಿನ ಕಡ್ಡಿಯೂ ಅವನಿಗೆ ದೊರಕಲಿಲ್ಲ. ಸಾಲಿಗರಲ್ಲನೇಕರು ಅವನ ಮೇಲೆ ದಾವೆಗಳನ್ನು ತಂದರು. ಪರಂತು ಸೂರ್ಯನಾರಾಯಣನು ಅನಾವ್ರಯ ಮಾಡಲಿಕ್ಕೆ ಪಡಕೊಂಡ ಹಣಕ್ಕೆ ನ್ಯಾಯವಾದ ಮಠಾಧಿಪತಿಯು ಹೊಣೆಯಲ್ಲವೆಂದು ಅದಾಲತಿನಲ್ಲಿ ಫೈಸಲಾಗಿ ಸಾಲಗಾರರ ಬಾಯಿಗೆ ಮೃತ್ತಿಕೆ ಆಯಿತು. ಧನಶೋಕದಿಂದ ಸಾಲಗಾರರು ಸಂತಾಪ ಪಟ್ಟರು. ಆದರೆ ಏನು ಮಾಡೋಣ!

## ಐವತ್ತನಾಲ್ಕು

ಕುಮುದಪುರವನ್ನು ಶಾಬಯನೂ ಭೀಮಾಜಿಯೂ ಬಿಟ್ಟು ಹೋದಂದಿನಿಂದ ಆ ಊರಿನ ಜನರು ನಿಶ್ಚಿಂತರಾದರು. ಅವರಿಬ್ಬರ ಬದಲಿಗೆ ಬಂದ ಉದ್ಯೋಗಸ್ಥರು ಅನ್ಯಾಯ ಪ್ರವರ್ತನೆಯಲ್ಲಿ ಎಂದೂ ಸೇರುವವರಲ್ಲವೆಂದು ಪ್ರತಿ ಒಬ್ಬನಿಗೂ ಖಂಡಿತವಾಗಿ ಗೊತ್ತಾಯಿತು. ಮರ್ಯಾದೆವಂತ

ರಾದ ಜನರು ಅವರ ಮೇಲೆ ಎಷ್ಟು ವಿಶ್ವಾಸವಿಟ್ಟಿರುವರೊ ಅಷ್ಟೇ ಭಯವು ದುಷ್ಟರಿಗೆ ಹುಟ್ಟಿತು. ರಘುವೀರರಾಯನು ಮಠಾಧಿಪತಿಗಳ ಮುಮುಕಾರದವನಾಗಿ ನೃಸಿಂಹಪುರ ಮಠದಿಂದ ಹೆಚ್ಚು ದ್ರವ್ಯವನ್ನು ವಂಚಿಸಿರುವನೆಂದು ಕಾರಭಾರಿಗೆ ವರ್ತಮಾನ ಸಿಕ್ಕಿ ಅವನಿಗೆ ಸ್ವಲ್ಪ ಬುದ್ಧಿಕಲಿಸಬೇಕೆಂಬ ಮನಸ್ಸು ಹುಟ್ಟಿತು. ಆದರೆ ಅವನು ವಕೀಲನಾಗಿಯೂ ಹೆಚ್ಚು ಅನುಭವಸ್ಥನಾಗಿಯೂ ಇರುವವನಾದುದರಿಂದ ಒಮ್ಮೆಯೇ ಅವನ ಗುಟ್ಟು ತಿಳಿಯಲಿಕ್ಕೆ ಸಂದರ್ಭವಿಲ್ಲದೆ ಯೋಚನೆಯಲ್ಲಿರುವ ಕಾಲದಲ್ಲಿ ಸ್ತ್ರೀಲಂಪಟನಾದ ಈ ವಕೀಲನು ಅದೇ ಪಟ್ಟಣದಲ್ಲಿ ಒಬ್ಬ ಪಂಡೋಜಿಯ ಹತ್ತರ ದ್ವೇಶವನ್ನು ಕಟ್ಟಿಕೊಂಡ ದೆಸೆಯಿಂದ ಆ ಪಂಡೋಜಿಯು ಇವನ ಗುಟ್ಟು ಚೆನ್ನಾಗಿ ತಿಳಿದವನಾಗಿ ಅದನ್ನೆಲ್ಲಾ ಅಂತರಂಗದಿಂದ ಕಾರಭಾರಿಗೆ ತಿಳಿಸಿದನು. ಅವನು ಪರಮ ಸಂತೋಷದಿಂದ ಕೊತ್ವಾಲನಿಂದ ಶೋಧನೆ ಮಾಡಿಸಲು ರಘುವೀರನ ಮನೆಯಲ್ಲಿ ಅವನು ವಂಚನೆಯಿಂದ ಹಸ್ತಗತ ಮಾಡಿಕೊಂಡ ಚಿನ್ನಾಭರಣಗಳು ಸಿಕ್ಕಿದವು. ಕಾರಭಾರಿಯು ಕೂಡಲೇ ಅವನನ್ನು ಕೈದುಮಾಡಿ ಪಹರೆಯಲ್ಲಿರಿಸಿಬಿಟ್ಟನು. ಅವನ ಮೇಲೆ ಕೊತ್ವಾಲನು ಸಾಕಷ್ಟು ಸಾಕ್ಷವನ್ನು ಸಂಗ್ರಹಿಸಿ ಪ್ರಕರಣವನ್ನು ಮಾಡಿ ಕಾರಭಾರಿಯ ಮುಂದೆ ಕಳುಹಿಸಿದನು. ಕಾರಭಾರಿಯು ಅವನಿಗೆ ಕಠಿಣವಾದ ಶಿಕ್ಷೆಯಾಗುವದಕ್ಕೋಸ್ಕರ ಮೊಕದ್ದಮೆಯನ್ನು ವಿಮರ್ಶಾಧಿಕಾರಿಯ ಬಳಿಗೆ ಕಳುಹಿಸಿಕೊಟ್ಟನು. ರುಜುವಾತು ಬಲವಾದದ್ದಲ್ಲವೆಂದು ನಿಶ್ಚಯಿಸಿ ಅವನನ್ನು ವಿಮೋಚನೆ ಮಾಡಿದನು. ರಘುವೀರನು ಅಂದಿನಿಂದ ಮೂಲೆಗೆ ಸೇರುವದಾಯಿತು. ಯಾಕಂದರೆ ಅವನು ಸಂಪಾದಿಸಿದ ದ್ರವ್ಯವೆಲ್ಲಾ ಕೊಂಚ ಕೊಂಚವಾಗಿ ಹೋಗಿಬಿಟ್ಟಿತು.

ರಾಮದಾಸರಾಯನು ಸೂರ್ಯನಾರಾಯಣನ ಅವಗುಣಕ್ಕೆ ಸದರ ಅದಾಲತಿನವರು ಕೊಟ್ಟ ತೀರ್ಪನ್ನು ದಿನಕ್ಕೆ ಹತ್ತಾವರ್ತಿ ಓದುತ್ತಾ ನ್ಯಾಯವು ಗೆದ್ದಿತೆಂದು ಕಂಡಕಂಡವರ ಕೂಡೆ ಹೆಗ್ಗಳಿಕೆಯನ್ನು ಆಡುತ್ತಾ ಉದ್ಧರ್ಷದಿಂದ ಪದೇ ಪದೇ ನೆಗಾಡುವದರಲ್ಲಿಯೇ ಬಿದ್ದನು. ಸ್ವಲ್ಪಕಾಲದಲ್ಲಿಯೇ ಅವನಿಗೆ ಪಿತ್ತಭ್ರಮೆಯಂತೆ ಒಂದು ಅಸ್ವಸ್ಥವು ತಗಲಿ ನಿತ್ಯ ಕ್ಷೀಣವಾಗುತ್ತಾ ಬಂದು ತಂದೆತಾಯಿಗಳಿಗೂ ಹೆಂಡತಿ ಮಕ್ಕಳಿಗೂ ಬಂಧುಬಾಂಧವರಿಗೂ ಭಯ ಉಂಟುಮಾಡಿದನು. ಹಲವು ವೈದ್ಯರು ಅವನ ರೋಗ ಪರೀಕ್ಷೆಯನ್ನು ಮಾಡಿ ಅವರವರ ಬುದ್ಧಿವಂತಿಕೆಗೆ ಯುಕ್ತವಾಗಿ ಕಂಡ ಔಷಧಗ

ಳನ್ನು ಮಾಡಿದರು. ಪರಂತು ಅವನಿಗೆ ಅವರ್‍ಯಾರಿಂದಲೂ ತಿಲಾಂಶಪ್ರಯೋಜನವೂ ದೊರಕದೆ ಅವನ ರೋಗವು ವೃದ್ಧಿಯಾಗುತ್ತಾ ಬಂದು, ಕೊನೆಗೆ ಅವನು ವೈಕುಂಠಯಾತ್ರೆಗೆ ತೆರಳಿದನು.

ವೇದವ್ಯಾಸ ಉಪಾಧ್ಯನು ಹ್ಯಾಗಾದರೂ ಕುಮುದಪುರ ಮಠಕ್ಕೆ ಪುನಃ ಸೇರಿಕೊಂಡನು. ಸೂರ್ಯನಾರಾಯಣನು ಹೊರಟು ಹೋದ ತರುವಾಯ ಅವನಿಗೆ ಆ ಮಠದಲ್ಲಿ ಮರ್ಯಾದೆ ಸಿಕ್ಕಿತು. ಮುಂಚೆ ಹ್ಯಾಗೋ ಹಾಗೆಯೇ ಪುರಾಣ ಓದುವ ಉದ್ಯೋಗವೂ ಅವನಿಗೆ ದೊರಕಿತು. ಮುದುಕನಾಗಿ ಹಲ್ಲುಗಳನ್ನು ಕಳಕೊಂಡವನಾದರೂ ಒಳ್ಳೇ ಅನುಭವಸ್ಥನೂ ಗೀರ್ವಾಣ ಪಂಡಿತನೂ ಎನಿಸಿಕೊಂಡ ಅವನು ತನಗೆ ಒಪ್ಪಿದ ಕೆಲಸವನ್ನು ಲಾಲಾಜಲ ಸುರಿಸಿಕೊಂಡಾದರೂ ಮಠಾಧಿಪತಿಗಳು ಮೆಚ್ಚುವಂತೆ ನಿರ್ವಹಿಸುವದರಲ್ಲಿ ಏನೂ ಅಡಿಯಾಳಾಗಲಿಲ್ಲ. ವೆಂಕಟಪತಿ ಆಚಾರ್ಯನು ಹೆಚ್ಚು ಕಾಲ ಅಸ್ವಸ್ಥದಲ್ಲಿಯೇ ಬಿದ್ದು ಕಾಲಾನುಭಾಗದಲ್ಲಿ ತೀರಿ ಹೋದನು. ಮಠದಲ್ಲಿ ಹಳೇ ಅನುಭವವುಳ್ಳವನು ವೇದವ್ಯಾಸ ಉಪಾಧ್ಯನೊಬ್ಬನೇ ಆಗಿ ಹೆಚ್ಚು ಉಪಯೋಗಕರವಾಗಿ ನಡಕೊಂಡನು. ಕೆಪ್ಪಮಾಣಿಯು ಶಾಂತಿಪುರ ಮಠದಲ್ಲಿ ನಾಯಕನಾನಿಯ ಅಡ್ಡಳತೆದಾರನಾಗಿ ಇರುವದಕ್ಕಿಂತ ತಾನು ಮೊದಲು ಇದ್ದ ಕುಮುದಪುರ ಮಠವನ್ನು ಪ್ರವೇಶಿಸುವ ಇಚ್ಛೆಯಿಂದ ಯತಿಗಳಿಗೆ ವಿಜ್ಞಾಪಿಸಿ ಕೊಂಡಾಗ ಅವನ ಸಾಕ್ಷ್ಯದಿಂದಲೇ ವ್ಯಾಜ್ಯವು ಗುಣವಾಯಿತೆಂಬ ನೆನಪು ಮರೆಯದೆ ಅವರು ಅವನನ್ನು ಉಗ್ರಾಣದ ಕೆಲಸಕ್ಕೆ ನೇಮಿಸಿದರು. ಕಡೇ ವರೆಗೂ ಅವನು ಮಠದ ಮೇಲೆ ಶ್ರದ್ಧೆಯಿಂದಲೂ ವಿಶ್ವಾಸದಿಂದಲೂ ನಡಕೊಂಡು ಚಂಚಲನೇತ್ರರ ಕಾಲದಲ್ಲಿ ಚೋರತನದಿಂದ ತರಿಸಿಕೊಂಡ ದುರ್ನಾಮವನ್ನು ಕಳಕೊಂಡು ಮರ್ಯಾದಸ್ಥ ಮನುಷ್ಯನೆನ್ನಿಸಿಕೊಂಡು ಇರುವವನಾದನು.

ಸೂರ್ಯನಾರಾಯಣನ ಜನ್ಮವೇ ವ್ಯರ್ಥವಾಯಿತು. ತನ್ನ ತಾಯಿಯು ನಡೆಸಿದ ಘೋರವಾದ ಪಾಪಕೃತ್ಯದಿಂದ ತನಗೆ ಇಂಥಾ ಗತಿಯಾಯಿತೆಂದು ಬಹಿರಂಗವಾಗಿ ಅವನು ಹೇಳುವದಕ್ಕೆ ಅಂಜಿಕೊಳ್ಳಲಿಲ್ಲ. ಇದು ಅವಳ ಕಿವಿಗೆ ಅತಿ ಕಠೋರವಾಯಿತು. ತನಗೆ ಸಾವು ಬೇಗ ಬರಲಿಲ್ಲವೆಂಬ ಚಿಂತೆಯಲ್ಲಿ ಅವಳು ಮುಳುಗಿದಳು. ತಿಪ್ಪಾಶಾಸ್ತ್ರಿಯು ತನ್ನ ಮನೆಮಾರಿನ ಗೊಡವೆಯೇ ಬಿಟ್ಟು ಶೃಂಗಾರಿಯ ಒಡನಾಟದ ಸುಖವನ್ನು ಅನುಭವಿಸಿ,

ವಾಗ್ದೇವಿಯು ಒಟ್ಟಿನಲ್ಲಿ ಸೂರ್ಯನಾರಾಯಣನಿಗೆ ತನ್ನಿಂದ ಕೊಡುವ ಸಹಾಯ ಮಾಡುತ್ತಿರುವಾಗ ಅವನು ಒಂದು ಸಣ್ಣ ಗಂಡಾಂತರದಲ್ಲಿ ಸಿಲುಕಿದನು. ಹ್ಯಾಗಂದರೆ--ಕುಮುದಪುರ ಮಠದಿಂದ ಹೊರಟು ಪ್ರವಾಸದಲ್ಲಿರುವಾಗ ಸೂರ್ಯನಾರಾಯಣನಿಗೆ ನಿತ್ಯಖರ್ಚಿಗೆ ಒಂದೊಂದು ಸಲ ಹೆಚ್ಚು ಇಕ್ಕಟ್ಟಾಗಿ ಕೂಳಿಗೆ ತತ್ವಾರಯೆಂಬಂತೆ ಆಗುವದಿತ್ತು. ಅಂಥಾ ಅನಿವಾರ್ಯ ಸಂಗತಿಯಲ್ಲಿ ವಾಗ್ದೇವಿಯು ಚಿನ್ನ ಚಿಗುರು ಈಡು ಇಟ್ಟು ತಿಪ್ಪಾಶಾಸ್ತ್ರಿಯ ಪರಿಮುಖ ಹಣವನ್ನು ತರಿಸಿಕೊಂಡು ಅನುಪತ್ಯ ಸುಧಾರಿಸಿಕೊಳ್ಳುತ್ತಿದ್ದಳು. ಒಂದು ದಿನ ಎರಡು ಸರಗಳನ್ನು ತಕ್ಕೊಂಡು ತಿಪ್ಪಾಶಾಸ್ತ್ರಿಯು ಒಬ್ಬ ಸಾಹುಕಾರನಲ್ಲಿ ಹೋಗಿ ಅವುಗಳ ಈಡಿನ ಮೇಲೆ ಹಣವನ್ನು ಪಡಕೊಳ್ಳುವದಕ್ಕೋಸ್ಕರ ಪ್ರಸ್ತಾಪ ನಡಿಸಿದನು. ಸಾಹುಕಾರನು ಒಡವೆಗಳನ್ನು ನೋಡಿ ಕೊಂಚ ಅನುಮಾನ ಪಟ್ಟು ಯಾರಿಗೂ ತಿಳಿಯದಂತೆ ಕೊತ್ವಾಲನನ್ನು ಕರಿಸಿದನು. ಅವನು ತಿಪ್ಪಾಶಾಸ್ತ್ರಿಗೆ ಅವುಗಳನ್ನು ಕುರಿತು ಮಾಡಿದ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರವನ್ನು ಕೊಡಲಿಕ್ಕೆ ತಪ್ಪಿದ್ದಕ್ಕಾಗಿ ಅವುಗಳನ್ನು ಕೈವಶ ಮಾಡಿಕೊಂಡು ಕುಮುದಪುರದ ಕಾರಭಾರಿಗೆ ಬರಕೊಂಡನು. ಕಾರಭಾರಿಯು ಅವುಗಳನ್ನು ಕುರಿತು ಕುಮುದಪುರ ಸನ್ಯಾಸಿಗಳನ್ನು ವಿಚಾರಿಸಿದನು. ಅವುಗಳನ್ನು ವಾಗ್ದೇವಿಯು ಮಠವನ್ನು ಬಿಟ್ಟು ಹೋಗುವಾಗ್ಯೆ ಕಳ್ಳಾಟಿಕೆಯಿಂದ ಕೊಂಡು ಹೋದ ಸೊತ್ತುಗಳ ಒಂದು ಸಣ್ಣ ಅಂಶವಾಗಿರುವದಾಗಿ ತಿಳದುಬಂತು. ಈ ದೆಸೆಯಿಂದ ಶಾಸ್ತ್ರಿಯನ್ನೂ ಶೃಂಗಾರಿಯನ್ನೂ ಪಹರೆಯಲ್ಲಿ ಇಟ್ಟು ಅವರ ಮೇಲೆ ಒಂದು ಪ್ರಕರಣವನ್ನು ಏರ್ಪಡಿಸೋಣಾಯಿತು. ಅವರ ವಿಚಾರಣೆಯು ಕುಮುದಪುರ ಕಾರಭಾರಿಯಿಂದ ನಡಿಯತಕ್ಕದ್ದಾದುದರಿಂದ ಅದು ಮುಗಿಯುವ ಪರಿಯಂತರ ಅವರಿಬ್ಬರೂ ಆ ಪಟ್ಟಣದಲ್ಲಿ ಪಹರೆಯಲ್ಲಿ ಇರಬೇಕಾಯಿತು. ಅದು ಸಹಿಸಲಿಕ್ಕೆ ಕೂಡದ ಲಜ್ಜೆಯಲ್ಲವೇ? ಕಳೆಗುಂದಿದ ಮುಖಗಳುಳ್ಳ ಅವರನ್ನು ನೋಡಿದವರೆಲ್ಲರೂ ಬಹು ಪಶ್ಚಾತ್ತಾಪ ಪಡುವದಾಯಿತು.

ತಿಪ್ಪಾಶಾಸ್ತ್ರಿಯ ಮೇಲೆ ಮತ್ಸರವುಳ್ಳ ಹಲವು ಮಂದಿ ಕುಮುದಪುರದಲ್ಲಿರುವುದು ನಿಜ. ಪರಂತು ಶೃಂಗಾರಿಯನ್ನು ಕುರಿತು ಅನುತಾಪಪಟ್ಟು, ಅವಳ ಒತ್ತಾಸೆಗೆ ಮನಸ್ಸುಕೊಡಲಿಕ್ಕೆ ಸಿದ್ಧವಾಗಿರುವ ವ್ಯಕ್ತಿಗಳು ಯಾರೂ ಇರಲಿಲ್ಲವೆನ್ನಕೂಡದು. ತತ್ಕಾಲವಾಗತಕ್ಕ ಹೆಚ್ಚಿನ ಸಹಾಯ ಯಾವುದು? ಜಾಮಿನಿನ ಮೇಲೆ ಸೆರೆಮನೆಯಿಂದ ಬಿಡಿಸಿಬಿಟ್ಟರೆ ಸಾಕು. ಹಾಗೆ ಬಿಟ್ಟ

ಮೇಲೆ ಅವಳು ಓಡಿಹೋದರೆ ದೊಡ್ಡ ಮೋಸವಾದೀತು ಎಂದು ಕೆಲವರು. ನೆವನವನ್ನು ಹೇಳಿ ಜಾರಿದರು. ಈ ಮಲಾಮುತ್ತು ಒಮ್ಮೆ ಪಟ್ಟಣದಿಂದ ನಿವಾಳಿಸಿ ಹೋದವಳು ಪುನಃ ಬಂದು ಬಿಟ್ಟಳಲ್ಲಾ. ಇವಳಿಗೆ ಸಹಾಯ ಲೊಲ್ಲೊಟ್ಟೆಯೆಂದು ಬೇರೆ ಕೆಲವರು. ಹಾಗಲ್ಲಾ ಹೆಣ್ಣು ಹೆಂಗಸು, ಅನಾಥೆ ಯೆನ್ನಬೇಕು, ಅವಳ ಸಂಗಡ ಇರುವ ಪಾಪಿ ಸೆರೆಮನೆಯಲ್ಲಿ ಕೊಳೆಯಲಿ. ಅವಳನ್ನು ಬಿಡಿಸಿದವರಿಗೆ ಪುಣ್ಯಬಾರದೆ ಹೋಗದೆಂದು ವೃದ್ಧರು ಕೆಲವರು ರಾಗಚ್ಛಾಯದಿಂದ ಅಂದುಕೊಂಡರು. ಕೊನೆಗೆ ಕೆಲವು ಹಳೆಗೆಳೆಯರು ಕೂಡಿ, ತಾವಾಗಿ ಮುಂದೆ ಬೀಳದೆ ಗುಪ್ತ ಸಹಾಯಮಾಡಿ, ಒಬ್ಬ ಒಕ್ಕಲಿಗ ನನ್ನು ಹೊಣೆಯಾಗಿ ನಿಲ್ಲಿಸಿ, ಅವಳನ್ನು ಬಿಡಿಸಿದರು. ಆದರೆ ತಿಪ್ಪಾಶಾಸ್ತ್ರಿ ಯನ್ನು ಸಹ ಜಾಮೀನುಕೊಟ್ಟು ಬಿಡಿಸದಿದ್ದರೆ ಅನ್ನ ಮುಟ್ಟಲಾರೆನೆಂದು ಅವಳು ಹಟಮಾಡಿದಳು. ಈ ಹೊಲೆಯರ ದೈವದ ತಳ್ಳಿ ತಮಗೆ ಬೇಡವಿತ್ತು. ಆ ಪಂಚಮಹಾಪಾತಕಿಯನ್ನು ಸೆರೆಮನೆಯಿಂದ ಬಿಡಿಸಿದರೆ ಸಿಕ್ಕುವ ಪುಣ್ಯ ಯಾವುದು? ಸುಮ್ಮಗಿರದೆ ದುಷ್ಟರ ಒತ್ತಾಸೆಗೆ ಹೋದ ಸೊಕ್ಕಿಗೆ ತಮಗೆ ಕ್ಷಿಪ್ರ ಪ್ರತಿಫಲ ಸಿಕ್ಕಿತು ಎಂದು ಅವರು ಪಶ್ಚಾತ್ತಾಪಪಟ್ಟರು. ಕಡೆಗೆ ಅದೇ ಒಕ್ಕಲಿಗನ ಜಾಮೀನಿನ ಮೇಲೆ ತಿಪ್ಪಾಶಾಸ್ತ್ರಿಯು ಬಿಡುಗಡೆ ಹೊಂದಿದನು.

ಕಾರಭಾರಿಯು ಈ ವ್ಯಕ್ತಿಗಳಿಬ್ಬರ ಮೇಲೆ ಬಂದಿರುವ ಪ್ರಕರಣವನ್ನು ಚೆನ್ನಾಗಿ ಪರಿಶೋಧಿಸಿ ನೋಡಿದನು. ಅವರ ಸ್ವಾಧೀನಕ್ಕೆ ಸಿಕ್ಕಿದ ಆಭರಣ ಗಳು ಕುಮುದಪುರ ಮಠದ್ದೇ ಎಂಬದಕ್ಕೆ ತಾರ್ಕಣೆ ಇಲ್ಲದೆ ಅವರಿಗೆ ಶಿಕ್ಷೆ ವಿಧಿಸುವುದಕ್ಕೆ ಅಥವಾ ಅವುಗಳನ್ನು ಆ ಮಠಾಧಿಪತಿಗಳಿಗೆ ಬಿಟ್ಟುಕೊಡ ಬೇಕೆಂದು ಆಜ್ಞೆಮಾಡುವುದಕ್ಕೆ ಕಾರಣವಿರುವುದಿಲ್ಲವೆಂದು ತೀರ್ಪುಮಾಡಿ ದನು. ಆದರೂ ಆಭರಣಗಳನ್ನು ಪ್ರತಿವಾದಿಗೆ ಬಿಟ್ಟುಕೊಡಲಿಕ್ಕೆ ಅವನು ಅಪ್ಪಣೆಕೊಡಲಿಲ್ಲ. ಅವುಗಳು ತಮ್ಮ ಸೊತ್ತೆಂದು ಪ್ರತಿಪಾದನ ಮಾಡುವ ವರೆಗೆ ರಾಜಸ್ಥಾನದಲ್ಲಿಯೇ ಇರಲಿ. ಹಿಂತಿರುಗಿ 'ಪಡಕೊಳ್ಳುವ ಅವಧಿಯು ದಾಟಿದ ಮೇಲೆ ಅವುಗಳು ಸರಕಾರಕ್ಕೆ ಮುದ್ರಾರ್ಪಣೆಯಾಗುವುದೆಂದು ತೀರ್ಪು ಮಾಡಿದನು. ಕಾರಾಗೃಹದಲ್ಲಿ ಬಿದ್ದು, ಯಾತನೆ ಪಡುವ ಸಂಕಟ ನಿವಾರಣೆ ಆದದ್ದೇ ಸಾಕು. ಆಭರಣಗಳು ಹೊಳೆಗೆ ಬೀಳಲೆಂದು ತಿಪ್ಪಾ ಶಾಸ್ತ್ರಿಯೂ ಶೃಂಗಾರಿಯೂ ಶೀಘ್ರ ವಾಗ್ದೇವಿ ಇದ್ದ ಊರನ್ನು ಸೇರಿಕೊಂಡು ನಡೆದ ವೃತ್ತಾಂತವನ್ನು ವಿದಿತ ಮಾಡಿದರು. ಈಗ ಬಡತನವು ಬಂದ

ಕಾಲವೆಂದು ನೋಡದೆ, ನಗಗಳನ್ನು ಹಿಂದೆ ಸಿಕ್ಕುವ ಪ್ರಯತ್ನ ಯಾರ ಕಾಲಾವರೂ ಹಿಡಿಸು ನಡಿಸುವದರ ಬದಲಿಗೆ ತನ್ನಲ್ಲಿ ಕೂಳಿಗೆ ಗಿರಾಕಿ ಇಲ್ಲದೆ ಹೋಗುವುದೆಂಬ ಭಯದಿಂದ ಓಡಿಬಂದಿರೀ ಎಂದು ಅವಳು ಕಠಿಣವಾಗಿ ಜರೆದು ಮಾತನಾಡಿದಳು. ಉಭಯತ್ರರಿಗೂ ಸಿಟ್ಟೇರಿತು. ಇವಳ ಹಂಗಿನಲ್ಲಿ ಇರುವದರಿಂದ ನಮಗೆ ಇಂಥಾ ದುರುಕ್ತಿಗಳ ಉಪಚಾರ ಸಿಕ್ಕುವದಾಯಿತು. ಉಪವಾಸಮಾಡಿ ಪ್ರಾಣಪಾದರೂ ಕಳಕೊಳ್ಳುವದು ಲೇಸು; ಇಲ್ಲಿಂದ ನಡೆದು ಬಿಡೋಣವೆಂದು ಇಬ್ಬರೂ ನಟ್ಟನೆ ಹೊರಟು ಶಾಬಯ್ಯನೂ ಭೀಮಾಜಿಯೂ ಇರುವ ಶಾಂತಿಪುರಕ್ಕೆ ಬಂದರು.

ಪ್ರಥಮತಃ ಭೀಮಾಜಿಯ ಭೇಟಿ ಮಾಡುವ ಉದ್ದಿಶ್ಯ ಅವನ ಮನೆ ಕಡೆಗೆ ಅವರು ಅಡಿ ಇಟ್ಟರು. ದೂರದಿಂದ ಅವರನ್ನು ಕಂಡು, ಭೀಮಾಜಿಯು ಜಗಲಿಯಿಂದ ಮನೆಯ ಒಳಗೆ ಹೊಕ್ಕುಬಿಟ್ಟನು. ತಿಪ್ಪಾಶಾಸ್ತ್ರಿಯು ಬಾಗಿಲಲ್ಲಿ ನಿಂತು ಜವಾನಗೆ ತನ್ನ ಹೆಸರು ಹೇಳಿ ತಿಳಿಸಿದಾಗ, ಧನಿಗಳು ದೂರ ಪ್ರಾಂತ್ಯದಲ್ಲಿರುವ ಒಂದು ಗ್ರಾಮಕ್ಕೆ ಹೋಗಿರುತ್ತಾರೆ. ಹಿಂತಿರುಗಿ ಬರಲಿಕ್ಕೆ ಕೆಲವು ದಿವಸಗಳು ತಗಲಲಿಕ್ಕೆ ಸಾಕೆಂದು ಹೇಳಿದನು. ಕೊತ್ವಾಲನು ಜಗಲಿಯಿಂದ ಮನೆಯ ಒಳಗೆ ಬೇಗ ಬೇಗ ಹೋಗುವುದನ್ನು ಶೃಂಗಾರಿಯು ದೂರದಿಂದ ಕಂಡಿರುತಿದ್ದಳು. ಸ್ತ್ರೀ ಪುರುಷರಿಬ್ಬರೂ ಮರಳಿ ಭೀಮಾಜಿಯು ನಡೆಸಿದ ಯುಕ್ತಿಯನ್ನು ಕುರಿತು ಖೇದಪಟ್ಟು, ಮರುದಿನ ಸಾಯಂಕಾಲ ಸಮಯದಲ್ಲಿ ಶಾಬಯ್ಯನ ಬಿಡಾರಕ್ಕೆ ಅಭಿಮುಖರಾದರು. ಉಪ್ಪರಿಗೆ ಮೇಲಿಂದ ಅವರನ್ನು ನೋಡಿಕೊಂಡಿರುವ ಶಾಬಯ್ಯನು ಈ ಹೊಲೆಯರ ದೈವಗಳು ತನ್ನನ್ನು ಕಾಡಲಿಕ್ಕೆ ಬರುತ್ತವೆ, ಸರಿ, ಎಂದು ತಪಕ್ಕನೆ ಎದ್ದು ಒಂದು ಕೋಣೆಯಲ್ಲಿ ಯಾರೂ ಕಾಣದ ಹಾಗೆ ಕೂತುಕೊಂಡನು. ತಿಪ್ಪಾಶಾಸ್ತ್ರಿಯು ತನ್ನ ಹೆಸರು ತಿಳಿಸಿದಾಗ ಇನ್ನು ಎಂಟು ದಿವಸಗಳ ತನಕ ಧನಿಯು ಸರ್ವಪಾಪ ಪ್ರಾಯಶ್ಚಿತ್ತಾರ್ಥವಾಗಿ ಮೌನಧಾರಣೆಯಲ್ಲಿರುವುದರಿಂದ ಅನ್ಯ ಜನರನ್ನು ನೋಡಿ ಮಾತನಾಡಲಿಕ್ಕೆ ಎಷ್ಟು ಮಾತ್ರಕ್ಕೂ ಅನಾನುಕೂಲವಿದೆ. ಎಂದು ಪೇದೆಯು ಖಂಡಿತವಾಗಿ ಉತ್ತರ ಕೊಟ್ಟನು. ಶೃಂಗಾರಿಯ ಎದೆಯು ಬಿರಿಯುವ ಹಾಗೆ ತೋಚಿತು. ತನ್ನ ಸ್ನೇಹಸುಖವನ್ನು ಇಷ್ಟು ಬೇಗ ಮರೆತು ಹೋದ ಈ ಶ್ವಾನನ ಮುಖಾವಲೋಕನದಷ್ಟು ಕಡುಪಾಪ ಇನ್ನಾವದೆಂದು ಘಟ್ಟಿಯಾಗಿ ಎಲ್ಲರೂ ಕೇಳುವಂತೆ ನುಡಿಯುತ್ತಾ, ಶಾಬಯ್ಯನ ಮನೆಗೆ

ಬೆನ್ನು ಹಾಕಿದಳು. ತಮ್ಮ ಶತ್ರುಗಳ ಕಣ್ಣಿಗೆ ಬೀಳದಂತೆ ಮಾಡುವುದಕ್ಕಾಗಿ ಇನ್ನೊಂದು ಊರು ಸೇರಿಕೊಳ್ಳುವುದಕ್ಕೆ ಅವರು ಶಾಂತಿಪುರದಿಂದ ಹೊರಟರು.

## ಐವತ್ತೈದು

ಶೃಂಗಾರಿಯೂ ತಿಪ್ಪಾಶಾಸ್ತ್ರಿಯೂ ತನ್ನ ಕುತ್ಸಿತ ವಚನಗಳನ್ನು ಸಹಿಸಕೂಡದೆ, ಕುಪಿತರಾಗಿ ಹೊರಟು ಹೋದದ್ದನ್ನು ಕುರಿತು ವಾಗ್ದೇವಿಯು ಚಿಂತಾಕ್ರಾಂತಳಾಗಿ ಅವರನ್ನು ಹುಡುಕಿತರುವುದಕ್ಕೋಸ್ಕರ ಸೂರ್ಯನಾರಾಯಣನ ಸಮೇತ ಅದೇ ಶಾಂತಿಪುರಕ್ಕೆ ಬಂದಳು. ಪ್ರಾಣಸಖನಾದ ಭೀಮಾಜಿಯು ಇರುವ ಊರಲ್ಲಿ ತನಗೇನು ಕಡಿಮೆ ಎಂದು ಹಿಗ್ಗಿ, ಅವನ ಮನೆಯ ಬಳಿಗೆ ಹೋಗುವಾಗ ಮನೆಯ ಮುಂದುಗಡೆಯಲ್ಲಿ ಅಲೆದಾಡುತ್ತಾ ಇರುವ ಕೊತ್ವಾಲನು ಇವಳ ಮೇಲೆ ದೃಷ್ಟಿಬೀಳುವಷ್ಟರಲ್ಲಿ ಮನೆಯ ಹಿಂದುಗಡೆ ತಿರುಗಿ ಒಳಗೆ ಹೋಗಿ ಅಡಗಿಬಿಟ್ಟನು. ವಾಗ್ದೇವಿಯು ಈ ವೈನವನ್ನು ಪೂರ್ಣವಾಗಿ ನೋಡಿದಳು. ಅವಳಿಗೆ ತಡೆಯಲಾರದ ಸಿಟ್ಟು ಬಂದರೂ ಈತನ ಸ್ವರೂಪ ನೋಡಿಬಿಡುವುದಕ್ಕೆ ಮುಂಬಾಗಿಲಿಗೆ ಹೋಗಿ ನಿಂತು, ಜವಾನನನ್ನು ಕರೆದು ತನ್ನ ಹೆಸರು ಧನಿಗೆ ತಿಳಿಸೆಂದಳು. ಧನಿಯು ಕೊಂಚ ರಜವನ್ನು ತಕ್ಕೊಂಡು ಸ್ವದೇಶಕ್ಕೆ ಹೋಗಿರುವನೆಂದು ಜವಾನನು ಹೇಳಿದನು. ವಾಗ್ದೇವಿಯು ಥೂ ಇವನ ಮುಖ ನೋಡಿದರೆ ಸಚೇಲಸ್ನಾನ ಮಾಡಬೇಕು. ತಾನು ಇಲ್ಲಿಗೆ ಬರುವದಕ್ಕಿಂತ ಸ್ಮಶಾನ ದರ್ಶನ ಮಾಡುವುದು ಪ್ರಯೋಜನಕರವೆಂದು ನಡೆದುಬಿಟ್ಟಳು. ಮರುದಿನ ಸಾಯಂಕಾಲ ಶಾಬಯ್ಯನ ಭೇಟಿ ಸಿಕ್ಕುವುದೋ ನೋಡಿಬಿಡಬೇಕೆಂದು ಅವನ ಮನೆಯ ಕಡೆಗೆ ಹೋಗುವಾಗ ಉಪ್ಪರಿಗೆಯ ಮುಖ ಮಂಟದ ಗಾಳಿಗೆ ಮೈಬಿಟ್ಟು ನಿಂತಿರುವ ಶಾಬಯ್ಯನು, ವಾಗ್ದೇವಿಯನ್ನು ಕಂಡು, ತಗಣೆಯಂತೆ ಅಡಗಿದನು. ಇವನ ಸ್ಥಿತಿಯನ್ನು ಪೂರ್ಣವಾಗಿ ಪರೀಕ್ಷಿಸಿ ನೋಡುವ ಕುತೂಹಲದಿಂದ ವಾಗ್ದೇವಿಯು ಮನೆಯ ಬಾಗಲಲ್ಲಿ ನಿಂತು, ತನ್ನ ಹೆಸರು ಯಜಮಾನರಿಗೆ ತಿಳಿಸೆಂದು ಪೇದೆಗೆ ಅಪೇಕ್ಷಿಸೋಣ, ಅವನು—ಧನಿಗಳು ಪರಸ್ತ್ರೀಯರ ಮುಖಾವಲೋಕನ ಮಾಡುವದೇ ಇಲ್ಲ. ಸುಮ್ಮಗೆ ಅವರ ಕೂಡೆ ಹೇಳಿ ಏನು ಪುರುಷಾರ್ಥವೆಂದನು. ಸರಿ, ಸರಿ; ವಾಗ್ದೇವಿಗೆ ಈಗ ಯೌವನ

ಇಲ್ಲ. ಕೈಯಲ್ಲಿ ದುಡ್ಡೂ ಇಲ್ಲ. ಇವೆರಡರಲ್ಲಿ ಒಂದಾದರೂ ಇದ್ದರೆ ಯಾರೂ ಇಂಥಾ ಲಂಡತನ ಮಾಡುವ ಹಾಗಿಲ್ಲವೆಂದು ಶಾಬಯ್ಯನು ಕೇಳುವ ಹಾಗೆ ಹೇಳಿ, ಛೀ ಥೂ ಎಂದು ಮೂರು ಸಲ ಉಗುಳಿಬಿಟ್ಟು, ಬೆನ್ನುಹಾಕಿದಳು. ಶಾಬಯ್ಯಗೆ ಲಜ್ಜೆಯಿಂದ ಸತ್ತ ಹಾಗಾಯಿತು. ಜವಾನರ ಮುಂದೆ ಅವಳು ತನ್ನ ಸ್ವರೂಪಕ್ಕೆ ಚಿಕ್ಕಾಸು ಮಾಡಿಬಿಟ್ಟಳೆಂಬ ಪಶ್ಚಾತ್ತಾಪದಿಂದ ಅವನು ಮುಖವೆತ್ತದೆ ಕುಳಿತು ಕೊಂಡನು. ಅವನ ಹೆಂಡತಿಯ ಕಿವಿಗೂ ಈ ಆಭಾಸದ ಸಮಾಚಾರ ಬಿತ್ತು. ಗಂಡನ ಕೂಡೆ ಮಾತಾಡದೆ, ಅನಾವಶ್ಯಕ ವಾಗಿ ಅವಮಾನಪಡಿಸಿದ ದೆಸೆಯಿಂದ ಬಂದ ನಾಚಿಕೆಯನ್ನು ಸಹಿಸಿಕೊಳ್ಳ ಬೇಕೆಂದಳು.

ವಾಗ್ದೇವಿಯು ಮರುದಿನವೇ ಸೂರ್ಯನಾರಾಯಣನ ಒಟ್ಟಿನಲ್ಲಿ ಇನ್ನೊಂದು ಊರಿಗೆ ಹೋಗುವದಕ್ಕಾಗಿ ಪ್ರಯಾಣಮಾಡುವ ಸಮಯದಲ್ಲಿ ಕೊಂಚ ದೂರದಲ್ಲೊಂದು ಹಳ್ಳಿಯಲ್ಲಿ ಶೃಂಗಾರಿಯೂ ತಿಪ್ಪಾಶಾಸ್ತ್ರಿಯೂ ಉಳ ಕೊಂಡಿರುವ ವರ್ತಮಾನ ಸಿಕ್ಕಿದ್ದರಿಂದ ಅಲ್ಲಿಗೆ ಹೋಗಿ ಅವರಿಬ್ಬರನ್ನು ಕಂಡು ಪ್ರಯಾಸದಿಂದ ಅವರ ಕೂಡೆ ವಿವೇಕಮಾಡಿಕೊಂಡ ಬಳಿಕ ನಾಲ್ಕು ವ್ಯಕ್ತಿ ಗಳೂ ಒಟ್ಟಾಗಿ ಯಾವ ಊರಲ್ಲಿ ತಮಗೆ ಆಶ್ರಯ ಸಿಕ್ಕುವದೆಂಬ ಚಿಂತೆಯಿಂದ ದಿನಹರಣ ಮಾಡಿದರು. ಬೆಟ್ಟದ ನಾಡು ಎಂಬಲ್ಲಿ ಒಬ್ಬ ಮುದುಕ ವಕೀಲ ನಲ್ಲಿ ಗೋಷ್ಟದ ಬಳಿಯೇ ಇರುವ ಚಿಕ್ಕದೊಂದು ಝೋಪಡಿಯಲ್ಲಿ ಬಿಡಾರ ವಾಸಿಗಳಾಗಿ ಕೆಲವು ಕಾಲ ಕಳೆದರು. ಆ ಊರಿನಲ್ಲಿ ಶಿವರಾಮುಶೆಟ್ಟಿ ಎಂಬ ಒಕ್ಕಲಿಗನೊಬ್ಬನು ಬಹು ಆಢ್ಯಮನುಷ್ಯನಾಗಿ ಧಾರ್ಮಿಕನೆಂದು ಹೆಸರು ಗೊಂಡಿರುತ್ತಿದ್ದನು. ಅವನ ಸಹೋದರಿಯ ಹುಡುಗನೊಬ್ಬಗೆ ಜಡವಾಗಿ ಪ್ರಾಣಾಂತಿಕವೆಂಬ ಜನ್ಯವನ್ನು ಕೇಳಿ ಅವನ ಸ್ನೇಹಿತನೊಬ್ಬನು ತಿಪ್ಪಾಶಾ ಸ್ತ್ರಿಯನ್ನು ಅಲ್ಲಿಗೆ ಕರಕೊಂಡು ಈತನು ದೊಡ್ಡ ಜ್ಯೋತಿಷ್ಯಗಾರನೆಂದು ಗುರ್ತುಮಾಡಿಸಿದನು.

ಶಿವರಾಮು ಶೆಟ್ಟಿಯು ಹುಡುಗನ ಜಾತಕವನ್ನು ಜೋಯಿಸಗೆ ತೋರಿಸಿದನು. ತಿಪ್ಪಾಶಾಸ್ತ್ರಿಯು ಅವನ್ನು ನೋಡಿ ದಶಾಸಂಧಿಯ ಬಾಧಕ ತೊಲಗಿಯದೆ. ಚನ್ನಾಗಿ ಪರಿಹಾರ ಮಾಡಿದರೆ ಜೀವ ಉಳಿದೀತಾಗಿ ಧೈರ್ಯ ಹೇಳಿ ಮೃತ್ಯುಂಜಯ ಅಭಯಂಕರವೆಂಬ ದೊಡ್ಡ ದೊಡ್ಡ ಹೋಮಾದಿಗ ಳನ್ನು ಮಾಡಿಸುವದಕ್ಕೆ ತೊಡಗಿದನು. ಯಾರ ಪುಣ್ಯದಿಂದಲೋ ಹುಡುಗ

ನಿಗೆ ಗುಣವಾಯಿತು. ಶಿವರಾಮು ಶೆಟ್ಟಿಗೂ ಅವನ ಸಹೋದರಿಗೂ ತಿಪ್ಪನ ಮೇಲೆ ಬಹು ವಿಶ್ವಾಸಹುಟ್ಟಿತು. ಅವನು ಆ ಊರಿಗೆ ಬಂದ ಹದನವೆಲ್ಲಾ ಪೂರ್ಣವಾಗಿ ಅರಿತು ಅವರಿಬ್ಬರೂ ಬಹಳ ಪಶ್ಚಾತ್ತಾಪ ಪಟ್ಟು, ಸಣ್ಣದೊಂದು ಮಠವನ್ನು ಕಟ್ಟಿಸಿ ಸೂರ್ಯನಾರಾಯಣ ವಾಗ್ದೇವಿ ಶೃಂಗಾರಿ ತಿಪ್ಪಾಶಾಸ್ತ್ರಿ ಇವರಿಗೂ ಆಶ್ರಯಕೊಟ್ಟು ಅವರ ಜೀವನ ನಡಿಯುವದಕ್ಕೆ ಅಗತ್ಯವಿರುವ ಸಹಾಯಮಾಡಿದರು.ದೇವರ ದಯೆಯಿಂದ ಜೀವನೋಪಾಯವು ಪ್ರಯಾಸವಿಲ್ಲದೆ ದೊರಕಿದ್ದಕ್ಕಾಗಿ ವಾಗ್ದೇವಿಯು ಉಲ್ಲಾಸಪಟ್ಟು ಇನ್ನು ಈ ಆಶ್ರಮ ಸ್ಥಾನದಲ್ಲಿ ಆಯುಷ್ಯವನ್ನು ಕಳೆದು ಬಿಡುವದೆಂದು ನಿಶ್ಚಯಮಾಡಿ ಕೂಳಿಗೆ ತತ್ವಾರವಿಲ್ಲದೆ ಅಲ್ಲಿ ಸುಖನಾಗಿ ಬದುಕಿಕೊಂಡಿರುತ್ತಿರುವವೇಳೆ ಸೂರ್ಯನಾರಾಯಣನು ತಾನು ಪಡುತ್ತಾ ಇರುವ ಅಧ್ವಾನಗಳಿಂದ ವಿಮೋಚನಾದೆನೆಂಬ ಹರುಷದಿಂದ ಪೂರ್ವವೃತ್ತಾಂತವನ್ನು ಪೂರ್ಣವಾಗಿಮರೆತು ನಿರಾತಂಕನಾಗಿ ಯೌವನ ವೃದ್ಧಿ ಹೊಂದುತ್ತಾ ಬಂದನು.

ಶಿವರಾಮುಶೆಟ್ಟಿಗೆ ಕಿರಿ ತಂಗಿ ವೆಂಕಟಸುಬ್ಬಿ ಎಂಬ ನವಯೌವನೆಯಿದ್ದಳು. ಆ ಅಂಗನಾಮಣಿಯ ಮೇಲೆ ಸೂರ್ಯನಾರಾಯಣನ ದೃಷ್ಟಿ ಬಿತ್ತು. ಅವಳು ಅವನ ಮೇಲೆ ಪ್ರೇಮಭರಿತಳಾಗಿಯೇ ಇರುವಳೆಂಬಂತೆ ಅವಳ ಚೇಷ್ಟೆಗಳಿಂದ ಅವನ ಮನಸ್ಸಿಗೆ ಮಂದಟ್ಟಾಯಿತು. ಯಾರೊಬ್ಬನ ಮಧ್ಯಸ್ಥಿಕೆ ಇಲ್ಲದೆ ಇವರಿಬ್ಬರು ಗೋಪ್ಯವಾಗಿ ಒಡನಾಡಿಕೊಂಡು, ಹಲವು ದಿವಸಗಳ ಪರಿಯಂತರ ಅಂತರ್ಯವಾಗಿದ್ದರು. ಹೆಚ್ಚುಕಾಲ ಹೀಗೆಯೇ ನಡೆದರೆ ತಮ್ಮ ಸಮಾಗಮವು ಎದುರಿಗೆ ಅನರ್ಥಕ್ಕೆ ಕಾರಣವಾಗಿ ಸುಖಕ್ಕೆ ವೈಕಲ್ಯ ಬರುವದಲ್ಲದೆ ಪ್ರಾಣಹಾನಿಯ ಸಂಭವವೂ ಒದಗಲಾರದೆನ್ನಕೂಡದು. ಒಂದು ಕ್ಷಣವಾದರೂ ಅಗಲುವಿಕೆಯನ್ನು ಸಹಿಸಲಾರದಷ್ಟು ಪರಸ್ಪರ ಅನುರಾಗ ವೃದ್ಧಿಯು ಅವರೊಳಗೆ ಸಿದ್ಧಿಯಾದ ದೋಷ ನಿರಾತಂಕವಾಗಿ ತಮ್ಮ ಸಮ್ಮೇಳನವು ನಡಿಯಬೇಕಾದರೆ ಉಭಯತ್ರರು ಕೂಡಲೇ ಪಲಾಯನ ಮಾಡಬೇಕೆಂಬ ಯೋಚನೆಯು ಅವರಿಗೆ ಹತ್ತಿತು. ತಮ್ಮ ಅಭೀಷ್ಟವನ್ನು ನೆರವೇರಿಸುವದಕ್ಕೆ ಅವರು ಅವಕಾಶವನ್ನು ಕಾದಿರುವಾಗ ಶಿವರಾಮುಸೆಟ್ಟಿಯ ಮನೆಯಲ್ಲಿ ವರ್ಷಾವಧಿ ಹರಿಸೇವೆಗೆ ದಿನ ನಿಶ್ಚೈಸಿತು. ಅಂದು ಬಹು ಜನ ನೆಂಟರಿಷ್ಟರೂ ಇಷ್ಟಮಿತ್ರರೂ ಬಂಧುಬಾಂಧವರೂ ಕೂಡಿ ದೊಡ್ಡ ಗೌಜು ಆಗುವಾಗ್ಗೆ ಯಾರು ಯಾವಲ್ಲಿರುವರೆಂಬ ಗೋಷ್ಠಿಯು ಒಬ್ಬರಿಗೂ ಇರಲಿಲ್ಲ. ಈ

ಉತ್ಸವವನ್ನು ಕಂಡು ಬಿಡಬೇಕೆಂದು ವಾಗ್ದೇವಿಯೂ ಶೃಂಗಾರಿಯೂ ತಿಪ್ಪಾ ಶಾಸ್ತ್ರಿಯೂ ಹೋಗಿರುವ ಸಂದರ್ಭವನ್ನು ನೋಡಿ ವೆಂಕಟಸುಬ್ಬಿಯು ಮೈ ಮೇಲೆ ಧರಿಸಿಕೊಂಡಿರುವ ಅಮೂಲ್ಯವಾದ ಆಭರಣಗಳ ಸಮೇತ ಬೇಕಾ ದಷ್ಟು ಗುಪ್ತಧನವನ್ನು ಕಟ್ಟಿಕೊಂಡು ಸೂರ್ಯನಾರಾಯಣನ ಮಠಕ್ಕೆ ಬಂದು ಅವನನ್ನು ಕರಕೊಂಡು ಇಬ್ಬರೂ ತವಕದಲ್ಲಿ ನಡೆದುಬಿಟ್ಟರು. ಇಡೀ ರಾತ್ರೆ ಕೊಂಚವಾದರೂ ಶ್ರಮಿಸಿಕೊಳ್ಳದೆ ವೇಗದಿಂದ ನಡೆದು ಷಟ್ಪುರ ರಾಜ್ಯದ ಗಡಿಯನ್ನು ದಾಟಿ ಅನ್ಯ ರಾಜ್ಯವನ್ನು ಸೇರಿದರು. ಸೂರ್ಯನಾರಾ ಯಣನು ಸನ್ಯಾಸದ ಚಿಹ್ನೆಗಳನ್ನು ಮರೆಯಿಸಿ ತಾನು ಮತ್ತು ವೆಂಕಟಸುಬ್ಬಿ ಗಂಡಹೆಂಡಿರೆಂದು ಕಾಣುವ ರೀತಿಯಲ್ಲಿ ನಡಕೊಂಡು, ಹಗಲು ಸಮಯ ಹೆಚ್ಚಾಗಿ ಯಾರ ಎದುರಿಗೂ ಬೀಳದೆ ಬಿಡಾರದಲ್ಲಿಯೇ ಉಳುಕೊಂಡು ರಾತ್ರೆ ಕಾಲ ಹಡಗವನ್ನೇರಿ ದೂರ ಪ್ರಾಂತ್ಯದಲ್ಲಿರುವ ಹೇಮುಳವೆಂಬ ದ್ವೀಪ ವನ್ನು ಸೇರಿದರು. ಅಲ್ಲಿ ಅವರು ಬೇರೆ ಹೆಸರುಗಳನ್ನು ತಾಳಿ ನಿರ್ಭೀತ ರಾಗಿ ವಾಸಮಾಡಿಕೊಂಡರು. ಹರಿ ಸೇವೆಯು ಬೆಳಗಿನ ಝಾವಕ್ಕೆ ಮುಗಿ ಯುತ್ತಾ ಬಂತು. ದರ್ಶಣೆಪಾತ್ರಿಯು "ಭಕ್ತಾ! ನಿನ್ನ ಸೇವೆಯನ್ನು ಒಡೆ ಯನು ಸಂತೋಷದಿಂದ ಒಪ್ಪಿಕೊಂಡಾಯಿತು. ನಿನ್ನ ಸರ್ವ ಮನಸಾಭೀಷ್ಟ ವನ್ನು ಸಲ್ಲಿಸಿಕೊಡುತ್ತಾನೆ. ಇಕೊ ನಂಬು" ಎಂದು ಯಜಮಾನನಿಗೆ ಪ್ರಸಾದ ಕೊಟ್ಟಾದ ಮೇಲೆ ಮನೆಯ ಜನರನ್ನು ಒಬ್ಬೊಬ್ಬರನ್ನೇ ಕರೆದು ಅವರಿಗೆ ಪ್ರಸಾದವಾಗುವಾಗ ವೆಂಕಟಸುಬ್ಬಿಯು ಕಾಣಲಿಲ್ಲ. ನಿದ್ರೆ ತಡೆಯಲಾರದೆ ಎಲ್ಲಿಯೋ ಬಿದ್ದುಕೊಂಡಿರಬೇಕು. ಕರಿಯಿರೆಂದು ಯಜಮಾನನ ಆಜ್ಞೆ ಯಾಯಿತು. ಮನೆಯ ಸಂದು ಮೂಲೆಗಳಲ್ಲಿಯೂ ಹಿತ್ತಲಿನ ಸುತ್ತು ಮುತ್ತೂ ಹುಡುಕಿ ಸಾಕಾದರೂ ವೆಂಕಟಸುಬ್ಬಿಯು ಸಿಗಲಿಲ್ಲ. ಪಾತ್ರಿಯ ಕೂಡೆ ಆದರೂ ಕೇಳಿ ನಿಷ್ಕರ್ಷೆ ಮಾಡುವದಕ್ಕೆ ಯಜಮಾನನು ಪ್ರಶ್ನೆ ಮಾಡಿದಾಗ—"ಚರವಾದ ಹಾಗೆ ತೋರುತ್ತದೆ. ಪೂರ್ಣ ಶೋಧವನ್ನು ಜೋಯಿಸರ ಮುಖದಿಂದ ಮಾಡಿಸಿಕೊಳ್ಳುವದು ಉತ್ತಮ. ಬಹಳ ಹೊತ್ತಾ ಯಿತು. ಪಾತ್ರಿಯು ದಣಿಯುತ್ತಾನೆ" ಎಂದು ಅವನು ವಾದ್ಯದವರಿಗೆ ತಿಳಿಸಿದನು. ದರ್ಶಣೆ ಹಿರಿಯುವ ವಾದ್ಯವಾದ ಕೂಡಲೇ ಪಾತ್ರಿಯು ನೆಲದ ಮೇಲೆ ಉದ್ದಂಡ ನಮಸ್ಕಾ ಹಾಕಿ ಎದ್ದು "ಗೋವಿಂದಾ ಗೋವಿಂದಾ" ಎನ್ನುತ್ತಾ ಒತ್ತಟ್ಟು ಮಲಗಿಕೊಂಡನು.

ತಿಪ್ಪಾಶಾಸ್ತ್ರಿಯು ಅಲ್ಲಿಯೇ ಇರುತ್ತಿದ್ದನಷ್ಟೇ. ಜೋಯಿಸರೇ ಪ್ರಶ್ನ ಭಾವದಲ್ಲಿ ಏನು ಕಾಣುತ್ತದೆ ಹೇಳಿರೆಂದು ಶಿವರಾಮಶೆಟ್ಟಿಯು ಕೇಳಿದಾಗ ಈ ಸಮಯ ಪ್ರಶ್ನೆ ಹೇಳಲಿಕ್ಕೆ ಯೋಗ್ಯವಾದುದಲ್ಲ. ಅರುಣೋದಯವಾಗಿ ಹೋಯಿತು. ಮುಖ ಮಜ್ಜನಾದಿಗಳಿಂದ ಶುಚಿರ್ಭೂತನಾಗುವ ಮುಂಚೆ ಯೇ ಪ್ರಶ್ನೆ ನೋಡಲಿಕ್ಕೆ ಅಸಾಧ್ಯವೆಂದು ಬೇಗನೆ ಮಠಕ್ಕೆ ಬಂದು ನೋಡಲು ಸೂರ್ಯನಾರಾಯಣನು ಅಲ್ಲಿರಲಿಲ್ಲ. ಅವನು ಆಭರಣ ಮೊದಲಾದ ಸಕಲ ಒಡವೆಗಳನ್ನು ಕಟ್ಟಿಕೊಂಡು ಹೊರಟುಹೋದ ಹಾಗೆ ಸ್ಪಷ್ಟವಾಗಿ ತೋರಿ ಬಂತು. ದಂಡಕಾಷ್ಟವನ್ನು ಮುರಿದು ಎದುರಿರುವ ಕೆರೆಯಲ್ಲಿ ಬಿಸಾಡಿತ್ತು. ತಿಪ್ಪಾಶಾಸ್ತ್ರಿಯ ಹಿಂದೆಯೇ ಬಂದ ವಾಗ್ದೇವಿಯೂ ಶೃಂಗಾರಿಯೂ ಸೂರ್ಯ ನಾರಾಯಣನ ಪಲಾಯನದ ಸಂಗತಿಯನ್ನು ತಿಳಿದು ವೆಂಕಟಸುಬ್ಬಿಯನ್ನು ಈ ಗೃಹಸ್ಥನೇ ಹಾರಿಸಿಕೊಂಡು ಹೋದನೆಂದು ಬಹಳ ಚಿಂತೆಯನ್ನು ತಾಳಿ ತಮ್ಮ ಮೇಲೆ ಇನ್ನೆಂಥ ಅಪಾಯ ಬರುವದೊ ಎಂಬ ಭೀತಿಯಿಂದ ನಡುಗಲಿಕ್ಕೆ ತೊಡಗಿದರು.

ಎಲ್ಲಿ ಹುಡುಕಿದರೂ ವೆಂಕಟಸುಬ್ಬಿಯು ಸಿಕ್ಕಲಿಲ್ಲ. ಇದ್ದ ಬಾವಿ, ಕೆರೆ, ಹೊಂಡ, ಕಾಡು ಶೋಧಿಸಿ ನೋಡಿದರೂ ವ್ಯರ್ಥ ಪ್ರಯಾಸಪಟ್ಟ ಹಾಗಾ ಯಿತು. ಶಿವರಾಮಶೆಟ್ಟಿಯೂ ಅವನ ಕುಟುಂಬದವರೂ ವ್ಯಾಕುಲವನ್ನು ತಡೆಯಲಾರದೆ ಶುದ್ಧ ಮರುಳರಂತೆ ವರ್ತಿಸಲಿಕ್ಕಾದರು. ಅವ್ವಳು ಕಳ್ಳರ ಕೈಗೆ ಸಿಕ್ಕಿ ಘಾಸಿಯಾದಳೋ? ಪುಂಡರು ಹೊಂಚು ಹಾಕಿ ಅವಳನ್ನು ಎತ್ತಿ ಕೊಂಡು ಹೋದರೊ? ತಾನಾಗಿಯೇ ಒಳ್ಳೇ ಸಂದರ್ಭವನ್ನು ನೋಡಿ ಸೊಕ್ಕಿನಿಂದ ಯಾರ ಹಿಂದೆಯಾದರೂ ನಡದುಬಿಟ್ಟಳೊ? ಮಂಕುಬೂದಿ ಯನ್ನು ತಳಿದು ಯಾವನಾದರೂ ಕೈವಶ ಮಾಡಿಕೊಂಡು ನಡೆದುಬಿಟ್ಟನೊ? ಎಂಬ ಹಲವು ಸಂದೇಹಗಳು ಅವರ ಮನಸ್ಸಿನಲ್ಲಿ ಗಲಿಬಿಲಿಯನ್ನು ಹುಟ್ಟಿಸಿದವು.

ಇದರ ಗುಟ್ಟು ತಿಳಿಯುವ ಹಾಗಿನ ವರ್ತಮಾನ ಕೊಂಚವಾದರೂ ಹೇಳುವವರಿಲ್ಲವಷ್ಟೇ ಎಂದು ವ್ಯಥೆಪಡುತ್ತಾ ಇರುವ ಸಮಯದಲ್ಲಿ ಯಾರೋ ಒಬ್ಬನು ಬಂದು ಮಠದಲ್ಲಿ ಸೂರ್ಯನಾರಾಯಣನು ಕಾಣುವದಿಲ್ಲವಂತೆ ಎಂದನು. ಆ ವದಂತಿಯ ನಿಜತ್ವವನ್ನು ತಿಳಕೊಂಡು ಬರುವದಕ್ಕೆ ಅವನ ತಮ್ಮನೇ ಗೋಗಿ ನೋಡಿ ಮರಳಿಬಂದು ಅನುಮಾನ ನಿವೃತ್ತಿಮಾಡಿದನು.

ನರಿ. ಆ ಅರ್ಜುನ ಸನ್ಯಾಸಿಯು ತನ್ನ ಮೋಹದ ತಂಗಿಯನ್ನು ಎತ್ತಿ ಹಾಕಿದ ನೆಂದು ಅವನಿಗೆ ಖಚಿತವಾಯಿತು. ತಿಪ್ಪಾಶಾಸ್ತ್ರಿಗೂ ಅವನ ಸಂಗಡಿಗರಿಗೂ ಆಶ್ರಯ ಕೊಟ್ಟು ತಂಗಿಯನ್ನು ಕಳಕೊಂಡು ಮನೆತನದ ಮರ್ಯಾದೆಗೆ ವಟ್ಟ ತಂದದ್ದಕ್ಕಾಗಿ ಶಿವರಾಮಶೆಟ್ಟಿಯು ಪಟ್ಟ ಪಶ್ಚಾತ್ತಾಪಕ್ಕೆ ಮಿತಿಯೇ ಇಲ್ಲ. ಒಮ್ಮೆ ಆ ಮೂವರನ್ನು ಸೀಳಿಬಿಡಲೋ ಎಂಬಷ್ಟು ಸಿಟ್ಟು ಬಂತು. ಆದರೆ ವಿವೇಕಿಯಾದ ಅವನು ಸಮಾಧಾನ ತಾಳಿದನು. ಏವಂಚ ಅವರ ಮುಖಾವಲೋಕನವೇ ಆಗಬಾರದು. ಅವರನ್ನು ಕೂಡ್ಲೆ ಹೊರಡಿಸಿ ಬಿಡೆಂದು ಚಾಕರರಿಗೆ ಅಪ್ಪಣೆಮಾಡಿದನು. ಆ ಅನುಜ್ಞೆಯಂತೆ ಅವರು ನಾವಾಕಾಶವಿಲ್ಲದೆ ವರ್ತಿಸಿದರು. ತಿಪ್ಪಾಶಾಸ್ತ್ರಿಯೂ ವಾಗ್ದೇವಿಯೂ ಶೃಂಗಾರಿಯೂ ಗಂಟುಮೂಟೆ ಕಟ್ಟಿ ನಿಮಿಷಾರ್ಧದಲ್ಲಿ ಆ ಹಳ್ಳಿಯನ್ನು ಬಿಟ್ಟು ಪಾರಾಗಿ ದೇವರ ದಯದಿಂದ ತಮ್ಮ ಜೀವ ಉಳಿದ ಹಾಗಾಯಿತೆಂದರು.

## ಐವತ್ತಾರು

ಸೂರ್ಯನಾರಾಯಣನು ಯಾವ ದೇಶಕ್ಕೆ ಹೋಗಿರಬಹುದೆಂಬ ಪತ್ತೆಯು ದೊರೆಯದೆಹೋಯಿತು. ವೆಂಕಟಸುಬ್ಬಿಯ ಸಂಬಂಧಿಕರು ಹಲವು ಊರುಗಳಿಗೆ ಹೋಗಿ ಸಮಾಚಾರ ಸಂಗ್ರಹಿಸುವದಕ್ಕೆ ಮಾಡಿದ ಪ್ರಯತ್ನ ಒಂದಾದರೂ ಸಫಲವಾಗಲಿಲ್ಲ. ಇದ್ದ ಊರೆಲ್ಲಾ ತಿರುಗಿ ಮರಳಿ ನಿಟ್ಟುಸಿರು ಬಿಡುತ್ತಾ ಕುಂತುಬಿಟ್ಟರು. ಇನ್ನೊಂದು ಕಡೆಯಿಂದ ವಾಗ್ದೇವಿಯು ಪುತ್ರ ಶೋಧವನ್ನು ಮಾಡುತ್ತಾ ಬಳಲಿದಳು. ಅವನು ಹೋದ ಊರು ಯಾವ ದೆಂದು ತಿಳಿದು ಬರಲಿಲ್ಲ. ವಾಗ್ದೇವಿಯು ಚಿಂತಾಕ್ರಾಂತಳಾಗಿ ದಿನೇ ದಿನೇ ಕೃಶಳಾಗುತ್ತಾ ಬಂದು ಬೇಗನೆ ಪ್ರಾಣಬಿಡುವ ಅವಸ್ಥೆಯನ್ನು ಹೊಂದಿದಳು. ಆದರೂ ಸಿಕ್ಕಿ ಸಿಕ್ಕಿದವರ ಕೂಡೆ ತನ್ನ ಮಗನನ್ನು ಕಂಡಿರೆ ಎಂದು ವಿಚಾರಿಸುವದು ಬಿಡಲಿಲ್ಲ. ಆರು ತಿಂಗಳ ವರೆಗೆ ಅವಳು ಯಾವ ಯಾವ ಹಳ್ಳಿಗೆಲ್ಲಾ ಹೋಗಿ ವರ್ತಮಾನ ತಕ್ಕೊಳ್ಳುತ್ತಾ ಇದ್ದಳು. ಒಂದಾನೊಂದು ದಿನ ತಿರ್ಚನ ಹಳ್ಳಿ ಎಂಬ ಕರಾವಳಿ ಸಮೀಪದ ಊರಲ್ಲಿ ಐದಾರು ದಿನ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಉಳಕೊಂಡು ಇರುವಾಗ ಅವನ ತಾಯಿಯಾದ ಮುದುಕಿಯೂ ವಾಗ್ದೇವಿಯೂ ಪರಸ್ಪರ ಸುಖದುಃಖ ಮಾತನಾಡಿಕೊಳ್ಳಲಿಕ್ಕೆ ಪ್ರಾರಂಭಿಸಿದರು. ವಾಗ್ದೇವಿಯ ಮಗನ ವೃತ್ತಾಂತವನ್ನು ಆ ಮುದುಕಿಯು ತುಸು

ಕೇಳಿದ ಬಳಿಕ ವಾಗ್ದೇವಿಯ ಅನುಮಾನವನ್ನು ಪರಿಹರಿಸಿ ಒಬ್ಬ ಯೌವನಸ್ಥನು ಒಬ್ಬ ಸ್ತ್ರೀಯ ಸಂಗಡ ಒಂದು ರಾತ್ರೆ ತಮ್ಮಲ್ಲಿ ಉಳಕೊಂಡು ಹಗಲು ಕಾಲ ಹೊರಗೆ ಹೊರಡದೆ ಸಾಯಂಕಾಲ ಸಮಯದಲ್ಲಿ ಅವಳ ಸಮೇತ ಹಡಗನ್ನು ಹತ್ತಿ ದ್ವೀಪಾಂತರಕ್ಕೆ ಹೋದನೆಂದು ತಿಳಿದು ಬಂತು

ಆ ಮುದುಕಿಯು ವರ್ಣಿಸಿದ ರೀತಿಯಿಂದ ಆ ಸ್ತ್ರೀಪುರುಷರು ವೆಂಕಟ ಸುಬ್ಬಿಯೂ ಸೂರ್ಯನಾರಾಯಣನೂ ಅಲ್ಲದೆ ಮತ್ಯಾರೂ ಅಲ್ಲವೆಂದು ವಾಗ್ದೇವಿಗೆ ಖಚಿತವಾಯಿತು. ಆವಾಗಲೇ ಅವಳು ಸಂಗ್ರಹಿಸಿದ ವರ್ತ ಮಾನವನ್ನು ತಿಪ್ಪಾಶಾಸ್ತ್ರಿಗೆ ತಿಳಿಸಿದಳು. ಅವರನ್ನು ಹುಡುಕಿಕೊಂಡು ಏನು ಪ್ರಯೋಜನ? ಒಂದು ವೇಳೈ ಅವರನ್ನು ನಾವು ಕಂಡು ಹಿಡಿದರೂ ನಮ್ಮ ಸಂಗಡ ಅವರು ಬರಲಾರರು. ಶೂದ್ರ ಸ್ತ್ರೀ ವ್ಯಾಮೋಹಕ್ಕೆ ಮರು ಳಾದ ಸೂರ್ಯನಾರಾಯಣನ ಜೀವಿತವೇ ವ್ಯರ್ಥವೆನ್ನಬೇಕು. ನಾನು ಇಲ್ಲಿಂದ ಮುಂದರಿಸಲಾರೆನೆಂದು ತಿಪ್ಪಾಶಾಸ್ತ್ರಿಯು ಖಂಡಿತವಾಗಿ ಹೇಳಿದನು. ವಾಗ್ದೇವಿಯು ಎಷ್ಟು ಅತ್ತು ಬೇಡಿಕೊಂಡರೂ ತಿಪ್ಪಾಶಾಸ್ತ್ರಿಯು ಅವಳ ಬಿನ್ನಹಕ್ಕೆ ಕಿವಿ ಕೊಡಲೇ ಇಲ್ಲ. ಶೃಂಗಾರಿಯು ಅರೆಮನಸ್ಸಿನಿಂದಾದರೂ ಅಕ್ಕಾ ನೀನೆಲ್ಲಿಗೆ ಬರಬೇಕಂತಿಯೋ ಅಲ್ಲಿಗೆ ನಿನ್ನ ಬೆನ್ನು ಹಿಡಿದು ಬರುವೆ ನೆಂದು ಮೊಸಳೆಯಂತೆ ಅಶ್ರುಜಲವನ್ನು ಸುರಿಸಿದಳು. ನಾವಿಬ್ಬರು ಅನಾಥೆ ಯರು ಎಲ್ಲಿಗೆ ಹೋಗೋಣ? ಮಸಣಕ್ಕೇನು? ಗಂಡಸರ ಸಹಾಯವಿಲ್ಲದೆ ಹೆಂಗಸರು ಏನು ಮಾಡಬಹುದು? ಅಯ್ಯೋ ನನ್ನ ಪ್ರಾಚೀನವೇ! ಪುಣ್ಯಾ ತ್ಮನಾದ ಆ ಶೆಟ್ಟಿಯು ಕಟ್ಟಿಸಿಕೊಟ್ಟ ಮಠದಲ್ಲಿ ಚಿನ್ನದ ಅನ್ನ ಉಂಡು ಕೊಂಡಿರಬಹುದಿತ್ತೆಂದರೆ ಆ ಮೂಳಿಯೊಬ್ಬಳು ಎಲ್ಲಿಂದ ನನ್ನ ಮುದ್ದು ಮಗನಿಗೆ ಗಂಟು ಬಿದ್ದಳಪ್ಪಾ. ಅವಳನ್ನು ಮೆಚ್ಚಿ ಈತ ಅಷ್ಟು ಆತುರದಿಂದ ಅವಳನ್ನು ಕಟ್ಟಿಕೊಂಡು ಹೋಗಬೇಕೇ! ದರಿದ್ರಾವಸ್ಥೆ ಸಹಿಸಕೂಡದೆ ಸನ್ಯಾಸಿಯನ್ನು ಮೆಚ್ಚಿ ಲೋಕನಿಂದೆಗೆ ಪಾತ್ರಳಾದರೂ ಮಗನನ್ನು ಪಡೆದು ಮಠಾಧಿಪತಿಯಾಗಮಾಡಿ ಆನಂದ ಪಡುತ್ತಿರುವಾಗ್ಗೆ ಸಾವಕಾಶವಿಲ್ಲದೆ ದುರ್ದಶೆ ಪ್ರಾಪ್ತಿಯಾಗಿ ವ್ಯಾಜ್ಯದಲ್ಲಿ ಸೋತು ಪಲಾಯನ ಮಾಡುವ ಸಂಕಷ್ಟ ನಮಗೆ ಬಂದೊದಗಿತು. ಈಗ ಅನಕ ದುರ್ಬುದ್ಧಿ ಬಂದು ಅವನು ಊರೇ ಬಿಟ್ಟು ಕಳ್ಳನಂತೆ ಓಡಿಹೋಗಿ ಹಾಳು ವ್ಯಾಸಂಗದಲ್ಲಿ ಸಿಲುಕಿದ ಮೇಲೆ ಅವನಿಗೆ ತಾಯಿಯ ನೆನಪು ಎಲ್ಲಿಂದ ಬರುವದು? ಜಗತ್ರಯ

ನಾರಾಯಣನು ನನ್ನ ಪ್ರಾಣವನ್ನು ತೆಗಿಯುವದಿಲ್ಲವಷ್ಟೇ ಎಂದು ವಾಗ್ದೇವಿ ಯು ಅಳುವವಳಾದಳು.

ತಿಪ್ಪಾಶಾಸ್ತ್ರಿಯು ಯಾವದಕ್ಕೂ ಕಿವಿ ಕೊಡಲಿಲ್ಲ. ವಾಗ್ದೇವಿಗೆ ದೊಡ್ಡ ಸಿಟ್ಟು ಬಂತು. ಅವಳು ತಿಪ್ಪನನ್ನು ಬಹಳವಾಗಿ ಜರದು ಕಂಡಾಬಟ್ಟೆ ಬೈದು ಬಿಟ್ಟಳು. ತಾನು ಮೌನವಾಗಿದ್ದರೆ ಅಕ್ಕ ಅನುಮಾನಪಟ್ಟು ತನ್ನ ಮೇಲೆ ಸಿಟ್ಟು ತಾಳುವಳೆಂದು ಭಯದಿಂದ ಶೃಂಗಾರಿಯೂ ತಿಪ್ಪಾಶಾಸ್ತ್ರಿ ಯನ್ನು ಜರೆಯಲಿಕ್ಕೆ ಹೊರಟಳು. ಇವರಿಬ್ಬರು ದಿಂಡೆ ಹೆಂಗಸರು. ಇವರ ಮೋಹ ಮಾಯಪಾಶದಿಂದ ಬದ್ಧನಾಗಿ ತಾನು ಅನುಭವಿಸಿದ ಸುಖದುಃಖ ಅಂತ್ಯವಾಗುವ ಕಾಲವು ಇದೇ ಎಂದು ಅವನು ವಸ್ತ್ರ ಇತ್ಯಾದಿ ಒಡವೆಗ ಳನ್ನು ಕಟ್ಟಿ ಕೊಂಡು ಅವರಿಬ್ಬರ ಮೋರೆಯನ್ನು ನೋಡದೆ ಸ್ವದೇಶಕ್ಕೆ ನಡಮುಬಿಟ್ಟನು. ತಮ್ಮನ್ನು ಅಗಲಿ ಹೋಗುವ ತಿಪ್ಪನನ್ನು ಹಿಂದೆ ಕರಿಯ ಲಿಕ್ಕೆ ಅವರಿಗೆ ನಾಚಿಕೆಯಾಯಿತು. ಈ ಮಾರಿಗಳ ಬಾಯಿಯಿಂದ ದೇವರು ತನ್ನನ್ನು ತಪ್ಪಿಸಿದನೆಂಬ ಹರುಷದಿಂದ ತಿಪ್ಪಾಶಾಸ್ತ್ರಿಯು ಹಿಂದೆ ತಿರುಗಲೇ ಇಲ್ಲ. ಹೆಂಗಸರಿಬ್ಬರು ತಿರ್ಜನ ಹಳ್ಳಿಯಲ್ಲಿಯೇ ಅಲೆದಾಡಿಕೊಂಡಿರಬೇಕಾ ಯಿತು. ಕೂಳಿಗೆ ತತ್ವಾರವಾಗಿ ಅವರು ಕಷ್ಟಪಟ್ಟರು. ಹೊಟ್ಟೆ ಹೊರೆಯುವದು ಹ್ಯಾಗೆಂಬ ಯೋಚನೆಯಿಂದ ಆ ಸ್ತ್ರೀಯರಿಬ್ಬರು ಒಂದು ದೇವಾಲಯದ ಮುಂದುಗಡೆ ಕಟ್ಟೆಯಲ್ಲಿ ಕೂತಿರುವಾಗ ಧರ್ಮರಾಯ ಪಂಡಿತನೆಂಬ ವೈದ್ಯನೊಬ್ಬನು ಅವರನ್ನು ನೋಡಿ ಅವರ ಸ್ಥಿತಿಗತಿಯನ್ನು ಕುರಿತು ವಿಚಾ ರಿಸಿದನು. ಅನ್ನಾರ್ಥಿಯಾಗಿ ಬಂದವರೆಂದು ಅವರ ಬಾಯಿಯಿಂದಲೇ ತಿಳಿದುಬಂತು. ಅವರಿಬ್ಬರನ್ನು ತನ್ನ ಮನೆಯಲ್ಲಿ ನಿಲ್ಲಿಸಿಕೊಳ್ಳುವದಕ್ಕೆ ಅವನು ಒಪ್ಪಿದನು. ಅವನ ಪತ್ನಿಯು ನಿತ್ಯ ರೋಗಿಯಾಗಿ ಮಕ್ಕಳ ಪರಾ ಮರಿಕೆ ತಕ್ಕೊಂಡು ಮನೆಯ ಆಡಳ್ತೆಯನ್ನು ನೋಡಲಿಕ್ಕೆ ಯಾರೂ ಇಲ್ಲದೆ ಇರುವದರಿಂದ ಶೃಂಗಾರಿಯನ್ನು ಆ ಪಾರುಪತ್ಯವನ್ನೆಲ್ಲಾ ನೋಡಲಿಕ್ಕೂ ಅಡಿಗೆಗೆ ಸರಿಯಾದ ಜನರಿಲ್ಲದೆ ರುಚಿಕರವಾದ ಊಟ ಶೂನ್ಯವಾಗಿ ಬಹು ಕಾಲವಾದುದರಿಂದ ವಾಗ್ದೇವಿಯನ್ನು ಭೋಜನಶಾಲೆಯ ಮೇಲ್ವಿಚಾರಕ್ಕೂ ನೇಮಿಸಲಿಕ್ಕೆ ತುಂಬಾ ಸಂತೋಷ ಉಳ್ಳವನಾಗಿರುವೆನೆಂದು ಆ ಗೃಹಸ್ಥನು ಹೇಳಿದನು. ಕೂಡಲೇ ಅವರಿಗೆ ಬಹು ಪ್ರಮೋದವಾಗಿ ತಥಾಸ್ತು ಎಂದು ಅವನ ಬೆನ್ನು ಹಿಡಿದು ಅವನ ಮನೆಗೆ ತಲಪಿ ಅವರವರ ಉದ್ಯೋಗದಲ್ಲಿ

ಅಂದಿನಿಂದಲೇ ಪ್ರವರ್ತಿಸಿದರು.

ಧರ್ಮರಾಯನ ಗೃಹಿಣಿಯು ಶೃಂಗಾರಿಯನ್ನು ನೋಡುತ್ತಲೇ ಮುಖವನ್ನು ತಿರುಗಿಸಿ ಕಂಬನಿ ತುಂಬಿದಳು. ಅಸ್ವಸ್ಥವಾಗಿ ಬಿದ್ದು ಚಾಪೆಯಿಂದ ಏಳಲಾರದೆ ತೀರಾ ಪರಾಧೀನವಾದ ಸ್ಥಿತಿಯಲ್ಲಿ ಇದ್ದರೂ ಸ್ತ್ರೀಯರಿಗೆ ಮತ್ಸರವು ಕುಂದದಿರುವದು ಅತಿ ಆಶ್ಚರ್ಯಕರವಾಗಿ ಯಜಮಾನನಿಗೆ ತೋರಿತು. ಶೃಂಗಾರಿಯು ಮಕ್ಕಳ ಆರೈಕೆಯನ್ನು ಜಾಗ್ರತೆಯಿಂದ ನೋಡಿದಳು. ಮನೆಯ ಯಜಮಾನತಿ ತನ್ನ ಕೂಡೆ ಮಾತನಾಡದಿದ್ದರೂ ತಾನಾಗಿ ಅವಳ ಯೋಗಕ್ಷೇಮವನ್ನು ಪದೇ ಪದೇ ವಿಚಾರಿಸಿಕೊಂಡಳು. ಅವಳಿಗೆ ಪಥ್ಯವನ್ನು ಬಲಾತ್ಕಾರದಿಂದ ಕೊಡುವದರಿಂದ ಶೃಂಗಾರಿಯು ಪಂಡಿತನ ಗೃಹಕೃತ್ಯಕ್ಕೆ ಬಹು ಹಿತಕಾರಿಯಾದಳು. ಪಾಕಶಾಲೆಯಲ್ಲಿ ವಾಗ್ದೇವಿಯ ಪ್ರತಾಪವು ಚಂದಾಗಿ ಮೆರೆಯಿತು. ಪಂಡಿತನು ಐಶ್ವರ್ಯವಂತನೂ ಉದಾರ ಮನಸ್ಸಿನ ಧರ್ಮಿಷ್ಟನಾದ ಕಾರಣ ಅವನಲ್ಲಿಯೇ ಭೋಜನಸಮಯಕ್ಕೆ ಗುಂಪು ಕೂಡುವ ದಾರಿಗ ಬ್ರಾಹ್ಮಣರು ಮುಂಚಿಗಿಂತ ಹೆಚ್ಚು ತೃಪ್ತಿ ಹೊಂದಿದರು. ಹೀಗೆ ಈ ಇಬ್ಬರು ಹೆಂಗಸರು ಅವನಿಗೆ ಪ್ರೀತಿವಂತೆಯರಾದರು. ಅವರು ಪಂಡಿತನ ಮನೆಯಲ್ಲಿ ಕಾಲಿಟ್ಟ ಕೆಲವು ತಿಂಗಳಲ್ಲಿಯೇ ಅವನ ಪತ್ನಿಯು ಕೈಲಾಸವಾಸಿಯಾದಳು. ಶೃಂಗಾರಿಯು ವಿಷಪ್ರಯೋಗ ಮಾಡಿ ಅವಳ ಜೀವವನ್ನು ತೆಗೆದಳೆಂದು ಮೃತಳ ತಂದೆತಾಯಿಗಳು ಬಂಧು ಜನರು ಹೇಳಿ ವ್ಯಸನಪಟ್ಟರು.

ಪತ್ನಿ ವಿಯೋಗದ ದೆಸೆಯಿಂದ ಪಂಡಿತನು ಕೊರಿಕೊಂಡು ಇರುವದನ್ನು ಶೃಂಗಾರಿಯ ಮೇಲೆ ಹೆಚ್ಚು ವಿಶ್ವಾಸವಿಟ್ಟು ಮನೆಯ ಆದಾಯ ವೆಚ್ಚವೆಲ್ಲಾ ಅವಳಿಗೆ ಪೂರ್ಣವಾಗಿ ವಹಿಸಿಕೊಟ್ಟನು. ಈ ದೆಸೆಯಿಂದ ಅವಳು ಅವನ ತಲೆಗೆ ಮೆಚ್ಚು ಮದ್ದು ತಿಕ್ಕಿ ಅವನನ್ನು ಕೈವಶಮಾಡಿಕೊಂಡು ಕೋತಿಯಂತೆ ಕುಣಿಸುತ್ತಾಳೆಂದು ಹಲವರು ಆಡಲಾರಂಭಿಸಿದರು. ಒಟ್ಟಾರೆ ಶೃಂಗಾರಿಯ ಕಾರಭಾರು ನೋಡಿದರೆ ಪಂಡಿತನು ಅವಳ ಮಾತಿನ ಮೇಲೆ ನಡೆಯುತ್ತಿದ್ದಾನೆಂದು ಸಕಲರಿಗೂ ಸಮಾಧಾನವಾಗುತ್ತಿತ್ತು. ಮನೆಯ ನೌಕರ ಜನರು ಅವಳ ಯಜಮಾನಿಕೆಯಲ್ಲಿ ಪೂರೈಸುವದೇ ಕಷ್ಟವೆಂದು ಎದುರೆದುರು ದೂರುತ್ತಿದ್ದರು. ಕೆಲವರು ಅವಳ ಬಾಧೆಯನ್ನು ತಡೆಯಲಾರದೆ ಪಂಡಿತನಿಗೆ ದೂರುಕೊಟ್ಟರೆ ಅವನು ಮಹಾ ಸಿಟ್ಟುತಾಳಿ ತಪ

ರಾಕು ಏಟು ಲತ್ತೆ ಇತ್ಯಾದಿಗಳಿಂದ ಅವರನ್ನು ಶಿಕ್ಷಿಸಿ ಶೃಂಗಾರಿಯು ಚಂದಾಗಿ ನಗುವಂತೆ ಪ್ರವರ್ತಿಸುತ್ತಿದ್ದನು. ವಾಗ್ದೇವಿಯನ್ನು ಯಾರು ದೂರುತ್ತಿರಲಿಲ್ಲ. ಭೋಜನ ಶಾಲೆಯಲ್ಲಿ ಅವಳು ಶ್ಲಾಘನೀಯವಾದ ನಡತೆಯಿಂದ ವಿಶಿಷ್ಟ ಜನರನ್ನು ಸಂತೋಷಿಸುತ್ತಿರುವಳು. ಬಿರುನುಡಿಯವಳಲ್ಲವಾದ ಕಾರಣ ಯಾರೂ ಅವಳ ಮೇಲೆ ದ್ವೇಷತಾಳುತ್ತಿದ್ದಿಲ್ಲ. ಶೃಂಗಾರಿಗೆ ಕೊಂಚ ದವಲತ್ತು ಬಂದ ಹಾಗೆಯೇ ಅವಳು ವಾಗ್ದೇವಿಯನ್ನು ತಾತ್ಸಾರ ಮಾಡಲಿಕ್ಕಾದಳು. ಪರಂತು ಅವಳು ಅದನ್ನು ಲಕ್ಷ್ಯಕ್ಕೆತಾರದೆ ತನ್ನ ಕೆಲಸವನ್ನು ಸರಿಯಾಗಿ ನಡಿಸುವದರಲ್ಲಿ ಬಿದ್ದಳು. ಚಿಂತೆಯು ಅವಳಿಗೆ ವ್ಯಾಪಿಸಿಕೊಂಡಿತು ತನ್ನ ಮಗನು ಎಂಥಾ ದೊಡ್ಡ ದುರವಸ್ಥೆಯಲ್ಲಿ ಬಿದ್ದರೂ ತನ್ನ ಕಣ್ಣಮುಂದೆ ಸ್ವಸ್ಥವಾಗಿ ಇದ್ದು ಹೊಟ್ಟೆಯನ್ನು ತಣ್ಣಗೆ ಮಾಡುತ್ತಿರುವಾಗ್ಗೆ ಶೂದ್ರ ಸ್ತ್ರೀಯ ಮಾಯಾಜಾಲದಲ್ಲಿ ಸಿಕ್ಕಿಬಿದ್ದು ದೇಶಾಂತರ ಪ್ರಯಾಣಮಾಡಿ ತನ್ನನ್ನು ಮರೆತು ದಾರಿಯಲ್ಲಿ ಹಾಕಿದನೆಂದು ಆಗಾಗ್ಯೆ ಕಣ್ಣೀರಿಂದ ಕೈತೊಳಿಯುತ್ತಿದ್ದಳೆನ್ನಬಹುದು.

ತಿಪ್ಪಾಶಾಸ್ತ್ರಿಯು ಶೃಂಗಾರಿ ವಾಗ್ದೇವಿ ಇವರನ್ನು ಅಗಲಿ ತನ್ನ ಮನೆಗೆ ಬಂದು ಸೇರಿದನು. ಅವನಿಗೆ ಉಣ್ಣಲಿಕ್ಕೆ ಕಡಿಮೆ ಇರಲ್ಲಿಲ್ಲ. ಸುಲಕ್ಷಣವಾದ ಹೆಂಡತಿಯೂ ಒಂದು ಹೆಣ್ಣು ಒಂದು ಗಂಡು ಹೀಗೆ ಎರಡು ಮಕ್ಕಳೂ ಇದ್ದು ಒಳ್ಳೆ ಮನೆತನದವನೆನ್ನಿಸಿಕೊಂಡಿದ್ದನು. ದುಸ್ಸಂಗ ಪ್ರಾಪ್ತವಾಗಿ ಮನೆಮಾರು ಬಿಟ್ಟು ನರಹತ್ಯ ದೋಷವನ್ನು ತಾಳಿದ ಕೇವಲ ದುರಾಚಾರಿಯಾಗಿ ಗೃಹಸ್ಥರ ಸಭೆಗೆ ಬರಲಿಕ್ಕೆ ಅಯೋಗ್ಯನೆಂಬ ಹಾಗಿನ ತುಚ್ಛಕ್ಕೆ ಅವನು ಒಳಗಾಗಿದ್ದನು. ಹೆಂಡತಿ ಮಕ್ಕಳ ಮಮತೆಯು ಅವನ ಮೇಲೆ ತುಂಬಾ ಇದ್ದಿತ್ತು. ಹ್ಯಾಗೂ ಆಗಲಿ ಮನೆಯ ಗೊಡವೆಯೇ ಇಲ್ಲದೆ ಹೋದವನು ಪುನಃ ಬಂದು ತಮ್ಮನ್ನು ಸೇರಿಕೊಂಡನೆಂಬ ಸಂತೋಷವು ಅವನ ಹಿಂದಿನ ದುರ್ನಡತೆಯನ್ನು ಮರಿಯುವಂತೆ ಮಾಡಿತು. ಹಲವು ಕಾಲ ಅವನು ಜೋತಿಸ್ಯವಿದ್ಯೆಯ ಬಲದಿಂದ ಪ್ರಾಕಿನಂತೆ ದುಡಿಯಲಿಕ್ಕೆ ತೊಡಗಿದನು. ಪರಂತು ಕ್ರಮೇಣ ಅವನಿಗೆ ಒಂದು ಪಿತ್ತಭ್ರಮೆ ಹಿಡಕೊಂಡಿತು. ಅನ್ನವು ಪಚನವಾಗುತ್ತಿದ್ದಿಲ್ಲ. ರಾತ್ರೆ ಕಾಲ ನಿದ್ರೆ ಬಾರದೆ ದುಸ್ವಪ್ನಗಳಿಂದ ಹೆದರಿ ದಿಕ್ಕಾಪಾಲಾಗಿ ಚೀರುತ್ತಿದ್ದನು. "ಇಗೊ! ನೇಮರಾಜ ಶೆಟ್ಟಿಯು ಔಡುಗಳನ್ನು ಕಚ್ಚಿಕೊಂಡು ಕಣ್ಣಾಲಿಗಳನ್ನು ಗರಗರನೆ ತಿರುಗಿಸುತ್ತಾ ಕೈಯಲ್ಲಿ ಹಿಡಕೊಂಡಿರುವ ತಲವಾರಿನಿಂದ ನನಗೆ

ಕಡಿಯಲಿಕ್ಕೆ ಬರುತ್ತಾನೆ. ಏ ಶೃಂಗಾರಿ! ಎಲ್ಲಿ ಹೋದೆ! ಕತ್ತಿ ತಾ! ಸತ್ತು ಹೋದ ಈ ದುಸ್ಮಾನನು ಪುನರ್ಜೀವಿತನಾಗಿ ಎಲ್ಲಿಂದ ಬಂದನಪ್ಪಾ" ಎಂದು ನಿದ್ರೆಯಲ್ಲಿ ಪ್ರತಿನಿತ್ಯವಾಗಲೀ ದಿನಬಿಟ್ಟು ದಿನವಾಗಲೀ ಕೂಗುವ ವಾಡಿಕೆ ಬಿತ್ತು. ಇದೇ ರೀತಿ ಇವನ ಪಿತ್ತೋಪದ್ರವು ಮೀರಿ ಬಂತು. ಒಂದು ದಿನ ಮಧ್ಯರಾತ್ರಿಕಾಲದಲ್ಲಿ ಯಾರಿಗೂ ತಿಳಿಯದಂತೆ ಎದ್ದು ಮನೆಯ ಮುಂದು ಗಡೆಬಾಗಿಲು ತೆರೆದು ಭಾವಿಕಟ್ಟೆಯಲ್ಲಿ ನಿಂತು ಭಾವಿಗೆ ಹಾರಿಬಿಟ್ಟನು. ಒಳಗೆ ಮಲಗಿದವರಿಗೆಲ್ಲ ಚನ್ನಾಗಿ ನಿದ್ರೆ ಬಿದ್ದ ಸಮಯವಾದುದರಿಂದ ಅವನು ಬಾವಿಗೆ ಬಿದ್ದ ಶಬ್ದವು ಕೇಳಲಿಲ್ಲ. ಮರುದಿನ ಬೆಳಗ್ಗೆ ನೋಡುವಾಗ್ಯೆ ಅವನ ಶವವು ಬಾವಿ ನೀರಿನ ಮೇಲೆ ತೇಲಿಕೊಂಡಿತ್ತು. ಹೆಂಡತಿ ಮಕ್ಕಳು ದುಃಖಾರ್ಣವದಲ್ಲಿ ಮುಳುಗಿದರು. ಶೃಂಗಾರಿಯ ಕಿವಿಗೆ ಈ ದುಃಖಕರವಾದ ವರ್ತಮಾನವು ಬೀಳುತ್ತಲೇ ಬಹಳ ಪಶ್ಚಾತ್ತಾಪ ಪಟ್ಟಳು.

ವಾಗ್ದೇವಿಗೂ ಖೇದವಾಯಿತು. ಆದರೆ ಪುತ್ರವಿಯೋಗದಿಂದ ಅವಳಿಗೆ ಉಂಟಾದ ವ್ಯಸನವೇ ಘಟ್ಟಿಯಾಗಿ ತಗಲಿಕೊಂಡಿರುವದರಿಂದ ಇನ್ನೊಂದು ಪ್ರಸಂಗಕ್ಕೆ ಅವಳ ಮನಸ್ಸು ತಿರುಗುತ್ತಿದ್ದಿಲ್ಲ. ತಿಪ್ಪಾಶಾಸ್ತ್ರಿಯು ಬದುಕಿಕೊಂಡಿದ್ದರೆ ಶೃಂಗಾರಿಯ ಮೇಲಿನ ಪ್ರೇಮದಿಂದಾದರೂ ಬಂದಲ್ಲಿ ಒಂದು ದಿನ ಅವಳನ್ನು ನೋಡುವದಕ್ಕೆ ಬಂದರೆ ಅವನ ಕೈಕಾಲು ಹಿಡಿದು ಸೂರ್ಯನಾರಾಯಣನ ಪ್ರವಾಸ ಸ್ಥಳವನ್ನಾದರೂ ಹುಡುಕಿಸಿ ಅಲ್ಲಿಗೆ ಹೋಗುವ ಯತ್ನ ಮಾಡಬಹುದಿತ್ತು. ತನ್ನ ದುರಾದೃಷ್ಟದಿಂದ ಆ ಅನುಕೂಲವು ತಪ್ಪಿ ಹೋಯಿತೆಂದು ವಾಗ್ದೇವಿಯು ಹಲುಬಿದಳು. ಧರ್ಮರಾಯ ಪಂಡಿತನು ವಾಗ್ದೇವಿಯ ಚಿಂತಾತುರತೆಯನ್ನು ಅವಳ ದೇಹಸ್ಥಿತಿಯಿಂದಲೂ ಮುಖಭಾವದಿಂದಲೂ ತಿಳಿದು ಅದರ ಕಾರಣವನ್ನು ತಿಳಿಸಿದರೆ ನಿವೃತ್ತಿ ಉಪಾಯವನ್ನು ಮಾಡಬಹುದೆಂದು ಹೇಳಿದನು. ಅವಳು ಅಶ್ರುಜಲಧಾರಾಪೂರ್ವಕವಾಗಿ ತನ್ನ ಶೋಕದ ಮೂಲವನ್ನು ವಿವರಿಸಿದಳು. ಸೂರ್ಯನಾರಾಯಣನ ಸಮಾಚಾರವನ್ನು ಕೂಡುವಷ್ಟು ತ್ವರ್ಯದಲ್ಲಿ ತರಿಸಿಕೊಡುವೆನು. ಚಿಂತೆ ಬಿಡೆಂದು ಅವನು ವಾಗ್ದೇವಿಗೆ ಸಮಾಧಾನ ಮಾಡಿದನು. ಪರಂತು ಅವನು ಎಷ್ಟು ಪ್ರಯತ್ನ ಮಾಡಿದರೂ ಯಾವ ಸ್ಥಳಕ್ಕೆ ಅವನು ಹೋಗಿರುವನೆಂದು ಗುಟ್ಟು ಸರ್ವಥಾ ತಿಳುಕೊಳ್ಳಲಿಕ್ಕೆ ಸಂದರ್ಭವಾಗಲಿಲ್ಲ. ಆದರೂ ಅವಳಿಗೆ ಧೈರ್ಯ ಹೇಳುವದನ್ನು ಬಿಡಲಿಲ್ಲ. ಕ್ರಮೇಣ ಆಶಾಭಂಗವನ್ನು ತಾಳಲಾ

ರದೆ ತನ್ನ ಪ್ರಾಣತ್ಯಾಗವಾದರೂ ಮಾಡಿಬಿಡಲೇ ಎಂಬ ದುರಾಲೋಚನೆಯು ಅವಳ ಮನಸ್ಸಿಗೆ ಹೊಕ್ಕೊಂಡಿತು. ಪಂಡಿತನ ಮನೆಯಿಂದ ನೂರಿನ್ನೂರು ಮಾರು ದೂರ ಒಂದು ಚಲೋದಾದ ಕೆರೆಯು ಶೋಭಾಯಮಾನವಾಗಿ ಇರುತ್ತದೆ ಅದರಲ್ಲಿ ನಿತ್ಯವು ಬಹುಜನರು ಸ್ನಾನಕ್ಕೆ ಗುಂಪು ಕೂಡುವದುಂಟು. ಯಾರೂ ನೋಡದಂತೆ ಅದರಲ್ಲಿ ಹಾರಿಬಿಟ್ಟು ಪ್ರಾಣಕಳಕೊಳ್ಳುವದಕ್ಕೆ ವಾಗ್ದೇವಿಯು ಖಂಡಿತವಾಗಿ ನಿಶ್ಚಯಿಸಿ ಒಳ್ಳೇ ಸಂದರ್ಭವನ್ನು ಕಾಯುತ್ತಾ ಇದ್ದಳು. ರಾತ್ರಿಕಾಲ ಅಲ್ಲಿಗೆ ಹೋಗಲಿಕ್ಕೆ ಹೊರಟರೆ ಪಂಡಿತನ ಮನೆಯಲ್ಲಿ ನಡಿಯುವ ಬಂದೋಬಸ್ತಿನ ದೆಸೆಯಿಂದ ಅನುಕೂಲವಾಗುವದಿಲ್ಲ. ಹಗಲು ಸಮಯ ಕೆರೆ ತೀರಗಳಲ್ಲಿ ಜನ ತಪ್ಪುವದಿಲ್ಲ. ಹೀಗಾಗಿ ಒಳ್ಳೆ ಅನುಕೂಲ ವನ್ನು ಅವಳು ನೋಡುತ್ತಾ ಇದ್ದಳು.

## ಐವತ್ತೇಳು

ಸೂರ್ಯನಾರಾಯಣನು ವೆಂಕಟಸುಬ್ಬಿಯನ್ನು ಕರಕೊಂಡು ಹೇಮಳ ದ್ವೀಪಕ್ಕೆ ಹೋದನೆಂಬುದು ವಾಚಕರಿಗೆ ಇದರ ಮೊದಲೇ ತಿಳಿದು ಬಂತಲ್ಲ. ಅಲ್ಲಿ ಅವನು ಹ್ಯಾಗೆ ಪರಿಣಾಮ ಹೊಂದಿದನೆಂಬ ಸಮಾಚಾರವನ್ನು ತಿಳ ಕೊಳ್ಳುವದಕ್ಕೆ ಸಕಲರಿಗೂ ಕುತೂಹಲವಿರುವದು. ಆದುದರಿಂದ ಈ ವಿಷ ಯವಾಗಿ ಪ್ರಸ್ತಾಪಿಸುವದು ಉಚಿತವಾಗಿದೆ. ಅವನು ತಾನೊಬ್ಬ ಬನಿಯನೆ ನ್ನಿಸಿ ಗೋವರ್ಧನ ದಾಸ ಸೆಟ್ಟಿ ಎಂಬ ಹೆಸರು ಹಾಕಿಕೊಂಡನು. ವೆಂಕಟ ಸುಬ್ಬಿಯು ತುಳಸಿಬಾಯಿಯೆಂಬ ನಾಮವನ್ನು ಧರಿಸಿಕೊಂಡಳು. ಇವರು ಭಯತರೂ ನ್ಯಾಯವಾದ ಗಂಡಹೆಂಡರೆನ್ನಿಸಿಕೊಂಡು ಏಕಗೃಹಕೃತ್ಯದಲ್ಲಿ ಏಕಪಾತದಲ್ಲಿ ಬಹು ಅನುರಕ್ತಿಯಿಂದ ನಡಕೊಂಡರು. ಅವರಿಬ್ಬರ ಕೈಯ ಲ್ಲಿಯೂ ಗುಪ್ತಧನ ಸಾಕಷ್ಟು ಇತ್ತು. ಅವರ ಬಲದಿಂದ ಸೂರ್ಯನಾರಾ ಯಣನು ಪ್ರಥಮವಲ್ಲಿ ಆ ದ್ವೀಪದಲ್ಲಿ ವಾಡಿಕೆ ಇರುವ ಕ್ರಮವನ್ನು ಅವ ಲಂಬಿಸಿ ಒಂದು ದ್ರಾಕ್ಷೆ ತೋಟವನ್ನು ಕ್ರಯಕ್ಕೆ ಪಡಕೊಂಡು ಅದನ್ನು ವೃದ್ಧಿಪಡಿಸಿ ದ್ರಾಕ್ಷೆ ಬೆಳೆಯು ಪುಷ್ಟಿಯಾಗಿ ಸಿಕ್ಕ ತೊಡಗಿದ್ದರಿಂದ ವಿಳಂಬ ವಿಲ್ಲದೆ ಹಣದ ರಾಶಿಹಾಕಿದನು. ದ್ರವ್ಯಬಲ ಏರಿದ ಹಾಗೆ ವ್ಯಾಪಾರದ ಪರಿಮಿತವನ್ನು ಹೆಚ್ಚಿಸಿ ನಷ್ಟಹೊಂದಿದರೇನೆಂದು ತಿಳಿಯದೆ ವರ್ಷ ವರ್ಷ ಯಥೇಚ್ಛ ಧನವನ್ನು ಸಂಪಾದಿಸಿ ನಾಲ್ಕೈದು ವರ್ಷಗಳಲ್ಲಿ ಲಕ್ಷಾಧಿಪತಿ

ಯಾಗಿ ಜೋಡು ಕುದುರೆ ಸಾರಟು ಏರಿ ಮೆರೆದನು. ಹಾಗೆಯೇ ವೆಂಕಟ ಸುಬ್ಬಿ ತನ್ನ ಗೆಳೆಯನ ಒಡನಾಟದಲ್ಲಿ ಅಪರಿಮಿತ ಸುಖಾನಂದವನ್ನು ಅನು ಭವಿಸಿ ಸೂರ್ಯಚಂದ್ರರಂತೆ ತೇಜಸ್ವಿಗಳಾದ ಇಬ್ಬರು ಗಂಡು ಮಕ್ಕಳನ್ನು ಪಡೆದಳು. ಅವರಿಗೆ ರಾಮಶೆಟ್ಟಿ ಲಕ್ಷ್ಮಣಶೆಟ್ಟಿ ಎಂಬ ಹೆಸರುಗಳನ್ನು ಇಡೋ ಣಾಯಿತು. ಈ ಮುದ್ದು ಮಕ್ಕಳನ್ನು ನೋಡಿದ ಮಾತ್ರದಿಂದ ಪ್ರವಾಸದ ಚಿಂತೆಯು ಅವರಿಬ್ಬರಿಂದಲೂ ದೂರ ಹೋಯಿತು. ಇನ್ನು ತಾವು ಇದೇ ತಮ್ಮ ಸ್ವದೇಶವನ್ನಾಗಿಮಾಡಿ ಬದುಕಿಕೊಂಡರೆ ಮರ್ಯಾದೆ ಉಳಿಯುವದ ಲ್ಲದೆ ಊರಿಗೆ ಮರಳಿದರೆ ತಮ್ಮ ಸ್ವರೂಪಕ್ಕೆ ಚಿಕ್ಕಾಸು ಬೆಲೆ ಕಟ್ಟುವರೆಂದು ಜನ್ಮಭೂಮಿಯ ನೆನಪೇ ಬಿಟ್ಟುಬಿಟ್ಟರು. ಸೂರ್ಯನಾರಾಯಣನ ವೈಭ ವವು ಪೂರ್ಣಿಮ ಚಂದ್ರನಂತೆ ಪ್ರವರ್ಧಮಾನವಾಗಿ ಇಡೀ ದ್ವೀಪದಲ್ಲಿ ಇಷ್ಟು ದೊಡ್ಡ ಮನುಷ್ಯ ಇನ್ನೊಬ್ಬನಿರುವದಿಲ್ಲವೆಂಬಂತೆ ಅನೇಕರು ಹೇಳುವವರಾ ದರು. ಅವನ ಸದ್ಗುಣಗಳಿಗೆ ಬಹುಮಂದಿ ಸೋತರು. ಹಾಗೆಯೇ ವೆಂಕಟ ಸುಬ್ಬಿಯ ಗುಣಗಳು ಶ್ಲಾಘನೀಯವಾದವುಗಳೇ. ಗಂಡಗೆ ಯೋಗ್ಯವಾದ ಜತೆಯೆಂದು ಸರ್ವರೂ ಹೊಗಳಲಾರಂಭಿಸಿದರು. ವೆಂಕಟಸುಬ್ಬಿಯ ತಾಯಿ ಯು ಮೊದಲೇ ಸತ್ತು ಹೋಗಿದ್ದಳು. ಆದುದರಿಂದ ಅವಳಿಗೆ ಸ್ವದೇಶದ ಕಡೆಗೆ ಮನಸ್ಸು ಎಳಿಯುತ್ತಿದ್ದಿಲ್ಲ.

ಸೂರ್ಯನಾರಾಯಣನಿಗೆ ತನ್ನ ಪ್ರಿಯತಾಯಿಯ ನೆನಪು ದಿನಕ್ಕೆ ಮೂರು ಸಲ ಬರುತ್ತಿತ್ತು. ತ್ರಿಕಾಲವೂ ಅವಳ ನೆನಪು ಮಾಡಿಕೊಳ್ಳುವದೇ ಹೊರ್ತು ಅವಳನ್ನು ಒಮ್ಮೆ ಕಂಡು ಅವಳ ವ್ಯಾಕುಲವನ್ನು ಪರಿಹರಿಸಲಿಕ್ಕೆ ಸಂದರ್ಭ ಸಿಕ್ಕಲಿಲ್ಲವೆಂಬ ದೊಡ್ಡ ವ್ಯಥೆಯು ಅವನಿಗೆ ಹಿಡಕೊಂಡಿರುತ್ತಿತ್ತು. ಒಂದೇ ಒಂದು ದಿನವಾದರೂ ವೆಂಕಟಸುಬ್ಬಿಯು ಅವನನ್ನು ಅಗಲಿರಲಿಕ್ಕೆ ಒಡಂಬಡುವವಳಲ್ಲ. ಊರಿನ ಪ್ರಸ್ತಾಪ ಅವನು ಮಾಡಿದರೆ ಅವನನ್ನು ಮನೆಯಿಂದ ಬೀದಿಗೆ ಇಳಿಯಲಿಕ್ಕೆ ಬಿಡವಲ್ಲಳು ಯಾಕೆಂದರೆ ತಾಯಿಯನ್ನು ನೋಡುವದಕ್ಕೆ ಹೊರಟು ಹೋದರೆ ತನ್ನ ಹಂಬಲಿಲ್ಲದೆ ತಿರುಗಿ ಬರಲಿಕ್ಕಿಲ್ಲ ವೆಂಬ ಹೆದರಿಕೆಯು ಅವಳಿಗೆ ಘಟ್ಟಿಯಾಗಿ ತಗಲಿ ಕೊಂಡಿತ್ತು. ರಾತ್ರೆ ಕಾಲ ನಿದ್ರೆಯಲ್ಲಿ "ಅಮ್ಮಾ ಅಮ್ಮಾ ನಿನ್ನ ಮುಖಾವಲೋಕನದ ಸುಖ ಎಂದು ದೊರಕುವುದು? ನಾನು ಕೇವಲ ಕಡುಪಾಪಿಯಾಗಿ ನಿನ್ನ ಉದರದಲ್ಲಿ ಜನಿ ಸಿದೆ." ಎನ್ನುತ್ತಾ ನಿಟ್ಟುಸುರು ಬಿಟ್ಟು ಘಟ್ಟಿಯಾಗಿ ರೋದನ ಮಾಡುವದನ್ನು

ಕಂಡು ವೆಂಕಟಸುಬ್ಬಿಯು ಅವನಿಗೆ ವೈತಟ್ಟಿ ಎಬ್ಬಿಸಿ ಕೆಟ್ಟ ಕನಸು ಕಟ್ಟಿ ತೇನೆಂದು ವಿಚಾರಿಸಿದರೆ ಹಾಗೇನೂ ಇಲ್ಲವೆಂದು ಪುನಹ ನಿದ್ರಾರೂಪವನ್ನು ತಾಳಿಕೊಳ್ಳುವನು. ಹಲವು ಸರ್ತಿ ಇಂಥಾ ದೃಷ್ಟಾಂತಗಳನ್ನು ಕಂಡು ಅವಳಿಗೆ ಕನಿಕರ ಹುಟ್ಟಿ ತನ್ನ ಅಂತಸ್ತವನ್ನು ತಿಳಿಸಲಿಕ್ಕೆ ಅಂಜುವ ಕಾರಣ ವನ್ನು ಬಹು ಪ್ರೀತಿಯಿಂದ ಕೇಳಿದಾಗ ಅವನು ಸಣ್ಣ ಮಗುವಿನಂತೆ ಎಡೆ ಬಿಡದೆ ಅತ್ತು ತಾಯಿಯನ್ನು ಒಂದು ಸಲನೋಡಿ ತನ್ನ ಸಂಗಡ ಬಂದರೆ ಅವಳನ್ನು ಕರಕೊಂಡು ಬರುವೆನೆಂಬ ಆಶೆಯು ತನುವಿಗೆ ಸುತ್ತು ಹಾಕಿ ಕೊಂಡಿದೆ. ಅದನ್ನು ಪೂರೈಸಿಕೊಳ್ಳುವದಕ್ಕೆ ಸಂದರ್ಭ ಸಿಕ್ಕದೆ ಬಳಲುವದಾ ಯಿತೆಂದನು. ತನ್ನಿಂದ ಅಡ್ಡಿಯಾಗಿ ತಾಯಿಮಕ್ಕಳ ಸಂದರ್ಶನವು ನಿಂತು ಹೋಯಿತೆಂಬ ಅಪವಾದ ಬರಬಾರದು; ಎರಡು ವಾರಗಳಷ್ಟು ಸಮಯದಲ್ಲಿ ಮರಳದಿದ್ದರೆ ತಾನು ಮಕ್ಕಳ ಸಮೇತ ಹೊರಡುವೆನೆಂದು ವೆಂಕಟಸುಬ್ಬಿಯು ಹೇಳಿದಳು. ಒಡನೆ ಅವನು ತಥಾಸ್ತು ಎಂದು ಹಡಗ ಪಯಣವನ್ನು ಬೆಳಸ ಲಿಕ್ಕೆ ಹವಣಿಸಿದನು.

ವಾಗ್ದೇವಿಯು ಪ್ರಾಣತ್ಯಾಗ ಮಾಡುವ ಆಲೋಚನೆಯಲ್ಲಿಯೇ ಇದ್ದಳು. ಹ್ಯಾಗೆ ವದ್ದಾಡಿದರೂ ಕೆರೆ ಬಳಿಯ ಜನ ಸಮೂಹ ತಪ್ಪುವದಿಲ್ಲ. ವೈಶಾಖಬಹುಳ ಅಮಾವಾಸ್ಯಾ ದಿನ ಸೂರ್ಯಗ್ರಹಣ ಬಂತು. ಅಂದು ಪುಣ್ಯಕಾಲದಲ್ಲಿ ಸ್ನಾನಮಾಡುವದಕ್ಕೆ ಅಬಾಲವೃದ್ಧರು ಸಮುದ್ರದ ಬಳಿಗೆ ಹೋದರು. ಶೃಂಗಾರಿಯು ಪಂಡಿತನ ಸಮೇತ ಅಲ್ಲಿಗೆ ತಾನೇ ಹೋಗಿರುತ್ತಿ ದ್ದಳು. ವಾಗ್ದೇವಿಗೆ ಶೃಂಗಾರಿಯು ಕರದಾಗ ತಾನು ದೇಹಾಯಾಸದಲ್ಲಿರು ವದಾಗಿ ಉತ್ತರ ಕೊಟ್ಟಳು. ಕೆರೆ ಬಳಿಯಲ್ಲಿ ಯಾರೂ ಇಲ್ಲದೆ ಇರುವ ಇದೇ ಸಮಯವು ತನ್ನ ಗುಪ್ತ ಉದ್ದೇಶಕ್ಕೆ ಸಮುಚಿತವಾದದ್ದೆಂದು ಸಂತೋಷ ಪಟ್ಟು ಪಂಡಿತನ ಮನೆಯಿಂದ ಹೊರಟು ಕೆರೆದಡದಲ್ಲಿ ನಿಂತು ಕೊಂಚ ಸಮಯ ಚನ್ನಾಗಿ ಸುತ್ತು ಮುತ್ತು ನೋಡಿದಳು. ಯಾರೂ ಸಮೀಪವಿ ದ್ದಂತೆ ಕಂಡು ಬರಲಿಲ್ಲ. ಕಣ್ಣೀರು ಸುರಿಸುತ್ತಾ ತನ್ನಷ್ಟಕ್ಕೆ ಅವಳು ಹೇಳ ತೊಡಗಿದ್ದೇನೆಂದರೆ–

"ಹೇ ನನ್ನ ಮುದ್ದು ಮಗ ಸೂರ್ಯನಾರಾಯಣಾ, ನಿನ್ನ ಒಳ್ಳೇತನ ವನ್ನು ಹಾರೈಸಿ ಬಹಳ ಪ್ರಯಾಸಪಟ್ಟು ದೊಡ್ಡ ದೊಡ್ಡ ಸಂಕಷ್ಟಗಳಿಂದ ನಿನ್ನನ್ನು ತಪ್ಪಿಸಿ ಸನ್ಯಾಸ ಪಟ್ಟಕ್ಕೆ ಯೋಗ್ಯನಾಗಿ ಮಾಡಿದೆ. ಮಿತಿಮೀರಿ

ಹಣ ವೆಚ್ಚಮಾಡಿದೆ. ಜಯಪ್ರಾಪ್ತಿಯಾಯಿತು. ಆದರೆ ಅದರ ರಭಸವು ತಣಿಯುವಷ್ಟರೊಳಗೆ ಅಪಜಯವು ಬೆನ್ನಟ್ಟಿ ಪುನಃ ಹಲವು ಬಾಧೆಗಳಿಗೆ ಗುರಿಯಾದಾಗ್ಯೂ ಕಟ್ಟಕಡೆಯಲ್ಲಿ ದಯಾವಂತನಾದ ಶಿವರಾಮಸೆಟ್ಟಿಯ ಧರ್ಮದಿಂದ ಒಂದು ಮಠವನ್ನು ಮಾಡಿ ಕೊಂಡು ಜೀವನ ನಡಿಸಿಕೊಂಡಿರುವಾಗ ಕಡುಪಾಪಿಯಾದ ನನ್ನ ದುರಾದೃಷ್ಟದಿಂದ ಆ ಶೂದ್ರಸ್ತ್ರೀಯ ಸ್ನೇಹವನ್ನು ಬೆಳಸಿ ಅವಳ ಒಟ್ಟಿನಲ್ಲಿ ಕಳ್ಳನಂತೆ ಓಡಿ ಹೋಗಿ ನನ್ನ ಹೊಟ್ಟೆಗೆ ಶೂಲವನ್ನು ನಾಂಟಿಸಿದೆಯಾ! ಮುದಿ ಪ್ರಾಯದಲ್ಲಿ ನನ್ನನ್ನು ದಾರಿಯಲ್ಲಿ ಹಾಕಿ ಗೆಳತಿಯ ಮೋಳದಲ್ಲಿ ಮಗ್ನವಾಗಿದ್ದೀಯಾ! ಅಪ್ಪಾ ಮಗು! ನವಮಾಸ ನನ್ನ ಉದರದಲ್ಲಿ ವಾಸಮಾಡಿಕೊಂಡಿದ್ದ ನೆನಪೂ ಮರತು ಬಿಟ್ಟೆಯಾ! ಬಹು ಪ್ರೀತಿಯಿಂದ ಸಾಕಿ ಸಲಹಿದ ಉಪಕಾರವನ್ನು ಸಲಿಸುವ ಕ್ರಮವು ಇದೇನಪ್ಪಾ! ಸದ್ಗುಣವಂತನೆಂದು ನನ್ನ ಶತ್ರುಗಳ ಬಾಯಿಯಿಂದಲೂ ಅನ್ನಿಸಿಕೊಂಡು ನನ್ನ ಮೇಲೆ ಮಾತ್ರ ನಿಷ್ಕಾರಣವಾಗಿ ಮುನಿದು ಒಂದು ಮಾತಾದರೂ ಹೇಳದೆ ಓಡಿ ಹೋದಿಯಾ! ಈಗ ನಾಲ್ಕೈದು ವರ್ಷಗಳು ಕಳದರೂ ತಾಯಿಯ ಹಂಬಲು ಲೇಶವಾದರೂ ಇಲ್ಲವೇ! ಒಂದು ದಿನವಾದರೂ ನನ್ನ ಮಾತು ಮೀರಿ ನಡಕೊಂಡವನಲ್ಲ. ಆಹಾ! ನಾನು ಕಡುಪಾಪಿ ಅಲ್ಲವಾದರೆ ಮುದಿಪ್ರಾಯದಲ್ಲಿ ಪುತ್ರವಿಯೋಗ ಸಹಿಸಕೂಡದೆ ಕಂಡವರ ಮನೆ ಬಾಗಲಲ್ಲಿ ಬಿದ್ದು ಕೊಂಡಿರುವ ದುರ್ಗತಿ ಬರುತ್ತಿತ್ತೇನು! ಇನ್ನು ಈ ಪ್ರಥ್ವಿಯಲ್ಲಿ ನನ್ನಂಥಾ ಪಾಪಿಮುಂಡೆಯು ಸಜೀವಳಾಗಿರಕೂಡದು. ಇದೇ ನನ್ನ ಅಂತ್ಯಕಾಲ. ನನ್ನ ಮೋಹದ ಕಂದನಾದ ಸೂರ್ಯನಾರಾಯಣನೇ ನೀನು ಎಷ್ಟು ಅಪರಾಧಗಳು ಮಾಡಿದ್ದರೂ ಮನಃಪೂರ್ತಿಯಾಗಿ ಕ್ಷಮಿಸಿರುವೆನು. ನೀನು ದೀರ್ಘಾಯುವಾಗಿ ಪುತ್ರಪೌತ್ರರೊಡಗೂಡಿ ಐಹಿಕ ಸುಖಗಳನ್ನೆಲ್ಲಾ ಅಮಿತವಾಗಿ ಅನುಭವಿಸಿ ಶ್ರೀಪತಿಯ ದಯವನ್ನು ಪೂರ್ಣವಾಗಿ ಹೊಂದು. ಅಂತ್ಯದಲ್ಲಿ ಸಾಯುಜ್ಯವನ್ನು ಪಡಿ ಎಂದು ಬಹು ವಿನಯದಿಂದ ಸೂರ್ಯಚಂದ್ರರ ಸಾಕ್ಷಿಯಾಗಿ ಶ್ರೀಕಾಂತನನ್ನು ಬೇಡಿಕೊಂಡು ಇಗೋ ಪ್ರಾಣಬಿಡುತ್ತೇನೆ!"

ಹೀಗೆಂದು ವಾಗ್ದೇವಿಯು ಕೆರೆಯ ಮೆಟ್ಲುಗಳನ್ನು ಸಟ ಸಟನೆ ಇಳದು ಕಡೆ ಮೆಟ್ಟಲಲ್ಲಿ ನಿಂತು ನೀರಿಗೆ ಹಾರುವಷ್ಟರಲ್ಲಿ ಪಕ್ಷಿಯು ರಕ್ಕೆಗಳನ್ನು ಪಸರಿಸಿ ಮೂತಿಯಿಂದ ಮತ್ಸ್ಯವನ್ನು ಎತ್ತುವಷ್ಟು ಹಸ್ತಲಾಗವದಿಂದ

ಒಬ್ಬ ಯೌವನಸ್ಥನು ವಾಗ್ದೇವಿಯ ಬೆನ್ನ ಹಿಂದಿನಿಂದ ಅದೇ ಮೆಟ್ಟಲುಗಳಿಂದ ಇಳಿದು ಅವಳನ್ನು ಅಪ್ಪಿಕೊಂಡು ಮೇಲಕ್ಕೆ ಎತ್ತಿ ನಿಲ್ಲಿಸಿ– ಅಮ್ಮಾ ! ದುರ್ಮರಣದಿಂದ ನರಕಕ್ಕೆ ಹೋಗುವ ದಾರಿಯನ್ನು ಹುಡುಕುತ್ತಿಯೇನು? ಎಂದನು ವಾಗ್ದೇವಿಯು–ಇದೇನು ಸ್ವಪ್ನಾವಸ್ಥೆಯ ಹಾಗಾಯಿತು. ಇವನ್ಯಾರೆಂದು ಹಿಂತಿರುಗಿ ನೋಡುವಾಗ ತನ್ನನ್ನು ಘಟ್ಟಿಯಾಗಿ ಬಿಗಿದಪ್ಪಿಕೊಂಡಿದ್ದ ಯೌವಸ್ಥನು ತನ್ನ ಮಗನೇ ಎಂದು ಪ್ರತ್ಯಕ್ಷವಾಯಿತು. ವಾಗ್ದೇವಿಯು ಪುಳಕಿತಳಾದಳು. ನನ್ನನ್ನು ಪರಾನ್ನಕ್ಕೆ ಹಾಕದೆ ನೀನು ಇರುವಲ್ಲಿಗ ಕರಕೊಂಡು ಹೋಗಿ ಬಿಡು. ಸತ್ತರೆ ಸುಟ್ಟು ಮೂರು ಮುಷ್ಟಿ ಬೂದಿಮಾಡಿ ಬಿಡಪ್ಪಾ ಮಗನೇ! ಎಂದು ವಾಗ್ದೇವಿಯು ಮಗನನ್ನು ಕೇಳಿಕೊಂಡಳು. ನಿನ್ನನ್ನು ಕರಕೊಂಡು ಹೋಗುವದಕ್ಕೇನೇ ಬಂದಿರುವೆನೆಂದು ತಾಯಿಯನ್ನು ತಾನು ಬಂದಿರುವ ಹಡಗದಲ್ಲಿ ಏರಿಸಿ ಶೃಂಗಾರಿಯು ಪಂಡಿತನನ್ನು ಬಿಟ್ಟು ಹೊರಡುವ ಸಂಭವವಿಲ್ಲವೆಂದು ತಿಳಿದ ಕಾರಣ ಅವಳನ್ನು ಮಾತಾಡಿಸದೆ ಹೇಮಳ ದ್ವೀಪಕ್ಕೆ ಹೊರಟುಹೋದನು.

